# ಮನುಸ್ಮೃತಿ

[ಮನುಧರ್ಮಶಾಸ್ತ್ರದ ಸಮಗ್ರ ಅನುವಾದ–ಮೂಲ ಶ್ಲೋಕ ಸಹಿತ]

*

ಅನುವಾದಕರು :

**ಚಕ್ರಕೋಡಿ ಈಶ್ವರಶಾಸ್ತ್ರೀ,**

ವಿದ್ವಾನ್ [ಕನ್ನಡ-ಸಂಸ್ಕೃತ]



ಪ್ರಕಾಶಕರು :

ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ–೧

ಪ್ರಕಾಶಕರು :

ಮನೋಹರ ಘಾಣೇಕರ, ಬಿ. ಎ., ಬಿ.ಕಾಂ.
ಸಮಾಜ ಪುಸ್ತಕಾಲಯ, ಧಾರವಾಡ-೧

*

ಪ್ರಥಮ ಮುದ್ರಣ : ೧೯೭೬



*

ಬೆಲೆ :
ಹದಿನೈದು ರೂಪಾಯಿ

*

ಮುದ್ರಕರು :
ರವೀಂದ್ರ ಘಾಣೇಕರ, L.P.T.
ಪ್ರತಿಭಾ ಮುದ್ರಣ, ಧಾರವಾಡ-೧

# ಅನುವಾದಕನ ಮಾತು

ಭಾರತದ ಸನಾತನ ಧರ್ಮವು ಬಹುಮೌಲ್ಯವು. ಸ್ವಾಮಿ ವಿವೇಕಾನಂದರು ಅದನ್ನು ಜಗದ್ವಿಖ್ಯಾತ ಮಾಡಿದರು. ಆದರೆ ಕ್ರಿಸ್ತಶಕ ಇಪ್ಪತ್ತನೆ ಶತಮಾನದ ಸ್ವಾತಂತ್ರ್ಯ ಆಂದೋಲನದ ಶೈಶವದಲ್ಲಿ ಮಹಾತ್ಮಾ ಗಾಂಧಿಯವರು ರಾಜಕೀಯ ಐಕ್ಯಮತದ ಮೂಲಸೂತ್ರವಾಗಿ ಸಮಾನತೆ, ಅಸ್ಪೃಶ್ಯತೆ, ಜಾತಿಭೇದ ನಿರಾಕರಣೆಯನ್ನು ಪ್ರತಿಪಾದಿಸಿದರು. ಅದನ್ನು ಮಹರ್ಷಿಗಳು ವೈಯಕ್ತಿಕ ಧರ್ಮವಾಗಿ ವ್ಯಕ್ತಿ ಜೀವನಕ್ಕೆ ಸಂಬಂಧಿಸಿದಂತೆ ಬೋಧಿಸಿದರು. ಅವರು ರಾಷ್ಟ್ರಜೀವನವನ್ನು ಅರಿಯದವರಲ್ಲ. ಈ ಅಂಶವು ಮನುಸ್ಮೃತಿ, ಚಾಣಕ್ಯನ ಅರ್ಥಶಾಸ್ತ್ರ, ವಿದುರನೀತಿ, ಬೃಹಸ್ಪತಿ ಶುಕ್ರ ಮುಂತಾದ ದೇವದಾನವ ಮಂತ್ರಿಗಳ ವಚನಗಳಲ್ಲಿ ತೋರಿಬರುವುದು. ಬ್ರಹ್ಮತತ್ವ ಮೀಮಾಂಸೆಯನ್ನು ಮಾಡಿದ ಅವರು ಶೂದ್ರ, ಅಂತ್ಯಜ, ರಾಜಕಾರ್ಯ ಇವುಗಳ ಪರಿಚಯ ಇಲ್ಲದವರಲ್ಲ. ಸೃಷ್ಟಿಯ ಪ್ರತಿಯೊಂದರ ಮೌಲ್ಯವು ಅವರಿಗೆ ತಿಳಿದಿದೆ. ಸತ್ಯ, ಶಾಂತಿ, ತ್ಯಾಗ, ನಿರ್ಮಮ, ನಿರಹಂಕಾರ ಭಾವಗಳ ಆರಂಭಪ್ರತಿಪಾದಕರು ಅವರು. ಹೀಗಿದ್ದರೂ ಜಾತಿ, ಅಸ್ಪೃಶ್ಯತೆಗಳ ಮರ್ಮವರಿಯದ ಅನೇಕ ಪುಡಾರಿಗಳ ಭಾಷಣದಲ್ಲಿ ಹಿಂದೂ ಧರ್ಮದ ಅಧಹೇಳನ, ಬ್ರಾಹ್ಮಣರ ಮೂರ್ಖತನದ ವೃಥಾ ಆಪಾದನೆಯನ್ನು ಕೇಳಿದಾಗ ನನ್ನ ಮನಸ್ಸು ತುಂಬ ಕೊರೆಯಿತು, ನೊಂದಿತು. ಆ ವಾದಗಳ ಸಾಮರಸ್ಯ, ಯಥಾರ್ಥತೆ, ವಾಸ್ತವಿಕತೆಗಳ ದೀರ್ಘಮವು ನನ್ನ "ಗಾಂಧೀವಾದದ ಮೇಲೆ ತತ್ತ್ವಶಾಸ್ತ್ರದ ವೀಕ್ಷಣ" ಎಂಬ ವಿಚಾರಪರಿಪ್ಲುತ ಲೇಖನದ ರೂಪದಲ್ಲಿ ಹೊರಹೊಮ್ಮಿತು. ಅಲ್ಲದೆ ಅದೇ ಸಮರ್ಥನೆಗೆ ಮನುಸ್ಮೃತಿಯ ಅನುವಾದವು ತುಂಬ ಸಹಾಯಕವೆಂದು ಮನಗಂಡು ನಾನು ಅದರ ಪ್ರಕಾಶನದ ಅಭಿಲಾಷೆಯನ್ನು ಸಮಾಜ ಪುಸ್ತಕಾಲಯದ ಒಡೆಯರಾದ ಶ್ರೀ ಘಾಣೇಕರರಲ್ಲಿ ನಿವೇದಿಸಿದೆ. ಅವರು ಅಂತಹ ಸದಭಿಲಾಷೆಯನ್ನು ಮನ್ನಿಸಿದ್ದಲ್ಲದೆ

ತುಂಬ ಉತ್ಸಾಹವನ್ನೂ, ಆವಶ್ಯಕತೆಯನ್ನೂ ಪ್ರಕಟಿಸಿ ನನ್ನನ್ನು ಹುರುದುಂಬಿಸಿದರು. ನಾನು ಪ್ರಯತ್ನಿಸಿದೆ. ಅದನ್ನು ನಿರ್ಮತ್ಸರರು ನೋಡಬೇಕು.

## ಪ್ರಾಚೀನ ಉಕ್ತಿಕ್ರಮ

ಗ್ರಂಥಕಾರರು, ಕವಿಗಳು, ಪಂಡಿತರು, ಮನಃಶಾಸ್ತ್ರಜ್ಞರು ಸೂಕ್ಷ್ಮಗ್ರಾಹಿಗಳು, ಕ್ರಾಂತದರ್ಶಿಗಳು, ವಿದಗ್ಧರು, ಪ್ರಗಲ್ಭರು. ಆದುದರಿಂದ ಪ್ರತಿಪಾದ್ಯ ವಿಷಯವನ್ನು ಖಚಿತಪಡಿಸಲು ವರ್ಣನೆ, ಅಲಂಕಾರ, ವಕ್ರೋಕ್ತಿ, ಅತಿಶಯೋಕ್ತಿ, ಪರ್ಯಾಯೋಕ್ತಿಗಳನ್ನು ಅವರು ಆರಿಸಿಕೊಳ್ಳುವರು. ಅವರ ಉದ್ದೇಶ ತಾತ್ಪರ್ಯ ಒಂದಿರುವುದು. ಅದು ಅಸ್ಥಿಪಂಜರದಂತೆ. ಅದನ್ನು ರಕ್ತ, ಮಾಂಸ, ಚರ್ಮ, ವರ್ಣಗಳಿಂದ ಶೃಂಗರಿಸಿದರೆ ಸುಂದರ ಮನಮೋಹಕ ಸ್ತ್ರೀದೇಹವಾಗುವಂತೆ ವಿಷಯವನ್ನು ಪಂಡಿತಭಾಷೆಯಲ್ಲಿ ವಿವರಿಸುವರು. ಅದು ಪಾಮರರಿಗೆ ಹಾಸ್ಯಾಸ್ಪದವಾದರೆ ಯಾರು ಹೊಣೆ? ಬಾಣನ ಮಹಾಶ್ವೇತಾ ಕಾದಂಬರಿಯಲ್ಲಿ ಚಂದ್ರಾಪೀಡ, ಪುಂಡರೀಕರ ವರ್ಣನೆ, ಮನುಸ್ಮೃತಿಯ ರಾಜಪ್ರಶಂಸೆ, ಚೋರಪ್ರಕರಣದ ರಾಜನಿಂದೆ, ವಿವಾಹ ಪ್ರಕರಣದ ಸ್ತ್ರೀಪ್ರಶಂಸೆ, ಒಂಬತ್ತನೆ ಅಧ್ಯಾಯದ ಸ್ತ್ರೀನಿಂದೆ–ಇವುಗಳು ಉದಾಹರಣೆ. ಎಂದರೆ ಗುಣವನ್ನು–ದೋಷವನ್ನು ಸ್ಪಷ್ಟವಾಗಿ ಹೇಳುತ್ತಾರೆ. ಪಕ್ಷಪಾತವಲ್ಲ. ಪ್ರತ್ಯಕ್ಷಾನುಭವ. ಒಂದು ಹರಿತ ಖಡ್ಗವು ಉಪಯೋಗಿಸಿದಂತೆ ಹಿತವು. ಅದು ತನ್ನ ಕೈ ಮೈಯನ್ನೂ ತರಿಯಬಹುದು; ಮುಳ್ಳು, ಹುಲಿ, ಶತ್ರು ತಲೆಯನ್ನು ಕಡಿಯಬಹುದು. ಅವೆರಡೂ ಅದನ್ನುಪಯೋಗಿಸುವ ಮನುಷ್ಯನನ್ನು ಅನುಸರಿಸಿದೆ. ಅದರಂತೆ ಸ್ತ್ರೀಯು ಸರಿಯಾಗಿದ್ದರೆ ಆಗುವ ಗುಣ, ಕೆಟ್ಟರೆ ಬರುವ ದೋಷ, ಎರಡನ್ನೂ ಕೊಡುತ್ತಾನೆ. ಮತ್ಸರವಲ್ಲ. ಒಂದನ್ನು ಮಾತ್ರ ನೋಡಬಾರದು, ಎರಡನ್ನೂ ನೋಡಿ ಅಭಿಪ್ರಾಯ ಕೊಡಬೇಕು. ಇದು ಒಂದು ಸಂಪ್ರದಾಯ. ವಿಚಾರ ಮಾಡಿದರೆ ಈಗಲೂ ಹೀಗೆಯೇ ಇದೆ.

ಶ್ರೀಶಂಕರ ಭಗವತ್ಪಾದರು ಅದ್ವೈತಮತ ಪ್ರತಿಷ್ಠಾಪನಾಚಾರ್ಯರು. ಸ್ವಾನುಭವ, ಧರ್ಮಮೀಮಾಂಸಾ, ನ್ಯಾಯಶಾಸ್ತ್ರಗಳ ಬಲದಿಂದ ವೇದಾಂತವಾಕ್ಯಗಳ ಅರ್ಥ ನಿಷ್ಕರ್ಷೆಯನ್ನು ಪಂಡಿತಪ್ರಿಯವಾಗಿ ಮಾಡಿದ ಮಹಾನು

ಭಾವರು. ಅವರು ಕೂಡ ಮನುಸ್ಮೃತಿಯ ಆಧಾರದಿಂದ ವಿಷಯ ನಿರೂಪಣೆಯನ್ನು ಬ್ರಹ್ಮಸೂತ್ರ ಭಾಷ್ಯದಲ್ಲಿ ಸಮರ್ಥಿಸಿಕೊಳ್ಳುವುದು ಕಂಡುಬರುತ್ತದೆ. ಅತ್ಯಂತ ಪೂಜ್ಯರಾದ ಯಾಸ್ಕರು ಮನುವನ್ನು ತಮ್ಮ ನಿರುಕ್ತದಲ್ಲಿ ಅಲ್ಲಲ್ಲಿ ನೆನೆಯುತ್ತಾರೆ. ಮತ್ತು ಇಪ್ಪತ್ತನೆ ಶತಮಾನದ ಫ್ರಾಯಿಡ್, ಆಡ್ಲರ್, ಯುಂಗ್ ಮೊದಲಾದ ಮನಶ್ಶಾಸ್ತ್ರಜ್ಞರ ವಿಚಾರಧಾರೆಯ ಮನುಷ್ಯ ಸಮಾಜದ ರೂಪರೇಖೆಯನ್ನು ಸಯುಕ್ತಿಕವಾಗಿ ಎದುರಿಸುವ ಸಮಾಜಜೀವನವನ್ನು ಮನುಸ್ಮೃತಿಯು ಚಿತ್ರಿಸಿರುವುದು. ಪಂಡಿತರ, ಪರಿವ್ರಾಜಕರ, ರಾಜಕಾರಣಿಗಳ, ಮಹಾರಾಜರ ಕರ್ತವ್ಯಗಳನ್ನೂ, ಭಾವನೆಗಳನ್ನೂ ನಿಶಿತಗೊಳಿಸುವ ಅದರ ದೃಷ್ಟಿಪ್ರಖರತೆಯು ಬ್ರಹ್ಮಕಲ್ಪದ ದೀರ್ಘಕಾಲದಲ್ಲಿಯೂ ಪರಿಣಾಮಶೀಲವಲ್ಲ. ಅದು ಅವಾಸ್ತವ ಅಧೀರ ಜನತೆಯನ್ನು ವಿರಚಿಸಲು ಬಯಸುವುದಿಲ್ಲ. ಸುಖೀರಾಜ್ಯದಲ್ಲಿ ಸುಖೀಪ್ರಜೆಗಳನ್ನು ಪರಿಪೂರ್ಣಗೊಳಿಸುವ ಬೃಹದ್ ಯಂತ್ರಾಗಾರದಂತಿದೆ. ಕಾಂಗ್ರೆಸ್, ಸೋಶಲಿಸ್ಟ್, ಕಮ್ಯುನಿಸ್ಟ್, ಜನಸಂಘಗಳು ಸೃಷ್ಟಿಮಾಡಬಯಸಿದ ಮಹೋನ್ನತ ಜೀವನವು ಮನುಸ್ಮೃತಿಯಲ್ಲಿ ಪ್ರತಿಬಿಂಬಿತವಾಗಿದೆ. ರಶ್ಯ, ಅಮೇರಿಕಗಳ ಸುಖಸಾಗರದ ಪ್ರಜಾಕ್ಷೇಮವೂ ಅದಕ್ಕೆ ಅಗೋಚರವಲ್ಲ. ದುರಾಗ್ರಹವು, ಅಜ್ಞಾನವು. ಮನುಸ್ಮೃತಿಯ ಮನುಷ್ಯ ಜೀವನದ ಸುಮುಖ ವಿಶ್ಲೇಷಣೆಯನ್ನು ಪ್ರತಿಭಾನಿಸಲು ಅವಗತಿಪಡೆಯಲು ತಡೆಯಾಗಿದೆ. ಮನುಸ್ಮೃತಿಯ ಗಾಢಮನನ ಮಾಡಿದ ವಿಚಾರವಂತನು ಇಪ್ಪತ್ತನೆ ಶತಮಾನದ ಯಾವ ರಾಜಕಾರಣಿಯ ರೂಪವನ್ನು ತಾಳಲಾರನು. ಇದು ಆ ಬುದ್ಧಿಜೀವಿಯ ವಿಡಂಬನ ನಾಟಕವನ್ನು ಪ್ರದರ್ಶಿಸಬಲ್ಲುದು. ಇದು ಭಾರತೀಯ ಸಂಸ್ಕೃತಿಯ ಆದರ್ಶವಾಗಿದೆ. ವಾಲ್ಮೀಕಿ, ಕಾಳಿದಾಸ, ವ್ಯಾಸ,ಭಾಸ ಮುಂತಾದ ಮಹಾಕವಿಗಳು ಈ ಗ್ರಂಥದ ಆಯುಧದಿಂದ ರತ್ನಮಯ ಮಹಾಕೃತಿಗಳನ್ನು ರಚಿಸಿದ್ದಾರೆ. ಈ ಗ್ರಂಥದ ಯಾವ ವಾಕ್ಯವನ್ನು ಸಕಾರಣವಾಗಿ ನಿರಾಕರಿಸುವ ಬುದ್ಧಿಮತ್ತೆಯು ಜನಿಸಿದೆ ?

ಮನು ಮುಂತಾದ ಧರ್ಮಜ್ಞರು ಕಾಲ ಬದಲಾಯಿಸಿದಂತೆ ಸನ್ನಿವೇಶಕ್ಕೆ ಸರಿಯಾದ ತ್ರೈಕಾಲಿಕ ಧರ್ಮವನ್ನು ಬಲ್ಲವರಲ್ಲ. ಅವರ ಜೀವನ ಕಾಲದ ಪರಿಸ್ಥಿತಿಯನ್ನು ಸಾರ್ವಕಾಲಿಕವೆಂದು ವರ್ಣಿಸಿದರು. ಸರ್ವದಾ

ಸಮಾಜವು ಅಭಿವೃದ್ಧಿಹೊಂದುವಂತೆ ಧರ್ಮವನ್ನು ತಿಳಿಯಲಿಲ್ಲ. ಆದುದರಿಂದ ಅವರ ಧರ್ಮವು ಪರಿವರ್ತನೀಯ ಎನ್ನುವುದಿದು ಸರಿಯಾದ ಗ್ರಹಿಕೆಯಲ್ಲ. ಮನುನಿಬಂಧದ ವಾಕ್ಯಸರಣಿಯೂ ಇಂತಹ ದುರಭಿಪ್ರಾಯವನ್ನು ಕೊಡುವುದಿಲ್ಲ. ವ್ಯಾಖ್ಯಾನಕಾರರು ಭ್ರಮಿಸಿದರು.

ಅಲೌಕಿಕ, ದೈವಿಕ ಭಾವಗಳಲ್ಲಿ ವಿಶ್ವಾಸವುಳ್ಳವರಾದ ಅವರು ವೇದವಾಕ್ಯವೆಂದು ನಂಬಿ ಬರೆಯುತ್ತ ಹೋದರು. ದೇವ, ಭಾವ, ವಿಶ್ವಾಸ ಇಲ್ಲದ ಈಗಿನ ಪ್ರಜೆಯೂ ತತ್ತ್ವದೃಷ್ಟಿಯಿಂದ ವಿವೇಚಿಸಿದರೂ ಆ ಧರ್ಮಗಳಲ್ಲಿ ದೋಷಲೇಶವೂ ತೋರುವುದಿಲ್ಲ. ದುರಾಗ್ರಹವನ್ನು ಬಿಡಬೇಕು. ಶಾಂತವಾಗಿ ಸಹನೆಯಿಂದ ದೀರ್ಘವಾಗಿ ಚಿಂತಿಸಬೇಕು. ಉದಾಹರಣೆಗೆ ಸತ್ಯ, ಅಹಿಂಸೆಗಳು ಪರಮಧರ್ಮಗಳು. ಇವು ಅಂದು ಇಂದು ಎಂದೂ ಅಧರ್ಮ ಆದುವೆ ? ಆಗಬಲ್ಲುವೆ ? ಆಗಿವೆಯೇ ? ಅದರಂತೆ ಅವರ ಎಲ್ಲ ಧರ್ಮದ ಆಚರಣೆಯಿಂದ ಉಕ್ತವಾದ ಫಲವು ದೊರೆಯಲಾರದೆಂದು ಸಾಧಿಸಿಹೇಳಬೇಕು. ಆಗ ಆ ಮಾತಿಗೆ ಬೆಲೆ. ಸುಮ್ಮನೆ ಅದು ಸುಳ್ಳು ಕಲ್ಪನೆ, ಭ್ರಮೆ ಎನ್ನುವುದಾದರೆ ಹೇಳುವವರದೇ ಭ್ರಮೆಯಲ್ಲವೆಂಬುದಕ್ಕೆ ಆಧಾರವೇನಿದೆ ? ಈ ಕುಪ್ರಶ್ನೆಯನ್ನು ಚಾರಿತ್ರಿಕ ಬುದ್ಧಿಯ ನಾಸ್ತಿಕ ಪಾಶ್ಚಾತ್ಯ ನಾಗರಿಕರನ್ನು ಗುರಿಯಿಟ್ಟು ಬರೆಯಬೇಕಾಯಿತು. ಅವರ ನಾಸ್ತಿಕವಾದಕ್ಕೆ ಮರುಳಾದವರು ನಮ್ಮ ನಾಸ್ತಿಕವಾದವನ್ನು ಆಸ್ತಿಕವಾದವನ್ನು ತಿಳಿದು ಮಥಿಸಬೇಕು. ಅಲ್ಲದೆ ಹೇಳುವ ಹುರುಳಿಲ್ಲದ ಅವರ ಮಾತೇ ಗೊಡ್ಡು ಪುರಾಣವು. ಇಂದಿನ ಭೂತ ವಿಜ್ಞಾನಿಗೂ ಸೃಷ್ಟಿತತ್ತ್ವವನ್ನು, ದೇವತತ್ತ್ವವನ್ನು ಮೀರಿ ಏನನ್ನೂ ಸಾಧಿಸಲಾಗಲಿಲ್ಲ. ಅದರೊಳಗೆ ಅಲೆದು ಕೆಲವು ಚಮತ್ಕಾರದ ಬುಗ್ಗೆಗಳನ್ನು ಕಂಡು ಹಾ ! ಎನ್ನುತ್ತಾನಷ್ಟೆ. ಆದರೆ ಅದು ಆತ್ಮವಿಜ್ಞಾನದ ಕಿರಣಾಣುವಿಗೂ ಸಾಟಿಯಲ್ಲ.

ಧರ್ಮಶಾಸ್ತ್ರವು ಬ್ರಾಹ್ಮಣನ ಪಕ್ಷಪಾತಿಯಾಗಿದೆ, ಇಲ್ಲವೇ ಬ್ರಾಹ್ಮಣನ ಸ್ವಲಾಭದ ಕುಹಕವಾಗಿದೆ, ಬ್ರಾಹ್ಮಣನು ಸ್ವಪ್ರಶಂಸಾ ಮೂಢನಾಗಿದ್ದಾನೆ, ಇತ್ಯಾದಿ ಆಪಾದನೆಯೂ ತಥ್ಯದೂರವಾಗಿದೆ. ದೇಶದ ಎಲ್ಲ ಕಡೆ ಒಂದು ವರ್ಗದ ಜನವು ತನ್ನ ಸುಖಕ್ಕೆ ಇತರರ ಜೀವನವನ್ನು ಬಲಿಕೊಡುವುದು ನಿರಂತರಪ್ರವರ್ತನೆಯಾಗಿದೆ. ಆ ದೃಷ್ಟಿಯಿಂದ ನೋಡಿದರೆ ಭಾರತದ ಬ್ರಾಹ್ಮ

ಣನು ಜೀವನಾವಶ್ಯಕ ಅನ್ನ-ವಸ್ತ್ರದಿಂದ ಸಂತೃಪ್ತನಾಗಿ ಇತರ ಜನಪಾಲನೆಯ ಹೊಣೆಗೆ ಹೆಗಲು ಕೊಡಲು ತಪ್ಪಲಿಲ್ಲ. ಅಂಧದೃಷ್ಟಿಯ ಮಾಯಾ, ಸುಖ-ಭೋಗಗಳ ಬಿರುಗಾಳಿಯಲ್ಲಿ ತರಗಲೆಯಂತೆ ತೂರಾಡಲಿಲ್ಲ. ನಶ್ವರ ಜಗತ್ತಿನ ಆಗುಹೋಗುಗಳನ್ನು ಗಮನಿಸಿ ತನ್ನ ಜೀವನವನ್ನು ರೂಪಿಸಿಕೊಂಡ ಘನೋದಾರ ಗಂಭೀರ ಚರಿತನು ಬ್ರಾಹ್ಮಣನು. ಅದೇ ಧರ್ಮಶಾಸ್ತ್ರದಲ್ಲಿ ತನ್ನ ಮೇಲೆ ಅನೇಕ ಪ್ರಮಾಣದ ಅಧಿಕ ಮಿತಿಯ ದಂಡನೆ, ತಪಸ್ಸು, ಕಷ್ಟ-ಕಾರ್ಪಣ್ಯಗಳನ್ನು ಹೊರಿಸಿಕೊಳ್ಳಲು ಪರಿಪೂತನಾಗುವಂತೆ ಮಾಡಿಕೊಳ್ಳಲು ತಪ್ಪಿದವನಲ್ಲ. ಅಸಿಧಾರಾವ್ರತಕ್ಕೆ ಹಿಂಜರಿದವನಲ್ಲ. ಸಂಪೂರ್ಣ ಪ್ರಮಾಣದ ಸಂಯಮ ಜೀವನವನ್ನು ತನ್ನ ಪಾಲಿಗೂ, ಇತರರಿಗೆ ಉಚ್ಛೃಂಖಲತೆಯನ್ನೂ ಉದಾರವಾಗಿ ಬಿಟ್ಟುಕೊಟ್ಟ ಧೀರಶೂರ ವೀರನು ಬ್ರಾಹ್ಮಣನು. ಪರಕೀಯರು ಇದನ್ನು ನೋಡಲಿ. ಯಾಕೆ ಮರೆಮಾಚುತ್ತಾರೆ.

ಒಂದು ವಿಷಯದ ಎಳೆಎಳೆಯನ್ನು ಹತ್ತಿಯಂತೆ ಬಿಡಿಸಿ ವಿವರಿಸುವಾಗ ಮಂದಮತಿಗೆ ಪುನರುಕ್ತಿ ತೋರುವುದು. ಸೂಕ್ಷ್ಮ ವಿಚಾರದಲ್ಲಿ ಪುನರುಕ್ತಿಯಿಲ್ಲ. ಒಬ್ಬ ಮನುಷ್ಯನ ವಿವಿಧ ಭಾವ ಭಂಗಿಯ ನಾನಾ ಚಿತ್ರ ಲೇಖನದಂತಿದೆ. ಚಿತ್ರಕಲೆ ಬಲ್ಲವನಿಗೆ ಎಲ್ಲ ಚಿತ್ರವು ಸಮಾನವಾಗಿ ತೋರುವುದಿಲ್ಲ. ಆದುದರಿಂದ ಪಾಶ್ಚಾತ್ಯ ವಿಮರ್ಶಕರು, ‘ ಮನುಸ್ಮೃತಿಯನ್ನು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಜನರು ಬರೆದು ತುಂಬಿ ಈ ರೂಪಕ್ಕೆ ತಂದರು ’ — ಎನ್ನುವ ವಾದವು ಅವಿಚಾರದ ಮಾತು. ಗ್ರಂಥದ ವಾಕ್ಯಸರಣಿ, ಪ್ರತಿಪಾದನ ಪದ್ಧತಿಯು, ಒಳಗೆ ಹುದುಗಿರುವ ಸ್ವಾರಸ್ಯ, ಇವುಗಳನ್ನು ನೋಡುವ ದೃಷ್ಟಿಯಿದ್ದರೆ ಮೇಲಿನ ಆಪಾದನೆಯು ನಿರಾಧಾರವೆಂದು ತಿಳಿಯದಿರದು.

ಬ್ರಾಹ್ಮಣಸ್ತುತಿಯಿಂದ ರೇಗುವವರಿಗೆ ಮನುಸ್ಮೃತಿಯ ಎರಡನೆ ಅಧ್ಯಾಯದ ೧೬೨ ನೆ ಶ್ಲೋಕವು ಔಷಧವಾಗಿದೆ. ಬ್ರಾಹ್ಮಣನು ಸಮ್ಮಾನದಿಂದ ವಿಷದಂತೆ ವಿಮುಖನಾಗಬೇಕೆಂಬ ನಿಷೇಧವು ಬ್ರಾಹ್ಮಣನಿಗೆ ಮಾತ್ರ. ಇಂತಹ ಉದಾತ್ತ ವರ್ತನೆಯು ನಿಂದ್ಯವೆಂದು ಹೇಳಲಾಗುವುದೋ ? ಮನುವು ಬ್ರಾಹ್ಮಣಪ್ರಶಂಸೆಯಲ್ಲಿ ಆತ್ಮವಿಸ್ಮರಣೆಹೊಂದಿ ನಿಂದೆ-ಕರ್ತವ್ಯ ಚೋದನೆಯಲ್ಲಿ ವಿಮುಖನಾದನೆ ? ಇಂತಹ ಉತ್ತಮಮ ಸಮಾಜದಲ್ಲಿ

ಮಾನ್ಯತೆಗೆ ಅರ್ಹನಲ್ಲವೊ ? ೨–೨೩೪ ನೇ ಶ್ಲೋಕದಲ್ಲಿ ವಿಷವೈದ್ಯ, ಮಂತ್ರ ಸಿದ್ಧಿ, ಆತ್ಮವಿದ್ಯೆಯು, ಪೂರ್ವಪುಣ್ಯದಿಂದ ಒಬ್ಬ ಸಾಮಾನ್ಯ ಅಂತ್ಯಜನಲ್ಲಿ ಇದ್ದರೆ, ಅದನ್ನು ಬ್ರಾಹ್ಮಣನು ಸ್ವೀಕರಿಸಬಹುದು ಎಂದು ಮನುವು ಹೇಳುವು ದರಿಂದ ಬ್ರಾಹ್ಮಣರೂ ಕೂಡ ದುರಭಿಮಾನವಶರಾಗದೆ ಇದ್ದರೆಂದು ಸ್ಪಷ್ಟವು. ಪುನರ್ಜನ್ಮ, ಪುಣ್ಯ–ಪಾಪಗಳ ಪ್ರತ್ಯಕ್ಷ ನಿದರ್ಶನದಿಂದ ಅವರು ಆಧಾರದ ಜಾತಿವ್ಯವಸ್ಥೆಯನ್ನು ಪುರಸ್ಕರಿಸಿ ಆಚರಿಸಿದರು. ಭಾರತದ ಆರ್ಯರಿಗೆ ಮಾತ್ರ ಈ ಅಪವಾದದ ಆರೋಪವಲ್ಲ. ಅದು ಅಪರಾಧವೆಂದು ಆರೋ ಸಿದರೂ ಪರದೇಶದ ಯಾವ ಸಮಾಜವೂ ಈ ನೀಚೋಚ್ಚ ಕಲ್ಪನೆಯ ಸರಣಿ ಯನ್ನು ಬಿಟ್ಟಿಲ್ಲ. ಅಂತಹ ಪರದೋಷ ಸಂತೋಷ ಉಳ್ಳವರು ಆತ್ಮವಿಮರ್ಶೆ ಯನ್ನು ಸರ್ವಾಂಶದಲ್ಲಿ ಮಾಡಿ ಆ ಬಳಿಕ ಇತರರ ವಿಮರ್ಶೆಗೆ ಕೈಹಾಕಲಿ. ವಾಸ್ತವದಲ್ಲಿ ಆರ್ಯರು ಗುಣಗ್ರಾಹಿಗಳೆಂದು ಯಾರಿಗೂ ಅವರ ಗ್ರಂಥದ ಆಧಾರದಿಂದ ನಿರಾಕರಿಸಲಾಗುವುದಿಲ್ಲ. ಮಿಥ್ಯಾಪವಾದಕ್ಕೆ ಎಲ್ಲಿಯೂ ಕೊನೆಯಿಲ್ಲ.

ಶಾಸ್ತ್ರಜ್ಞರಿಗೆ ಪ್ರಿಯವಾದ ಮೀಮಾಂಸಾ ನ್ಯಾಯಪದ್ಧತಿಯ ಪದ ವಿನ್ಯಾಸವು, ಸಂಸ್ಕೃತಭಾಷಾ ಸ್ವಾಧೀನ ಇರುವವರಿಗೆ ಪರಿಮಿತ ಪದಗಳಿಂದ ಸ್ಪಷ್ಟಾರ್ಥವನ್ನು ಕೊಡಬಲ್ಲುದಾದರೂ ಕನ್ನಡಿಗರಿಗೆ ಮನೋಹರವಲ್ಲ. ಅವರಿಗೆ ಭಾವಾನುವಾದವು ಸುಖವೆಂದು ಅದನ್ನು ಪರಿಗ್ರಹಿಸಿದೆ. ಧಾರ್ಮಿ ಕತೆಯನ್ನು ಪ್ರಶ್ನಿಸುವ ನಾಸ್ತಿಕ ಮನೋಭಾವಕ್ಕೂ ಸಮಾಧಾನವಾಗುವಂತೆ ಧರ್ಮನಿರೂಪಣೆಯನ್ನು ಬಿಡಿಸಲಾಗಿದೆ. ಧರ್ಮದಲ್ಲಿ ಅವಿಶ್ವಾಸವು ಶಬ್ದ ದ್ವೇಷವು ವಸ್ತುತಃ ಧರ್ಮದ ಫಲವು ಯಾರಿಗೂ ಅಪ್ರಿಯವಲ್ಲ. ಆದುದರಿಂದ ಮಾನಸಿಕ ವೃತ್ತಿಗೆ ಸರಿಯಾಗಿ ಸಮನ್ವಯದ ವಿಶ್ಲೇಷಣೆಯನ್ನು ಅಳವಡಿಸ ಲಾಗಿದೆ.

ಪಂಚಯಜ್ಞಗಳ ಅಂಗವಾಗಿ ಅಂತ್ಯಜ, ಕ್ರಿಮಿ, ಕೀಟ, ದಾಸ, ದಾಸಿಗಳ ಬಲಿಯೂ ಬ್ರಾಹ್ಮಣ ಕರ್ತವ್ಯವು. ಆದರಿಂದ ಬ್ರಾಹ್ಮಣನು ಯಾರನ್ನೂ ಅಲಕ್ಷಿಸಿಲ್ಲ. ಕೆಲವು ಹೆಡ್ಡರನ್ನು ಕಂಡು ಬ್ರಾಹ್ಮಣನನ್ನೂ, ಅವನ ಧರ್ಮ ವನ್ನೂ ಹಳಿಯುವುದು—ಹುಟ್ಟುಕುರುಡನು ಸೂರ್ಯಪ್ರಕಾಶವು ಮಬ್ಬು ಎಂದಂತೆ ಯಥಾರ್ಥವಾಗದು.

ಸಾಮಾನ್ಯ ಪ್ರಜೆಯು ಮಾಡಿದ ತಪ್ಪಿಗೆ ಹೇಳುವ ದಂಡನೆಯು ಸಾವಿರ ಪಾಲು ರಾಜನಿಗೆ ಅಂತಹ ಅಪರಾಧಕ್ಕೆ ದಂಡನೆ. ಜಾತಿ–ಭೇದದಿಂದ ದಂಡನೆಯ ತಾರತಮ್ಯವು ಏರಿದಂತೆ ಇಳಿಯುತ್ತಲೂ ಹೋಗುವುದು. ತಿಳುವಳಿಕೆ ಇದ್ದವರು ಮಾಡಿದ ತಪ್ಪಿಗೆ ಎರಡು ಪಾಲು ದಂಡನೆಯನ್ನು ಮನುವು ಹೇಳುತ್ತಾನೆ. ಆದುದರಿಂದ ಸಾಕ್ಷರತೆ, ವಿದ್ಯೆ, ವಿವೇಕ, ಜ್ಞಾನಕ್ಕೆ ಮನುವು ದೊಡ್ಡ ಹೊಣೆಗಾರಿಕೆಯನ್ನು ಕಂಡುಕೊಂಡು ಅವನು ಮಾಡಿದ ಅಪರಾಧಕ್ಕೆ ದ್ವಿಗುಣದಂಡನೆಯನ್ನು ಹೇಳಿದ್ದಾನೆ. ಅದೇ ತತ್ವದಿಂದ, ವಿದ್ಯಾ-ಗುಣಗಳಿಂದ ಪೂಜ್ಯನಾದವನನ್ನು ಉದ್ದೇಶಿಸಿ ಮಾಡಲಾದ ಬೈಗಳು, ಹೊಡೆತ, ಕಳ್ಳತನಗಳಿಗೂ ದಂಡನೆಯ ತೀವ್ರತೆಯನ್ನು ನ್ಯಾಯವೆನ್ನುತ್ತಾನೆ. ಆದುದರಿಂದ ಮನುವೂ ಅವನಂತೆ ಪುರಾತನರೂ, ಜ್ಞಾನಕ್ಕೆ ರಕ್ಷಣೆ, ಪಾವಿತ್ರ್ಯ, ಅಧಿಕಾರ ಬಾಧ್ಯತೆಗಳನ್ನು ಅವಶ್ಯವೆಂದು ಮನಗಂಡಿದ್ದಾರೆ. ಈಗಿನಂತೆ ಪಂಡಿತ ಪಾಮರರ ಸಮಾನತೆಯು ಅಪಕಾರಿಯು, ದೇಶದ ಅಭಿವೃದ್ಧಿಗೆ ಕುಠಾರಪ್ರಾಯವು ಎಂದು ತಿಳಿದರು. ನಿರ್ಮತ್ಸರರಾದ ಅವರು ದೇಶಹಿತವನ್ನು ನ್ಯಾಯವಾಗಿ ಸಾಧಿಸಲು ಬೇಕಾದ ಮೂಲ (ಸೂತ್ರಗಳ) ತತ್ತ್ವಗಳ ಸಮ್ಯಗ್‌ಜ್ಞಾನ ಉಳ್ಳವರಾಗಿದ್ದರು. ಈಗ ಹತ್ತು ಕುರುಡರು ಆನೆಯನ್ನು ಸವರಿ ತಿಳಿದು ವರದಿ ಮಾಡಿದಂತೆ, ನಾನಾ ಆದರ್ಶಗಳನ್ನು ಸಾರುತ್ತಿದ್ದರೂ ಒಳ್ಳೆಯದಾದವುಗಳನ್ನು ತಿಲಮಾತ್ರವೂ ಸಾಧಿಸಲಾಗದಿರುವುದು ಈ ದೋಷವನ್ನು ಈಗಿನವರಲ್ಲಿ ಸೂಚಿಸುವುದು. ವಿದ್ಯಾವಂತನ ಅಪರಾಧಕ್ಕೆ ದಂಡನೆಯು ಮೃದುವಾದುದರಿಂದ ಅಂಕೆಯಿಲ್ಲದ ಭ್ರಷ್ಟಾಚಾರವು ಬೆಳೆಯುವುದು.

ಜಾತಿಗಳಲ್ಲಿ ನೀಚೋಚ್ಚ ಭಾವಗಳನ್ನು ಕಲ್ಪಿಸಿದ ಅವರು ಅಪರಾಧದ ಜ್ಞಾನಾಜ್ಞಾನಾವಸ್ಥೆಗಳ ಭೇದವನ್ನು ತಿಳಿಯದಿರಲಿಲ್ಲ. ಬ್ರಾಹ್ಮಣನು ಶೂದ್ರನು ನೀಚ ಎಂದಂತೆ, ಜ್ಞಾನ ಇಲ್ಲದ ಶೂದ್ರನು ಮಾಡಿದ ತಪ್ಪಿಗೆ ಒಂದು ದಂಡನೆಯೆಂದೂ, ಜ್ಞಾನ ಇರುವ ಶೂದ್ರನ ಅದೇ ತಪ್ಪಿಗೆ ಅದರ ಎಂಟು ಪಾಲೆಂದೂ ಏರುತ್ತಾ ಏರುತ್ತಾ ಬ್ರಾಹ್ಮಣನ ಅದೇ ಅಪರಾಧಕ್ಕೆ ೬೪–೧೦೦–೧೨೮ ಪಾಲು ದಂಡನೆಯನ್ನು ಹೇಳುವ ಮನು ಮತ್ತು ಪ್ರಾಚೀನ ಭಾರತೀಯರು ಹೇಗೆ ಮತ್ಸರಿಗಳು, ಅಜ್ಞಾನಿಗಳು ? ಅದು ಅವರ ಸೂಕ್ಷ್ಮ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ರಾಜಕಾರಣ, ಮನಃಶಾಸ್ತ್ರಜ್ಞಾನಗಳ ಫಲವಾದುದು

ಸತ್ಯ. ಅಲ್ಲವಾದರೆ ಬಹುಮತ, ಸಮಾನತೆ, ಅಹಿಂಸೆ, ಶಾಂತಿಗಳಿಂದ ಈಗ ಯಾಕೆ ರಾಮರಾಜ್ಯವಾಗಲಿಲ್ಲ ? ತನ್ನ ಅದಕ್ಷತೆಯನ್ನು ಇತರರ ಮೇಲೆ ಹೊರಿಸುವುದು ಯಥಾರ್ಥ ಅಸಾಮರ್ಥ್ಯ. ಹಣವಿಲ್ಲ, ಜನತೆಯ ಸಹಕಾರವಿಲ್ಲ, ಜನತೆಯು ಯುರೋಪಿನಂತೆ ಸಾಕ್ಷರವಲ್ಲ, ಇತ್ಯಾದಿಯಾಗಿ ನೆವ ಹೇಳುವದು ಸರಿಯಾದ ಕಾರಣವಲ್ಲ. ಮನುಸ್ಮೃತಿಯೇ ಭಾರತದ ರಾಜ್ಯಘಟನೆ. ಈಗ ಪರಮೋಚ್ಚ ನ್ಯಾಯಪತಿಗಳು ಈಗಿನ ರಾಜ್ಯಘಟನೆಯನ್ನು ಶಾಸಕರು ಬಹುಮತದಿಂದ ಸಂಪತ್ ಎಂಬ ಸದಸ್ಸಿನಲ್ಲಿಯೂ ಪರಿವರ್ತಿಸುವುದು ಸಾಧುವಲ್ಲ ಎಂದು ಅಭಿಪ್ರಾಯ ಪಡುತ್ತಾರೆ. ಮನುವೂ ಇತರ ಧರ್ಮಜ್ಞರೂ ಧರ್ಮನಿಬಂಧನೆಗಳಂತೆ ರಾಜನು ರಾಜ್ಯಭಾರ ಮಾಡಬೇಕು ಎಂದು ಆಶಿಸುತ್ತಾರೆ. ಆದುದರಿಂದ ಶಾಸಕನು ನ್ಯಾಯದ ಅಧೀನನು. ಶಾಸನವನ್ನು ಅವನಿಷ್ಟದಂತೆ ಮಾಡಗೊಡುವುದು ಅಪಾಯಕಾರಿಯೆಂದು ಕೃಪಾಳುಗಳು ನಿಶ್ಚಯಿಸುತ್ತಾರೆ. ಪೀಡಕನಿಗೆ ವಂಚನೆಯೇ ಧರ್ಮವು.

## ಮನುಸ್ಮೃತಿಯ ಸಮತಾವಾದ, ಸಮಾಜವಾದಗಳು

ಯಜ್ಞದ ನೈಷ್ಫಲ್ಯಕ್ಕೆ ವೈಜ್ಞಾನಿಕ ಸಾಕ್ಷಿಯನ್ನು, ಸಾಫಲ್ಯ ನಿರಾಕರಿಸುವವರು ತೋರಿಸಲಿ. ಯಾಗದಿಂದ ಮಳೆ-ಬೆಳೆಗಳ ಸಮೃದ್ಧಿ ಸಿದ್ಧಿಯಾಗುವುದು. ಅರಣ್ಯವು ಮಳೆಗೆ ಕಾರಣವೆನ್ನುತ್ತಾರೆ; ಅದಲ್ಲ. ಸಮುದ್ರಕ್ಕೆ ಮಳೆಯಾಗುವುದು ಹೇಗೆ ? ಇಂದ್ರನು ವೃಷ್ಟಿಕಾರಣನು. ಅವನು ಸೂರ್ಯನ ಮೂಲಕ ಆದಾನವಿಸರ್ಗಗಳನ್ನು ಸಾಧಿಸುವನು. ಬಿಸಿಲಿಗೆ ನೀರು ಆವಿಯಾಗಿ ಕಾರ್ಮೋಡವಾಗಿ ಬರಸಿಡಿಲು ಜಡಿದು ಮಳೆಯಾಗುವುದನ್ನು ಒಪ್ಪುವ ಭೂತ ವಿಜ್ಞಾನಿಯು, ಅಗ್ನಿಯಲ್ಲಿ ಮಂತ್ರಪೂರ್ವಕ ಯಾಜ್ಞಿಕ ದ್ರವ್ಯದಹನವಾಗಿ ಏನಾಗುವುದೆಂಬುದನ್ನು ನೋಡಬೇಕು. ಅಂತರಿಕ್ಷದಲ್ಲಿ ವಿವಿಧ ವಿದ್ಯುತ್ಪ್ರಸರಣ, ಅಣುವಿಕಿರಣ ಇವುಗಳ ಇತಿಗತಿಯನ್ನು ಅಳೆಯಲಾಗದ ಅವನು ಯಜ್ಞವಿಜ್ಞಾನಕ್ಕೆ ಬೋರಲು ಮಲಗುವ ಮಗು. ಆಯುರ್ವೇದದ ರಸಭಸ್ಮಗಳು, ವೈದಿಕಯಜ್ಞ ವೈಭವವು, ಅದ್ಭುತವಿಜ್ಞಾನಗಳು. ಅಣುಗಳ ಸೂಕ್ಷ್ಮೀಕರಣದಿಂದ ಅವು ವ್ಯಾಪನಶೀಲಗಳು. ಪರಿಣಾಮಕಾರಿಗಳು,

ಆರೋಗ್ಯಕ್ಕೆ ರಸಭಸ್ಮಗಳು ಬ್ರಹ್ಮಾಸ್ತ್ರವಾಗಿರುವುದು ಉಪಯೋಗಿಸಿದವರೇ ಬಲ್ಲರು. ಮಂತ್ರವು ವಿಷವನ್ನು ಇಳಿಸುವುದು, ಏರಿಸುವುದು. ಪ್ರತ್ಯಕ್ಷಕ್ಕೆ ಬಾಧಕ ಪ್ರಮಾಣವು ಈ ಸೃಷ್ಟಿಯಲ್ಲಿ ಆಗಿಲ್ಲ. ಆದುದರಿಂದ ಯಜ್ಞಾದಿ ವೈದಿಕಕರ್ಮಗಳ ಅಭಾವದಿಂದ ಆಹಾರಾಭಾವ, ಜನಾಧಿತ್ಯ, ಮಹಾರೋಗ ಗಳಿಂದಾಗಿ ಒಬ್ಬನು ಮತ್ತೊಬ್ಬನನ್ನು ನುಂಗುವ ದಾರುಣ ವಿಪ್ಲವವುಒದಗಿದೆ. ಇದನ್ನು ಯಾವ ವಾದಕ್ಕೂ ಪರಿಣಾಮಕಾರಿಯಾಗಿ ಹತ್ತಿಕ್ಕಿ ಸುಖೀರಾಜ್ಯ ವನ್ನು ಸೃಜಿಸಲಾಗಲಿಲ್ಲ. ಮನುಸ್ಮೃತಿಯಲ್ಲಿ ಸುಖೀರಾಜ್ಯವಿದೆ. ರಾಮ ರಾಜ್ಯವಿದೆ. ಸಮತಾವಾದವಿದೆ. ಸಮಾಜವಾದವಿದೆ. ನೋಡುವ ಕಣ್ಣು ತೆರೆದಿರಬೇಕು. ದಾನವು ಉತ್ತಮ ಧರ್ಮ. ಯಜ್ಞ ಮತ್ತು ಇತರ ಸಂಸ್ಕಾರಗಳು ದಾನರೂಪವಾಗಿವೆ. ಪಾಪನಿವೃತ್ತಿಯು ದಾನದಿಂದ ಉಂಟಾ ಗುವುದು. ಇದ್ದವನು ಇಲ್ಲದವನಿಗೆ ಒಂದುಮಿತಿಯಲ್ಲಿ ಕೊಡುವುದು ದಾನ. ಅದರಿಂದ ಮೈಗಳ್ಳತನಕ್ಕೆ ಆಸ್ಪದವಿಲ್ಲ. ದಾನಪ್ರಶಂಸೆಯಿದೆ. ಪ್ರತಿಗ್ರಹ ನಿಂದೆಯಿದೆ. ಅನ್ನ, ಧನ, ಧಾನ್ಯ, ಗೋವು, ಕುದುರೆ ಇವುಗಳನ್ನು ದಕ್ಷಿಣೆ ಯಾಗಿ ಕೊಡುವುದು ಯಾಗಾಂಗ. ಇಂತಹ ಯಾಗರೂಪದಿಂದ ದಾನಬುದ್ಧಿ ಯಿಲ್ಲದಿರುವ ಉಳ್ಳವರಿಂದ ಕದ್ದು ಬಲಾತ್ಕರಿಸಿ ತಕ್ಕೊಳ್ಳುವುದು ಅಪರಾಧ ವಲ್ಲವೆಂದು ಧರ್ಮಜ್ಞರ ಮತ. ಈ ವಿಧಾನವು ಧನವು ರಾಶಿಯಾಗುವು ದನ್ನು ತಡೆಯುವುದು, ಹಂಚುವುದು. ದೇಶಕ್ಷೇಮಕ್ಕಾಗಿ ದೇವತೋದ್ದೇಶದ ಯಾಗವಿದೆ. ದೇಶದಲ್ಲಿ ಎಲ್ಲರೂ ಇರುವರು. ಇಂತಹ ಘನ ಉದ್ದೇಶದ ದಾನಯಾಗರೂಪದಿಂದ ಅರ್ಥಪ್ರಸಾರ ಯೋಜನೆ ಪ್ರಾಚೀನರದು. ಭೂತ ವಿಜ್ಞಾನಿಯು ಮಾರಕಾಸ್ತ್ರವನ್ನಲ್ಲದೆ ಮತ್ತೇನನ್ನು ಸಾಧಿಸಿದನು. ಅತಿವೃಷ್ಟಿ ಅನಾವೃಷ್ಟಿ, ಇಲಿ, ಮಿಡಿತೆ, ಕೀಟ, ಆಹಾರಾಭಾವ, ಜನಾಧಿಕ್ಯವನ್ನು ನಿಯಂತ್ರಿ ಸಲಾಗಲಿಲ್ಲ. ಭಾರತದ ವಿಜ್ಞಾನವು ಅಮರಣ, ಶಾಂತಿ, ಸುಖಸಾಗರಗಳ ಆಗರವಾದ ಅಮೃತ ವಿಜ್ಞಾನವಾಗಿದೆ. ಐಹಿಕ ಸುಖಕ್ಕೆ ವೇದದಲ್ಲಿ ಅನೇಕ ಯಾಜ್ಞಿಕ ಉಪಾಯವಿದೆ. ಅರ್ಜುನನು ದೇಶ–ವಿದೇಶಗಳ ದಿಗ್ವಿಜಯ ಮಾಡಿದನು. ಕನ್ನಡಿಯಂತಹ ನೆಲಗೋಡೆ ಇರುವ ಭವ್ಯಭವನ ಮಾಡಿದ, ಸ್ವರ್ಗಕ್ಕೆ ಹೋದ, ಶಿವನನ್ನು ಕಂಡ. ಇದು ಭಾರತವಿಜ್ಞಾನ ಸಿದ್ಧಿಯ ತುಣುಕು.

ಮನುಸ್ಮೃತಿಯ ಅನುವಾದಕ ಪ್ರಕಾಶನಕ್ಕೆ ಕೃತಜ್ಞನು. ಸಮಾಜ ಪುಸ್ತಕಾಲಯದ ಒಡೆಯರ ಸಾಹಸಕ್ಕೆ ಮೆಚ್ಚಿಕೆಗಳು. ನಮ್ಮ ಶ್ರಮವು ಸಫಲವಾಗುವಂತೆ ಜನತೆಯನ್ನು ಹಾರೈಸುತ್ತೇನೆ.

ಪಂಬೆತ್ತಾಡಿ ( ದ. ಕ. ) ಪಂ. ಚಕ್ರಕೋಡಿ ಈಶ್ವರಶಾಸ್ತ್ರೀ

೨೬–೧–೧೯೭೪

# ಪ್ರಕಾಶಕರ ನುಡಿ

---

ಹಿಂದೂ ಧರ್ಮಶಾಸ್ತ್ರಕ್ಕೆ ಬುನಾದಿಯಾಗಿರುವ 'ಮನುಸ್ಮೃತಿ'ಯಂಥ ಮಹತ್ತ್ವದ ಗ್ರಂಥವನ್ನು ಪ್ರಕಟಿಸಲು ನಮಗೆ ಸಂತೋಷವೆನಿಸುತ್ತದೆ. ಈ ಮೊದಲು, ಇದೇ ರೀತಿ, ಕನ್ನಡದಲ್ಲಿ ಪ್ರಪ್ರಥಮ ಬಾರಿ ನಾವು 'ಕೌಟಲ್ಯನ ಅರ್ಥಶಾಸ್ತ್ರ' ವನ್ನು ಸಮಗ್ರವಾಗಿ ಪ್ರಕಟಿಸಿದಾಗ, ಕನ್ನಡಿಗರಿಂದ ದೊರೆತ ಹರ್ಷೋದ್ಗಾರಗಳ 'ಛಾಪು'ವೇ ನಮಗೆ ಈ ಮನುಸ್ಮೃತಿಯ ಪ್ರಕಟಣೆಗೆ ಸಾಹಸಪಡಲು ಸ್ಫೂರ್ತಿಯನ್ನಿತ್ತಿತು. ಮಾರಾಟದ ದೃಷ್ಟಿಯಿಂದ ಇಂಥ ಪ್ರಕಟಣೆಗಳು ನಿರಾಶಾದಾಯಕವಾದವುಗಳೇ ! ಅಂತಲೇ ಇಂತಹ ಪ್ರಕಟಣೆ ಗಳಿಗೆ ಜನ ಕೈಹಾಕುವುದು ಕಡಮೆ. ಹೀಗೆಂದು ಕೈಸೋತು ಕುಳಿತರೆ ಕನ್ನಡ ದಲ್ಲಿ ಪ್ರಕಟವಾಗಲೇ ಬೇಕಾದ ಮಹತ್ತ್ವದ ಹಲವಾರು ಗ್ರಂಥಗಳು ಬೆಳಕು ಕಾಣದೆಯೇ ಹೋದಾವು ! ಹಣದ ಶ್ರೇಯ ಕಡಿಮೆ ಲಭಿಸಿದರೂ, ಕನ್ನಡ ಸಾರಸ್ವತ ಭಂಡಾರಕ್ಕೆ ಒಳ್ಳೆಯ ಕಾಣ್ಕೆಗಳನ್ನು ಒಪ್ಪಿಸುತ್ತಿರುವ ಸಂತಸದ ಶ್ರೇಯವೇನೂ ಕಡಿಮೆಯದಲ್ಲ! ಈ ಕಾರಣ ನಾವು ಆಗಾಗ ಇಂತಹ ಬೃಹತ್ ಪ್ರಕಟಣೆಗಳಿಗೆ ಕೈಹಾಕುವುದು. ಇದಕ್ಕೆ ಕನ್ನಡ ಬಾಂಧವರಿಂದ ಹಾರ್ದಿಕ ಸ್ವಾಗತ ದೊರೆತೀತೆಂದು ಆಶಿಸಿದ್ದೇವೆ.

ಪ್ರಸ್ತುತ ಗ್ರಂಥವನ್ನು ಸರಳವಾಗಿ, ತುಂಬ ಸಮರ್ಥ ರೀತಿಯಲ್ಲಿ ಅನುವಾದಿಸಿದ ಪಂಬೆತ್ತಾಡಿಯ ಚಕ್ರಕೋಡಿ ಈಶ್ವರ ಶಾಸ್ತ್ರಿಗಳಿಗೆ ಅಭಿನಂದನೆ ಗಳು. ಅನುವಾದಕೃತಿಯ ಹಸ್ತಪ್ರತಿಯ ನೂರಾರು ಪುಟಗಳನ್ನು, ತಮ್ಮ ಅವಿರತ ಕಾರ್ಯಕ್ರಮಗಳಲ್ಲಿಯೂ ಬಿಡುವು ಮಾಡಿಕೊಂಡು ಅವಗಾಹನೆ ಮಾಡಿ, ಅನುವಾದದ ಬಗ್ಗೆ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿ, ಪ್ರಕಟಣೆಗೆ ಪ್ರೋತ್ಸಾಹಿಸಿ, ಅಲ್ಲಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಿಕೊಟ್ಟದ್ದಕ್ಕಾಗಿ ಧಾರವಾಡದ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಪಾಠಶಾಲೆಯ ಬ್ರಹ್ಮಶ್ರೀ ವೇ. ರಾ., ರಾ. ಬಾಲಚಂದ್ರ ಶಾಸ್ತ್ರಿಗಳಿಗೆ ಅಭಿವಂದನೆಗಳು.

# ಪ ರಿ ವಿ ಡಿ



## ಪೌರ ಹಾಗೂ ಅಪರಾಧದ ಕಟ್ಟಳೆಗಳು



## ಅಧ್ಯಾಯಗಳು ಹಾಗು ಶ್ಲೋಕಗಳು



# ಮನುಸ್ಮೃತಿ

## ಅಧ್ಯಾಯ ೧

**ಮನುಮೇಕಾಗ್ರಮಾಸೀನಮಭಿಗಮ್ಯ ಮಹರ್ಷಯಃ ।**
**ಪ್ರತಿಪೂಜ್ಯ ಯಥಾನ್ಯಾಯಮಿದಂ ವಚನಮಬ್ರುವನ್ ॥ ೧**

ಮಹಾತ್ಮರಾದ ಋಷಿಗಳು ಮನುವನ್ನು ಕಂಡು ಈ ಒಂದು ಪ್ರಶ್ನೆಯನ್ನು ಕೇಳುತ್ತಾರೆ. ಸಂಪ್ರದಾಯಪ್ರಕಾರ ನಮಸ್ಕಾರಾದಿಗಳನ್ನು ಮಾಡಲು ತಪ್ಪಲಿಲ್ಲ. ಮನುವು ಅನ್ಯತ್ರ ವ್ಯಗ್ರಮನಸ್ಕನಾಗಿರಲಿಲ್ಲ. ಸುಖಾಸನದಲ್ಲಿದ್ದನು. ಜನಜೀವನದ ಆದ್ಯಂತಗಳನ್ನು, ವಿವಿಧ ಮುಖಗಳನ್ನು, ಶುಚಿರುಚಿಗಳನ್ನು ಮನನ ಮಾಡಿದ್ದರಿಂದ ಮನು ಸಾರ್ಥಕ ನಾಮಧಾರಿಯು.

ಲೋಕದೃಷ್ಟಿಯ ಉಪಪತ್ತಿ ಸಂಶಯನಿವಾರಣೆಗಳನ್ನು—ಮನುಸ್ಮೃತಿಯನ್ನು ಮನು ಬರೆದನು. ಅಲ್ಲಿ ತನ್ನನ್ನು ತಾನು ಹೇಳಿಕೊಳ್ಳುವ ಪ್ರಸಂಗವೇನು ? ಉತ್ತರ: ಮನುವಿನ ಆಪ್ತಶಿಷ್ಯನು ಭೃಗುವು. ಮನುವಿನ ದೃಷ್ಟಿಕೋನವನ್ನು ಯಥಾವತ್ತಾಗಿ ಬಲ್ಲವನಾದ ಉತ್ತಮ ಆಪ್ತಶಿಷ್ಯನು ಭೃಗುವು. ಮನುವಿನಿಂದ ಮುಖತಃ ತಿಳಿದ ಧರ್ಮಸೂಕ್ಷ್ಮತೆಯನ್ನು ಶ್ಲೋಕರೂಪವಾಗಿ ಭೃಗುವು ಇತರರ ಉಪಯೋಗಕ್ಕೋಸ್ಕರ ಸಂಗ್ರಹಿಸಿದನು. ಮಹಾತ್ಮರು ಅಲ್ಪಾಯಾಸದ ಕೆಲಸವನ್ನು ಮಾಡುವ ಇತರರು ಸಮರ್ಥರಿರುವಾಗ ತಾವು ಸ್ವಯಂ ಹಚ್ಚಿಕೊಳ್ಳುವುದಿಲ್ಲ. ಮೇಲ್ಮಟ್ಟದ ರಾಜರು, ರಾಜಪ್ರತಿನಿಧಿಗಳು, ರಾಜಕಾರಣಿಗಳು, ಮೇಧಾವಿಗಳು ತಮ್ಮ ಆಪ್ತರಿಂದ ಹೇಳಿಕೆ, ಅನುಭವ, ಸಹಾಯ, ವಿಧಿ-ವಿಧಾನಗಳನ್ನು ಒದಗಿಸುವುದು, ಪ್ರಕಟಿಸುವುದು ಅಪರಿಚಿತವಲ್ಲ. ಈ ರೀತಿಯಲ್ಲಿ ಪುರಾತನ ಎಲ್ಲ ಗ್ರಂಥಗಳಂತೆ ಈ ಗ್ರಂಥವು ಮನುಭಾವದಂತೆ ಭೃಗುವಿನಿಂದ ಅನ್ಯೂನಾನತಿರಿಕ್ತವಾಗಿ ಗ್ರಂಥರೂಪಕ್ಕೆ ಬಂದಿರುವುದು. ಮನು

ಮತ್ತು ಭೃಗು ಇವರಿಬ್ಬರ ಲೋಕಾನುಗ್ರಹ ಭಾವನೆಯನ್ನು ಮೂರ್ತಿಗೊಳಿಸಿದೆಯೆಂದು ತಿಳಿಯಬಹುದು. ಮತ್ತು ಶ್ರೀಹರ್ಷ, ಶೂದ್ರಕ ಮುಂತಾದ ಕವಿಗಳು ಸಂಸ್ಕೃತದಲ್ಲಿ; ರನ್ನ, ಪಂಪ ಮುಂತಾದ ಕನ್ನಡ ಕವಿಗಳು ಗ್ರಂಥದ ಉಪೋದ್ಘಾತ ಪ್ರಕರಣದಲ್ಲಿ 'ನಾನು ಹೀಗೆ ಬರೆದೆ, ಹಾಗೆ ಬರೆದೆ, ಇದು ಹಾಗಿದೆ, ಅಂತಹ ಗ್ರಂಥ, ನಾನು ಅಂತವ' ಇತ್ಯಾದಿಯಾಗಿ ಹೇಳಿಕೊಳ್ಳುವುದು ಕಂಡುಬರುತ್ತದೆ. ಅವರು ಗ್ರಂಥ ಬರೆಯುವ ಮೊದಲು ತಮ್ಮ ಪಾಂಡಿತ್ಯ ವಿಶ್ವಾಸದಿಂದ ಪ್ರಶಂಸಿಸಿಕೊಂಡರೋ? ಬೌದ್ಧಿಕವಾಗಿ ಕಲ್ಪಿಸಿದ ಗ್ರಂಥಸೃಷ್ಟಿಯಿಂದ ಗ್ರಂಥವನ್ನು ಗತಗಾಲದ್ದರಂತೆ ಬರೆದುಕೊಂಡರೋ? ಅಲ್ಲಿ ಗ್ರಂಥರಚನಾವಸಾನದಲ್ಲಿ ಬರೆದ ಪೀಠಿಕಾಸಂಧಿಯನ್ನು ಆರಂಭದಲ್ಲಿ ಸಂಯೋಜಿಸಿದರೋ ಎಂದು ಎಲ್ಲರಿಗೂ ಸರಿಯಾಗುವಂತೆ ನಿಶ್ಚಯ ಹೇಳುವುದು ಕಷ್ಟ. ಮತ್ತು ಈ ಕಾಲದ ಪ್ರಕಟಿತ ಪುಸ್ತಕದ ಆರಂಭದ ಪುಟಗಳಲ್ಲಿ ವಾಚಕರು ಒಡನೆ ಎಲ್ಲವನ್ನು ಕಾಣುವುದಾದರೂ ಮುನ್ನುಡಿ–ಲೇಖಕರ ಮಾತು ಮುಂತಾದ ಖಂಡದಲ್ಲಿ; ಮುಂದೆ ಕಾಣುವ ಪ್ರಕಟಿತ ಗ್ರಂಥವನ್ನು ಉದ್ದೇಶಿಸಿ ಧನ್ಯವಾದ, ಕೃತಜ್ಞತೆ, ಪ್ರಶಂಸೆ, ವಿಜ್ಞಾಪನೆಗಳ ವಾಕ್ಯಗಳನ್ನು ಬರೆಯುವ ಸಂಪ್ರದಾಯವಿದೆ. ಆದುದರಿಂದ ಇವೆಲ್ಲ ಸತ್ಯದಲ್ಲಿ ಹಿನ್ನುಡಿಯಾದರೂ ಅಗ್ರಭಾಗವನ್ನು ಅಲಂಕರಿಸುವುವು. ಇಂತಹ ಸತ್ಸಂಪ್ರದಾಯದಂತೆ ಸರ್ವಜ್ಞಕಲ್ಪರಾದ ಪುರಾತನರು ತನ್ನನ್ನು ತಾನು ಎನ್ನದೆ, ಸಂಜ್ಞಾನಾಮದಿಂದ ಬೇರೊಬ್ಬನಂತೆ ವ್ಯವಹರಿಸುವುದೂ ಒಂದು ಪರಂಪರೆಯೆಂದು ನಾವು ತಿಳಿಯಬಹುದು.

**ಭಗವನ್ ಸರ್ವವರ್ಣಾನಾಂ ಯಥಾವದನುಪೂರ್ವಶಃ ।**
**ಅಂತರಪ್ರಭವಾಣಾಂ ಚ ಧರ್ಮಾನ್ನೋ ವಕ್ತುಮರ್ಹಸಿ ॥ ೨**

ಪೂಜ್ಯನೆ! ಅನುಕ್ರಮವಾಗಿ ನಮಗೆ ಧರ್ಮೋಪದೇಶವಾಗಬೇಕು. ನೀನು ಅದಕ್ಕೆ ತಕ್ಕವನು. ಜಗತ್ತಿನ ಎಲ್ಲ ವರ್ಗದ ಜನರ ಮತ್ತು ಸಂಕೀರ್ಣಸಂತತಿಯ ವಸ್ತುಸ್ಥಿತಿಗೆ ಹೊಂದುವ ಧರ್ಮವು ನಮಗೆ ತಿಳಿಯಬೇಕೆಂದು ಆಶೆಯಿದೆ.

ತ್ವಮೇಕೋ ಹ್ಯಸ್ಯ ಸರ್ವಸ್ಯ ವಿಧಾನಸ್ಯ ಸ್ವಯಂಭುವಃ ।
ಅಚಿಂತ್ಯಸ್ಯಾಪ್ರಮೇಯಸ್ಯ ಕಾರ್ಯತತ್ತ್ವಾರ್ಥವಿತ್ ಪ್ರಭೋ ॥ ೩

ನೀನು ಕರ್ತವ್ಯವನ್ನೂ ಮತ್ತೂ ತತ್ತ್ವವನ್ನೂ ಬಲ್ಲವನು. ಧರ್ಮ ಮೂಲವು ಸ್ವಯಂಭೂ–ಕೃತ್ರಿಮವಲ್ಲ, ನೈಸರ್ಗಿಕ. ವಿರೂಪವಾದರೆ ಸುಖಮಯವಲ್ಲ. ಬಹು ವಿಶಾಲವೂ ಸೂಕ್ಷ್ಮವೂ ಆಗಿರುವುದರಿಂದ ಸುಗಮವಲ್ಲ. ಯಾಗಾದಿ ಕರ್ಮವೂ, ಸತ್ಯಜ್ಞಾನಾನಂದಮಯ ಬ್ರಹ್ಮ ತತ್ತ್ವವೂ ಪಾದಪ್ರತಿಪಾದ್ಯಗಳು. ಸುಖಜೀವನವು ಈಗಲೂ ಮುಂದೆಯೂ ವೇದವರ್ಣಿತವಾದ ಧರ್ಮದಿಂದ ಜಗತ್ತಿನ ಸಕಲ ಪ್ರಜೆಗಳಿಗೂ ಲಭಿಸು ವುದು. ಅವೈದಿಕ ಮತಗಳು ವೇದಮತಸಾರವಾದ ಸತ್ಯ, ಅಹಿಂಸೆ, ಅಲ್ಪತೃಪ್ತಿ ಮುಂತಾದ ಘನಗುಣಗಳಿಲ್ಲದೆ ಉಪಕರಣ ಪಡೆಯಲಿಲ್ಲ. ಜನರು ಸುಖಲಾಭವನ್ನು ಹೊಂದುವುದಿಲ್ಲ. ಹೀಗೆ ಬೇರೆ ದೇಶದ ಜನವೂ ಕೂಡ ವೇದಸಾರ ಧರ್ಮದಿಂದಲೇ ಧರಿಸಲ್ಪಡುವುದೆಂದು ಧರ್ಮದ ವಿಶ್ವವ್ಯಾಪ್ತಿ ಯನ್ನು ಊಹಿಸಬಹುದು. ವ್ಯತಿರಿಕ್ತವಾಗಿ ಧುಮುಕಿದ ಪ್ರಜೆಯು ಯಶಸ್ವಿಯಾದದ್ದಿಲ್ಲ. ಸಮನ್ವಯದೃಷ್ಟಿಯಿಂದ ಇದು ವೇದ್ಯವಾಗಿದೆ.

ಸ ತೈಃ ಪೃಷ್ಟಸ್ತಥಾ ಸಮ್ಯಗಮಿತೌಜಾ ಮಹಾತ್ಮಭಿಃ ।
ಪ್ರತ್ಯುವಾಚಾರ್ಚ್ಯ ತಾನ್ ಸರ್ವಾನ್ ಮಹರ್ಷೀನ್ ಶ್ರೂಯತಾಮಿತಿ ॥ ೪

ಋಷಿಗಳು ಗೌರವಪೂರ್ವಕವಾಗಿ ಕೇಳಿದರು. ತನ್ನ ಮತ್ತು ಅವರ ಘನತೆಗೆ ತಕ್ಕಂತೆ ಇರುವ ಸಮುದಾಚಾರದೊಡನೆ ಧರ್ಮೋಪದೇಶಕ್ಕೆ ಮನುವು ಉಪಕ್ರಮಿಸುತ್ತಾನೆ.

ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಂ ।
ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥ ೫

ಈಗ ನಾವು ತಿಳಿದಿರುವಂತೆ ಹಗಲು ಕತ್ತಲು ಅಲ್ಲದ, ಇದು ಹೀಗೆ ಎಂದು ವಿವರಿಸಲಾಗದ, ಎಚ್ಚರವೂ ನಿದ್ದೆಯೂ ಅಲ್ಲದ ಒಂದು ಅವ್ಯಕ್ತಾ ವಸ್ಥೆಯ ಬ್ರಹ್ಮವು ಇತ್ತು.

ತತಃ ಸ್ವಯಂಭೂರ್ಭಗವಾನ್ ಅವ್ಯಕ್ತೋ ವ್ಯಂಜಯನ್ನಿದಂ ।
ಮಹಾಭೂತಾದಿ ವೃತ್ತೌಜಾಃ ಪ್ರಾದುರಾಸೀತ್ತಮೋನುದಃ ॥ ೬

ಬಳಿಕ ಸರ್ವಶಕ್ತನೂ ಸ್ವಯಂಭುವೂ ಆದ ಬ್ರಹ್ಮವು ವ್ಯಕ್ತವಾಯಿತು. ಪಂಚಭೂತಗಳು, ಅಹೋರಾತ್ರಿಗಳು ಗೋಚರವಾದುವು.

ಯೋಽಸಾವತೀಂದ್ರಿಯಗ್ರಾಹ್ಯಃ ಸೂಕ್ಷ್ಮೋಽವ್ಯಕ್ತಃ ಸನಾತನಃ ।
ಸರ್ವಭೂತಮಯೋಽಚಿಂತ್ಯಃ ಸ ಏವ ಸ್ವಯಮುದ್ಬಭೌ ॥ ೭

ಅಂತಹ ಪರಮಾತ್ಮನು ಸನಾತನನಾದರೂ ಚರ್ಮಚಕ್ಷುವಿಗೆ ತೋರುವವನಲ್ಲ. ಯಮನಿಯಮಾದಿ ಯೋಗಬಲವುಳ್ಳ ಮನಸ್ಸಿಗೆ ಮಾತ್ರ ಗ್ರಾಹ್ಯನಾದವನು. ನಿರವಯವರೂಪವನ್ನು ಬಿಟ್ಟು ಸಾವಯವ ರೂಪವನ್ನು ತಾಳಿದನು.

ಸೋಽಭಿಧ್ಯಾಯ ಶರೀರಾತ್ ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ॥ ೮

ಅವನು ಇಚ್ಛಾಮಾತ್ರದಿಂದ ತನ್ನ ಶರೀರದಿಂದಲೇ ವಿವಿಧ ಪ್ರಜೆಗಳ ಸೃಷ್ಟಿಯ ಆರಂಭದಲ್ಲಿ ಮಹಾಜಲವನ್ನು ಸೃಜಿಸಿದನು. ಆ ಮಹಾಜಲದಲ್ಲಿ ಇನ್ನೊಂದು ಸೃಷ್ಟಿಬೀಜವನ್ನು ಇರಗೊಳಿಸಿದನು. ಮೊದಲು ತತ್ತ್ವರೂಪವಾದ ಭೂತವಸ್ತುಗಳು, ಬಳಿಕ ದೃಶ್ಯವಾದ ಪೃಥಿವ್ಯಾದಿ ದ್ರವ್ಯಗಳು ಎಂದು ಸೃಷ್ಟಿಕ್ರಮವು. ಕಲ್ಪಭೇದದಲ್ಲಿ ಬೇರೆಬೇರೆ ಸೃಷ್ಟಿಯು ಇರುವುದು. ಶಿಲಾಯುಗ ಇತ್ಯಾದಿಯಾಗಿ ವಿಕಾಸವಾದವು ಮುಂದುವರಿಯುತ್ತವೆ. ಯೋಗಬಲವನ್ನು ಸಾಕ್ಷಾತ್ಕರಿಸಿದವರಿಗೆ ಯೋಗಿಗಳ ಅನುಭವದಲ್ಲಿ ವಿವಾದವು ಬರಲಾರದು. ತನ್ನ ಜೀವನಕಾಲದ ಅನುಭವದಿಂದ ಎಲ್ಲವನ್ನು ಅಳೆಯಲಾಗದು. ನೀರಿನ ಆಳತೆ ದಾರಿಗೆ ಹೊಂದುವುದೆ? ಈ ೨೦ನೇ ಶತಮಾನದಲ್ಲಿ ಪ್ರಜಾಕ್ಷೇಮಕ್ಕೆ ಒಬ್ಬೊಬ್ಬ ಮುಂದಾಳು ಒಂದೊಂದು ವಾದವನ್ನು ಮುಂದೊಡ್ಡುವನು. ಇದು ಸತ್ಯವಾದಷ್ಟು ಅದು ಅಯಥಾರ್ಥವಲ್ಲ.

ತದಂಡಮಭವದ್ಧೈಮಂ ಸಹಸ್ರಾಂಶು ಸಮಪ್ರಭಂ ।
ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ॥ ೯

ನೀರಿನಲ್ಲಿ ಹಾಕಿದ ಬೀಜವು ಚಿನ್ನದ ಮೊಟ್ಟೆಯಂತೆ ಶುದ್ಧವಾಯಿತು. ಸೂರ್ಯನಂತೆ ಅದು ಉಜ್ವಲವಾಗಿತ್ತು. ಸರ್ವಲೋಕಜನಕನಾದ ಬ್ರಹ್ಮನು ಅದರಲ್ಲಿ ಜನ್ಮವೆತ್ತಿದನು.

ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ ॥ ೧೦

ನಾರಾ ಎಂದರೆ ನೀರು. ಅಯನವು ಆಶ್ರಯವು. ಬ್ರಹ್ಮನು ಅಂಡ ಭವನು, ಜಲಾಶ್ರಯನು. ಆದುದರಿಂದ ನಾರಾಯಣ ಶಬ್ದವು ಬ್ರಹ್ಮ ವಾಚಕವು.

ಯತ್ತತ್ ಕಾರಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ ।
ತದ್ವಿಸೃಷ್ಟಃ ಸ ಪುರುಷೋ ಲೋಕೇ ಬ್ರಹ್ಮೇತಿ ಕೀರ್ತ್ಯತೇ ॥ ೧೧

ಸದಸತ್ ರೂಪ ಅವ್ಯಕ್ತ ಬ್ರಹ್ಮದಿಂದ ಸೃಜಿಸಲ್ಪಟ್ಟ ಅಂಡಜ ಬ್ರಹ್ಮನೂ ಬ್ರಹ್ಮನೆಂದೇ ಕರೆಯಲ್ಪಡುತ್ತಾನೆ.

ತಸ್ಮಿನ್ನಂಡೇ ಸ ಭಗವಾನ್ ಉಷಿತ್ವಾ ಪರಿವತ್ಸರಂ ।
ಸ್ವಯಮೇವಾತ್ಮನೋ ಧ್ಯಾನಾತ್ತದಂಡಮಕರೋದ್ವಿಧಾ ॥ ೧೨

ಆ ಬ್ರಹ್ಮನು ಆ ಅಂಡದಲ್ಲಿ ಬಹಳ ವರ್ಷವಿದ್ದು ತನ್ನ ಧ್ಯಾನಬಲ ದಿಂದ ಆ ಅಂಡವನ್ನು ಎರಡುಹೋಳು ಮಾಡಿದನು.

ತಾಭ್ಯಾಂ ಸ ಶಕಲಾಭ್ಯಾಂ ಚ ದಿವಂ ಭೂಮಿಂಚ ನಿರ್ಮಮೇ ।
ಮಧ್ಯೇ ವ್ಯೋಮ ದಿಶಶ್ಚಾಷ್ಟಾ ವಪಾಂಸ್ಥಾನಂ ಚ ಶಾಶ್ವತಂ ॥ ೧೩

ಅದರಿಂದ ಸ್ವರ್ಗ, ಭೂಮಿ, ಆಕಾಶ, ದಿಕ್, ಸಮುದ್ರ ಎಲ್ಲ ಉಂಟಾದುವು.

ಉದ್ಬಬರ್ಹಾತ್ಮನಶ್ಚೈವ ಮನಃ ಸದಸದಾತ್ಮಕಂ ।
ಮನಸಶ್ಚಾಪ್ಯಹಂಕಾರಂ ಅಭಿಮಂತಾರಮೀಶ್ವರಂ ॥ ೧೪

ಆ ಪರಮಾತ್ಮನಿಂದ ಮನಸ್ಸು, ಅಹಂಕಾರಗಳು ಆವಿರ್ಭವಿಸಿದವು.

ಮಹಾಂತಮೇವ ಚಾತ್ಮಾನಂ ಸರ್ವಾಣಿ ತ್ರಿಗುಣಾನಿ ಚ ।
ವಿಷಯಾಣಾಂ ಗ್ರಹೀತೃಣಿ ಶನೈಃ ಪಂಚೇಂದ್ರಿಯಾಣಿ ಚ ॥ ೧೫

ಪಂಚೇಂದ್ರಿಯ ಮುಂತಾದ ಸರ್ವಸೃಷ್ಟಿಯು ಸತ್ವರಜಸ್‌ತಮಸ್ ಎಂಬ ತ್ರಿಗುಣಮಯವು ಆಗಿ ವಿಸ್ತರಿಸಿದುವು.

ತೇಷಾಂ ತ್ವವಯವಾನ್ ಸೂಕ್ಷ್ಮಾನ್ ಷಣ್ಣಾಮಪ್ಯಮಿತೌಜಸಾಂ ।
ಸನ್ನಿವೇಶ್ಯಾತ್ಮಮಾತ್ರಾಸು ಸರ್ವಭೂತಾನಿ ನಿರ್ಮಮೇ ॥ ೧೬

ಅಹಂಕಾರ ತನ್ಮಾತ್ರಗಳನ್ನು ಆಧರಿಸಿ ವಿಚಿತ್ರ ಕ್ರಿಯಾಗುಣಶಾಲಿಗಳಾದ ಅಸಂಖ್ಯ ವಸ್ತುಗಳನ್ನು ಸೃಜಿಸಿದನು.

ಯನ್ಮೂರ್ತ್ಯವಯವಾಃ ಸೂಕ್ಷ್ಮಾಸ್ತಸ್ಯೇಮಾನ್ಯಾಶ್ರಯಂತಿ ಷಟ್ ।
ತಸ್ಮಾಚ್ಛರೀರಮಿತ್ಯಾಹುಸ್ತಸ್ಯ ಮೂರ್ತಿಂ ಮನೀಷಿಣಃ ॥ ೧೭

ನಾವು ಕಾಣುವ ಶರೀರಗಳೆಲ್ಲ ಅಹಂಕಾರ ತನ್ಮಾತ್ರಗಳೆಂಬ ಆರು ಪದಾರ್ಥಗಳನ್ನು ಅವಲಂಬಿಸಿರುವುದರಿಂದ ದೇಹವನ್ನು ಶರೀರ ಶಬ್ದದಿಂದ ಕರೆಯುವುದು ಸಮಂಜಸವಾಗಿದೆ.

ತದಾವಿಶಂತಿ ಭೂತಾನಿ ಮಹಾಂತಿ ಸಹಕರ್ಮಭಿಃ ।
ಮನಶ್ಚಾವಯವೈಃ ಸೂಕ್ಷ್ಮೈಃ ಸರ್ವಭೂತಕೃದವ್ಯಯಂ ॥ ೧೮

ಕರ್ಮಸಹಿತ ಮಹಾಭೂತಗಳು ಮನಸ್ಸು ಪುಣ್ಯ ಪಾಪ ಸಂಕಲ್ಪ ಸುಖದುಃಖಗಳು ಆ ಬ್ರಹ್ಮದಿಂದ ಹುಟ್ಟುವುವು.

ತೇಷಾಮಿದಂ ತು ಸಪ್ತಾನಾಂ ಪುರುಷಾಣಾಂ ಮಹೌಜಸಾಂ ।
ಸೂಕ್ಷ್ಮಾಭ್ಯೋ ಮೂರ್ತಿಮಾತ್ರಾಭ್ಯಃ ಸಂಭವತ್ಯವ್ಯಯಾದ್ವ್ಯಯಂ ॥ ೧೯

ಹೀಗೆ ಅವ್ಯಯ ಬ್ರಹ್ಮ ವಸ್ತುವಿನಿಂದ ವ್ಯಯವುಳ್ಳ ಇತರ ವಸ್ತುಗಳು ಜನಿಸುವುವು. ಅವ್ಯಯ ಬ್ರಹ್ಮವು ಪೂಜ್ಯ.

ಆದ್ಯಾದ್ಯಸ್ಯ ಗುಣಂ ತ್ವೇಷಾಮವಾಪ್ನೋತಿ ಪರಃ ಪರಃ ।
ಯೋ ಯೋ ಯಾವತಿಥಶ್ಚೈಷಾಂ ಸ ಸ ತಾವದ್ಗುಣಃ ಸ್ಮೃತಃ ॥ ೨೦

ಆಕಾಶ–ವಾಯು–ತೇಜ–ಜಲ–ಪೃಥಿವೀ ಭೂತಗಳಲ್ಲಿ ಶಬ್ದ–ಸ್ಪರ್ಶ–ರೂಪ–ರಸ–ಗಂಧಗುಣಗಳು ಮೊದಲಿನಿಂದ ಸಂಖ್ಯೆಯೇರಿದಂತೆ ಗುಣಗಳು ಅಷ್ಟು ಇರುವುವು. ಆಕಾಶದಲ್ಲಿ ಶಬ್ದ, ವಾಯುವಿನಲ್ಲಿ ಶಬ್ದಸ್ಪರ್ಶ, ತೇಜದಲ್ಲಿ ಶಬ್ದಸ್ಪರ್ಶ ರೂಪಗಳು, ಜಲದಲ್ಲಿ ಶಬ್ದಸ್ಪರ್ಶ ರೂಪರಸಗಳು, ಪೃಥಿವೀಯಲ್ಲಿ ಐದೂ ಇರುವವೆಂದು ಭಾವವು.

ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್ ಪೃಥಕ್ ।
ವೇದಶಬ್ದೇಭ್ಯ ಏವಾದೌ ಪೃಥಕ್ ಸಂಸ್ಥಾಶ್ಚ ನಿರ್ಮಮೇ ॥ ೨೧

ಸೃಷ್ಟಿಸಿದ ಎಲ್ಲ ವಸ್ತುಗಳೂ ವೇದದಲ್ಲಿ ವರ್ಣಿತವಾದ ಸಂಜ್ಞೆ–ಕ್ರಿಯೆಗಳಿಂದ ವ್ಯಾಪೃತಗಳಾಗುವುವು.

ಕರ್ಮಾತ್ಮನಾಂ ಚ ದೇವಾನಾಂ ಸೋಽಸೃಜತ್ ಪ್ರಾಣಿನಾಂ ಪ್ರಭುಃ ।
ಸಾಧ್ಯಾನಾಂ ಚ ಗಣಂ ಸೂಕ್ಷ್ಮಂ ಯಜ್ಞಂ ಚೈವ ಸನಾತನಂ ॥ ೨೨

ಜಡಗಳನ್ನು ದೇವತೆಗಳನ್ನು ಸಾಧ್ಯರನ್ನು ಯಜ್ಞಗಳನ್ನು ಎಲ್ಲವನ್ನು ಮಾಡಿದನು.

ಅಗ್ನಿವಾಯುರವಿಭ್ಯಸ್ತು ತ್ರಯಂ ಬ್ರಹ್ಮ ಸನಾತನಂ ।
ದುದೋಹ ಯಜ್ಞಸಿಧ್ಯರ್ಥಂ ಋಗ್ಯಜುಸ್ಸಾಮಲಕ್ಷಣಂ ॥ ೨೩

ನಿತ್ಯವಾದ ವೇದವನ್ನು ಅಗ್ನಿ, ವಾಯು, ರವಿ ಗ್ರಹಗಳ ಮೂಲಕ ಪರಮಾತ್ಮನು ಋಗ್, ಯಜುಷ್, ಸಾಮನ್ ಎಂಬ ಮೂರು ಅಭಿಧಾನದಿಂದ ಪ್ರಚಾರಕ್ಕೆ ತಂದನು. ಯಜ್ಞವು ನೆರವೇರಲು ಮೂರು ವೇದಗಳು ಬೇಕಾಗಿವೆ.

ಕಾಲಂ ಕಾಲವಿಭಕ್ತೀಶ್ಚ ನಕ್ಷತ್ರಾಣಿ ಗ್ರಹಾಂಸ್ತಥಾ ।
ಸರಿತಃ ಸಾಗರಾನ್ ಶೈಲಾನ್ ಸಮಾನಿ ವಿಷಮಾಣಿ ಚ ॥ ೨೪
ತಪೋ ವಾಚಂ ರತಿಂಚೈವ ಕಾಮಂ ಚ ಕ್ರೋಧಮೇವ ಚ ।
ಸೃಷ್ಟಿಂ ಸಸರ್ಜ ಚೈವೇಮಾಂ ಸ್ರಷ್ಟುಮಿಚ್ಛನ್ನಿಮಾಃ ಪ್ರಜಾಃ ॥ ೨೫

ಸೂರ್ಯಚಲನೆ ಸಂವತ್ಸರ, ಮಾಸಾದಿ ವಿಭಾಗ, ನಕ್ಷತ್ರಗಳು, ಗ್ರಹಗಳು, ನದಿಗಳು, ಸಮುದ್ರಗಳು, ತಪಸ್–ವಾಕ್–ರತಿ–ಕಾಮ–ಕ್ರೋಧಗಳು ಇವುಗಳನ್ನು ಪ್ರಜಾಜೀವನಕ್ಕಾಗಿ ಸೃಷ್ಟಿಗೊಳಿಸಿದನು. ಸ್ವಯಂ ಚಾಲಿತ ಯಂತ್ರವಿರುವಂತೆ.

ಕರ್ಮಣಾಂ ಚ ವಿವೇಕಾರ್ಥಂ ಧರ್ಮಾಧರ್ಮೌ ವ್ಯವೇಚಯತ್ ।
ದ್ವಂದ್ವೈರಯೋಜಯಚ್ಚೇಮಾಃ ಸುಖದುಃಖಾದಿಭಿಃ ಪ್ರಜಾಃ ॥ ೨೬

ಕ್ರಿಯೆಗಳಲ್ಲಿ ಧರ್ಮವೆಂದೂ ಅಧರ್ಮವೆಂದೂ ವರ್ಗವನ್ನು ಮಾಡಿದನು. ಮತ್ತು ಸುಖದುಃಖ ಮುಂತಾದ ವಿರುದ್ಧ ವಸ್ತುಗಳ ಸಂಬಂಧವನ್ನು ಪ್ರಜೆಗಳಿಗೆ ಕಲ್ಪಿಸಿದನು.

ಅಣ್ವ್ಯೋ ಮಾತ್ರಾ ವಿನಾಶಿನ್ಯೋ ದಶಾರ್ಧಾನಾಂ ತು ಯಾಃ ಸ್ಮೃತಾಃ ।
ತಾಭಿಃ ಸಾರ್ಧಮಿದಂ ಸರ್ವಂ ಸಂಭವತ್ಯನುಪೂರ್ವಶಃ ॥ ೨೭

ಪಂಚತನ್ಮಾತ್ರಗಳು, ಪಂಚಮಹಾಭೂತಗಳು ಇವುಗಳಿಂದಲೇ ಸಕಲ ಸೃಷ್ಟಿಯು ವಿಸ್ತರಿಸುವುದು.

ಯಂ ತು ಕರ್ಮಣಿ ಯಸ್ಮಿನ್ ಸ ನ್ಯಯುಂಕ್ತ ಪ್ರಥಮಂ ಪ್ರಭುಃ ।
ಸ ತದೇವ ಸ್ವಯಂ ಭೇಜೇ ಸೃಜ್ಯಮಾನಃ ಪುನಃ ಪುನಃ ॥ ೨೮

ಪ್ರಜಾಪತಿಯು ಸೃಜಿಸಿದ ಪ್ರಾಣಿಗಳ ಸ್ವಭಾವವು ಮಾಂಸಭಕ್ಷಣಾದಿ ವ್ಯಾಪಾರವು ಅನಂತರದ ಸಂತತಿಯಲ್ಲಿಯೂ ಅನುಸ್ಯೂತವಾಗುವುದು.

ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾ ವೃತಾನೃತೇ ।
ಯದ್ಯಸ್ಯ ಸೋಽದಧಾತ್‌ಸರ್ಗೇ ತತ್ತಸ್ಯ ಸ್ವಯಮಾವಿಶತ್ ॥ ೨೯

ಮೇಲೆ ಹೇಳಿದಂತೆ ಹಿಂಸ್ರತ್ವವು ಸಿಂಹ ಹುಲಿಗಳಿಗೆ, ಅಹಿಂಸ್ರತ್ವವು ಜಿಂಕೆಗೆ, ಮೃದುತ್ವವು ಬ್ರಾಹ್ಮಣನಿಗೆ, ಕ್ರೂರತ್ವವು ಕ್ಷತ್ರಿಯನಿಗೆ, ಹಾಗೆಯೇ ಬ್ರಹ್ಮಚರ್ಯವೂ ಅಧರ್ಮವು, ಧರ್ಮವು ನಿಷಿದ್ಧ ಮೈಥುನಾದಿಯೂ ನಿಸರ್ಗವಾಗುವುದು.

ಯಥರ್ತುಲಿಂಗಾನ್ಯೃತವಃ ಸ್ವಯಮೇವರ್ತುಪರ್ಯಯೇ ।
ಸ್ವಾನಿ ಸ್ವಾನ್ಯಭಿಪದ್ಯಂತೇ ತಥಾ ಕರ್ಮಾಣಿ ದೇಹಿನಃ ॥ ೩೦

ವಸಂತಾದಿ ಋತುಗಳಲ್ಲಿ ಫಲಪುಷ್ಪಾದಿ ಸಮೃದ್ಧಿಯು ತೋರುವಂತೆ ಪ್ರಾಣಿಗಳಿಗೆ ಕ್ರೂರತ್ವಾದಿಗಳು ಸ್ವಧರ್ಮವು.

ಲೋಕಾನಾಂ ತು ವಿವೃದ್ಧ್ಯರ್ಥಂ ಮುಖಬಾಹೂರುಪಾದತಃ ।
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್ ॥ ೩೧

ಪರಮಾತ್ಮನ ನಿರಾಕಾರ ನಿರ್ಗುಣ ರೂಪವು ಅಚಿಂತ್ಯವು ಅನಿರ್ವಚನೀಯವು. ವ್ಯಕ್ತವಾದ ಚರಾಚರ ರೂಪದಲ್ಲಿ ( ಬ್ರಾಹ್ಮಣನನ್ನು ) ಜ್ಞಾನಿಯನ್ನು ಮುಖವೆಂದೂ, ( ಕ್ಷತ್ರಿಯನನ್ನು ) ವೀರ್ಯವಂತನನ್ನು ಬಾಹುವೆಂದೂ, ( ವೈಶ್ಯನನ್ನು ) ವಣಿಜನನ್ನು ಊರುಸ್ತಂಭವೆಂದೂ, ( ಶೂದ್ರ ) ಮಜೂರನನ್ನು ಪಾದದಂತೆ ಆಧಾರವೆಂದೂ ನಿರೂಪಿಸಬಹುದು. ಎಂದರೆ ಮನುಷ್ಯಸಮಾಜ ಒಂದು ಶರೀರವೆಂದು ನಾವು ತಿಳಿಯಬೇಕು. ಶರೀರವು ಸ್ವೇಚ್ಛೆಯಂತೆ ಕಾರ್ಯಕ್ಷಮವಾಗಿ ಇಷ್ಟಾನಿಷ್ಟವನ್ನು ಸಾಧಿಸಬಲ್ಲುದೂ

ಹೊಂದತಕ್ಕುದೂ ಆಗಿದೆ. ವ್ಯವಸ್ಥೆಯಂತೆ ವರ್ತಿಸಿದರೆ ಸುಖವಾಗಿ ಉದರಪೋಷಣೆ ಮಾಡಬಲ್ಲುವು. ವಿಪರೀತವಾಗಿ (ವರ್ತಿಸಿದರೆ) ಕುಣಿದಾಡಿದರೆ ಹಳ್ಳಕುಪ್ಪೆಗಳಲ್ಲಿ ಮುಗ್ಗರಿಸಿ ದೇಹಭಂಗಕ್ಕೂ ದುಃಖಕ್ಕೂ ಈಡಾಗುವುದು. ಅದರಂತೆ ಜನಸಮುದಾಯವು ವ್ಯವಹಾರವನ್ನು ವಿಭಾಗಿಸಿಕೊಂಡು ಅವಶ್ಯವಾದದ್ದನ್ನು ತುಂಬಿಕೊಳ್ಳಬೇಕು. ಮನೆಯ ಮುದುಕಿಗೆ ದೇಹಬಲವಿಲ್ಲ. ಕುಳಿತಲ್ಲಿ ಮನೆ ಸೊತ್ತನ್ನು, ಮಕ್ಕಳು-ಮರಿಯನ್ನು ಕಾಯಬಹುದು. ವಯಸ್ಕರು ಕಾಡು–ಗುಡ್ಡ, ಬಿಸಿಲು–ಮಳೆ, ಹಗಲು–ಇರುಳು ದುಡಿದು ತರಬೇಕು. ಒಟ್ಟು ಎಲ್ಲರೂ ಉಂಡು ಬದುಕಬೇಕು. ಹೀಗೆಯೇ ಒಂದು ಮನುಷ್ಯಸಮಾಜವು ತಲೆಯ ಕೆಲಸವಾದ ವಿಚಾರವನ್ನು, ಕೈ ಕೆಲಸ ಕಾಯುವುದನ್ನು, ಕಾಲಿನ ಕೆಲಸ ಪ್ರಯಾಣವನ್ನು (ತೊಡೆ) ಪಾದದ ಕೆಲಸ ಶರೀರಧಾರಣೆಯನ್ನು ನಿರ್ವಂಚನೆಯಿಂದ ಒಂದು ದೇಹದಂತೆ ಪೂರೈಸಿಕೊಂಡರೆ ಒಂದು ದೇಹದ ಸುಖದಂತೆ ಒಂದು ಸಮಾಜದ ಸುಖವು ಸಿದ್ಧಿಸುವುದು. ವಂಚನೆ–ಮತ್ಸರಗಳು ತಲೆಹಾಕಿದರೆ ರೋಗಾವಿಷ್ಟವಾದ ಶರೀರವು ಕೆಲಸಕ್ಕಾಗದೆ ಸೊರಗಿ ಬೀಳುವಂತೆ ಸಮಾಜವೂ ಗುರಿ ಮುಟ್ಟದು ಎಂಬ ಭಾವವು. ಸಮಾಜದ ವರ್ಗವನ್ನು ವಿರಾಟ್ ಪುರುಷನ ಶರೀರರೂಪವಲ್ಲಿ ನಿರೂಪಿಸಿದ್ದರಿಂದ ಈ ಅರ್ಥ ಊಹೆಗೆ ಸಿಲುಕುವುದು. ಆದುದರಿಂದ ತಲೆಯಂತೆ ಒಂದು ವರ್ಗವು ಸದಾ ಸಮಾಜದ ಹಿತಾಹಿತಗಳನ್ನು ಚಿಂತಿಸಿ ತತ್ಕಾಲದ ಕಾರ್ಯಾಕಾರ್ಯಗಳನ್ನು ನಿರ್ದೇಶಿಸಬೇಕು. ಅಂತಹ ಹಿತಾಹಿತಗಳ ಅಡೆತಡೆಗಳನ್ನು ಇನ್ನೊಂದು ವರ್ಗವು ನಿವಾರಿಸಬೇಕು. ಅದಕ್ಕನುಗುಣವಾಗಿ ಮತ್ತೊಂದು ವರ್ಗವು ಉದ್ಯೋಗಿಸಬೇಕು. ಇದಕ್ಕೆಲ್ಲ ಪೂರಕವಾಗಿ ಇನ್ನೊಂದು ವರ್ಗವು ಕೊರತೆಯನ್ನು ತುಂಬಿ ದುಡಿದು ತನ್ನನ್ನೂ ಇತರರನ್ನೂ ಇರಗೊಡಿಸಬೇಕು. ಈ ಅನ್ಯೋನ್ಯಭಾವದಿಂದ ವ್ಯವಹಾರವು ಸುಸೂತ್ರವಾಗುವುದು. ಇದಕ್ಕೆ ವ್ಯತಿರೇಕೋದಾಹರಣೆಯು ೨೦ನೇ ಶತಮಾನದಲ್ಲಿ ೭ನೇ ದಶಕದ ಭಾರತದ ಸಾಮಾಜಿಕ ಪರಿಸ್ಥಿತಿ. ದುಡಿಮೆಯ ಲೋಪದಿಂದ ಆಹಾರ ಸಾಮಗ್ರಿಗಳ ಕೊರತೆ, ಸರಕಾರದ ಎಲ್ಲ ಶಾಖೆಯ ನೌಕರರ ಅತೃಪ್ತಿ, ರಾಜಕಾರಣಿಗಳ ಕೋಲಾಹಲ, ದಿನಕ್ಕೊಂದು ಸಿದ್ಧಾಂತ, ಭ್ರಷ್ಟಾಚಾರ,

ಕಾರ್ಯರ್ಗತವಾಗುವ ಧೋರಣೆಯೊಂದೂ ಇಲ್ಲ. ಮದ್ಯಪಾನನಿಷೇಧ, ಪುಸ್ತಕದಲ್ಲಿ ಸಮಾನತೆ, ಪುಸ್ತಕದಲ್ಲಿ ದೂರಾಲೋಚನೆ, ತನ್ನ ಪದವಿ–ಹಣ–ಕೀರ್ತಿ ಸಾಧನೆಯಲ್ಲಿ. ವಿಪರೀತ ಸಮಾಜವು ಸಾಧಿಸಿದ ಸುಖಸಾಮ್ರಾಜ್ಯವಿದು. ಹುಲಿಯು ಎಂದೂ ಗುಣದಲ್ಲಿ ಜಿಂಕೆಯಾಗದು. ಸರ್ಕಸ್ಸಿನಲ್ಲಿ ಕಲಿಸಿದ ಹುಲಿ ಸರ್ಕಸ್ಸಿಗಲ್ಲದೆ ಕಾಡಿನಲ್ಲಿ ಜಿಂಕೆಯೊಡನೆ ಆಡಿ, ಮೇದು ಜೀವಿಸಲಾರದು. ಹಾಗೆಯೇ ಆರಂಭದ ಗುಣ ಕರ್ಮಗಳನ್ನು ಬಲಾತ್ ಸರ್ಕಸ್ಸಿನ ಹುಲಿಯ ಶಿಕ್ಷಣದಂತೆ ತಿದ್ದುವುದು ಲಾಭಕರವಲ್ಲವೆಂದು ಅನುಭವದ ವಿಷಯ. ಆದುದರಿಂದ ನೈಸರ್ಗಿಕವಾದ ವ್ಯವಸ್ಥೆಯನ್ನು ಪಾಲಿಸುವುದು ಕ್ಷೇಮಕರ, ವಿಚಾರಕ್ಕೆ ಸಿಕ್ಕುವ ವಿಷಯ. ಆದುದರಿಂದ ಮುಖಾದಿರೂಪಕವು ಮತ್ಸರವಲ್ಲ. ಇದೇ ಭಾವದಿಂದ ಮೂಲದಲ್ಲಿ ಲೋಕ ವಿವೃದ್ಧಿಯ ಬಗ್ಗೆ 'ಮುಖಬಾಹೂರುಪಾದತಃ' ಎಂದು ಹೇಳುವುದು ಸಮುಚಿತವಾಗಿದೆ.

> ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋಽಭವತ್ ।
> ಅರ್ಧೇನ ನಾರೀ ತಸ್ಯಾಂ ಸ ವಿರಾಜಮಸೃಜತ್ ಪ್ರಭುಃ ॥ ೩೨

ಆ ಬ್ರಹ್ಮನು ತನ್ನ ದೇಹವನ್ನು ಎರಡಾಗಿ ವಿಭಾಗಿಸಿ ಒಂದು ಪುರುಷನೂ ಇನ್ನೊಂದು ಸ್ತ್ರೀಯೂ ಆಗಿ ವಿರಾಟ್ ಎಂಬವನನ್ನು ಹೆತ್ತನು.

> ತಪಸ್ತಪ್ತ್ವಾ ಸೃಜದ್ಯಂ ತು ಸ ಸ್ವಯಂ ಪುರುಷೋ ವಿರಾಟ್ ।
> ತಂ ಮಾಂ ವಿತ್ತಾಸ್ಯ ಸರ್ವಸ್ಯ ಸ್ರಷ್ಟಾರಂ ದ್ವಿಜಸತ್ತಮಾಃ ॥ ೩೩

ಆವಿರಾಜನು ತಪಸ್ಸುಮಾಡಿ ನನ್ನನ್ನು ಪಡೆದನು. ನಾನು ಇನ್ನು ಮೇಲಿನ ಸೃಷ್ಟಿಗೆ ಅಧಿಕಾರಿಯಾಗಿದ್ದೇನೆ. ವಿಶ್ವಾಸದಿಂದ ಕೇಳಿದ ಶ್ರದ್ಧಾಲುಗಳಿಗೆ ಮನುವು ವಸ್ತುಸ್ಥಿತಿಯನ್ನು ತಿಳಿಸುತ್ತಾನೆ. ಇದರಲ್ಲಿ ಪ್ರಶಂಸೆಯಿಲ್ಲ, ಕಪಟವಿಲ್ಲ.

> ಅಹಂ ಪ್ರಜಾಃ ಸಿಸೃಕ್ಷುಸ್ತು ತಪಸ್ತಪ್ತ್ವಾ ಸುದುಶ್ಚರಂ ।
> ಪತೀನ್ ಪ್ರಜಾನಾಮಸೃಜಂ ಮಹರ್ಷೀನಾದಿತೋ ದಶ ॥ ೩೪

ನಾನು ಉತ್ತರಸೃಷ್ಟಿಯ ಬಗ್ಗೆ ಗಾಢವಾದ ತಪಸ್ಸನ್ನು ಆಚರಿಸಿ ಹತ್ತುಮಂದಿ ಪ್ರಜಾಪತಿಗಳನ್ನು ಸೃಜಿಸಿದೆ. ಅವರು ಮಹರ್ಷಿಗಳೂ ಆಗಿದ್ದಾರೆ. ಕಾರ್ಯದಿಂದ ಪ್ರಜಾಪತಿಗಳು, ಗುಣದಿಂದ ಋಷಿಗಳು.

ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಮ್ ।
ಪ್ರಚೇತಸಂ ವಸಿಷ್ಠಂ ಚ ಭೃಗುಂ ನಾರದಮೇವ ಚ ॥ ೩೫

ಮರೀಚಿ–ಅತ್ರಿ–ಅಂಗಿರಸ್–ಪುಲಸ್ತ್ಯ–ಪುಲಹ–ಕ್ರತು–ಪ್ರಚೇತಸ್–ವಸಿಷ್ಠ–ಭೃಗು–ನಾರದ ಎಂದು ದಶಪ್ರಜಾಪತಿಗಳ ಸಂಜ್ಞೆಗಳು.

ಏತೇ ಮನೂಂಸ್ತು ಸಪ್ತಾನ್ಯಾನಸೃಜನ್ ಭೂರಿತೇಜಸಃ ।
ದೇವಾನ್ ದೇವನಿಕಾಯಾಂಶ್ಚ ಮಹರ್ಷೀಂಶ್ಚಾಮಿತೌಜಸಃ ॥ ೩೬

ಆ ಹತ್ತುಮಂದಿಯು ಬೇರೆ ಏಳು ಮನುಗಳನ್ನು ನಿಯಮಿಸಿದರು. ಅವರು ತೇಜಸ್ವಿಗಳು. ಹಿಂದೆ ಸೃಷ್ಟಿಯಾಗದ ದೇವತೆಗಳನ್ನು, ಋಷಿಗಳನ್ನು ಸೃಜಿಸಿದರು. 'ಮನು' ಎಂದು ಅಧಿಕಾರ–ಸ್ಥಾನ–ಪದವಿಗಳ ಸಂಜ್ಞೆಯಾಗಿದೆ. ದೇವೇಂದ್ರ ಎಂದರೂ ಹಾಗೆಯೇ.

ಯಕ್ಷರಕ್ಷಃಪಿಶಾಚಾಂಶ್ಚ ಗಂಧರ್ವಾಪ್ಸರಸೋಽಸುರಾನ್ ।
ನಾಗಾನ್ ಸರ್ಪಾನ್ ಸುಪರ್ಣಾಂಶ್ಚ ಪಿತೄಣಾಂ ಚ ಪೃಥಗ್ಗಣಾನ್ ॥ ೩೭

ಯಕ್ಷ–ರಕ್ಷಸ್–ಪಿಶಾಚ–ಗಂಧರ್ವ–ಅಪ್ಸರಸ್–ಅಸುರ–ನಾಗ–ಸರ್ಪ–ಸುಪರ್ಣ–ಪಿತೃಗಣಗಳು ಉತ್ಪನ್ನವಾದುವು.

ವಿದ್ಯುತೋಽಶನಿಮೇಘಾಂಶ್ಚ ರೋಹಿತೇಂದ್ರಧನೂಂಷಿ ಚ ।
ಉಲ್ಕಾನಿರ್ಘಾತಕೇತೂಂಶ್ಚ ಜ್ಯೋತಿಷ್ಯುಚ್ಚಾವಚಾನಿ ಚ ॥ ೩೮
ಕಿನ್ನರಾನ್ ವಾನರಾನ್ ಮತ್ಸ್ಯಾನ್ ವಿವಿಧಾಂಶ್ಚ ವಿಹಂಗಮಾನ್ ।
ಪಶೂನ್ ಮೃಗಾನ್ ಮನುಷ್ಯಾಂಶ್ಚವ್ಯಾಲಾಂಶ್ಚೋಭಯತೋದತಃ ॥ ೩೯
ಕ್ರಿಮಿಕೀಟಪತಂಗಾಂಶ್ಚಯೂಕಾಮಕ್ಷಿಕಮತ್ಕುಣಂ ।
ಸರ್ವಂ ಚ ದಂಶಮಶಕಂ ಸ್ಥಾವರಂ ಚ ಪೃಥಗ್ವಿಧಂ ॥ ೪೦
ಏವಮೇತೈರಿದಂ ಸರ್ವಂ ಮನ್ನಿಯೋಗಾನ್ಮಹಾತ್ಮಭಿಃ ।
ಯಥಾಕರ್ಮ ತಪೋಯೋಗಾತ್ ಸೃಷ್ಟಂ ಸ್ಥಾವರಜಂಗಮಮ್ ॥ ೪೧

ವಿದ್ಯುತ್–ಕೃಮಿ–ಕೀಟ–ತರುಲತೆ ಮುಂತಾದ ಸಕಲ ಸೃಷ್ಟಿಯೂ ನನ್ನ ನಿರ್ದೇಶನದಿಂದ ಆ ದಶಪ್ರಜಾಪತಿಗಳ ಮೂಲಕ ಉಂಟಾಯಿತು.

ಯೇಷಾಂ ತು ಯಾದೃಶಂ ಕರ್ಮಭೂತಾನಾಮಿಹ ಕೀರ್ತಿತಂ ।
ತತ್ತಥಾವೋಽಭಿಧಾಸ್ಯಾಮಿ ಕ್ರಮಯೋಗಂ ಚ ಜನ್ಮನಿ ॥ ೪೨

ಯಾವ ಪ್ರಾಣಿಗೆ ಎಂತಹ ಕರ್ಮವೋ ಅವನ್ನು ಹಾಗೆಯೇ ಜನ್ಮ ಕ್ರಮದಿಂದ ನಿಮಗೆ ಹೇಳುತ್ತ ಹೋಗುವೆನು.

ಪಶವಶ್ಚ ಮೃಗಾಶ್ಚೈವ ವ್ಯಾಲಾಶ್ಚೋಭಯತೋದತಃ ।
ರಕ್ಷಾಂಸಿ ಚ ಪಿಶಾಚಾಶ್ಚ ಮನುಷ್ಯಾಶ್ಚ ಜರಾಯುಜಾಃ ॥ ೪೩
ಅಂಡಜಾಃ ಪಕ್ಷಿಣಃ ಸರ್ಪಾ ನಕ್ರಾ ಮತ್ಸ್ಯಾಶ್ಚ ಕಚ್ಛಪಾಃ ।
ಯಾನಿ ಚೈವಂ ಪ್ರಕಾರಾಣಿ ಸ್ಥಲಜಾನ್ಯೌದಕಾನಿ ಚ ॥ ೪೪
ಸ್ವೇದಜಂ ದಂಶಮಶಕಂ ಯೂಕಾಮಕ್ಷಿಕ ಮತ್ಕುಣಂ ।
ಊಷ್ಮಣಶ್ಚೋಪಜಾಯಂತೇ ಯಚ್ಚಾನ್ಯತ್ ಕಿಂಚಿದೀದೃಶಂ ॥ ೪೫
ಉದ್ಭಿಜ್ಜಾಃ ಸ್ಥಾವರಾಃ ಸರ್ವೇ ಬೀಜಕಾಂಡಪ್ರರೋಹಿಣಃ ।
ಓಷಧ್ಯಃ ಫಲಪಾಕಾಂತಾ ಬಹುಪುಷ್ಪ ಫಲೋಪಗಾಃ ॥ ೪೬
ಅಪುಷ್ಪಾಃ ಫಲವಂತೋ ಯೇ ತೇ ವನಸ್ಪತಯಃ ಸ್ಮೃತಾಃ ।
ಪುಷ್ಪಿಣಃ ಫಲಿನಶ್ಚೈವ ವೃಕ್ಷಾಸ್ತೂಭಯತಃ ಸ್ಮೃತಾಃ ॥ ೪೭
ಗುಚ್ಛಗುಲ್ಮಂ ತು ವಿವಿಧಂ ತಥೈವ ತೃಣಜಾತಯಃ ।
ಬೀಜಕಾಂಡರುಹಾಣ್ಯೇವ ಪ್ರತಾನಾ ವಲ್ಯ ಏವಚ ॥ ೪೮
ತಮಸಾ ಬಹುರೂಪೇಣ ವೇಷ್ಟಿತಾಃ ಕರ್ಮಹೇತುನಾ ॥
ಅಂತಃಸಂಜ್ಞಾ ಭವಂತ್ಯೇತೇ ಸುಖದುಃಖ ಸಮನ್ವಿತಾಃ । ೪೯

ಬೀಜ-ಕಾಂಡರೂಪದಿಂದ ಬೆಳೆಯುವ, ಹೂವಿರುವ-ಹೂವಿಲ್ಲದ ಮರ ಗಿಡ ಬಳ್ಳಿಗಳು ಹಲವಿವೆ. ಅವೆಲ್ಲ ಪ್ರಾಣಿಗಳು. ಸುಖದುಃಖವಿದೆ. ಮನುಷ್ಯರಂತೆ ವ್ಯಕ್ತಮಾಡುವ ಸೌಲಭ್ಯವು ಅವಕ್ಕಿಲ್ಲದೆ ಅಂತಃಸಂಜ್ಞೆ ಉಳ್ಳವು ಆಗಿವೆ. ಪೂರ್ವಕರ್ಮಭೇದದಿಂದ ಈ ಜನ್ಮವನ್ನು ತಾಳಿವೆ ಯೆಂದು ತಿಳಿಯಬೇಕು.

ಏತದಂತಾಸ್ತು ಗತಯೋ ಬ್ರಹ್ಮಾದ್ಯಾಃ ಸಮುದಾಹೃತಾಃ ।
ಘೋರೇಽಸ್ಮಿನ್ ಭೂತಸಂಸಾರೇ ನಿತ್ಯಂ ಸತತಯಾಯಿನಿ ॥ ೫೦

ಬ್ರಹ್ಮದಿಂದ ಕ್ಷುದ್ರದ ವರೆಗಿನ ಸೃಷ್ಟಿಯನ್ನು ತಿಳಿಸಿಯಾಯಿತು. ಈ ಜನ್ಮ-ಮರಣ ಪ್ರವಾಹವು ದುಃಖಮಯವು, ಕ್ಷಣಿಕವು.

ಏವಂ ಸರ್ವಂ ಸ ಸೃಷ್ಟ್ವೇದಂ ಮಾಂ ಚಾಚಿಂತ್ಯಪರಾಕ್ರಮಃ।
ಆತ್ಮನ್ಯಂತರ್ದಧೇ ಭೂಯಃ ಕಾಲಂ ಕಾಲೇನ ಪೀಡಯನ್ ॥ ೫೧

ಹಿಂದೆ ಹೇಳಿದಂತೆ ನನ್ನನ್ನೂ ಇತರ ಸಮಗ್ರ ಸೃಷ್ಟಿಯನ್ನೂ ಮಾಡಿ ಅಚಿಂತ್ಯ ಪರಾಕ್ರಮನಾದ ಬ್ರಹ್ಮನು ಸೃಷ್ಟಿಕಾಲವನ್ನು ಪ್ರಲಯಕಾಲವನ್ನು

ಎರಡನ್ನೂ ಮೇಲಿನಂತೆ ಮಾಡುವ ಮೂಲಕ ಪೂರ್ವಾದಸ್ಥೆಯನ್ನು ತಂದು ತಾನು ಪುನಃ ಅದೃಶ್ಯನಾಗುವನು.

ಯದಾ ಸ ದೇವೋ ಜಾಗರ್ತಿ ತದೇದಂ ಚೇಷ್ಟತೇ ಜಗತ್ ।
ಯದಾ ಸ್ವಪಿತಿ ಶಾಂತಾತ್ಮಾ ತದಾ ಸರ್ವಂ ನಿಮೀಲತಿ ॥ ೫೨

ಸೃಷ್ಟಿ, ಪ್ರಲಯಗಳ ಮೂಲವನ್ನು ಈಗ ತಿಳಿಸುತ್ತಾರೆ. ಬ್ರಹ್ಮನ ಜಾಗ್ರತ್‌ಕಾಲವು ಸೃಷ್ಟಿ. ನಿದ್ರಾಕಾಲವು ಪ್ರಲಯವು. ಆಗ ಉಪಸಂಹಾರ ನಾಟಕಕ್ಕೆ ಆದಂತೆ, ಹಾಲು ಮೊಸರಾದಂತೆ ಸೃಷ್ಟಿಯು ಬ್ರಹ್ಮನ ರೂಪಾಂತರವೆನ್ನಬಹುದು.

ತಸ್ಮಿನ್ ಸ್ವಪಿತಿ ಸುಸ್ಥೇತು ಕರ್ಮಾತ್ಮಾನಃ ಶರೀರಿಣಃ ।
ಸ್ವಕರ್ಮಭ್ಯೋ ನಿವರ್ತಂತೇ ಮನಶ್ಚ ಗ್ಲಾನಿಮೃಚ್ಛತಿ ॥ ೫೩

ಬ್ರಹ್ಮನ ಸ್ವಾಪಾವಸ್ಥೆಯಲ್ಲಿ ಪ್ರಾಣಿಗಳು ಕರ್ಮಶೂನ್ಯರಾಗುವರು. ಮನಸ್ಸು ನಿಶ್ಚಲವಾಗುವುದು.

ಯುಗಪತ್ತು ಪ್ರಲೀಯಂತೇ ಯದಾ ತಸ್ಮಿನ್ ಮಹಾತ್ಮನಿ ।
ತದಾಯಂ ಸರ್ವಭೂತಾತ್ಮಾ ಸುಖಂ ಸ್ವಪಿತಿ ನಿರ್ವೃತಃ ॥ ೫೪

ಸಕಲಸೃಷ್ಟಿಯು ಒಮ್ಮೆಯೇ ಬ್ರಹ್ಮನಲ್ಲಿ ಲೀನವಾಗಿ ಸರ್ವಭೂತ ರೂಪನಾದ ಅವನು ಶಾಂತನಾಗುವನು. ನಾವು ನಿದ್ರೆಹೋದಂತೆ.

ತಮೋಽಯಂ ತು ಸಮಾಶ್ರಿತ್ಯ ಚಿರಂ ತಿಷ್ಠತಿ ಸೇಂದ್ರಿಯಃ ।
ನ ಚ ಸ್ವಂ ಕುರುತೇ ಕರ್ಮ ತದೋತ್ಕ್ರಾಮತಿ ಮೂರ್ತಿತಃ ॥ ೫೫

ಈ ಪ್ರಲಯಕಾಲದಲ್ಲಿ ಜೀವನು ಇಂದ್ರಿಯ ಮನಸ್ಸುಗಳ ಲಿಂಗ ದೇಹಧಾರಿಯಾದರೂ ಜ್ಞಾನವೃತ್ತಿಯಿಲ್ಲದೆ ಇದ್ದು ನಿಷ್ಕ್ರಿಯನಾಗಿರುವನು. ಶ್ವಾಸಾದಿಯಿಲ್ಲ. ಪುನಃ ಶರೀರಧಾರಣೆ ಮಾಡುವನು.

ಯದಾಣುಮಾತ್ರಿಕೋ ಭೂತ್ವಾ ಬೀಜಂ ಸ್ಥಾಸ್ನು ಚರಿಷ್ಣು ಚ ।
ಸಮಾವಿಶತಿ ಸಂಸೃಷ್ಟಸ್ತದಾ ಮೂರ್ತಿಂ ವಿಮುಂಚತಿ ॥ ೫೬

ಆತ್ಮನು ವಿಭುವಾದರೂ ಪುರ್ಯಷ್ಟಕಪ್ರಮಾಣದಿಂದ ಅಣುವಾಗಿ ಸ್ಥಾವರಜಂಗಮಗಳಾದ ವೃಕ್ಷ ಮನುಷ್ಯಾದಿ ಜನ್ಮ ಹೇತುವಾದ ಬೀಜ ದೇಹಾದಿಗಳನ್ನು ಧರಿಸುವನು.

ಏವಂ ಸ ಜಾಗ್ರತ್‌ಸ್ವಪ್ನಾಭ್ಯಾಮಿದಂ ಸರ್ವಂ ಚರಾಚರಂ ।
ಸಂಜೀವಯತಿ ಚಾಜಸ್ರಂ ಪ್ರಮಾಪಯತಿ ಚಾವ್ಯಯಃ ॥ ೫೭

ಹೀಗೆ ಆ ಬ್ರಹ್ಮನು ತನ್ನ ಜಾಗ್ರತ್ ಸ್ವಪ್ನಗಳಿಂದ ಜೀವಕೋಟಿಗಳ ಜನ್ಮ ಮರಣಗಳನ್ನು ತಾನು ಅವಿನಾಶಿಯಾಗಿಯೇ ಉಂಟುಮಾಡುತ್ತಾನೆ. ಬ್ರಹ್ಮನ ಸ್ವಾತಂತ್ರ್ಯವು ಈ ರೀತಿಯಲ್ಲಿ ಅಪರಿಮಿತವಾದುದು, ಅದ್ಭುತವಾದುದು. ಅನ್ಯತ್ರ ಅಪ್ರಸಿದ್ಧವಾದುದು.

ಇದಂ ಶಾಸ್ತ್ರಂ ತು ಕೃತ್ವಾಸೌ ಮಾಮೇವ ಸ್ವಯಮಾದಿತಃ ।
ವಿಧಿವದ್‌ಗ್ರಾಹಯಾಮಾಸ ಮರೀಚ್ಯಾದೀಂಸ್ತ್ವಹಂ ಮುನೀನ್ ॥ ೫೮

ಈಗ ಬರೆಯುತ್ತಿರುವ ಅದ್ಯಂತವಾದ ಈ ಧರ್ಮಶಾಸ್ತ್ರವನ್ನು ಮಾಡಿ ಆದಿಯಲ್ಲಿ ನನಗೇ (ಮನುವಿಗೆ) ಉಪದೇಶಿಸಿದನು. ನಾನು ಇತರ ಮರೀಚ್ಯಾದಿ ಋಷಿಗಳಿಗೆ ಕಲಿಸಿದೆನು. ಗ್ರಂಥಾರಂಭದಲ್ಲಿ ಮನುವನ್ನು ಕುರಿತು ಪ್ರಶಂಸೆಯಿದೆ. ಇಲ್ಲಿ ಬ್ರಹ್ಮನು ಶಾಸ್ತ್ರಕರ್ತೃವೆಂದು ಬರೆದಿದೆ. ಮುಂದೆ ಭೃಗುವು ನಿಮಗೆ ಉಪದೇಶಿಸುವನು ಎಂದು ಬರೆಯಲಾಗುವುದು. ಆಗ ಬಹಳ ವಿರೋಧವು ತೋರುವುದೆಂದು ತಿಳಿಯುವುದು ಬೇಡ. ಬ್ರಹ್ಮನಿಂದ ಸಕಲ ಸೃಷ್ಟಿಯೂ ಆದುದರಿಂದ ಈ ಶಾಸ್ತ್ರದ ಅರ್ಥವನ್ನು ಬ್ರಹ್ಮನು ಮನುವಿಗೆ ಆದಿಯಲ್ಲಿ ಉಪದೇಶಿಸುವುದು ನ್ಯಾಯವಿದೆ. ಅವನ್ನೇ ಮನುವು ಮರೀಚ್ಯಾದಿಗಳಿಗೆ ತಿಳಿಸಿದನು. ಈಗ ಭೃಗುವು ಇತರರಿಗೆ ವಿವರಿಸುತ್ತಾನೆ. ಎಂದರೆ ಒಂದೇ ಧರ್ಮವಿಷಯವನ್ನು ಎಲ್ಲರೂ ತಿಳಿಸಿದರು. ವಾಕ್ಯವು ಬೇರೆಬೇರೆ. ಆರಂಭದ ಬ್ರಹ್ಮನ ಉಪದೇಶದಲ್ಲಿ ಶತಸಹಸ್ರಗ್ರಂಥ=ನೂರುಸಾವಿರ ಶ್ಲೋಕಗಳು. ಈ ಅರ್ಥವು ನಾರದನಿಂದ ತಿಳಿದುಬರುವುದು. ಭೃಗು ಸಂಗ್ರಹಿಸಿದ ಗ್ರಂಥವು ಜಿಕ್ಕದಿದೆ. ಎಲ್ಲರ ಉಪದೇಶದಲ್ಲಿ ಅರ್ಥವು ಒಂದೇ, ಛಂದಸ್ಸು–ಪದಪುಂಜವು ಅಸಮಾನವು. ಈಗಿನ ಮುದ್ರಿತ ಮನುಸ್ಮೃತಿಯಲ್ಲಿ ೨೬೮೪ ಶ್ಲೋಕಗಳು ೧೨ ಅಧ್ಯಾಯವಿದೆ. ೩೨ ಅಕ್ಷರಗಳಿಗೆ ಗ್ರಂಥ–ಶ್ಲೋಕ ಎಂಬ ಅಭಿಧಾನವೂ, ಇದರಿಂದಲೇ ಪರಿಗಣನ ಪದ್ಧತಿಯೂ ಪ್ರಾಚೀನರದು. ಮನುವು ಮನುಷ್ಯರಲ್ಲಿ ಮೊದಲಿಗನೆಂದು ಪ್ರಸಿದ್ಧಿಯಿರುವುದರಿಂದ ಅವನ ಹೆಸರಿನಿಂದಲೇ

ಗ್ರಂಥ-ಶಾಸ್ತ್ರಸಂಜ್ಞೆಯು ಪ್ರವೃತ್ತವಾಯಿತೆಂದು ನಂಬಬಹುದು. ಆದರೆ ಭೃಗುವು ಈಗಿನ ನಮಗೆ ಸಂಪಾದಕನೆಂದು ಪ್ರತ್ಯಕ್ಷವಿದೆ.

ಏತದ್ವೋಽಯಂ ಭೃಗುಃ ಶಾಸ್ತ್ರಂ ಶ್ರಾವಯಿಷ್ಯತ್ಯಶೇಷತಃ ।
ಏತದ್ಧಿ ಮತ್ತೋಽಧಿಜಗೇ ಸರ್ವಮೇಷೋಽಖಿಲಂ ಮುನಿಃ ॥ ೫೯

ಈ ಶಾಸ್ತ್ರವನ್ನು ನಿಃಶೇಷವಾಗಿ ಭೃಗುವು ನಿಮಗೆ ಹೇಳುವನು. ಇವನು ಸಮಗ್ರವಾಗಿ ಶಾಸ್ತ್ರವನ್ನು ನನ್ನಿಂದ ಅಧ್ಯಯನ ಮಾಡಿದ್ದಾನೆ.

ತತಸ್ತಥಾ ಸ ತೇನೋಕ್ತೋ ಮಹರ್ಷಿರ್ಮನುನಾ ಭೃಗುಃ ।
ತಾನಬ್ರವೀದೃಷೀನ್ ಸರ್ವಾನ್ ಪ್ರೀತಾತ್ಮಾ ಶ್ರೂಯತಾಮಿತಿ ॥ ೬೦

ಮೇಲೆ ಹೇಳಿದಂತೆ ಗುರುವಾದ ಮನುವಿನಿಂದ ಅನುಗೃಹೀತನಾದ ಭೃಗುವು ಸಂತುಷ್ಟನಾಗಿ ಧರ್ಮಶ್ರವಣ ಮಾಡಿಸಲು ಉಪಕ್ರಮಿಸುತ್ತಾನೆ.

ಸ್ವಾಯಂಭುವಸ್ಯಾಸ್ಯ ಮನೋಃ ಷಡ್ವಂಶ್ಯಾ ಮನವೋಽಪರೇ ।
ಸೃಷ್ಟವಂತಃ ಪ್ರಜಾಃ ಸ್ವಾಃ ಸ್ವಾಃ ಮಹಾತ್ಮಾನೋ ಮಹೌಜಸಃ ॥ ೬೧

ಸ್ವಯಂಭೂ ಬ್ರಹ್ಮಸಂಜಾತನಾದ ಈ ಪ್ರತ್ಯಕ್ಷ ಸಮ್ಮುಖ ಮನುವಿನ ವಂಶ್ಯರು ಇನ್ನಾರುಮಂದಿ ಇರುವರು. ಅವರು ಕ್ಲಪ್ತಕಾಲದಲ್ಲಿ ಇಂತಹ ಸೃಷ್ಟಿಗೆ ನಿರ್ಮಾಪಕರು ಆಗಬಹುದಾದ ಮಹಾ ಓಜಸ್ವಿಗಳು.

ಸ್ವಾರೋಚಿಷಶ್ಚೋತ್ತಮಶ್ಚ ತಾಮಸೋ ರೈವತಸ್ತಥಾ ।
ಚಾಕ್ಷುಷಶ್ಚ ಮಹಾತೇಜಾ ವಿವಸ್ವತ್ಸುತ ಏವ ಚ ॥ ೬೨

ಸ್ವಾರೋಚಿಷ- ಉತ್ತಮ- ತಾಮಸ- ರೈವತ- ಚಾಕ್ಷುಷ - ವೈವಸ್ವತ ಎಂಬ ಆರು ಮನು ನಾಮಗಳು.

ಸ್ವಾಯಂಭುವಾದ್ಯಾಃ ಸಪ್ತೈತೇ ಮನವೋ ಭೂರಿತೇಜಸಃ ।
ಸ್ವೇ ಸ್ವೇಽಂತರೇ ಸರ್ವಮಿದಂ ಉತ್ಪಾದ್ಯಾಪುಶ್ಚರಾಚರಂ ॥ ೬೩

ಸ್ವಯಂಭುವನನ್ನೂ ಹಿಡಿದು ಏಳು ಮನುಗಳು ಅವರವರ ಅಧಿಕಾರ ಕಾಲದಲ್ಲಿ ತಾವು ಮಾಡಿದ ಸೃಷ್ಟಿಯನ್ನು ಪರಿಪಾಲಿಸುವರು.

ನಿಮೇಷಾ ದಶ ಚಾಷ್ಟೌ ಚ ಕಾಷ್ಠಾ ತ್ರಿಂಶತ್ತು ತಾಃ ಕಲಾ ।
ತ್ರಿಂಶತ್ಕಲಾ ಮುಹೂರ್ತಃ ಸ್ಯಾತ್ ಅಹೋರಾತ್ರಂತು ತಾವತಃ ॥ ೬೪

ಹತ್ತು ನಿಮೇಷಗಳು (ಕಣ್ಣು ಎವೆಯಿಕ್ಕುವ ಸಮಯ) ಮತ್ತು ಎಂಟು=ಹದಿನೆಂಟು ನಿಮೇಷಗಳು ಒಂದು ಕಾಷ್ಠಾ. ಮೂವತ್ತು ಕಾಷ್ಠಾ ಒಂದು ಕಲಾ. ಮೂವತ್ತು ಕಲಾ ಒಂದು ಮುಹೂರ್ತ. ಮೂವತ್ತು ಮುಹೂರ್ತ ಒಂದು ದಿನ.

ಅಹೋರಾತ್ರೇ ವಿಭಜತೇ ಸೂರ್ಯೋ ಮಾನುಷ ದೈವಿಕೇ ।
ರಾತ್ರಿಃ ಸ್ವಪ್ನಾಯ ಭೂತಾನಾಂ ಚೇಷ್ಟಾಯೈ ಕರ್ಮಣಾಮಹಃ ॥ ೬೫

ಸೂರ್ಯನು ಮಾನುಷ ಹಾಗೂ ದೈವಿಕ ಹಗಲು ರಾತ್ರಿಗಳನ್ನು ಮಾಡುವನು. ರಾತ್ರಿಯು ಪ್ರಾಣಿಗಳ ನಿದ್ರಾಕಾಲವು. ಹಗಲು ಕ್ರಿಯಾ ಕಾಲವು. ವಿಶ್ರಾಂತಿಯಾದ ನಿದ್ರೆಯು ದೈವದತ್ತವು. ಆ ಕಾಲವು ದೈವಿಕವು. ಉದರಪೋಷಣೆಯ ಕಾಲವು ಮನುಷ್ಯಕಾಲವು.

ಪಿತ್ರ್ಯೇ ರಾತ್ರ್ಯಹನೀ ಮಾಸಃ ಪ್ರವಿಭಾಗಸ್ತು ಪಕ್ಷಯೋಃ ।
ಕರ್ಮಚೇಷ್ಟಾಸ್ವಹಃ ಕೃಷ್ಣಃ ಶುಕ್ಲಃ ಸ್ವಪ್ನಾಯ ಶರ್ವರೀ ॥ ೬೬

ಮನುಷ್ಯರ ಮಾಸವು ಪಿತೃಗಳ ಅಹೋರಾತ್ರವು. ಕೃಷ್ಣಪಕ್ಷವು ಕರ್ಮಕಾಲ. ಶುಕ್ಲಪಕ್ಷವು ನಿದ್ರಾಕಾಲ.

ದೈವೇ ರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತಯೋಃ ಪುನಃ ।
ಅಹಸ್ತತ್ರೋದಗಯನಂ ರಾತ್ರಿಃ ಸ್ಯಾದ್ದಕ್ಷಿಣಾಯನಂ ॥ ೬೭

ಮನುಷ್ಯವರ್ಷವು ದೇವಮಾನದಲ್ಲಿ ರಾತ್ರಿ-ಹಗಲು. ಉತ್ತರಾಯಣವು ಹಗಲು. ರಾತ್ರಿಯು ದಕ್ಷಿಣಾಯನವು.

ಬ್ರಾಹ್ಮಸ್ಯ ತು ಕ್ಷಪಾಹಸ್ಯ ಯತ್ಪ್ರಮಾಣಂ ಸಮಾಸತಃ ।
ಏಕೈಕಶೋ ಯುಗಾನಾಂ ತು ಕ್ರಮಶಸ್ತನ್ನಿಬೋಧತ ॥ ೬೮

ಬ್ರಹ್ಮನ ಹಗಲು ರಾತ್ರಿಗಳಿಂದ ಯುಗಗಳ ಮಾನವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ತಿಳಿಯಿರಿ.

ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಂ ।
ತಸ್ಯತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥

ನಾಲ್ಕುಸಾವಿರ ದೇವವರ್ಷಗಳು ಒಂದು ಕೃತಯುಗವು. ಅದರ ಆರಂಭಾವಸಾನಸಂಧಿಗಳು ಸಂಧ್ಯಾ ಸಂಧ್ಯಾಂಶ ಸಂಜ್ಞೆಯುಳ್ಳವುಗಳು. ಆಸಂಧ್ಯಾಕಾಲವು ದಿವ್ಯ ಶತವರ್ಷ. ಸಂಧ್ಯಾಂಶವೂ ದೇವಮಾನದ ನೂರು ವರ್ಷಗಳು. ಈ ಎರಡರ ಮಧ್ಯದಲ್ಲಿ ಮೊದಲು ಹೇಳಿದ ದಿವ್ಯಮಾನದ ಚತುಃ ಸಹಸ್ರ ವರ್ಷಗಳು ಯುಗವು. ಎಂದರೆ ೩೬೫ ದಿನದ ನಮ್ಮ ಒಂದು ವರ್ಷವು ೩೬೫ ಆದಾಗ ದೇವವರ್ಷ ವೊಂದು ಪೂರ್ಣವಾಗುವುದು. ೩೬೫ × ೪೦೦೦=ಫಲವು ಕೃತಯುಗದ ಮಧ್ಯಕಾಲವು. ೪೦೦ ವರ್ಷ ಸಂಧಿಗಳೂ ಕೂಡ ಪೂರ್ಣ ಕೃತಯುಗವು. ಹದಿನಾಲ್ಕು ಲಕ್ಷದ ಅರವತ್ತು ಸಾವಿರದಎಂಟುನೂರು ದೇವವರ್ಷಗಳು ಕೃತಯುಗವಾಗುವುದು.

ಇತರೇಷು ಸಸಂಧ್ಯೇಷು ಸಸಂಧ್ಯಾಂಶೇಷು ಚ ತ್ರಿಷು ॥
ಏಕಾಪಾಯೇನ ವರ್ತಂತೇ ಸಹಸ್ರಾಣಿ ಶತಾನಿ ಚ ॥ ೭೦

ಆಗ ಹೇಳಿದಂತೆ ನಾಲ್ಕು ಸಾವಿರದಲ್ಲಿ ಒಂದೊಂದು ವರ್ಷ ಕಡಿಮೆ ಯಾಗಿ ಮೂರು ಯುಗಗಳು ಆಗುವುವು. ಆದುದರಿಂದ ಮೂರು ಸಾವಿರ ವರ್ಷ ತ್ರೇತಾ. ಅದಕ್ಕೆ ಮುನ್ನೂರು ವರ್ಷ ಸಂಧಿವರ್ಷ ಅಷ್ಟೇ ಸಂಧ್ಯಾಂ ಶವು. ಎರಡು ಸಾವಿರ ವರ್ಷ ದ್ವಾಪರ. ಇನ್ನೂರು ಸಂಧಿವರ್ಷ. ಉತ್ತರ ಸಂಧಿಯೂ ಇನ್ನೂರು. ಒಂದು ಸಾವಿರ ಕಲಿ. ಒಂದುನೂರು ಸಂಧಿವರ್ಷ. ಸಂಧ್ಯಾಂಶವೂ ನೂರುವರ್ಷವೆಂದು ತಿಳಿಯಬೇಕು. ಇದು ಮನುಷ್ಯರ ಯುಗದ ಪರಿಮಾಣವು.

ಯದೇತತ್ಪರಿಸಂಖ್ಯಾತಮಾದಾವೇವ ಚತುರ್ಯುಗಂ ।
ಏತದ್ದ್ವಾದಶಸಾಹಸ್ರಂ ದೇವಾನಾಂ ಯುಗಮುಚ್ಯತೇ ॥ ೭೧

ಹತ್ತುಸಾವಿರ ವರ್ಷ ದೇವಮಾನದಲ್ಲಿ ಎರಡುಸಾವಿರ ಸಂಧಿವರ್ಷ ಕೂಡ ಹನ್ನೆರಡುಸಾವಿರ ವರ್ಷವು ಒಂದು ದೇವರ ಯುಗವು.

ದೈವಿಕಾನಾಂ ಯುಗಾನಾಂ ತು ಸಹಸ್ರಂ ಪರಿಸಂಖ್ಯಯಾ।
ಬ್ರಾಹ್ಮಮೇಕಮಹರ್ಜ್ಞೇಯಂ ತಾವತೀಂ ರಾತ್ರಿಮೇವ ಚ ॥ ೭೨

ಸಾವಿರ ದೇವಯುಗವು ಒಂದು ಬ್ರಹ್ಮನ ಒಂದು ಹಗಲು ಬ್ರಹ್ಮ ದಿನವು ಸಾವಿರ (ಹಗಲು.) ಒಂದು ಯುಗವು ರಾತ್ರಿಯು.

ತದ್ವೈ ಯುಗಸಹಸ್ರಾಂತಂ ಬ್ರಾಹ್ಮಂ ಪುಣ್ಯಮಹರ್ವಿದುಃ ।
ರಾತ್ರಿಂ ಚ ತಾವತೀಮೇವ ತೇಽಹೋರಾತ್ರವಿದೋ ಜನಾಃ ॥ ೭೩

ಎರಡು ಸಾವಿರ ದೇವಯುಗಗಳ ರೂಪವಾದ ಬ್ರಹ್ಮದಿನವು ಹಾಗೂ ರಾತ್ರಿಯು ಪುಣ್ಯಮಯವು. ಜ್ಞಾನದಿಂದ ಪುಣ್ಯಕರವು.

ತಸ್ಯ ಸೋಽಹರ್ನಿಶಸ್ಯಾಂತೇ ಪ್ರಸುಪ್ತಃ ಪ್ರತಿಬುಧ್ಯತೇ ।
ಪ್ರತಿಬುದ್ಧಶ್ಚ ಸೃಜತಿ ಮನಃ ಸದಸದಾತ್ಮಕಂ ॥ ೭೪

ಮೇಲೆ ಹೇಳಿದ ಹಗಲು ರಾತ್ರಿಯ ದಿನ ಕಳೆದು ಬೆಳಗ್ಗೆ ನಿದ್ದೆಯಿಂದ ಎದ್ದು ಬ್ರಹ್ಮನು ತನ್ನ ಮನಸ್ಸಿನ ಸಹಾಯದಿಂದ ಪುನಃ ಸೃಷ್ಟಿಯನ್ನು ಇಚ್ಛಿಸುತ್ತಾನೆ.

ಮನಃ ಸೃಷ್ಟಿಂ ವಿಕುರುತೇ ಚೋದ್ಯಮಾನಂ ಸಿಸೃಕ್ಷಯಾ
ಆಕಾಶಂ ಜಾಯತೇ ತಸ್ಮಾತ್ ತಸ್ಯ ಶಬ್ದಂ ಗುಣಂ ವಿದುಃ ॥ ೭೫

ಬ್ರಹ್ಮನ ಪ್ರೇರಣೆಯಿಂದ ಚಲಿಸಿದ ಅವನ ಮನಸ್ಸು ಸೃಷ್ಟಿಯನ್ನು ಹಿಂದೆ ಹೇಳಿದ ಕ್ರಮದಂತೆ ಆರಂಭಿಸುತ್ತದೆ. ಆಕಾಶವು ಹುಟ್ಟುತ್ತದೆ. ಅದರ ಗುಣವು ಶಬ್ದವು. ಮನಸ್ಸು ಆಕಾಶ ರೂಪವನ್ನು ತಾಳುತ್ತದೆ; ಹಾಲು ಮೊಸರಾದಂತೆ.

ಆಕಾಶಾತ್ತು ವಿಕುರ್ವಾಣಾತ್ಸರ್ವಗಂಧವಹಃ ಶುಚಿಃ ।
ಬಲವಾನ್ ಜಾಯತೇ ವಾಯುಃ ಸ ವೈ ಸ್ಪರ್ಶಗುಣೋ ಮತಃ ॥ ೭೬

ಆಕಾಶವು ವಿಕಾರ ಹೊಂದುತ್ತಾ ಗಂಧವಾಹಿಯಾದ ವಾಯುವು ಮೂರ್ತೀಭವಿಸುವುದು. ಅದರ ಗುಣವು ಸ್ಪರ್ಶವು.

ವಾಯೋರಪಿ ವಿಕುರ್ವಾಣಾದ್ವಿರೋಚಿಷ್ಣು ತಮೋನುದಂ ।
ಜ್ಯೋತಿರುತ್ಪದ್ಯತೇ ಭಾಸ್ವತ್ತದ್ರೂಪಗುಣಮುಚ್ಯತೇ ॥ ೭೭

ವಾಯುವು ಬಲಿಯುತ್ತ ಕತ್ತಲು ಕಳೆಯುವ ಸ್ಫುರದ್ರೂಪಿಯಾದ ತೇಜಸ್ಸು ಮಾರ್ಪಡುವುದು. ಅದಕ್ಕೆ ಗುಣವು ರೂಪವು.

ಜ್ಯೋತಿಷಶ್ಚ ವಿಕುರ್ವಾಣಾದಾಪೋ ರಸಗುಣಾಃ ಸ್ಮೃತಾಃ ।
ಅದ್ಭ್ಯೋ ಗಂಧಗುಣಾ ಭೂಮಿರಿತ್ಯೇಷಾ ಸೃಷ್ಟಿರಾದಿತಃ ॥ ೭೮

ಹಾಲಿನಿಂದ ಬೆಣ್ಣೆ ಬೇರ್ಪಡುವಂತೆ ತೇಜಸ್ಸಿನಿಂದ ಜಲವು ರೂಪುಗೊಳ್ಳುವುದು. ಅದರ ಗುಣ ರಸವು. ಜಲದಿಂದ ಗಂಧಗುಣವುಳ್ಳ

ಭೂಮಿಯೂ ಜನಿಸುವುದು. ಹಿಂದೆ ಹೇಳಿದ ಮನಸ್ಸಿನಿಂದ ಭೂಮಿ ವರೆಗಿನ ವಸ್ತುಗಳು ಹಾಲು ಮೊಸರಾದಂತೆ ಹುಟ್ಟಲಿಲ್ಲ. ಮೊಸರು ಆದಾಗ ಹಾಲಿಲ್ಲ. ಬೆಣ್ಣೆ ಎತ್ತಿದರೂ ಮಜ್ಜಿಗೆ ಉಳಿಯುವುದು. ಇದರಂತೆ ಪೂರ್ವ ವಸ್ತು ನಾಶವಿಲ್ಲದ ಪುನರ್ವಸ್ತು ಸೃಷ್ಟಿಯು.

ಯತ್ಪ್ರಾಗ್ದ್ವಾದಶ ಸಾಹಸ್ರಮುದಿತಂ ದೈವಿಕಂ ಯುಗಂ ।
ತದೇಕಸಪ್ತತಿಗುಣಂ ಮನ್ವಂತರಮಿಹೋಚ್ಯತೇ ॥ ೭೯

ಹಿಂದೆ ಹೇಳಿದ ಹನ್ನೆರಡು ಸಾವಿರ ವರ್ಷವಾದ ಮನುಷ್ಯಯುಗವು ಒಂದು ದೇವಯುಗವು. ಇದನ್ನು ಎಪ್ಪತ್ತೊಂದರಿಂದ ಗುಣಿಸಿದಷ್ಟು ಸಮಯ ಒಂದು ಮನ್ವಂತರ ಕಾಲವು. ಒಬ್ಬ ಮನುವಿನ ಅಧಿಕಾರಕಾಲವು.

ಮನ್ವಂತರಾಣ್ಯಸಂಖ್ಯಾನಿ ಸರ್ಗಃ ಸಂಹಾರ ಏವ ಚ ।
ಕ್ರೀಡನ್ನಿವೈತತ್ಕುರುತೇ ಪರಮೇಷ್ಠೀ ಪುನಃ ಪುನಃ ॥ ೮೦

ಅಸಂಖ್ಯ ಮನ್ವಂತರಗಳು ಸೃಷ್ಟಿಪ್ರಳಯಗಳು ಉರುಳುತ್ತ ಹೋಗುತ್ತವೆ. ಕೂಟಸ್ಥ ಪ್ರಜಾಪತಿಯ ಆಟದಂತೆ ಇದು ಇದೆ. ಅವನಿಗೆ ಆಟವಿಲ್ಲ. ಅವನು ಲೋಲುಪನಲ್ಲ. ನಾವು ಮಾತನಾಡುವಾಗ ಅಭಿನಯವು ತಾನಾಗಿ ಬಂದಂತೆ. ಕಣ್ಣು ಮುಖ ಕೈ ಮೈಗಳು ವಾಚ್ಯಾರ್ಥಕ್ಕೆ ಅನುಗುಣವಾಗಿ ಚಲಿಸುವಂತೆ ಬ್ರಹ್ಮನು ಇದ್ದ ಮಾತ್ರದಿಂದ ಸೃಷ್ಟಿಯು. ಉದ್ದೇಶಪೂರ್ವಕ ಪ್ರಯತ್ನವಲ್ಲ. ಅವನ ಇಚ್ಛೆಯೂ ನಮ್ಮ ಇಚ್ಛೆಯಂತಲ್ಲ.

ಚತುಷ್ಪಾತ್ ಸಕಲೋ ಧರ್ಮಃ ಸತ್ಯಂ ಚೈವ ಕೃತೇ ಯುಗೇ ।
ನಾಧರ್ಮೇಣಾಗಮಃ ಕಶ್ಚಿನ್ಮನುಷ್ಯಾನ್ಪ್ರತಿ ವರ್ತತೇ ॥ ೮೧

ಕೃತಯುಗದಲ್ಲಿ ಧರ್ಮವು ಸಂಪೂರ್ಣವಾಗಿ ಧರ್ಮವು ಆಚರಣೆಯಲ್ಲಿತ್ತು. ಸತ್ಯವು ಪ್ರಧಾನವಾಗಿತ್ತು. ಆಗ ಧನವಿದ್ಯಾದಿಗಳು ಮನುಷ್ಯರಿಗೆ ಧರ್ಮದಿಂದಲೇ ಉತ್ಪನ್ನವಾಗುತ್ತಿದ್ದವು. ಅಧರ್ಮಮಾರ್ಗದಿಂದಲ್ಲ.

ಇತರೇಷ್ವಾಗಮಾದ್ಧರ್ಮಃ ಪಾದಶಸ್ತ್ವವರೋಪಿತಃ ।
ಚೌರಿಕಾನೃತಮಾಯಾಭಿರ್ಧರ್ಮಶ್ಚಾಪೈತಿ ಪಾದಶಃ ॥ ೮೨

ಇತರ ಯುಗಗಳಲ್ಲಿ ಅಧರ್ಮದಿಂದ ಧನವಿದ್ಯಾದಿ ಸಂಪಾದನೆ

ಮಾಡುವ ಕಾರಣ ಧರ್ಮವು ಅಂಶಾಂಶವಾಗಿ ಇಳಿಯುವುದು. ಚೌರ್ಯ–ಅನೃತ–ಮಾಯೆಗಳು ಹರಡುವುವು.

ಅರೋಗಾಃ ಸರ್ವಸಿದ್ಧಾರ್ಥಾಶ್ಚತುರ್ವರ್ಷಶತಾಯುಷಃ
ಕೃತೇ ತ್ರೇತಾದಿಷು ಹ್ಯೇಷಾಮಾಯುರ್ಹ್ರಸತಿ ಪಾದಶಃ ॥ ೮೩

ಕೃತಯುಗದಲ್ಲಿ ಜನರು ನಾಲ್ಕುನೂರು ವರ್ಷ ಆಯುಸ್ಸು ಉಳ್ಳವರು. ರೋಗವಿಲ್ಲದವರು. ಸರ್ವಕಾಮನಾ ಫಲಗಳ ಸಿದ್ಧಿಯುಳ್ಳವರು. ಉಳಿದ ಯುಗದಲ್ಲಿ ಕ್ರಮೇಣ ಎಲ್ಲದಕ್ಕೂ ಹ್ರಾಸವು.

ವೇದೋಕ್ತಮಾಯುರ್ಮರ್ತ್ಯಾನಾಮಾಶಿಷಶ್ಚೈವ ಕರ್ಮಣಾಂ
ಫಲಂತ್ಯನುಯುಗಂ ಲೋಕೇ ಪ್ರಭಾವಾಶ್ಚ ಶರೀರಿಣಾಂ ॥ ೮೪

ಮರ್ತ್ಯರ ಆಯುಸ್ಸು, ಪ್ರಾರ್ಥನೆಗಳು, ಶಾಪಾನುಗ್ರಹಾದಿ ಪ್ರಭಾವಗಳು ಯುಗಬಲಾನುಸಾರವಾಗಿ ಫಲಿಸುತ್ತವೆ.

ಅನ್ಯೇ ಕೃತಯುಗೇ ಧರ್ಮಾಸ್ತ್ರೇತಾಯಾಂ ದ್ವಾಪರೇಽಪರೇ।
ಅನ್ಯೇ ಕಲಿಯುಗೇ ನೃಣಾಂ ಯುಗಹ್ರಾಸಾನುರೂಪತಃ ॥ ೮೫

ಪ್ರತಿಯುಗದಲ್ಲಿ ಧರ್ಮಪ್ರಮಾಣವು ಭಿನ್ನ ಭಿನ್ನವಾಗುವುದು. ಒಂದು ಯುಗದಲ್ಲಿ ಧರ್ಮವಾದುದು ಮತ್ತೊಂದರಲ್ಲಿ ಅಧರ್ಮವಾಗುವುದಿಲ್ಲ.

ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।
ದ್ವಾಪರೇ ಯಜ್ಞಮೇವಾಹುರ್ದಾನಮೇಕಂ ಕಲೌ ಯುಗೇ ॥ ೮೬

ಮಾನವರು ಕ್ಷೀಣ ಬಲರಾದುದರಿಂದ ನಾಲ್ಕು ಯುಗಗಳಲ್ಲಿ ಕ್ರಮವಾಗಿ ತಪಸ್–ಜ್ಞಾನ–ಯಜ್ಞ–ದಾನಗಳನ್ನು ಮಾಡಿ ಫಲಲಾಭಹೊಂದುವ ಮನೋಬಲವುಳ್ಳವರಾಗುವರು. ಇದು ಉತ್ತಮರ ವೃತ್ತಾಂತ. ಅಧಮರು ತುಂಬ ಅಧಮರು.

ಸರ್ವಸ್ಯಾಸ್ಯ ತು ಸರ್ಗಸ್ಯ ಗುಪ್ತ್ಯರ್ಥಂ ಸ ಮಹಾದ್ಯುತಿಃ ।
ಮುಖಬಾಹೂರುಪಜ್ಜಾನಾಂ ಪೃಥಕ್ಕರ್ಮಾಣ್ಯಕಲ್ಪಯತ್ ॥ ೮೭

ಆ ಬ್ರಹ್ಮನು ಮನುಷ್ಯ ಸಮಾಜದ ರಕ್ಷಣೆ–ಸುಖ ಜೀವನ–ಪರಸ್ಪರಾ–ಲಂಬನ ಸಾಧನ ರೂಪವಾಗಿ ಪ್ರಜೆಗಳಲ್ಲಿ ನಾಲ್ಕುವರ್ಗದ ಕರ್ತವ್ಯಗಳನ್ನು ನಿರ್ದೇಶಿಸುತ್ತಾನೆ. ಈ ವಿಧಾನದಿಂದ ಮಾತ್ರವೇ ಪ್ರಜಾಕೋಟಿಯ

ದೃಷ್ಟಫಲಗಳು ಅದೃಷ್ಟ ಫಲಗಳು ಸಮರ್ಪಕವಾಗಿ ಪ್ರಾಪ್ತವಾಗುವುವು. ಸಂತೃಪ್ತ ಜೀವನವು ಪರಿಪೂರ್ಣವಾಗುವುದು. ಇಲ್ಲವಾದರೆ ಅತೃಪ್ತಿ–ಕ್ಷೋಭೆ–ಶೋಷಣೆ–ಮತ್ಸ್ಯನ್ಯಾಯವಾದ ದುರ್ಬಲ ಮರ್ದನೆಗಳು ತಾಂಡವವಾಡುವುವು. ಇನ್ನು ಮುಂದೆ ಹೇಳುವ ಎಲ್ಲ ವಿಧಿ ನಿಷೇಧಗಳು ಕಲಿಯುಗವನ್ನೆ ಉದ್ದೇಶಿಸಿವೆ. ಭೃಗುವು ಕಲಿಯುಗವನ್ನೇ ಉಪದೇಶಕ್ಕೆ ಅಂಗೀಕರಿಸಿರುವುದರಿಂದ ಕೃತಯುಗ ಧರ್ಮವನ್ನು ಬಿಟ್ಟುಕೊಟ್ಟು ಈ ಗ್ರಂಥವನ್ನು ಸಂಕೋಚಗೊಳಿಸಿದ್ದಾನೆ.

ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ ।
ದಾನಂ ಪ್ರತಿಗ್ರಹಂ ಚೈವ ಬ್ರಾಹ್ಮಣಾನಾಮಕಲ್ಪಯತ್ ॥ ೮೮

ಉತ್ತಮ ಜೀವನನಡೆಸುವ ಜ್ಞಾನೋಪಾಸಕನು(ಬ್ರಾಹ್ಮಣನು)ಲೋಕ ಕ್ಷೇಮ ಸಾಧನೆಯನ್ನು ಚಿಂತಿಸುತ್ತಾ ಇರುವಾಗ ಇದಕ್ಕೆ ಸಹಾಯಕವಲ್ಲದ ಕರ್ಮಗಳ ಗೊಡವೆಯನ್ನು ಬಿಡಬೇಕು. ಅಭಿರುಚಿಯನ್ನೆ ಈ ರೀತಿ ಬೆಳಸಿ ಕೊಳ್ಳಬೇಕು. ಇತರರ ರುಚಿಯ ಕರ್ಮಗಳನ್ನು ತಾನು ಮಾಡುವುದು ಅಪಾಟವ. ಬಿದ್ದ ಕೆಲಸಕ್ಕೆ ಹೇಸುವುದುಉತ್ತಮನ ಲಕ್ಷಣವಲ್ಲ.

ಕಲಿಯುವುದು-ಕಲಿಸುವುದು, ಯಾಗಮಾಡುವುದು-ಮಾಡಿಸುವುದು, ದಾನ ಕೊಡುವುದು ತಕ್ಕೊಳ್ಳುವುದು- ಇವು ಆರು ಜ್ಞಾನೋಪಾಸಕನ ದಿನಚರ್ಯೆಯು, ವಸ್ತುಸ್ಥಿತಿಯು.

ಪ್ರಜಾನಾಂ ರಕ್ಷಣಂ ದಾನಮಿಜ್ಯಾಧ್ಯಯನಮೇವ ಚ ।
ವಿಷಯೇಷ್ವಪ್ರಸಕ್ತಿಶ್ಚ ಕ್ಷತ್ರಿಯಸ್ಯ ಸಮಾಸತಃ ॥ ೮೯

ಉತ್ಸಾಹಿ ಬಲಶಾಲಿ ರಕ್ಷಣಾ ಬುದ್ಧಿಯ ಶೌರ್ಯೋಪಾಸಕನು ಮದ ದ್ಯೂತ ಮುಂತಾದ ದುರ್ವ್ಯಸನಗಳನ್ನು ವರ್ಜಿಸಿ ದಾನ ಯಾಗ ಅಧ್ಯಯನ ಗಳನ್ನುಮಾಡುತ್ತಿರುವುದು ವಿರುದ್ಧವಲ್ಲ. ಸಮಾಜದ ಬಾಹ್ಯಶತ್ರುದಮನವು ಅವಶ್ಯಕಾರ್ಯವು.

ಪಶೂನಾಂ ರಕ್ಷಣಂ ದಾನಮಿಜ್ಯಾಧ್ಯಯನಮೇವ ಚ ।
ವಣಿಕ್ ಪಥಂ ಕುಸೀದಂ ಚ ವೈಶ್ಯಸ್ಯ ಕೃಷಿಮೇವ ಚ ॥ ೯೦

ಧನೋಪಾಸಕನು ದಾನ-ಯಾಗ–ಅಧ್ಯಯನ–ಪಶುಪಾಲನೆ-ವಾಣಿಜ್ಯ-ಬಡ್ಡಿಗೆ ಹಣಕೊಡುವುದು ಕೃಷಿಗಳನ್ನು ಮಾಡಿ ಆತ್ಮಸಂಸ್ಕಾರವನ್ನು ಧನಾರ್ಜನೆಯನ್ನು ಇತರರ ಆವಶ್ಯಕತೆಯ ಪೂರೈಕೆಯನ್ನು ಮಾಡುತ್ತಿರಬೇಕು.

ಏಕಮೇವ ತು ಶೂದ್ರಸ್ಯ ಪ್ರಭುಃ ಕರ್ಮ ಸಮಾದಿಶತ್।
ಏತೇಷಾಮೇವ ವರ್ಣಾನಾಂ ಶುಶ್ರೂಷಾಮನಸೂಯಯಾ ॥ ೯೧

ಅಸೂಯೆ–ಮತ್ಸರ–ಕಪಟ–ವಂಚನೆಗಳಿಲ್ಲದೆ ಬಾಕಿ ಉಳಿದ ಎಲ್ಲ ಕೆಲಸಗಳನ್ನು ಮಾಡಿ ದೇಶಸೇವೆಯ ವ್ರತದ ತಪಸ್ವಿಯಾಗಿ ಶ್ರಮೋಪಾಸಕನು ಕೃತಕೃತ್ಯನಾಗಬೇಕು.

ಊರ್ಧ್ವಂ ನಾಭೇರ್ಮೇಧ್ಯತರಃ ಪುರುಷಃ ಪರಿಕೀರ್ತಿತಃ ।
ತಸ್ಮಾನ್ಮೇಧ್ಯತಮಂ ತ್ವಸ್ಯ ಮುಖಮುಕ್ತಂ ಸ್ವಯಂಭುವಾ ॥ ೯೨

ದೇಹದಲ್ಲಿ ನಾಭಿಯಮೇಲೆ ಜ್ಞಾನಾಂಗಗಳ ಪ್ರದೇಶವು. ಅದರಂತೆ ಮುಖವು ಜ್ಞಾನದ ಪ್ರತಿಫಲನೆಯ ಕನ್ನಡಿಯಂತಹ ಫಲಕವಾಗಿದೆ. ಮುಖದರ್ಶನದಿಂದ ಇಂಗಿತವನ್ನು ತಿಳಿಯಬಹುದಾಗಿದೆ. ಇಲ್ಲಿಂದ ಈ ಶಾಸ್ತ್ರವು ಹೆಚ್ಚಾಗಿ ಜ್ಞಾನಿ (ಬ್ರಾಹ್ಮಣ)ಯ ದಶೆಯಿಂದ ಇದ್ದುದಕ್ಕೆ ಅವನ ವರ್ಣನೆ ಮಾಡಲಾಗುವದು.

ಉತ್ತಮಾಂಗೋದ್ಭವಾಜ್ಜ್ಯೈಷ್ಠ್ಯಾದ್ಬ್ರಹ್ಮಣಶ್ಚೈವ ಧಾರಣಾತ್
ಸರ್ವಸ್ಯೈವಾಸ್ಯ ಸರ್ಗಸ್ಯ ಧರ್ಮತೋ ಬ್ರಾಹ್ಮಣಃ ಪ್ರಭುಃ ॥ ೯೩

ಜ್ಞಾನಿಯು (ಬ್ರಾಹ್ಮಣ) ಈ ಸೃಷ್ಟಿಯನ್ನು ಅಂಕೆಯಲ್ಲಿಡಬಲ್ಲವನಾಗಿದ್ದಾನೆ. ಕಾಲದಲ್ಲಿ ಕರ್ತವ್ಯದಲ್ಲಿ, ಧ್ಯಾನದಲ್ಲಿ ಜ್ಞಾನವು ಪ್ರಥಮವು.

ತಂ ಹಿ ಸ್ವಯಂಭೂಃ ಸ್ವಾದಾಸ್ಯಾತ್ತಪಸ್ತಪ್ತ್ವಾದಿತೋಽಸೃಜತ್
ಹವ್ಯಕವ್ಯಾಭಿವಾಹ್ಯಾಯ ಸರ್ವಸ್ಯಾಸ್ಯ ಚ ಗುಪ್ತಯೇ ॥ ೯೪

ಮುಖವು ದೇಹದ ಇಷ್ಟಾನಿಷ್ಟವನ್ನು ಪ್ರತಿಬಿಂಬಿಸುವಂತೆ ಜ್ಞಾನಿಯು ಇತರ ಪ್ರಜಾಕೋಟಿಯ ಕಾರ್ಯಗಳಿಂದ ಅದರ ಮೇಲಾಗುವ ಫಲಾಫಲಗಳನ್ನು ತಿಳಿಯಬಲ್ಲವನು. ಜ್ಞಾನವು ಬ್ರಹ್ಮನ ಸ್ವರೂಪವೇ ಆಗಿರುವುದರಿಂದ ಸೃಷ್ಟಿತಂತ್ರದ ಮೂಲವೂ ಅದೇ ಆಗಿದೆ.

ಯಸ್ಯಾಸ್ಯೇನ ಸದಾಶ್ನಂತಿ ಹವ್ಯಾನಿ ತ್ರಿದಿವೌಕಸಃ ।
ಕವ್ಯಾನಿ ಚೈವ ಪಿತರಃ ಕಿಂ ಭೂತಮಧಿಕಂ ತತಃ ॥ ೯೫

ಯಾವ (ಬ್ರಾಹ್ಮಣ) ಜ್ಞಾನಿಯ ಮುಖದಿಂದ ದೇವತೆಗಳು ಹವಿರ್ಭಾಗವನ್ನೂ ಪಿತೃಗಳು ಕವ್ಯ (ಅನ್ನಾದಿ)ವನ್ನೂ ಸೇವಿಸುತ್ತಾರೊ ಮತ್ತು

ಜ್ಞಾನಿಯ ಮುಖದ ಉಪದೇಶದ ಅಧೀನವಾಗಿ ಜಗತ್ತು ಅಂಧಾವಸ್ಥೆಯನ್ನು ಕಳಕೊಳ್ಳುವುದೊ, ಇನ್ನಾವುದು ಇದಕ್ಕಿಂತ ಹೆಚ್ಚು.

ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ ।
ಬುದ್ಧಿಮತ್ಸು ನರಾಃ ಶ್ರೇಷ್ಠಾ ನರೇಷು ಬ್ರಾಹ್ಮಣಾಃ ಸ್ಮೃತಾಃ ॥ ೯೬

ಮರಗಳಿಗಿಂತ ಕೀಟಗಳು, ಅವುಗಳಿಗಿಂತ ನರಿ-ನಾಯಿಗಳು ಚುರುಕು, ಮೃಗಗಳಿಗಿಂತ ಬುದ್ಧಿವಂತ ಜನರು ಚುರುಕು. ಅವರಲ್ಲೂ ಬ್ರಹ್ಮವಿಚಾರ ಪರಾಯಣರಾದ ಬ್ರಾಹ್ಮಣರು ಬ್ರಹ್ಮಸೃಷ್ಟಿಯಲ್ಲಿ ಮೂಲಾನ್ವೇಷಿಗಳು. ಇತರರು ಉದರ ಪರಾಯಣರು. ಮೂಲವಿಸ್ಮರಣೆಯುಳ್ಳವರು. ಅದು ಆತ್ಮವಿಸ್ಮರಣೆಯೂ ಆಗಿರುವುದು. ಆಗ ಕಾಮ (ಇಂದ್ರಿಯ ವೇಗ) ಗಾಳಿಗೆ ಹಾರುವ ತರಗೆಲೆ.

ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸು ಕೃತಬುದ್ಧಯಃ ।
ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ ॥ ೯೭

(ಬ್ರಾಹ್ಮಣ) ಬ್ರಹ್ಮವಿಚಾರಪರರಲ್ಲಿ ಬ್ರಹ್ಮಪ್ರದರ್ಶಕವಾದ ಆತ್ಮಶಾಸ್ತ್ರಜ್ಞರು, ಅವರಲ್ಲಿ ಬ್ರಹ್ಮಪ್ರತ್ಯಕ್ಷದಲ್ಲಿ ಕರ್ತವ್ಯ ಬುದ್ಧಿಯುಳ್ಳವರು, ಅವರಲ್ಲಿ ಬ್ರಹ್ಮ ಪ್ರತ್ಯಕ್ಷಕ್ಕೆ ಪ್ರಯತ್ನಿಸುವವರು. ಪ್ರಯತ್ನಿಸಿ ವೇದಾಂತ ವಾಕ್ಯಾರ್ಥ ಮನನದಿಂದ ಆತ್ಮಪ್ರತ್ಯಕ್ಷವನ್ನು ಸಾಧಿಸಿದವರು. ಮೂಲದ ಕಡೆಗೆ ಚಲನೆಯುಳ್ಳವರು. ಇತರರು ವಿರುದ್ಧ ದಿಕ್ಕಿನ ಗತಿಶೀಲರು.

ಉತ್ಪತ್ತಿರೇವ ವಿಪ್ರಸ್ಯ ಮೂರ್ತಿರ್ಧರ್ಮಸ್ಯ ಶಾಶ್ವತೀ ।
ಸ ಹಿ ಧರ್ಮಾರ್ಥಮುತ್ಪನ್ನೋ ಬ್ರಹ್ಮಭೂಯಾಯ ಕಲ್ಪತೇ ॥ ೯೮

(ಬ್ರಾಹ್ಮಣ) ಜ್ಞಾನೋಪಾಸಕನು ಧರ್ಮದ ಪ್ರತ್ಯಕ್ಷ ರೂಪವು. ಆತ್ಮಜ್ಞಾನವೇ ಪ್ರಮುಖವು. ಮೋಕ್ಷವೇ ಆತ್ಮಜ್ಞಾನವು-ಗಮ್ಯವು.

ಬ್ರಾಹ್ಮಣೋ ಜಾಯಮಾನೋ ಹಿ ಪೃಥಿವ್ಯಾಮಧಿ ಜಾಯತೇ ।
ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೇ ॥ ೯೯

ಬ್ರಹ್ಮಣಿ ಚರತಿ ಬ್ರಾಹ್ಮಣಃ. ಆತ್ಮಜ್ಞಾನರೂಪ ಧರ್ಮಾಧೀನವಾದ ಇತರ ಧರ್ಮಗಳನ್ನು ಅಜ್ಞಾನಿಯು ತಿಳಿಯಲಾರನು, ತಿಳಿಸಲಾರನು.

ಸರ್ವಂ ಸ್ವಂ ಬ್ರಾಹ್ಮಣಸ್ಯೇದಂ ಯತ್ಕಿಂಚಿಜ್ಜಗತೀಗತಂ ।
ಶ್ರೈಷ್ಠ್ಯೇನಾಭಿಜನೇನೇದಂ ಸರ್ವಂ ವೈ ಬ್ರಾಹ್ಮಣೋಽರ್ಹತಿ ॥ ೧೦೦

ತಾನು ದುಡಿದ ಧಾನ್ಯ ಮರವುಟ್ಟು ದನಕರು ತನ್ನ ಇಚ್ಛೆಯಂತೆ ಉಪಯೋಗಿಸಲಾಗುವುದು. ಜ್ಞಾನೋಪಾಸಕನು ಜ್ಞಾನಬಲದಿಂದ ಜಗತ್ತನ್ನು ತನ್ನ ಅನುರಕ್ತವಾಗಿ ಮಾಡಿಕೊಂಡರೆ ಆಗ ಅದು ತನ್ನ ಇಚ್ಛಾನುವರ್ತಿಯಾಗುವುದು.

ಸ್ವಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ ।
ಆನೃಶಂಸ್ಯಾದ್ಬ್ರಾಹ್ಮಣಸ್ಯ ಭುಂಜತೇ ಹೀತರೇ ಜನಾಃ ॥ ೧೦೧

ಜ್ಞಾನೋಪಾಸಕನು ಔದಾರ್ಯದಿಂದ ಅನುಭವದಾನ ಮಾಡುತ್ತ (ಇತರರಿಗಿಲ್ಲದ) ಸರ್ವವನ್ನು ಭರಿಸುತ್ತಾನಾದರೆ ಆಗ ಸರ್ವಸೊತ್ತು ಅವನದು. ಅದನ್ನು ಇತರರು ಉಣ್ಣುತ್ತಾರೆ.

ತಸ್ಯ ಕರ್ಮವಿವೇಕಾರ್ಥಂ ಶೇಷಾಣಾಮನುಪೂರ್ವಶಃ ।
ಸ್ವಾಯಂಭುವೋ ಮನುರ್ಧೀಮಾನ್ ಇದಂ ಶಾಸ್ತ್ರಮಕಲ್ಪಯತ್॥ ೧೦೨

ಅಂತಹ ಜಗದ್ರಕ್ಷಣೆಯ ಕ್ರಿಯಾವಿಶ್ಲೇಷಣೆಗಾಗಿ ಸ್ವಯಂಭೂಸಂಜಾತ ಮನುವು ಧೀಬಲದಿಂದ ಈ ವಿವೇಚನಾಶಾಸ್ತ್ರವನ್ನು ಅನುಗೊಳಿಸಿದ್ದಾನೆ.

ವಿದುಷಾ ಬ್ರಾಹ್ಮಣೇನೇದಮಧ್ಯೇತವ್ಯಂ ಪ್ರಯತ್ನತಃ ।
ಶಿಷ್ಯೇಭ್ಯಶ್ಚ ಪ್ರವಕ್ತವ್ಯಂ ಸಮ್ಯಙ್ನಾನ್ಯೇನ ಕೇನಚಿತ್ ॥ ೧೦೩

ಜಗದ್ರಕ್ಷಣೆಯ ವಿಧಾನವನ್ನು ಚಿಂತಿಸಬೇಕಾದರೆ ಇದನ್ನು ಜ್ಞಾನೋಪಾಸಕನು 'ಬ್ರಾಹ್ಮಣ' ಕಲಿಯಬೇಕು ಕಲಿಸಬೇಕು. ಇತರರಿಗೆ ಈ ಶಾಸ್ತ್ರವು ವಶವಾಗಲಾರದು.

ಇದಂ ಶಾಸ್ತ್ರಮಧೀಯಾನೋ ಬ್ರಾಹ್ಮಣಃ ಶಂಸಿತವ್ರತಃ ।
ಮನೋವಾಗ್ದೇಹಜೈರ್ನಿತ್ಯಂ ಕರ್ಮದೋಷೈರ್ನ ಲಿಪ್ಯತೇ ॥ ೧೦೪

ಈ ಶಾಸ್ತ್ರವನ್ನು ಸ್ವಾಧೀನ ಮಾಡಿದವನು ಇತರ ಪ್ರಜೆಗಳ ಅವಜ್ಞೆಗೆ ಗುರಿಯಾಗಲಾರನು, ಹಾಗೂ ತ್ರಿಕರಣ ದೋಷವಶವಾಗಲಾರನು,

ಪುನಾತಿ ಪಂಕ್ತಿಂ ವಂಶ್ಯಾಂಶ್ಚ ಸಪ್ತ ಸಪ್ತ ಪರಾವರಾನ್
ಪೃಥಿವೀಮಪಿ ಚೈವೇಮಾಂ ಕೃತ್ಸ್ನಾಮೇಕೋಽಪಿ ಸೋಽರ್ಹತಿ ॥ ೧೦೫

ಈ ಶಾಸ್ತ್ರವನ್ನು ಸ್ವಾಧೀನದಲ್ಲಿ ಪರಿಣಾಮಕಾರಿಯಾಗಿ ಮಾಡಿಕೊಂಡರೆ ಆ ಜ್ಞಾನೋಪಾಸಕನು ಈ ಭೂಮಿಯನ್ನು ಅಂಗೈಯ ನೆಲ್ಲಿಯಂತೆ ವಶೀಕರಿಸುವನು. (ಭೂದಾನಕ್ಕೆ ಪಾತ್ರನಾಗುವನು )

ಇದಂ ಸ್ವಸ್ತ್ಯಯನಂ ಶ್ರೇಷ್ಠಮಿದಂ ಬುದ್ಧಿವಿವರ್ಧನಂ ।
ಇದಂ ಯಶಸ್ಯಮಾಯುಷ್ಯಮಿದಂ ನಿಃಶ್ರೇಯಸಂ ಪರಂ ॥ ೧೦೬

ಮೇಲೆ ಹೇಳಿದ ಕಾರಣದಿಂದ ಈ ಮಾನವೀಯ ಸಂಹಿತೆಯು ಬುದ್ಧಿವರ್ಧಕವು, ಕೀರ್ತಿಕರವು, ಪುಣ್ಯದಾಯಕವು. ಮೋಕ್ಷಪ್ರಾಪಕವು ಆಗಬಲ್ಲುದು. ಉಪಯೋಗಾನುಗುಣ ಫಲ ಪ್ರಾಪ್ತಿಯು.

ಅಸ್ಮಿನ್ಧರ್ಮೋಽಖಿಲೇನೋಕ್ತೋ ಗುಣದೋಷೌ ಚ ಕರ್ಮಣಾಂ ॥
ಚತುರ್ಣಾಮಪಿ ವರ್ಣಾನಾಮಾಚಾರಶ್ಚೈವ ಶಾಶ್ವತಃ ॥ ೧೦೭

ಈ ಶಾಸ್ತ್ರದಲ್ಲಿ ಸಕಲವಾದ ಧರ್ಮ–ಗುಣ–ದೋಷ–ಸದಾಚಾರಗಳು ವಿಜ್ಞೇಯಗಳಾಗಿವೆ.

ಆಚಾರಃ ಪರಮೋಧರ್ಮಃ ಶ್ರುತ್ಯುಕ್ತಃ ಸ್ಮಾರ್ತ ಏವ ಚ ।
ತಸ್ಮಾದಸ್ಮಿನ್ಸದಾ ಯುಕ್ತೋ ನಿತ್ಯಂ ಸ್ಯಾದಾತ್ಮವಾನ್ ದ್ವಿಜಃ॥ ೧೦೮

ಆತ್ಮಹಿತೇಚ್ಛೆಯುಳ್ಳವನು ಇದನ್ನು ಸದಾ ಚಿಂತಿಸುತ್ತಿರಬೇಕು. ಇದರಲ್ಲಿ ಶ್ರೌತಸ್ಮಾರ್ತಧರ್ಮಗಳು ಅಭಿಹಿತಗಳಾಗಿವೆ. ಹೀಗೆ ಪರಮ ಪಾವನವಾಗಿದೆ.

ಆಚಾರಾದ್ವಿಚ್ಯುತೋವಿಪ್ರೋ ನ ವೇದಫಲಮಶ್ನುತೇ।
ಆಚಾರೇಣ ತು ಸಂಯುಕ್ತಃ ಸಂಪೂರ್ಣ ಫಲಭಾಗ್ಭವೇತ್ ॥ ೧೦೯

ಸದಾಚಾರವು ಅವಿಕಲ–ಅನ್ಯೂನ–ಅನುತ್ತಮ ಫಲದಾಯಕವು.

ಏವಮಾಚಾರತೋ ದೃಷ್ಟ್ವಾ ಧರ್ಮಸ್ಯ ಮುನಯೋ ಗತಿಂ।
ಸರ್ವಸ್ಯ ತಪಸೋ ಮೂಲಮಾಚಾರಂ ಜಗೃಹುಃ ಪರಂ ॥ ೧೧೦

ಧರ್ಮವು ಸದಾಚಾರರೂಪವಾಗಿರುವುದರಿಂದ ವಿಚಾರವಂತರು ಆಚಾರವು ಸರ್ವಮೂಲವೆಂದು ಸ್ವೀಕರಿಸಿದ್ದಾರೆ.

ಜಗತಶ್ಚ ಸಮುತ್ಪತ್ತಿಂ ಸಂಸ್ಕಾರ ವಿಧಿಮೇವ ಚ ।
ವ್ರತಚರ್ಯೋಪಚಾರಂ ಚ ಸ್ನಾನಸ್ಯ ಚ ಪರಂ ವಿಧಿಂ ॥ ೧೧೧
ದಾರಾಧಿಗಮನಂ ಚೈವ ವಿವಾಹಾನಾಂ ಚ ಲಕ್ಷಣಂ ।
ಮಹಾಯಜ್ಞವಿಧಾನಂ ಚ ಶ್ರಾದ್ಧಕಲ್ಪಂ ಚ ಶಾಶ್ವತಂ ॥ ೧೧೨
ವೃತ್ತೀನಾಂ ಲಕ್ಷಣಂ ಚೈವ ಸ್ನಾತಕಸ್ಯ ವ್ರತಾನಿ ಚ ।
ಭಕ್ಷ್ಯಾಭಕ್ಷ್ಯಂ ಚ ಶೌಚಂ ಚ ದ್ರವ್ಯಾಣಾಂ ಶುದ್ಧಿಮೇವ ಚ । ೧೧೩
ಸ್ತ್ರೀಧರ್ಮಯೋಗಂ ತಾಪಸ್ಯಂ ಮೋಕ್ಷಂ ಸನ್ಯಾಸಮೇವ ಚ ।
ರಾಜ್ಞಶ್ಚ ಧರ್ಮಮಖಿಲಂ ಕಾರ್ಯಾಣಾಂ ಚ ವಿನಿರ್ಣಯಂ । ೧೧೪
ಸಾಕ್ಷಿಪ್ರಶ್ನವಿಧಾನಂ ಚ ಧರ್ಮಂ ಸ್ತ್ರೀಪುಂಸಯೋರಪಿ ॥
ವಿಭಾಗಧರ್ಮಂ ದ್ಯೂತಂ ಚ ಕಂಟಕಾನಾಂ ಚ ಶೋಧನಂ । ೧೧೫
ವೈಶ್ಯಶೂದ್ರೋಪಚಾರಂ ಚ ಸಂಕೀರ್ಣಾನಾಂ ಚ ಸಂಭವಂ ॥
ಆಪದ್ಧರ್ಮಂ ಚ ವರ್ಣಾನಾಂ ಪ್ರಾಯಶ್ಚಿತ್ತವಿಧಿಂ ತಥಾ । ೧೧೬
ಸಂಸಾರಗಮನಂ ಚೈವ ತ್ರಿವಿಧಂ ಕರ್ಮಸಂಭವಂ ।
ನಿಃಶ್ರೇಯಸಂ ಕರ್ಮಣಾಂ ಚ ಗುಣದೋಷಪರೀಕ್ಷಣಂ ॥ ೧೧೭
ದೇಶಧರ್ಮಾನ್ ಜಾತಿಧರ್ಮಾನ್ ಕುಲಧರ್ಮಾಂಶ್ಚ ಶಾಶ್ವತಾನ್ ।
ಪಾಷಂಡಗಣಧರ್ಮಾಂಶ್ಚ ಶಾಸ್ತ್ರೇಽಸ್ಮಿನ್ನುಕ್ತವಾನ್ ಮನುಃ । ೧೧೮
ಯಥೇದಮುಕ್ತವಾನ್ ಶಾಸ್ತ್ರಂ ಪುರಾ ಪೃಷ್ಟೋ ಮನುರ್ಮಯಾ ।
ತಥೇದಂ ಯೂಯಮಪ್ಯದ್ಯ ಮತ್ಸಕಾಶಾನ್ನಿಬೋಧತ ॥ ೧೧೯ ॥

ಇಂತು ಒಂದನೆ ಅಧ್ಯಾಯ.

ಇಷ್ಟು ವಿಷಯಗಳು ಇದರಲ್ಲಿ ಬಂದಿವೆ. ಮುಂದಿನ ಅಧ್ಯಾಯಗಳಲ್ಲಿ ಒಂದೊಂದೆ ಕ್ರಮವಾಗಿ ವಿಸ್ತಾರವಾಗಿ ನಿರೂಪಿಸಲ್ಪಡುವುದು.

# ಅಧ್ಯಾಯ ೨.

ವಿದ್ವದ್ಭಿಃ ಸೇವಿತಃ ಸದ್ಭಿರ್ನಿತ್ಯಮದ್ವೇಷರಾಗಿಭಿಃ ।
ಹೃದಯೇನಾಭ್ಯನುಜ್ಞಾತೋ ಯೋ ಧರ್ಮಸ್ತಂ ನಿಬೋಧತ ॥ ೧

ವೇದವಿದ್ಯಾವಂತ ವಿಚಾರಪರ ಸಜ್ಜನರು ಆಚರಿಸುವ, ಆದುದರಿಂದಲೇ ಅವಿವೇಕ ರಾಗದ್ವೇಷಗಳಿಲ್ಲದ ಮನಸ್ಸಿಗೆ ಪ್ರಿಯವಾಗುವ ಧರ್ಮವನ್ನು ತಿಳಿಯಿರಿ.

ಕಾಮಾತ್ಮತಾ ನ ಪ್ರಶಸ್ತಾ ನ ಚೈವೇಹಾಸ್ತ್ಯಕಾಮತಾ ।
ಕಾಮ್ಯೋ ಹಿ ವೇದಾಧಿಗಮಃ ಕರ್ಮಯೋಗಶ್ಚ ವೈದಿಕಃ ॥ ೨

ಕರ್ಮವು ವೇದಗಮ್ಯವಾಗಿದೆ. ವೇದಾಧ್ಯಯನವು ಕಾಮನಾಪೂರಕವಾಗಿದೆ. ಕಾಮನೆಯಿಂದಲೇ ಕರ್ಮ ಮಾಡುವದು ಪ್ರಶಸ್ತವಲ್ಲ. ಜೀವನಾವಶ್ಯಕವಾದ ಕಾಮನೆಯು ಯುಕ್ತವು.

ಸಂಕಲ್ಪಮೂಲಃ ಕಾಮೋ ವೈ ಯಜ್ಞಾಃ ಸಂಕಲ್ಪಸಂಭವಾಃ ।
ವ್ರತಾನಿ ಯಮಧರ್ಮಾಶ್ಚ ಸರ್ವೇ ಸಂಕಲ್ಪಜಾಃ ಸ್ಮೃತಾಃ ॥ ೩

ಕಾಮದಿಂದ ಸಂಕಲ್ಪವು, ಸಂಕಲ್ಪದಿಂದ ಯಜ್ಞವು. ವ್ರತವು ಯಮನಿಯಮ ಧರ್ಮವು. ಆತ್ಮಕಾಮನೆಗೆ ವಿರೋಧವಿಲ್ಲದಂತೆ ಸಕಲ ಕಾಮನೆಗಳೂ ನಿಂದ್ಯಗಳಲ್ಲ.

ಅಕಾಮಸ್ಯ ಕ್ರಿಯಾ ಕಾಚಿದ್ದೃಶ್ಯತೇ ನೇಹ ಕರ್ಹಿಚಿತ್
ಯದ್ಯದ್ಧಿ ಕುರುತೇ ಕಿಂಚಿತ್ತತ್ತತ್ಕಾಮಸ್ಯ ಚೇಷ್ಟಿತಂ॥ ೪

ಅಕಾಮನಿಗೆ ಕ್ರಿಯೆಯು ಸಂಭವಿಸಲಾರದು. ಪ್ರತಿಯೊಂದು ಕ್ರಿಯೆಯೂ ಕಾಮದದಿಂದಲೇ ಜನಿಸಿದ್ದಾಗಿದೆ.

ತೇಷು ಸಮ್ಯಗ್ವರ್ತಮಾನೋ ಗಚ್ಛತ್ಯಮರಲೋಕತಾಂ ।
ಯಥಾ ಸಂಕಲ್ಪಿತಾಂಶ್ಚೇಹ ಸರ್ವಾನ್ಕಾಮಾನ್ ಸಮಶ್ನುತೇ ॥ ೫

[ಇಹದಲ್ಲಿಯೂ ಆಯಾ ವೇದೋಕ್ತ ಫಲಗಳನ್ನು ಪಡೆಯುತ್ತಾನೆ ಅನುಭವಿಸುತ್ತಾನೆ.] [ಲಭಿಸುವ ಫಲದಲ್ಲಿ ಪರವಶತೆಯು ಮನಸ್ಸಿಗೆ ಇಲ್ಲದೆ ಇಂಥವನು] ಸಮ್ಯಗ್ವರ್ತನೆಯಿಂದ ಮಾನವನು ಅಮರನಾಗುವನು. ಸಂಸಾರಮುಕ್ತನಾಗುವನು.

**ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಂ ।**
**ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥ ೬**

ಆದ್ಯಂತ ವೇದವು ಧರ್ಮದರ್ಶಕವು. ಇದರಲ್ಲಿ ಬರುವ ಎಲ್ಲ ಸಂಶಯಗಳನ್ನು ಜೈಮಿನಿಯ ಕರ್ಮಮೀಮಾಂಸಾ ಶಾಸ್ತ್ರವು ನ್ಯಾಯವಾಗಿ ನಿವಾರಿಸುವುದು. ವೇದಜ್ಞರ ಅನುಭವವು ಶೀಲವು ಧರ್ಮಕ್ಕೆ ( ಲೌಕಿಕಕ್ಕೆ ) ಪ್ರಮಾಣವಾಗುವುದು. ವೇದಜ್ಞರ ಆಚಾರವು-ವಿಹಿತವಿಕಲ್ಪಗಳಲ್ಲಿ ಸಜ್ಜನ ಮನಸ್ತುಷ್ಟಿಯು ನಿಯಾಮಕವಾಗುವುದು. ಬ್ರಹ್ಮನಿಷ್ಠತಾ–ದೇವಪಿತೃಭಕ್ತಿ–ಸೌಮ್ಯತೆ–ಕೃತಜ್ಞತೆ–ರಕ್ಷಕತೆ–ಪರಪೀಡಾವರ್ಜನೆ – ನಿರ್ಮತ್ಸರತೆ–ಅಕ್ರೂರತೆ– ಮೃದುತೆ–ಮಿತ್ರತ್ವ– ಪ್ರಿಯವಚನ–ದಯೆ– ಶಾಂತಿಗುಣಗಳು ಶೀಲವು.

**ಯಃ ಕಶ್ಚಿತ್ಕಸ್ಯಚಿದ್ಧರ್ಮೋ ಮನುನಾ ಪರಿಕೀರ್ತಿತಃ ।**
**ಸ ಸರ್ವೋಽಭಿಹಿತೋ ವೇದೇ ಸರ್ವಜ್ಞಾನಮಯೋ ಹಿ ಸಃ ॥ ೭**

ಮನುವು ಸರ್ವಜ್ಞಾನವಂತನು. ಮನು ಹೇಳಿದ ಎಲ್ಲವೂ ವೇದಗತವೇ.

**ಸರ್ವಂ ತು ಸಮವೇಕ್ಷ್ಯೇದಂ ನಿಖಿಲಂ ಜ್ಞಾನಚಕ್ಷುಷಾ ।**
**ಶ್ರುತಿಪ್ರಾಮಾಣ್ಯತೋ ವಿದ್ವಾನ್ ಸ್ವಧರ್ಮೇ ನಿವಿಶೇತ ವೈ ॥ ೮**

ಈ ಮಾನವ ಶಾಸ್ತ್ರ ಮೀಮಾಂಸಾ ವ್ಯಾಕರಣಾದಿ ಜ್ಞಾನದಿಂದ ವಿಚಾರಮಾಡಿ ಸ್ವಧರ್ಮದಲ್ಲಿ ವಿಶ್ವಾಸವಿಡಬೇಕು. ವೇದವೂ ಹಾಗೇ ಹೇಳುತ್ತದೆ.

**ಶ್ರುತಿಸ್ಮೃತ್ಯುದಿತಂ ಧರ್ಮಮನುತಿಷ್ಠನ್ಹಿ ಮಾನವಃ ।**
**ಇಹ ಕೀರ್ತಿಮವಾಪ್ನೋತಿ ಪ್ರೇತ್ಯ ಚಾನುತ್ತಮಂ ಸುಖಂ ॥ ೯**

ಒಟ್ಟಿನಲ್ಲಿ ಹೇಳುವುದಾದರೆ ಶ್ರುತಿ-ಸ್ಮೃತಿಗಳಲ್ಲಿ ಹೇಳುವಂತೆ ವರ್ತಿಸಿದರೆ ಇಹ ಪರಗಳಲ್ಲಿ ಕೀರ್ತಿ ಸುಖಗಳು ನಿಶ್ಚಯವಾಗಿ ಲಭಿಸುವುವು.

ಶ್ರುತಿಸ್ತು ವೇದೋ ವಿಜ್ಞೇಯೋ ಧರ್ಮಶಾಸ್ತ್ರಂ ತು ವೈ ಸ್ಮೃತಿಃ ।
ತೇ ಸರ್ವಾರ್ಥೇಷ್ವಮೀಮಾಂಸ್ಯೇ ತಾಭ್ಯಾಂ ಧರ್ಮೋ ಹಿ ನಿರ್ಬಭೌ ॥ ೧೦

ಶ್ರುತಿಯೆಂದರೆ ವೇದವು. ಧರ್ಮಶಾಸ್ತ್ರವು ಸ್ಮೃತಿಯು. ಅದರ ಮೇಲೆ ವಾದ ಹೂಡಿದರೆ ಅದರಲ್ಲಿಲ್ಲದ ಒಂದು ಉಪಾಯದಿಂದಲೂ ನಿಮಗೆ ಸುಖವು ಸಿಗಲಾರದು. ತಿಳಿಯುವ ಬುದ್ಧಿದೋಷವಲ್ಲದೆ ಅದರಲ್ಲಿ ದೋಷ ವಿಲ್ಲ.

ಯೋಽವಮನ್ಯೇತ ತೇ ಮೂಲೇ ಹೇತುಶಾಸ್ತ್ರಾಶ್ರಯಾದ್ದ್ವಿಜಃ ।
ಸ ಸಾಧುಭಿರ್ಬಹಿಷ್ಕಾರ್ಯೋ ನಾಸ್ತಿಕೋ ವೇದನಿಂದಕಃ ॥ ೧೧

ಒಬ್ಬನು ಶ್ರುತಿಸ್ಮೃತಿಗಳ ಧರ್ಮವು ಶ್ರೇಯಃಸಾಧನವಲ್ಲವೆಂದು ಭ್ರಮಿಸುವುದಾದರೆ ಅವನು ಅನನಿಷ್ಟದಂತೆ ಇರಲಿ. ನಾವು ಅವನ ಸಹ ವಾಸ ಮಾಡುವುದು ಬೇಡ. ಅವನು ಅನ್ಯೋಪಾಯಗಳಿಂದ ಸುಖಹೊಂದ ಲಾರನು. ಅವನು ತಾನಾಗಿ ಪಳಗುವನು.

ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥ ೧೨
ಅರ್ಥಕಾಮೇಷ್ವಸಕ್ತಾನಾಂ ಧರ್ಮಜ್ಞಾನಂ ವಿಧೀಯತೇ
ಧರ್ಮಂ ಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂ ಶ್ರುತಿಃ ॥ ೧೩

ಪ್ರತ್ಯಕ್ಷ ಲಕ್ಷಣಗಳಲ್ಲಿ ವೇದ–ಸ್ಮೃತಿ–ಸದಾಚಾರ–ಆತ್ಮಪ್ರಿಯತೆ— ಈ ನಾಲ್ಕು ಧರ್ಮದ ಅರ್ಥಕಾಮಗಳಲ್ಲಿ ನಿರತರಲ್ಲದವರಿಗೆ ಹೇಳಲ್ಪಡು ತ್ತದೆ. ಧರ್ಮಜ್ಞಾನವು ಬೇಕಾದರೆ ಶ್ರುತಿಯೇ ಗತಿಯು.

ಶ್ರುತಿದ್ವೈಧಂ ತು ಯತ್ರ ಸ್ಯಾತ್ ತತ್ರ ಧರ್ಮಾವುಭೌ ಸ್ಮೃತೌ ।
ಉಭಾವಪಿ ಹಿ ತೌ ಧರ್ಮೌ ಸಮ್ಯಗುಕ್ತೌ ಮನೀಷಿಭಿಃ ॥ ೧೪

ಒಂದೇ ವಿಷಯದಲ್ಲಿ ಎರಡು ವಿಧದ ವಿರುದ್ಧ ಶ್ರುತಿವಾಕ್ಯ ಕಂಡಲ್ಲಿ ಎರಡರಿಂದಲೂ ಪ್ರತಿಪಾದ್ಯವಾದ ಧರ್ಮವು ಮಾನ್ಯವು ಎಂದು ತಿಳಿಯಬೇಕು.

ಉದಿತೇಽನುದಿತೇ ಚೈವ ಸಮಯಾಧ್ಯುಷಿತೇ ತಥಾ ।
ಸರ್ವಥಾ ವರ್ತತೇ ಯಜ್ಞ ಇತೀಯಂ ವೈದಿಕೀ ಶ್ರುತಿಃ ॥ ೧೫

ಅಗ್ನಿಹೋತ್ರ ಕಾಲವಿಚಾರದಲ್ಲಿ ಎರಡು ಪಕ್ಷವು ಬಂದಿದೆ. ಇಂತಹ ನಕ್ಷತ್ರ ವರ್ಜಿತ ಅನುದಿತ, ಉದಿತ ಇವೇ ಅವು.

ಕಡೆ ಸೌಕರ್ಯ ಆತ್ಮ ತುಷ್ಟಿ ಶಾಸ್ತ್ರೀಯ ವ್ಯವಸ್ಥೆ ಹೇಗೆಮಾಡಿದರೂ ಪ್ರತ್ಯ ವಾಯವಿಲ್ಲ. ಹೋಮವು ಪೂರ್ಣವಾಯಿತು ಎಂದು ತಾತ್ಪರ್ಯವು.

**ನಿಷೇಕಾದಿಶ್ಮಶಾನಾಂತೋ ಮಂತ್ರೈರ್ಯಸ್ಯೋದಿತೋ ವಿಧಿಃ |**
**ತಸ್ಯ ಶಾಸ್ತ್ರೇಧಿಕಾರೋಽಸ್ಮಿನ್ ಜ್ಞೇಯೋ ನಾನ್ಯಸ್ಯ ಕಸ್ಯಚಿತ್ || ೧೬**

ಈ ಶಾಸ್ತ್ರದ ಧರ್ಮವನ್ನು ಎಲ್ಲರೂ ಆಚರಿಸಬೇಕು. ಮಂತ್ರ ಪೂರ್ವಕ ಸಂಸ್ಕಾರ ಉಳ್ಳವನು ಮಾತ್ರ ಇದನ್ನು ಪ್ರವಚನ ಮಾಡ ಬೇಕು. ಶಾಸ್ತ್ರರಕ್ಷಣೆಯು ಕರ್ತವ್ಯವು.

**ಸರಸ್ವತೀ ದೃಷದ್ವತ್ಯೋರ್ದೇವನದ್ಯೋರ್ಯದಂತರಂ |**
**ತಂ ದೇವನಿರ್ಮಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ || ೧೭**

ಸರಸ್ವತೀ ದೃಷದ್ವತೀ ನದಿಗಳ ಮಧ್ಯದೇಶವು ಬ್ರಹ್ಮಾವರ್ತವು. ಇದು ಧರ್ಮಾನುಷ್ಠಾನಕ್ಕೆ ಹೆಚ್ಚು ಪ್ರಶಸ್ತವು.

**ತಸ್ಮಿನ್ದೇಶೇ ಯ ಆಚಾರಃ ಪಾರಂಪರ್ಯಕ್ರಮಾಗತಃ |**
**ವರ್ಣಾನಾಂ ಸಾಂತರಾಲಾನಾಂ ಸ ಸದಾಚಾರ ಉಚ್ಯತೇ || ೧೮**

ಸೃಷ್ಟಿಯು ವಿಚಿತ್ರವಾದುದು. ಆದುದರಿಂದ ಅಲ್ಲಿನ ಉತ್ತಮ ಪ್ರಜೆಯ ಆಚಾರವು ಎಲ್ಲರಿಗೂ ಅನುಕರಣೀಯವಾಗಿದೆ. ಅಲ್ಲಿ ಉತ್ತಮರು ಜನಿಸುವರು.

**ಕುರುಕ್ಷೇತ್ರಂ ಚ ಮತ್ಸ್ಯಾಶ್ಚ ಪಂಚಾಲಾಃ ಶೂರಸೇನಕಾಃ |**
**ಏಷ ಬ್ರಹ್ಮರ್ಷಿದೇಶೋ ವೈ ಬ್ರಹ್ಮಾವರ್ತಾದನಂತರಃ || ೧೯**

ಕುರುಕ್ಷೇತ್ರ–ಮತ್ಸ್ಯ–ಪಂಚಾಲ–ಶೂರಸೇನದೇಶಗಳು ಬ್ರಹ್ಮಾವ ರ್ತಕ್ಕೆ ಸಮಾನವಾಗಿದ್ದಂತೆಯೂ ಇದ್ದ ಪುಣ್ಯಭೂಮಿಗಳು. ಅಲ್ಲಿ ಬ್ರಹ್ಮರ್ಷಿ ಗಳು ಜನಿಸುವರು.

**ಏತದ್ದೇಶ ಪ್ರಸೂತಸ್ಯ ಸಕಾಶಾದಗ್ರಜನ್ಮನಃ |**
**ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ || ೨೦**

ಮೇಲಿನ ಬ್ರಹ್ಮರ್ಷಿದೇಶದಲ್ಲಿ ಜನಿಸಿದ ಉತ್ತಮ ವಿಪ್ರನ ಆದೇಶ ದಂತೆಎಲ್ಲಾ ದ್ವೀಪಗಳ ಜನರೂ ತಂತಮ್ಮ ವರ್ತನೆಯನ್ನು ಕಲಿಯಬೇಕು. ಅವರ ವರ್ತನೆಯೂ ಶೀಲವೂ ಎಲ್ಲರಿಗೂ ಆದರ್ಶವಾದದ್ದು.

ಹಿಮವದ್ವಿಂಧ್ಯಯೋರ್ಮಧ್ಯಂ ಯತ್ಪ್ರಾಗ್ವಿನಶನಾದಪಿ ।
ಪ್ರತ್ಯಗೇವ ಪ್ರಯಾಗಾಚ್ಚ ಮಧ್ಯದೇಶಃ ಪ್ರಕೀರ್ತಿತಃ ॥ ೨೧

ವಿಂಧ್ಯಹಿಮವತ್ಪರ್ವತಗಳ ಮಧ್ಯದಲ್ಲಿ ಸರಸ್ವತಿಯು ಗುಪ್ತಗಾಮಿನಿಯಾದ ಪ್ರದೇಶದಿಂದ ಪೂರ್ವಕ್ಕೆ, ಪ್ರಯಾಗದ ಪಶ್ಚಿಮಕ್ಕೆ, ಮಧ್ಯದೇಶವೆಂದು ಹೆಸರು.

ಆ ಸಮುದ್ರಾತ್ತು ವೈ ಪೂರ್ವಾದಾಸಮುದ್ರಾತ್ತು ಪಶ್ಚಿಮಾತ್ ।
ತಯೋರೇವಾಂತರಂ ಗಿರ್ಯೋರಾರ್ಯಾವರ್ತಂ ವಿದುರ್ಬುಧಾಃ ॥ ೨೨

ಪೂರ್ವ ಪಶ್ಚಿಮ ಸಮುದ್ರಗಳ ಮತ್ತು ವಿಂಧ್ಯಹಿಮಾಚಲಗಳ ಮಧ್ಯವು ಆರ್ಯಾವರ್ತದೇಶವು.

ಕೃಷ್ಣಸಾರಸ್ತು ಚರತಿ ಮೃಗೋ ಯತ್ರ ಸ್ವಭಾವತಃ ।
ಸ ಜ್ಞೇಯೋ ಯಜ್ಞಿಯೋ ದೇಶೋ ಮ್ಲೇಚ್ಛದೇಶಸ್ತ್ವತಃ ಪರಃ ॥ ೨೩

ನೈಸರ್ಗಿಕವಾಗಿ ಕೃಷ್ಣಸಾರಮೃಗವು ಹುಟ್ಟಿ ಬೆಳೆಯುವ ಪ್ರದೇಶವು ಯಜ್ಞಾದಿಗಳಿಗೆ ಉಚಿತ ದೇಶವು. ಮಿಕ್ಕಿದು ಮ್ಲೇಚ್ಛದೇಶವು.

ಏತಾನ್ದ್ವಿಜಾತಯೋ ದೇಶಾನ್ಸಂಶ್ರಯೇರನ್ಪ್ರಯತ್ನತಃ ।
ಶೂದ್ರಸ್ತು ಯಸ್ಮಿನ್‌ಕಸ್ಮಿನ್‌ವಾ ನಿವಸೇದ್ವೃತ್ತಿಕರ್ಶಿತಃ ॥ ೨೪

ಉಪನಯನ ಸಂಸ್ಕಾರ ಉಳ್ಳವರು ಯಜ್ಞಿಯ ದೇಶವನ್ನು ಹೆಚ್ಚಾಗಿ ಆಶ್ರಯಿಸಬೇಕು. ಉಳಿದವರು ಎಲ್ಲಿಯೂ ಇರಬಹುದು.

ಏಷಾ ಧರ್ಮಸ್ಯ ವೋ ಯೋನಿಃ ಸಮಾಸೇನ ಪ್ರಕೀರ್ತಿತಾ ।
ಸಂಭವಶ್ಚಾಸ್ಯ ಸರ್ವಸ್ಯ ವರ್ಣಧರ್ಮಾನ್ನಿಬೋಧತ ॥ ೨೫

ಧರ್ಮ ಮೂಲವು ಸೃಷ್ಟಿಮೂಲವು ಈ ವರೆಗೆ ಸಂಕ್ಷೇಪವಾಗಿ ಹೇಳಲ್ಪಟ್ಟಿದೆ. ಇನ್ನು ಮೇಲೆ ವರ್ಣಧರ್ಮವನ್ನು ಹೇಳಲಾಗುವುದು.

ವೈದಿಕೈಃ ಕರ್ಮಭಿಃ ಪುಣ್ಯೈರ್ನಿಷೇಕಾದಿರ್ದ್ವಿಜನ್ಮನಾಮ್ ।
ಕಾರ್ಯಃ ಶರೀರ ಸಂಸ್ಕಾರಃ ಪಾವನಃ ಪ್ರೇತ್ಯ ಚೇಹ ಚ ॥ ೨೬

ದ್ವಿಜಾತೀಯರಿಗೆ ವೇದೋಕ್ತ ಕರ್ಮಗಳಿಂದ ಗರ್ಭಾಧಾನ ಮುಂತಾದ ಶರೀರ ಸಂಸ್ಕಾರವು ಮಾಡಲ್ಪಡಬೇಕು.

ಶುಭಕರ್ಮವು. ಪಾಪಕ್ಷಯಹೇತುವು. ಈ ಲೋಕ ಪರಲೋಕಗಳಲ್ಲಿ ಶ್ರೇಯಸ್ಕರವು.

ಗಾರ್ಭೈರ್ಹೋಮೈರ್ಜಾತಕರ್ಮಚೌಡ ಮೌಂಜೀನಿಬಂಧನೈಃ।
ಬೈಜಿಕಂ ಗಾರ್ಭಿಕಂ ಚೈನೋ ದ್ವಿಜಾನಾಮಪಮೃಜ್ಯತೇ॥ ೨೭

ಗರ್ಭಸಂಸ್ಕಾರ – ಜಾತಕರ್ಮ – ಚೂಡಾಕರ್ಮ – ಮೌಂಜೀಬಂಧನಗಳಿಂದ ಬೀಜಾದೋಷ ಗರ್ಭದೋಷಜನ್ಯ ಪಾಪದ ವಿಮೋಚನೆಯಾಗುವುದು.

ಸ್ವಾಧ್ಯಾಯೇನ ವ್ರತೈರ್ಹೋಮೈಸ್ತ್ರೈವಿದ್ಯೇನೇಜ್ಯಯಾ ಸುತೈಃ।
ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೇ ತನುಃ ॥ ೨೮

ವೇದಾಧ್ಯಯನ– ಮದ್ಯಮಾಂಸವರ್ಜನ– ಸಾವಿತ್ರಹೋಮ – ಅಗ್ನಿಕಾರ್ಯ-ತ್ರೈವಿದ್ಯ-ದೇವರ್ಷಿಪಿತೃತರ್ಪಣ-ಪುತ್ರೋತ್ಪಾದನ-ಪಂಚಮಹಾಯಜ್ಞ ಅಗ್ನಿಷ್ಟೋಮಾದಿಯಜ್ಞಗಳಿಂದ ಶಾರೀರಾತ್ಮನು ಬ್ರಹ್ಮಪರಾಪಕ್ಕೆ ಯೋಗ್ಯನಾಗುತ್ತಾನೆ. ಶರೀರವು ಬ್ರಹ್ಮಪ್ರಾಪಕವಾಗುತ್ತದೆ.

ಪ್ರಾಙ್ನಾಭಿವರ್ಧನಾತ್ಪುಂಸೋ ಜಾತಕರ್ಮ ವಿಧೀಯತೇ ।
ಮಂತ್ರವತ್ಪ್ರಾಶನಂ ಚಾಸ್ಯ ಹಿರಣ್ಯಮಧುಸರ್ಪಿಷಾಂ ॥ ೨೯

ಜನಿಸಿ ನಾಭಿನಾಲಚ್ಛೇದಕ್ಕೆ ಮೊದಲೇ ಜಾತಕರ್ಮ ಸಂಸ್ಕಾರವಾಗಬೇಕು. ಆಗ ಜೇನುತುಪ್ಪಗಳಲ್ಲಿ ಚಿನ್ನ ತೇಯ್ದು ಕುಡಿಸಬೇಕು.

ನಾಮಧೇಯಂ ದಶಮ್ಯಾಂ ತು ದ್ವಾದಶ್ಯಾಂ ವಾಸ್ಯ ಕಾರಯೇತ್ ।
ಪುಣ್ಯೇ ತಿಥೌ ಮುಹೂರ್ತೇ ವಾ ನಕ್ಷತ್ರೇ ವಾ ಗುಣಾನ್ವಿತೇ ॥ ೩೦

ಮುಖ್ಯವಾಗಿ ನಾಮಕರಣವನ್ನು ಹುಟ್ಟಿ ಹತ್ತು ಅಥವಾ ಹದಿನೈದು ದಿನಗಳಲ್ಲಿ ಮಾಡಬೇಕು. ಇತರ ಶುಭದಿನಗಳಲ್ಲಿಯೂ ಆಗಬಹುದು.

ಮಂಗಲ್ಯಂ ಬ್ರಾಹ್ಮಣಸ್ಯ ಸ್ಯಾತ್ಕ್ಷತ್ರಿಯಸ್ಯ ಬಲಾನ್ವಿತಂ ।
ವೈಶ್ಯಸ್ಯ ಧನಸಂಯುಕ್ತಂ ಶೂದ್ರಸ್ಯ ತು ಜುಗುಪ್ಸಿತಂ ॥ ೩೧

ನೈಸರ್ಗಿಕ ಅಭಿರುಚಿಗೆ ಸರಿಯಾಗಿ ಬ್ರಾಹ್ಮಣನಿಗೆ ಮಂಗಲಾರ್ಥದ

ಕ್ಷತ್ರಿಯನಿಗೆ ಬಲಾರ್ಥದ ವೈಶ್ಯನಿಗೆ ಧನಾರ್ಥದ ಹೆಸರನ್ನು ಕೊಡಬಹುದು. ಉಳಿದವರಿಗೆ ಯಾವುದೂ ಆಗಬಹುದು.

ಶರ್ಮವದ್ಬ್ರಾಹ್ಮಣಸ್ಯ ಸ್ಯಾದ್ರಾಜ್ಞೋ ರಕ್ಷಾಸಮನ್ವಿತಂ ।
ವೈಶ್ಯಸ್ಯ ಪುಷ್ಟಿಸಂಯುಕ್ತಂ ಶೂದ್ರಸ್ಯ ಪ್ರೇಷ್ಯಸಂಯುತಂ ॥ ೩೨

ಶರ್ಮ–ರಕ್ಷೆ–ಪುಷ್ಟಿ–ಪ್ರೇಷ್ಯ–ಅರ್ಥದ ಪದಗಳನ್ನು ಸಹಪದವಾಗಿ ಕೂಡಿಸಿ (ಶರ್ಮ, ವರ್ಮ, ಗುಪ್ತ(ಭೂತಿ) ದಾಸ ಮುಂ.) ಹೆಸರನ್ನು ಅಂತ್ಯಗೊಳಿಸಬೇಕು.

ಸ್ತ್ರೀಣಾಂ ಸುಖೋದ್ಯಮಕ್ರೂರಂ ವಿಸ್ಪಷ್ಟಾರ್ಥಂ ಮನೋಹರಂ ।
ಮಂಗಲ್ಯಂ ದೀರ್ಘವರ್ಣಾಂತಮಾಶೀರ್ವಾದಾಭಿಧಾನವತ್ ॥ ೩೩

ಸ್ತ್ರೀಗುಣವು ಮೃದು–ಮನೋಹರ–ಮಂಗಲ–ಶ್ರೇಯಸ್ಸು ರೂಪವಾಗಿರಬೇಕೆಂದು ಗಂಡಸು ಅಪೇಕ್ಷಿಸುವುದರಿಂದ ವರ್ಣದಲ್ಲಿ, ಅರ್ಥದಲ್ಲಿ, ಸುಖೋಚ್ಚಾರ–ಮೃದುವರ್ಣ–ಸ್ಪಷ್ಟಾರ್ಥ–ಸುಂದರ – ಮಂಗಲ – ದೀರ್ಘವರ್ಣ–ಶುಭಾಶಂಸನರೂಪವಾದ ಪದಗಳನ್ನು ಹೆಂಗಸಿಗೆ ನಾಮವಾಗಿ ಮಾಡಬೇಕು.

ಚತುರ್ಥೇ ಮಾಸಿ ಕರ್ತವ್ಯಂ ಶಿಶೋರ್ನಿಷ್ಕ್ರಮಣಂ ಗೃಹಾತ್ ।
ಷಷ್ಠೇಽನ್ನಪ್ರಾಶನಂ ಮಾಸಿ ಯದ್ವೇಷ್ಟಂ ಮಂಗಲಂ ಕುಲೇ ॥ ೩೪

ನಾಲ್ಕನೆ ತಿಂಗಳಲ್ಲಿ ಮಗುವನ್ನು ಸೂರ್ಯದರ್ಶನ ಮಾಡುವಂತೆ ಮನೆಯ ಹೊರಗೆ ಒಯ್ಯುವದನ್ನು (ಉಪನಿಷ್ಕ್ರಮಣವನ್ನು) ಮಾಡಬಹುದು. ಆರನೇ ತಿಂಗಳಲ್ಲಿ ಅನ್ನಪ್ರಾಶನವನ್ನು ಮಾಡಬಹುದು. ಕುಲಾಚಾರವು ಬೇರೆ ಕಾಲದಲ್ಲಾದರೆ ಆಗಲೂ ಆಗಬಹುದು. ಈ ಮಾತು ಹಿಂದೆ ಹೇಳಿದ ಸಂಸ್ಕಾರಗಳಿಗೂ ಉಂಟು.

ಚೂಡಾಕರ್ಮ ದ್ವಿಜಾತೀನಾಂ ಸರ್ವೇಷಾಮೇವ ಧರ್ಮತಃ ।
ಪ್ರಥಮೇಽಬ್ದೇ ತೃತೀಯೇ ವಾ ಕರ್ತವ್ಯಂ ಶ್ರುತಿಚೋದನಾತ್ ॥ ೩೫

ಒಂದನೆ ಅಥವಾ ಮೂರನೆ ವರ್ಷಗಳಲ್ಲಿ ಚೂಡಾಕರಣವನ್ನು ಮಾಡಬಹುದು. (ಶಿಖಾ (ಚೌಲ) ಕರ್ಮ).

ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಂ ।
ಗರ್ಭಾದೇಕಾದಶೇ ರಾಜ್ಞೋ ಗರ್ಭಾತ್ತು ದ್ವಾದಶೇ ವಿಶಃ ॥ ೩೬

ಗರ್ಭವಾಸ ಕಾಲ ಕೂಡ ಎಂಟು ಹನ್ನೊಂದು ಹನ್ನೆರಡನೆ ವರ್ಷದಲ್ಲಿ ತ್ರೈವರ್ಣಕರಿಗೆ ಉಪನಯನ ಕಾಲವು ಬರುವುದು.

ಬ್ರಹ್ಮವರ್ಚಸಕಾಮಸ್ಯ ಕಾರ್ಯಂ ವಿಪ್ರಸ್ಯ ಪಂಚಮೇ ।
ರಾಜ್ಞೋ ಬಲಾರ್ಥಿನಃ ಷಷ್ಠೇ ವೈಶ್ಯಸ್ಯೇಹಾರ್ಥಿನೋಽಷ್ಟಮೇ ॥ ೩೭

ಬ್ರಹ್ಮವರ್ಚಸ್ಸು ಸಾರ್ಥಕವೇದಶಾಸ್ತ್ರಾಧ್ಯಯನದಿಂದ ಬುದ್ಧಿಪ್ರಕಾಶವನ್ನು ಅಪೇಕ್ಷಿಸುವವರು ಐದು–ಆರು–ಎಂಟನೇ ವರ್ಷದಲ್ಲಿ ಬಲು ಬೇಗನೆಯೂ ಉಪನಯನ ಮಾಡಬಹುದು. ಬಲ–ಧನಗಳ ಸಿದ್ಧಿಗೂ ಉಪನಯನವು ಸಹಾಯಕಾರಿಯು. ( ಇದು ಕ್ಷತ್ರಿಯ–ವೈಶ್ಯರ ಮಾತು).

ಆಷೋಡಶಾದ್ಬ್ರಾಹ್ಮಣಸ್ಯ ಸಾವಿತ್ರೀ ನಾತಿವರ್ತತೇ ।
ಆದ್ವಾವಿಂಶಾತ್ ಕ್ಷತ್ರಬಂಧೋರಾಚತುರ್ವಿಂಶತೇರ್ವಿಶಃ ॥ ೩೮

ಹದಿನಾರು–ಇಪ್ಪತ್ತೆರಡು–ನಲುವತ್ತೆರಡು ವರ್ಷಗಳ ಪರ್ಯಂತ ಉಪನಯನ ಕಾಲವು ಮೀರುವುದಿಲ್ಲ.

ಅತ ಊರ್ಧ್ವಂ ತ್ರಯೋಽಪ್ಯೇತೇ ಯಥಾಕಾಲಮಸಂಸ್ಕೃತಾಃ ।
ಸಾವಿತ್ರೀಪತಿತಾ ವ್ರಾತ್ಯಾ ಭವಂತ್ಯಾರ್ಯವಿಗರ್ಹಿತಾಃ ॥ ೩೯

ಹಿಂದೆ ಹೇಳಿದ ಪರಮಾವಧಿಯು ಉಪನಯನ ಕಾಲದೊಳಗೆ ಉಪನಯನ ಮಾಡದೆ ಕಳೆದುಕೊಂಡರೆ ಮಂತ್ರಹೀನರೂ ವ್ರತಶೂನ್ಯರೂ ಆಗುವರು. ಆರ್ಯರು ಇದನ್ನು ಮೆಚ್ಚುವುದಿಲ್ಲ.

ನೈತೈರಪೂತೈರ್ವಿಧಿವದಾಪದ್ಯಪಿ ಹಿ ಕರ್ಹಿಚಿತ್ ।
ಬ್ರಾಹ್ಮಾನ್ ಯೌನಾಂಶ್ಚ ಸಂಬಂಧಾನಾಚರೇದ್ಬ್ರಾಹ್ಮಣಃ ।

ವ್ರತಹೀನರಿಗೆ ಅಧ್ಯಾಪನ–ವಿವಾಹ ಮುಂತಾದ ಸ
ಮಾಡುವುದು ಪ್ರಶಸ್ತವಲ್ಲ.

ಕಾರ್ಷ್ಣರೌರವಬಾಸ್ತಾನಿ ಚರ್ಮಾಣಿ ಬ್ರಹ್ಮಚಾರಿಣಃ ।
ವಸೀರನ್ನಾನುಪೂರ್ವ್ಯೇಣ ಶಾಣಕ್ಷೌಮಾವಿಕಾನಿ ಚ ॥ ೪೧

ಕ್ರಮವಾಗಿ ಕೃಷ್ಣಮೃಗ–ರುರು–ಬಸ್ತಮೃಗ ಚರ್ಮವನ್ನು ಉತ್ತರೀಯವಾಗಿಯೂ, ಶಣ–ಕ್ಷೌಮಾ–ಆವಿಗಳ ನೂಲಿನ ಬಟ್ಟೆಯನ್ನು ಅಧರೀಯವಾಗಿಯೂ ಹೊದಿಕೆ ಉಡಿಗೆ ಮಾಡಬಹುದು. (ನಾರು–ದುಕೂಲ–ಉಣ್ಣೆ).

ಮೌಂಜೀ ತ್ರಿವೃತ್ಸಮಾ ಶ್ಲಕ್ಷ್ಣಾ ಕಾರ್ಯಾ ವಿಪ್ರಸ್ಯ ಮೇಖಲಾ ।
ಕ್ಷತ್ರಿಯಸ್ಯ ತು ಮೌರ್ವೀ ಜ್ಯಾ ವೈಶ್ಯಸ್ಯ ಶಣತಾಂತವೀ ॥ ೪೨

ಕ್ರಮವಾಗಿ ಮುಂಜಿ–ಮೂರ್ವಾ–ಶಣ ತೃಣಗಳ ಎಳೆಯಿಂದ ಮಾಡಿದ ಬಳ್ಳಿಯಿಂದ ಮೇಖಲೆಯನ್ನು ತಯಾರಿಸಬೇಕು. ಅದು ಮೂರು ಮೂರು ಎಳೆಯಿಂದ ನೆಯ್ದಿರಬೇಕು.

ಮುಂಜಾಲಾಭೇ ತು ಕರ್ತವ್ಯಾಃ ಕುಶಾಶ್ಮಂತಕಬಲ್ವಜೈಃ ।
ತ್ರಿವೃತಾ ಗ್ರಂಥಿನೈಕೇನ ತ್ರಿಭಿಃ ಪಂಚಭಿರೇವ ವಾ ॥ ೪೩

ಹಿಂದೆ ಹೇಳಿದ ಮೇಖಲಾವಸ್ತುಗಳು ದೊರೆಯದಿದ್ದರೆ ಕುಶ–ಅಶ್ಮಂತಕ–ಬಲ್ಬಜಗಳ ಎಳೆಗಳಿಂದಲೂ ಮೇಖಲೆಯನ್ನು ಸಂಪಾದಿಸಬಹುದು. ಒಂದು, ಮೂರು, ಐದು ಗಂಟು ಬಿಗಿಯಬಹುದು—ಐಚ್ಛಿಕ.

ಕಾರ್ಪಾಸಮುಪವೀತಂ ಸ್ಯಾದ್ವಿಪ್ರಸ್ಯೋರ್ಧ್ವವೃತಂ ತ್ರಿವೃತ್ ।
ಶಣಸೂತ್ರಮಯಂ ರಾಜ್ಞೋ ವೈಶ್ಯಸ್ಯಾವಿಕಸೌತ್ರಿಕಂ ॥ ೪೪

ಹತ್ತಿ (ಗೋಣಿ) ಸಣಬು–ಕುರಿರೋಮಗಳಿಂದ ಮಾಡಿದ ನೂಲಿನ ಮೂರೆಳೆಯ ಉಪವೀತವನ್ನು ರಚಿಸಬೇಕು.

ಬ್ರಾಹ್ಮಣೋ ಬೈಲ್ವಪಾಲಾಶೌ ಕ್ಷತ್ರಿಯೋ ವಾಟಖಾದಿರೌ ।
ಪೈಲವೌದುಂಬರೌ ವೈಶ್ಯೋ ದಂಡಾನರ್ಹಂತಿ ಧರ್ಮತಃ ॥ ೪೫

ಬ್ರಾಹ್ಮಣನು ಬಿಲ್ವ ಮುತ್ತಲದ್ದಾಗಲಿ, ಕ್ಷತ್ರಿಯನು ಆಲ–ಖಾದಿರದ್ದಾಗಲಿ, ವೈಶ್ಯನು ಪೀಲು–ಔದುಂಬರದ್ದಾಗಲಿ ದಂಡವನ್ನು ಧರಿಸಬೇಕು.

ಕೇಶಾಂತಿಕೋ ಬ್ರಾಹ್ಮಣಸ್ಯ ದಂಡಃ ಕಾರ್ಯಃ ಪ್ರಮಾಣತಃ ।
ಲಲಾಟಸಮ್ಮಿತೋ ರಾಜ್ಞಃ ಸ್ಯಾತ್ತು ನಾಸಾಂತಿಕೋ ವಿಶಃ ॥ ೪೬

ಕೂದಲು–ಹಣೆ–ಮೂಗಿನ ವರೆಗೆ ಎತ್ತರದ ದಂಡವನ್ನು ಮೂವರಿಗೆ ಸಂಪಾದಿಸಬೇಕು.

ಋಜವಸ್ತೇ ತು ಸರ್ವೇ ಸ್ಯುರವ್ರಣಾಃ ಸೌಮ್ಯದರ್ಶನಾಃ ।
ಅನುದ್ವೇಗಕರಾ ನೃಣಾಂ ಸತ್ವಚೋಽನಗ್ನಿದೂಷಿತಾಃ ॥ ೪೭

ಆ ದಂಡಗಳು ನೆಟ್ಟಗೆ ಇರಬೇಕು. ತೂತು ಇರಬಾರದು. ಅದರ ಚೋಲಿ ತೆಗೆದಿರಬಾರದು. ಬೆಂಕಿಯಿಂದ ಸುಟ್ಟಿರಬಾರದು. ಚಂದ ಇರಬೇಕು.

ಪ್ರತಿಗೃಹ್ಯೇಪ್ಸಿತಂ ದಂಡಮುಪಸ್ಥಾಯ ಚ ಭಾಸ್ಕರಂ ।
ಪ್ರದಕ್ಷಿಣಂ ಪರೀತ್ಯಾಗ್ನಿಂ ಚರೇದ್ಭೈಕ್ಷಂ ಯಥಾವಿಧಿ ॥ ೪೮

ಅವರವರ ದಂಡಧಾರಿಗಳಾಗಿ ಉಪನೀತ ವಟುಗಳು ಸೂರ್ಯೋಪಸ್ಥಾನ–ಅಗ್ನಿಪ್ರದಕ್ಷಿಣೆ–ಭಿಕ್ಷಾಟನಗಳನ್ನು ಮಾಡಬೇಕು.

ಭವತ್ಪೂರ್ವಂ ಚರೇದ್ಭೈಕ್ಷಮುಪನೀತೋ ದ್ವಿಜೋತ್ತಮಃ ।
ಭವನ್ಮಧ್ಯಂ ತು ರಾಜನ್ಯೋ ವೈಶ್ಯಸ್ತು ಭವದುತ್ತರಂ ॥ ೪೯

ಭವತ್ ಶಬ್ದವನ್ನು ಆದಿ ಮಧ್ಯ ಅಂತ್ಯಗಳಲ್ಲಿ ಬೀಳುವಂತೆ ವಾಕ್ಯದಲ್ಲಿ ಉಪಯೋಗಿಸಿ ಭಿಕ್ಷಾವಾಕ್ಯವನ್ನು ರಚಿಸಬೇಕು. ಭವತಿ! ಭಿಕ್ಷಾಂ ದೇಹಿ—ಭಿಕ್ಷಾಂ ಭವತಿದೇಹಿ—ಭಿಕ್ಷಾಂದೇಹಿ ಭವತಿ ಎಂದು ವಾಕ್ಯವು.

ಮಾತರಂ ವಾ ಸ್ವಸಾರಂ ವಾ ಮಾತುರ್ವಾ ಭಗಿನೀಂ ನಿಜಾಂ ।
ಭಿಕ್ಷೇತ ಭಿಕ್ಷಾಂ ಪ್ರಥಮಂ ಯಾ ಚೈನಂ ನಾವಮಾನಯೇತ್ ॥ ೫೦

ತನ್ನ ತಾಯಿಯನ್ನು, ತಾಯಿಯ ಸೋದರಿಯನ್ನು, ತನ್ನ ಸೋದರಿಯನ್ನು ಕೇಳಿ ಮೊದಲು ಭಿಕ್ಷೆ ಎತ್ತಬೇಕು. ಅವರು ಅವನನ್ನು ತಿರಸ್ಕರಿಸಬಾರದು.

ಸಮಾಹೃತ್ಯ ತು ತದ್ಭೈಕ್ಷಂ ಯಾವದನ್ನಮಮಾಯಯಾ ।
ನಿವೇದ್ಯ ಗುರವೇಽಶ್ನೀಯಾದಾಚಮ್ಯ ಪ್ರಾಙ್ಮುಖಃ ಶುಚಿಃ ॥ ೫೧

ಎತ್ತಿದ ಎಲ್ಲ ಭಿಕ್ಷೆಯನ್ನು ಕಪಟವಿಲ್ಲದೆ ಗುರುವಿಗೆ ಒಪ್ಪಿಸಿ ತಾನು ಪಡೆದು, ಶುಚಿಯಾಗಿ ಆಚಮನ ಮಾಡಿ ಪ್ರಾಙ್ಮುಖನಾಗಿ ಉಣ್ಣಬೇಕು.

ಆಯುಷ್ಯಂ ಪ್ರಾಙ್ಮುಖೋ ಭುಂಕ್ತೇ ಯಶಸ್ಯಂ ದಕ್ಷಿಣಾಮುಖಃ ।
ಶ್ರಿಯಂ ಪ್ರತ್ಯಙ್ಮುಖೋ ಭುಂಕ್ತೇ ಋತಂ ಭುಂಕ್ತೇ ಹ್ಯುದಙ್ಮುಖಃ ॥ ೫೨

ಮೂಡುದಿಕ್ಕಿಗೆ ಎದುರಾಗಿ ಕುಳಿತು ಆಯುಷ್ಯಾಭಿಲಾಷಿಯು ಉಣ್ಣ

ತ್ತಾನೆ. ತೆಂಕಮುಖವಾಗಿ ಕೀರ್ತಿಯನ್ನು, ಪಡುಮುಖವಾಗಿ ಐಶ್ವರ್ಯ ವನ್ನು, ಬಡಗುಮುಖವಾಗಿ ಸತ್ಯವನ್ನು ಅಪೇಕ್ಷಿಸಿ ಉಣ್ಣುತ್ತಾರೆ.

ಉಪಸ್ಪೃಶ್ಯ ದ್ವಿಜೋ ನಿತ್ಯಮನ್ನಮದ್ಯಾತ್ಸಮಾಹಿತಃ ।
ಭುಕ್ತ್ವಾ ಚೋಪಸ್ಪೃಶೇತ್ಸಮ್ಯಗದ್ಭಿಃ ಖಾನಿ ಚ ಸಂಸ್ಪೃಶೇತ್ ॥ ೫೩

ಸದಾ ಊಟದ ಮೊದಲು ಮತ್ತೆ ಆಚಮನ ಮಾಡಿ ಇಂದ್ರಿಯಗಳಿಗೆ ಜಲಸ್ಪರ್ಶ ಮಾಡಿಸಬೇಕು. (ಹಿಂದೆ ಹೇಳಿದಂತೆ)

ಪೂಜಯೇದಶನಂ ನಿತ್ಯಮದ್ಯಾಚ್ಚೈತದಕುತ್ಸಯನ್ ।
ದೃಷ್ಟ್ವಾ ಹೃಷ್ಯೇತ್ಪ್ರಸೀದೇಚ್ಚ ಪ್ರತಿನಂದೇಚ್ಚ ಸರ್ವಶಃ ॥ ೫೪

ಸದಾ ಅನ್ನವನ್ನು ಕಂಡು ಸಂತೋಷಪಡಬೇಕು. ಸರ್ವದಾ ನನಗೆ ಅನ್ನವು ದೊರೆಯುತ್ತಿರಲಿ ಎಂದು ಚಿಂತಿಸಬೇಕು. ಪ್ರಾಣರಕ್ಷಣೆಗಾಗಿ ಗೌರವಿಸಬೇಕು. ನಿಂದಿಸಬಾರದು.

ಪೂಜಿತಂ ಹ್ಯಶನಂ ನಿತ್ಯಂ ಬಲಮೂರ್ಜಂ ಚ ಯಚ್ಛತಿ ।
ಅಪೂಜಿತಂ ತು ತದ್ಭುಕ್ತಮುಭಯಂ ನಾಶಯೇದಿದಂ ॥ ೫೫

ಪೂಜಿತಾನ್ನ ಭೋಜನದಿಂದ ಬಲ–ಊರ್ಜಗಳು ಲಭಿಸುವವು. ಅನ್ನದ ನಿಂದೆಯಿಂದ ಅವೆರಡೂ ದೊರೆಯಲಾರವು.

ನೋಚ್ಛಿಷ್ಟಂ ಕಸ್ಯಚಿದ್ದದ್ಯಾನ್ನಾದ್ಯಾಚ್ಚೈವ ತಥಾಂತರಾ ।
ನಚೈವಾತ್ಯಶನಂ ಕುರ್ಯಾನ್ನ ಚೋಚ್ಛಿಷ್ಟಃ ಕ್ವಚಿದ್ವ್ರಜೇತ್ ॥ ೫೬

ಎಂಜಲನ್ನು ಯಾರಿಗೂ ಕೊಡಬಾರದು. ಆಗಾಗ ಉಣ್ಣಬಾರದು. ಅಧಿಕವಾಗಿ ಉಣ್ಣಬಾರದು. ಎಂಜಲು ತೊಳೆಯದೆ ಸಂಚರಿಸಬಾರದು.

ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಂ ।
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ॥ ೫೭

ಹಸಿವಡಗುವುದಕ್ಕಿಂತ ಅಧಿಕ ಆಹಾರ ಸೇವನೆಯಿಂದ ಆರೋಗ್ಯ-ಆಯುಷ್ಯ-ಪುಣ್ಯ-ಸ್ವರ್ಗ ಒಂದೂ ದೊರೆಯುವುದಿಲ್ಲ. ಅಲ್ಲದೆ ಅದು ಜನನಿಂದಾಪಾತ್ರವಾಗಿದೆ. ಆದುದರಿಂದ ಅಧಿಕಾಹಾರ ಬಿಡಬೇಕು.

ಬ್ರಾಹ್ಮೇಣ ವಿಪ್ರಸ್ತೀರ್ಥೇನ ನಿತ್ಯಕಾಲಮುಪಸ್ಪೃಶೇತ್ ।
ಕಾಯತ್ರೈದಶಿಕಾಭ್ಯಾಂ ವಾ ನ ಪಿತ್ರ್ಯೇಣ ಕದಾಚನ ॥ ೫೮

ಬ್ರಾಹ್ಮ ಎಂಬ ಕ್ರಮದಲ್ಲಿ ಆಚಮನ ಮಾಡಬೇಕು. (ಕಾಯ-ದೈವಗಳಿಂದಲೂ ಆಗಬಹುದು.) ಪಿತ್ರ್ಯದಿಂದ ಮಾಡಲೇ ಬಾರದು.

ಅಂಗುಷ್ಠಮೂಲಸ್ಯ ತಲೇ ಬ್ರಾಹ್ಮಂ ತೀರ್ಥಂ ಪ್ರಚಕ್ಷತೇ ।
ಕಾಯಮಂಗುಲಿಮೂಲೇಽಗ್ರೇ ದೈವಂ ಪಿತ್ರ್ಯಂ ತಯೋರಧಃ ॥ ೫೯

ಅಂಗುಷ್ಠಮೂಲ ಪಾಣಿ ಭಾಗದಲ್ಲಿ ಬ್ರಾಹ್ಮವು. ಅಂಗುಲಿಮೂಲವು ಪ್ರಾಜಾಪತ್ಯವು. ಅಂಗುಲ್ಯಗ್ರವು ದೈವವು. ವಿರುದ್ಧವಾದದ್ದು ಪಿತ್ರ್ಯವು– ಅಂಗುಲ್ಯಂಗುಷ್ಠಗಳ ಮಧ್ಯದಲ್ಲಿ.

ತ್ರಿರಾಚಾಮೇದಪಃ ಪೂರ್ವಂ ದ್ವಿಃ ಪ್ರಮೃಜ್ಯಾತ್ತತೋ ಮುಖಂ ।
ಖಾನಿ ಚೈವ ಸ್ಪೃಶೇದದ್ಭಿರಾತ್ಮಾನಂ ಶಿರ ಏವ ಚ ॥ ೬೦

ಮೊದಲು ಮೂರು ಬಾರಿ ನೀರು ಕುಡಿಯಬೇಕು. ಎರಡು ಬಾರಿ ಮುಖವನ್ನು ಒರಸಬೇಕು. ನೀರಿನೊಡನೆ ಇಂದ್ರಿಯಗಳನ್ನು ಮುಟ್ಟಬೇಕು. ಹೃದಯವನ್ನೂ ತಲೆಯನ್ನೂ ಮುಟ್ಟಬೇಕು.

ಅನುಷ್ಣಾಭಿರಫೇನಾಭಿರದ್ಭಿಸ್ತೀರ್ಥೇನ ಧರ್ಮವಿತ್ ।
ಶೌಚೇಪ್ಸುಃ ಸರ್ವದಾಚಾಮೇದೇಕಾಂತೇ ಪ್ರಾಗುದಙ್ಮುಖಃ ॥ ೬೧

ಆಚಮನದ ನೀರು ಬಿಸಿ-ನೊರೆ ಉಳ್ಳದ್ದಾಗಿರಬಾರದು. ಮುಖವು ಬಡಗು ವಾ ಮೂಡುಗಡೆ ಇರಬೇಕು. ವಿಜನ ಪ್ರದೇಶದಲ್ಲಿ ಕುಳಿತಿರಬೇಕು. ಹೀಗೆ ಬ್ರಾಹ್ಮತೀರ್ಥದಿಂದ ಶೌಚಕ್ಕಾಗಿ ಆಚಮನ ಮಾಡಬೇಕು.

ಹೃದ್ಗಾಭಿಃ ಪೂಯತೇ ವಿಪ್ರಃ ಕಂಠಗಾಭಿಸ್ತು ಭೂಮಿಪಃ ।
ವೈಶ್ಯೋಽದ್ಭಿಃ ಪ್ರಾಶಿತಾಭಿಸ್ತು ಶೂದ್ರಃ ಸ್ಪೃಷ್ಟಾಭಿರಂತತಃ ॥ ೬೨

ವಿಪ್ರನು ಹೃದಯಪರ್ಯಂತ ವ್ಯಾಪಿಸುವಷ್ಟು, ಭೂಮಿಪನು (ಅರಸು) ಕಂಠವನ್ನು ವ್ಯಾಪಿಸುವಷ್ಟು, ವೈಶ್ಯನು ಬಾಯೊಳಗೆ ತಲುಪುವಷ್ಟು, (ಇತರರು ಕೈ ನೆನೆಯುವಷ್ಟು) ನೀರು ಆಚಮಿಸಬೇಕು. ಇತರರು ನೀರನ್ನು ಸ್ಪರ್ಶಿಸಿದರೆ ಸಾಕು.

ಉದ್ಧೃತೇ ದಕ್ಷಿಣೇ ಪಾಣಾವುಪವೀತ್ಯುಚ್ಯತೇ ದ್ವಿಜಃ ।
ಸವ್ಯೇ ಪ್ರಾಚೀನಆವೀತೀ ನಿವೀತೀ ಕಂಠಸಜ್ಜನೇ ॥ ೬೩

ಬಲಗೈಯ ಕೆಳಗೆ–ಎಡತೋಳಿನ ಮೇಲೆ ಯಜ್ಞೋಪವೀತವಿದ್ದರೆ

ದ್ವಿಜನು ಉಪವೀತಿಯು. ಎಡಗೈಯು ಕೆಳಗೆ ಬಲತೋಳಿನ ಮೇಲೆ ಇದ್ದರೆ ಅವನು ಪ್ರಾಚೀನಾವೀತಿ. ಕೊರಳಲ್ಲಿ ನೇಲಬಿಟ್ಟರೆ ನಿವೀತಿಯು.

ಮೇಖಲಾಮಜಿನಂ ದಂಡಮುಪವೀತಂ ಕಮಂಡಲುಂ ।
ಅಪ್ಸು ಪ್ರಾಸ್ಯ ವಿನಷ್ಟಾನಿ ಗೃಹ್ಣೀತಾನ್ಯಾನಿ ಮಂತ್ರವತ್ ॥ ೬೪

ಹಾಳಾದ ಮೇಖಲಾದಿ ಸಾಮಗ್ರಿಯನ್ನು ನೀರಿನಲ್ಲಿ ಎಸೆದು ಮಂತ್ರ ಪೂರ್ವಕ ಹೊಸದನ್ನು ಸ್ವೀಕರಿಸಬೇಕು.

ಕೇಶಾಂತಃ ಷೋಡಶೇ ವರ್ಷೇ ಬ್ರಾಹ್ಮಣಸ್ಯ ವಿಧೀಯತೇ ।
ರಾಜನ್ಯಬಂಧೋರ್ದ್ವಾವಿಂಶೇ ವೈಶ್ಯಸ್ಯ ದ್ವ್ಯಧಿಕೇ ತತಃ ॥ ೬೫

ಕೇಶಾಂತ ಸಂಸ್ಕಾರವನ್ನು ಬ್ರಾಹ್ಮಣನಿಗೆ ಹದಿನಾರರಲ್ಲಿ, ರಾಜನ್ಯ ವೈಶ್ಯರಿಗೆ ಇಪ್ಪತ್ತೆರಡು–ಇಪ್ಪತ್ತನಾಲ್ಕು ವರ್ಷಗಳಲ್ಲಿ ಮಾಡಬೇಕು.

ಅಮಂತ್ರಿಕಾಂ ತು ಕಾರ್ಯೇಯಂ ಸ್ತ್ರೀಣಾಮಾವೃದಶೇಷತಃ ।
ಸಂಸ್ಕಾರಾರ್ಥಂ ಶರೀರಸ್ಯ ಯಥಾಕಾಲಂ ಯಥಾಕ್ರಮಂ ॥ ೬೬

ಜಾತಕರ್ಮಾದಿ ಸಂಸ್ಕಾರಗಳನ್ನು ಸ್ತ್ರೀಯರಿಗೆ ಅಮಂತ್ರಕವಾಗಿ ಮಾಡಿ ಶರೀರವನ್ನು ಸಂಸ್ಕರಿಸಬೇಕು.

ವೈವಾಹಿಕೋ ವಿಧಿಃ ಸ್ತ್ರೀಣಾಂ ಸಂಸ್ಕಾರೋ ವೈದಿಕಃ ಸ್ಮೃತಃ ।
ಪತಿಸೇವಾ ಗುರೌ ವಾಸೋ ಗೃಹಾರ್ಥೋಽಗ್ನಿ ಪರಿಕ್ರಿಯಾ ॥ ೬೭

ಸ್ತ್ರೀಯರಿಗೆ ವಿವಾಹವು ಮಂತ್ರಸಹಿತವು. ಅದು ವೈದಿಕ ಸಂಸ್ಕಾರವು. ಪುರುಷನಿಗೆ ಉಪನಯನದ ಬಳಿಕ ಗುರುಕುಲವಾಸದಂತೆ ಸ್ತ್ರೀಗೆ ಪತಿ ಕುಲವಾಸವು. ಗೃಹಕೃತ್ಯವೇ ಅಗ್ನಿಕಾರ್ಯವು. ಬೇರೆಯಿಲ್ಲ.

ಏಷ ಪ್ರೋಕ್ತೋ ದ್ವಿಜಾತೀನಾಮೌಪನಾಯನಿಕೋ ವಿಧಿಃ ।
ಉತ್ಪತ್ತಿವ್ಯಂಜಕಃ ಪುಣ್ಯಃ ಕರ್ಮಯೋಗಂ ನಿಬೋಧತ ॥ ೬೮

ಈವರೆಗೆ ದ್ವಿಜಾತಿಗಳ ದ್ವಿತೀಯ ಜನ್ಮವಾದ ಉಪನಯನ ಸಂಸ್ಕಾರವು ನಿರೂಪಿಸಲ್ಪಟ್ಟಿತು. ಗುರುಕುಲ ಕರ್ತವ್ಯವು ಇನ್ನು ಬರುವುದು.

ಉಪನೀಯ ಗುರುಃ ಶಿಷ್ಯಂ ಶಿಕ್ಷಯೇಚ್ಛೌಚಮಾದಿತಃ ।
ಆಚಾರಮಗ್ನಿಕಾರ್ಯಂ ಚ ಸಂಧ್ಯೋಪಾಸನಮೇವ ಚ ॥ ೬೯

ಗುರುವು ಶಿಷ್ಯನಿಗೆ ಉಪನಯನ ಮಾಡಿ ಮೊದಲು ಶೌಚವನ್ನು

(ಶುದ್ಧಿಯನ್ನು) ಕಲಿಸಬೇಕು. ಬಳಿಕ ಸ್ನಾನಾಚಮನಾದಿಗಳನ್ನು, ಅಗ್ನಿಕಾರ್ಯವನ್ನು, ಸಂಧ್ಯೋಪಾಸನೆಯನ್ನು ತಿಳಿಸಬೇಕು.

ಅಧ್ಯೇಷ್ಯಮಾಣಸ್ತ್ವಾಚಾಂತೋ ಯಥಾಶಾಸ್ತ್ರಮುದಙ್ಮುಖಃ ।
ಬ್ರಹ್ಮಾಂಜಲಿಕೃತೋಽಧ್ಯಾಪ್ಯೋ ಲಘುವಾಸಾ ಜಿತೇಂದ್ರಿಯಃ ॥ ೭೦

ಅಧ್ಯಯನಾರಂಭದಲ್ಲಿ ಆಚಮನ ಮಾಡಿ ಬಡಗುಮುಖವಾಗಿ ಕುಳಿತು ಬದ್ಧಾಂಜಲಿಯಾಗಿ ತದಾಯತ್ತ ಚಿತ್ತನಾಗಿರಬೇಕು. ಮಿತವಾದ ಉಡಿಗೆಯಿರಬೇಕು. ಅಂತಹ ರೀತಿಯ ಶಿಷ್ಯನಿಗೆ ಗುರು ಕಲಿಸಬೇಕು.

ಬ್ರಹ್ಮಾರಂಭೇಽವಸಾನೇ ಚ ಪಾದೌ ಗ್ರಾಹ್ಯೌ ಗುರೋಃ ಸದಾ ।
ಸಂಹತ್ಯ ಹಸ್ತಾವಧ್ಯೇಯಂ ಸ ಹಿ ಬ್ರಹ್ಮಾಂಜಲಿಃ ಸ್ಮೃತಃ ॥ ೭೧

ವೇದಾಧ್ಯಯನಾರಂಭದಲ್ಲಿ ಮತ್ತು ಅವಸಾನದಲ್ಲಿ ಗುರುವಿನ ಪಾದಗ್ರಹಣ ಮಾಡಬೇಕು. ಕೈ ಜೋಡಿಸಿಕೊಂಡು ಅಧ್ಯಯನ ಮಾಡಬೇಕು. ಅದು ಬ್ರಹ್ಮಾಂಜಲಿಯೆಂದು ಕರೆಯಲ್ಪಡುವುದು.

ವ್ಯತ್ಯಸ್ತಪಾಣಿನಾ ಕಾರ್ಯಮುಪಸಂಗ್ರಹಣಂ ಗುರೋಃ ।
ಸವ್ಯೇನ ಸವ್ಯಃ ಸ್ಪ್ರಷ್ಟವ್ಯೋ ದಕ್ಷಿಣೇನ ಚ ದಕ್ಷಿಣಃ ॥ ೭೨

ಗುರುವಿನ ಪಾದಗ್ರಹಣವನ್ನು ಅಭಿಮುಖವಾಗಿದ್ದು ಮಾಡುವಾಗ ತನ್ನ ಕೈಗಳನ್ನು ಬದಲಿಸಿ ಗುರುವಿನ ಬಲಗಾಲನ್ನು ತನ್ನ ಬಲಗೈಯಿಂದಲೂ, ಎಡಗಾಲನ್ನು ಎಡಗೈಯಿಂದಲೂ ಮಾಡಬೇಕು. ಪಾಣಿ ವ್ಯತ್ಯಾಸದಲ್ಲಿ ಬಲಗೈ ಮೇಲಿರಬೇಕು.

ಅಧ್ಯೇಷ್ಯಮಾಣಂ ತು ಗುರುರ್ನಿತ್ಯಕಾಲಮತಂದ್ರಿತಃ ।
ಅಧೀಷ್ವ ಭೋ ಇತಿ ಬ್ರೂಯಾತ್ ವಿರಾಮೋಽಸ್ತ್ವಿತಿ ಚಾರಮೇತ್ ॥ ೭೩

ಅಧ್ಯಯನಾರಂಭದಲ್ಲಿ ಗುರು ಸರ್ವದಾ ತಪ್ಪದೆ ಶಿಷ್ಯನನ್ನು— ಅಧೀಷ್ವ ಭೋಃ ಎನ್ನಬೇಕು. ವಿರಾಮದಲ್ಲಿ ವಿರಾಮೋಸ್ತು ಎಂದು ಹೇಳಿ ಅಧ್ಯಯನದಿಂದ ವಿರಮಿಸಬೇಕು.

ಬ್ರಹ್ಮಣಃ ಪ್ರಣವಂ ಕುರ್ಯಾತ್ ಆದಾವಂತೇ ಚ ಸರ್ವದಾ ।
ಸ್ರವತ್ಯನೋಂಕೃತಂ ಪೂರ್ವಂ ಪುರಸ್ತಾಚ್ಚ ವಿಶೀರ್ಯತಿ ॥ ೭೪

ವೇದಾಧ್ಯಯನಾರಂಭದಲ್ಲಿಯೂ ಅವಸಾನದಲ್ಲಿಯೂ ಪ್ರಣವವನ್ನು ಉಚ್ಚರಿಸಬೇಕು. ಇಲ್ಲವಾದರೆ ಅಧ್ಯಯನವು ಸ್ಥಿರವಾಗುವುದಿಲ್ಲ.

ಪ್ರಾಕ್ಕೂಲಾನ್ ಪರ್ಯುಪಾಸೀನಃ ಪವಿತ್ರೈಶ್ಚೈವ ಪಾವಿತಃ |
ಪ್ರಾಣಾಯಾಮೈಸ್ತ್ರಿಭಿಃ ಪೂತಸ್ತತ ಓಂಕಾರಮರ್ಹತಿ || ೭೫

ಪ್ರಣವೋಚ್ಚಾರಕ್ಕಿಂತ ಮೊದಲು ಪ್ರಾಗಗ್ರವಾಗಿ ಹಾಸಿದ ಕುಶಾಸನದಲ್ಲಿ ಕುಳಿತು ಪವಿತ್ರಪಾಣಿಯಾಗಿ ಪ್ರಾಣಾಯಾಮ ಮೂರನ್ನು ಮಾಡಿರಬೇಕು. ೧೫ ಮಾತ್ರೆಗಳಿಂದ ಪ್ರಾಣಾಯಾಮವಾಗುವದು.

ಅಕಾರಂ ಚಾಪ್ಯುಕಾರಂ ಚ ಮಕಾರಂ ಚ ಪ್ರಜಾಪತಿಃ |
ವೇದತ್ರಯಾನ್ನಿರದುಹತ್ ಭೂರ್ಭುವಃಸ್ವರಿತೀತಿ ಚ || ೭೬

ಪ್ರಜಾಪತಿಯು ಅ + ಉ + ಮ್ ಕಾರಗಳನ್ನು ಮೂರು ವೇದಗಳಿಂದ ಸಂಪಾದಿಸಿದನು. 'ಭೂಃ–ಭುವಃ–ಸ್ವಃ' ಗಳೂ ಹಾಗೇ.

ತ್ರಿಭ್ಯ ಏವ ತು ವೇದೇಭ್ಯಃ ಪಾದಂ ಪಾದಮದೂದುಹತ್ |
ತದಿತ್ಯೃಚೋಽಸ್ಯಾಃ ಸಾವಿತ್ರ್ಯಾಃ ಪರಮೇಷ್ಠೀ ಪ್ರಜಾಪತಿಃ || ೭೭

ತದಿತ್ಯಾದಿ ಮಂತ್ರದಿಂದ ಗಾಯತ್ರಿಯ ಮೂರು ಪಾದಗಳನ್ನು ಮೂರು ವೇದಗಳಿಂದ ತೆಗೆದು ಪರಮೇಷ್ಠಿಯು (ಬ್ರಹ್ಮನು) ಪೂರ್ಣಗೊಳಿಸಿದನು.

ಏತದಕ್ಷರಮೇತಾಂ ಚ ಜಪನ್ ವ್ಯಾಹೃತಿಪೂರ್ವಿಕಾಂ |
ಸಂಧ್ಯಯೋರ್ವೇದವಿದ್ವಿಪ್ರೋ ವೇದಪುಣ್ಯೇನ ಯುಜ್ಯತೇ || ೭೮

ಪ್ರಣವವನ್ನು, ಮೂರು ವ್ಯಾಹೃತಿಯನ್ನು, ಸಾವಿತ್ರಿಯನ್ನು ಸಂಧ್ಯಾಕಾಲದಲ್ಲಿ ಜಪಿಸಬೇಕು. ಇದರಿಂದ ಮೂರು ವೇದಾಧ್ಯಯನ ಪುಣ್ಯವು ಲಭಿಸುವುದು.

ಸಹಸ್ರಕೃತ್ವಸ್ತ್ವಭ್ಯಸ್ಯ ಬಹಿರೇತತ್ತ್ರಿಕಂ ದ್ವಿಜಃ |
ಮಹತೋಽಪ್ಯೇನಸೋ ಮಾಸಾತ್ತ್ವಚೇವಾಹಿರ್ವಿಮುಚ್ಯತೇ || ೭೯

ಈ ಮೂರನ್ನು (ಪ್ರಣವ, ವ್ಯಾಹೃತಿ, ಸಾವಿತ್ರಿ) ಊರಹೊರಗೆ ಸಾವಿರ ಸಲ ಜಪಿಸಬೇಕು. ಆಗ ಹಾವು ಪೊರೆ (ಪರೆ) ಬಿಟ್ಟಂತೆ ಪಾಪವು ಬಿಡುಗಡೆ ಹೊಂದುವುದು.

ಏತಯರ್ಚಾ ವಿಸಂಯುಕ್ತಃ ಕಾಲೇ ಚ ಕ್ರಿಯಯಾ ಸ್ವಯಾ
ಬ್ರಹ್ಮಕ್ಷತ್ರಿಯವಿಡ್ಯೋನಿರ್ಗರ್ಹಣಾಂ ಯಾತಿ ಸಾಧುಷು || ೮೦

ಈ ಮಂತ್ರ-ಜಪ ಮತ್ತು ಅಗ್ನಿಕಾರ್ಯ (ಹೋಮ) ಈ ಎರಡರಿಂದ ಹೀನನಾದ ತ್ರೈವರ್ಣಿಕನು ನಿಂದ್ಯನಾಗುವನು.

ಓಂಕಾರಪೂರ್ವಿಕಾಸ್ತಿಸ್ರೋ ಮಹಾವ್ಯಾಹೃತಯೋಽವ್ಯಯಾಃ ।
ತ್ರಿಪದಾ ಚೈವ ಸಾವಿತ್ರೀ ವಿಜ್ಞೇಯಂ ಬ್ರಹ್ಮಣೋ ಮುಖಂ ॥ ೮೧

ಈ ಹಿಂದೆ ವಿವರಿಸಿದ ಮಂತ್ರವು ಬ್ರಹ್ಮನ ಮುಖವಾಗಿದೆ—ಪರಮಾತ್ಮನನ್ನು ಹೊಂದುವ ದ್ವಾರವಾಗಿದೆ.

ಯೋಽಧೀತೇಽಹನ್ಯಹನ್ಯೇತಾಂಸ್ತ್ರೀಣಿ ವರ್ಷಾಣ್ಯತಂದ್ರಿತಃ ।
ಸ ಬ್ರಹ್ಮ ಪರಮಭ್ಯೇತಿ ವಾಯುಭೂತಃ ಖಮೂರ್ತಿಮಾನ್ ॥ ೮೨

ಮೂರು ವರ್ಷ ತಪ್ಪದೆ ಪ್ರತಿದಿನ ಈ ಮಂತ್ರವನ್ನು ಜಪಿಸಿದರೆ ಪರಬ್ರಹ್ಮನನ್ನು ಪಡೆಯುತ್ತಾನೆ. ವಾಯುವು ಸ್ವೇಚ್ಛಾಚಾರಿಯು. ಶರೀರವಿಲ್ಲ. ಹಾಗೆ ಶರೀರಸಂಬಂಧ ಕಡಿದು ಕಾಮಚಾರಿಯಾಗುವನು.

ಏಕಾಕ್ಷರಂ ಪರಂ ಬ್ರಹ್ಮ ಪ್ರಾಣಾಯಾಮಾಃ ಪರಂ ತಪಃ ।
ಸಾವಿತ್ರ್ಯಾಸ್ತು ಪರಂ ನಾಸ್ತಿ ಮೌನಾತ್ಸತ್ಯಂ ವಿಶಿಷ್ಯತೇ ॥ ೮೩

ಪ್ರಣವವು ಜಪ-ಅರ್ಥ ಮನನಗಳಿಂದ ಬ್ರಹ್ಮಪ್ರಾಪಕವಾಗುವುದು. ಆದುದರಿಂದ ಅದು ಪರಬ್ರಹ್ಮವೇ. ಪ್ರಾಣಾಯಾಮವು ಮಹಾತಪಸ್ಸು. ಅದರಲ್ಲಿ ಪ್ರಣವ-ವ್ಯಾಹೃತಿ-ಗಾಯತ್ರೀ-ಶಿರಸ್ಸುಗಳು ಅಂತರ್ಗತವಾಗುವುದರಿಂದ ಅದು ಉತ್ತಮ ತಪಸ್ಸುಗಳ ಫಲದಾಯಕವು. ಸಾವಿತ್ರೀಗಿಂತ ಮಹಾಮಂತ್ರವಿಲ್ಲ. ಆದುದರಿಂದ ಈ ನಾಲ್ಕು ಉಪಾಸನೆಯು ಮುಖ್ಯವು. ಮೌನಕ್ಕಿಂತ ಸತ್ಯವಚನವು ಮಹಾಫಲವು. ಇದು ಕೂಡಿ ನಾಲ್ಕು ಆಗುತ್ತದೆ.

ಕ್ಷರಂತಿ ಸರ್ವಾ ವೈದಿಕ್ಯೋ ಜುಹೋತಿಯಜತಿಕ್ರಿಯಾಃ ।
ಅಕ್ಷರಂ ದುಷ್ಕರಂ ಜ್ಞೇಯಂ ಬ್ರಹ್ಮ ಚೈವ ಪ್ರಜಾಪತಿಃ ॥ ೮೪

ಹೋಮ-ಯಾಗಗಳು ವಿನಾಶಿಗಳು. ಪ್ರಣವವು ಹಿಂದೆ ಹೇಳಿದಂತೆ ಬ್ರಹ್ಮಪ್ರಾಪ್ತಿಹೇತುವಾದ್ದರಿಂದ ಅವಿನಾಶಿಯು. ಬ್ರಹ್ಮವು ಅವಿನಾಶಿಯು. ತತ್ಫಲಕ ಪ್ರಣವವು ಅವಿನಾಶಿಯು. ಪ್ರಜಾಪತಿ–ಪ್ರಣವ ಇವು ಅಭಿನ್ನವಾದವುಗಳು.

ವಿಧಿಯಜ್ಞಾಜ್ಜಪಯಜ್ಞೋ ವಿಶಿಷ್ಟೋ ದಶಭಿರ್ಗುಣೈಃ ।
ಉಪಾಂಶುಃ ಸ್ಯಾಚ್ಛತಗುಣಃ ಸಾಹಸ್ರೋ ಮಾನಸಃ ಸ್ಮೃತಃ ॥ ೮೫

ದರ್ಶಪೌರ್ಣಮಾಸಾದಿಗಳಿಗಿಂತ ಜಪವು ಹತ್ತು ಪಾಲು ಗುಣವುಳ್ಳದ್ದು. ಮಂದ್ರಸ್ವರದ ಜಪವು ನೂರು ಪಾಲು ಗುಣವುಳ್ಳದ್ದು. ಮಾನಸ ಜಪವು ಸಹಸ್ರಗುಣವು.

ಯೇ ಪಾಕಯಜ್ಞಾಶ್ಚತ್ವಾರೋ ವಿಧಿಯಜ್ಞ ಸಮನ್ವಿತಾಃ ।
ಸರ್ವೇ ತೇ ಜಪಯಜ್ಞಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೮೬

ವೈಶ್ವದೇವ ಹೋಮ–ಬಲಿಕರ್ಮ–ನಿತ್ಯಶ್ರಾದ್ಧ–ಅತಿಥಿಭೋಜನರೂಪವಾದ ನಾಲ್ಕು ಪಾಕಯಜ್ಞಗಳು, ದರ್ಶಪೂರ್ಣ ಮಾಸಾದಿಗಳು ಇವೆಲ್ಲ ಜಪಯಜ್ಞವಾದ ಬ್ರಹ್ಮಯಜ್ಞದ ಹದಿನಾರನೆ ಒಂದು ಭಾಗದ ಮೂಲ್ಯ ಉಳ್ಳವುಗಳೂ ಅಲ್ಲ. ವೇದಶಾಸ್ತ್ರಾಧ್ಯಯನ ತದರ್ಥ ವಿಚಾರಗಳು ಬಹು ಫಲಗಳು.

ಜಪ್ಯೇನೈವ ತು ಸಂಸಿಧ್ಯೇದ್ಬ್ರಾಹ್ಮಣೋ ನಾತ್ರ ಸಂಶಯಃ ।
ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥ ೮೭

ಸ್ವಾಧ್ಯಾಯವೊಂದರಿಂದ ಸಿದ್ಧಿಯಿದೆ. ಬೇರೆ ಏನೂ ಬೇಡ. ಬ್ರಹ್ಮನು (ಬ್ರಾಹ್ಮಣನು) ಮಿತ್ರನೆಂದು ಹೇಳಲಾಗಿದೆ. ಬ್ರಹ್ಮನು ಸ್ವವಶನು. (ಇದು ಜಪಪ್ರಶಂಸೆ ಆಗಿದೆ) ಅನುಕೂಲವಿದ್ದು ಮಾಡಿದ ವೇದೋಕ್ತ ಯಾಗಗಳು ಬ್ರಹ್ಮನಿಗೆ ಅಪ್ರಿಯವಲ್ಲ. ಇನ್ನು ಜಪಸಿದ್ಧಿಗೆ ಬೇಕಾದ ಉಪಾಯಗಳನ್ನು ಹೇಳುತ್ತಾರೆ.

ಇಂದ್ರಿಯಾಣಾಂ ವಿಚರತಾಂ ವಿಷಯೇಷ್ವಪಹಾರಿಷು ।
ಸಂಯಮೇ ಯತ್ನಮಾತಿಷ್ಠೇದ್ವಿದ್ವಾನಂತೇವ ವಾಜಿನಾಂ ॥ ೮೮

ಆಕರ್ಷಕವಾದ ವಿಷಯಗಳಲ್ಲಿ ಚಂಚಲವಾದ ಮನಸ್ಸು, ಮತ್ತು ಅದನ್ನು ಹಿಂಬಾಲಿಸುವ ಇತರ ಇಂದ್ರಿಯಗಳು–ಇವು ಮೋಸ ಮಾಡುವಂಥವುಗಳು. ಒಳ್ಳೇ ಸಾರಥಿಯು ಕುದುರೆಗಳನ್ನು ಸ್ವಾಧೀನವಿಟ್ಟುಕೊಂಡಿರುವಂತೆ ಇಂದ್ರಿಯಗಳನ್ನು ಪಳಗಿಸಿಕೊಳ್ಳಬೇಕು.

ಏಕಾದಶೇಂದ್ರಿಯಾಣ್ಯಾಹುರ್ಯಾನಿ ಪೂರ್ವೇ ಮನೀಷಿಣಃ ।
ತಾನಿ ಸಮ್ಯಕ್ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ ॥ ೮೯

ಮನೀಷಿಗಳು ಹನ್ನೊಂದು ಇಂದ್ರಿಯವೆನ್ನುತ್ತಾರೆ. ಅವನ್ನು ಕ್ರಮವಾಗಿ ಸರಿಯಾಗಿ ವಿವರಿಸುತ್ತೇನೆ.

ಶ್ರೋತ್ರಂ ತ್ವಕ್ ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಂಚಮೀ ।
ಪಾಯೂಪಸ್ಥಂ ಹಸ್ತಪಾದಂ ವಾಕ್ಚೈವ ದಶಮೀ ಸ್ಮೃತಾ ॥ ೯೦

ಕಣ್ಣು—ಕಿವಿ—ಚರ್ಮ—ನಾಲಿಗೆ—ಮೂಗು ಇವು ಐದು; ಮಲಮೂತ್ರಗಳ ಇಂದ್ರಿಯಗಳು ಎರಡು; ಕೈ—ಕಾಲು—ಬಾಯಿ ಎಂದು ಹತ್ತು ಇಂದ್ರಿಯಗಳು.

ಬುದ್ಧೀಂದ್ರಿಯಾಣಿ ಪಂಚೈಷಾಂ ಶ್ರೋತ್ರಾದೀನ್ಯನುಪೂರ್ವಶಃ ।
ಕರ್ಮೇಂದ್ರಿಯಾಣಿ ಪಂಚೈಷಾಂ ಪಾಯ್ವಾದೀನಿ ಪ್ರಚಕ್ಷತೇ ॥ ೯೧

ಮೇಲೆ ಹೇಳಿದ್ದರಲ್ಲಿ ಮೊದಲಿನ ಐದು ಜ್ಞಾನೇಂದ್ರಿಯಗಳು. ಮತ್ತುಳಿದ ಐದು ಕರ್ಮೇಂದ್ರಿಯಗಳು.

ಏಕಾದಶಂ ಮನೋ ಜ್ಞೇಯಂ ಸ್ವಗುಣೇನೋಭಯಾತ್ಮಕಂ ।
ಯಸ್ಮಿನ್ಜಿತೇ ಜಿತಾವೇತೌ ಭವತಃ ಪಂಚಕೌ ಗಣೌ ॥ ೯೨

ಮನಸ್ಸು ಹನ್ನೊಂದನೆಯದು. ಅದು ತನ್ನ ಸ್ವಭಾವದಿಂದ ಜ್ಞಾನೇಂದ್ರಿಯ—ಕರ್ಮೇಂದ್ರಿಯ ಎರಡೂ ಹೌದು. ಅದನ್ನು ಜಯಿಸಿದರೆ ಹತ್ತು ಜಯಿಸಿದಂತೆ. ಸೇನಾಜಯದಿಂದ ದೇಶ ಜಯವಾದಂತೆ.

ಇಂದ್ರಿಯಾಣಾಂ ಪ್ರಸಂಗೇನ ದೋಷಮೃಚ್ಛತ್ಯಸಂಶಯಂ ।
ಸನ್ನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ನಿಯಚ್ಛತಿ ॥ ೯೩

ತಾನು ಇಂದ್ರಿಯಗಳ ವಶವರ್ತಿಯಾದರೆ ತುಂಬ ದೋಷವು. ಇಂದ್ರಿಯಜಯದಿಂದ ಸಕಲ ಸಿದ್ಧಿಯು ಹಸ್ತಗತವು. ಯೋಗಸಿದ್ಧಿಯ ಅದ್ಭುತವನ್ನು ಪಾತಂಜಲಯೋಗಸೂತ್ರದಲ್ಲಿ ನೋಡಿರಿ.

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೯೪

ಇಚ್ಛೆಯು ಇಷ್ಟವಸ್ತುಗಳ ಸೇವನೆಯಿಂದ ಸದಾ ಶಾಂತವಾಗುವುದಿಲ್ಲ; ಒಮ್ಮೆ ಮಾತ್ರ (ಆಗಿನಮಟ್ಟಿಗೆ) ತಣಿಯುತ್ತದೆ— ಘೃತದಿಂದ ಅಗ್ನಿಯು

ಪ್ರಜ್ವಲಿಸುವಂತೆ. ಇದು ನೂರಾರು ವರ್ಷಗಳ ಯಯಾತಿಯ ಅನುಭವವು–ಪ್ರಯೋಗಸಿದ್ಧವು.

ಯಶ್ಚೈತಾನ್ಪ್ರಾಪ್ನುಯಾತ್ಸರ್ವಾನ್ಯಶ್ಚೈತಾನ್ಕೇವಲಾಂಸ್ತ್ಯಜೇತ್ ।
ಪ್ರಾಪಣಾತ್ಸರ್ವಕಾಮಾನಾಂ ಪರಿತ್ಯಾಗೋ ವಿಶಿಷ್ಯತೇ ॥ ೯೫

ಒಬ್ಬನು ಪುಣ್ಯವಶದಿಂದ ಸರ್ವಕಾಮನೆಗಳನ್ನು ಪಡೆಯಬಹುದು. ಇನ್ನೊಬ್ಬನು ಸಂಪೂರ್ಣ ಬಿಡಬಹುದು. ಸ್ವೀಕಾರಕ್ಕಿಂತ ಪರಿತ್ಯಾಗವು ಪ್ರಶಸ್ತ. ಇದರ ವಿವರ ಮುಂದಿದೆ.

ನ ತಥೈತಾನಿ ಶಕ್ಯಂತೇ ಸನ್ನಿಯಂತುಮಸೇವಯಾ ।
ವಿಷಯೇಷು ಪ್ರಜುಷ್ಟಾನಿ ಯಥಾ ಜ್ಞಾನೇನ ನಿತ್ಯಶಃ ॥ ೯೬

ಇಂದ್ರಿಯಗಳಿಗೆ ವಿಷಯಗಳು ಅತ್ಯಂತ ಪ್ರಿಯವಾದುವು. ಅವುಗಳಲ್ಲಿಯೇ ಇಂದ್ರಿಯಗಳು ನಿಮಗ್ನ. ಆದುದರಿಂದ ಸುತರಾಂ ಸೇವನ ವರ್ಜನದಿಂದ ನಿಯಮನವು (ನಿಗ್ರಹ) ಶಕ್ಯವಾಗುವುದಿಲ್ಲ. ರೋಗಮೂಲಕವಾಗಿ ಶರೀರ ನಾಶಕವೂ ಆಗಿದೆ. ಶರೀರ ನಾಶವಾದರೆ ಜ್ಞಾನದ ಕಥೆಯೇ ಇಲ್ಲ. ಆದುದರಿಂದ ವಿಷಯಗಳಲ್ಲಿ ಅನಿತ್ಯತ್ವ–ರೋಗರೂಪ ದುಃಖ–ಹೇತುತ್ವ–ಎಂಬ ದೋಷದರ್ಶನದಿಂದ ಕ್ರಮೇಣ ವಿಷಯಾಸಕ್ತಿಯನ್ನು ಮನಸ್ಸಿನಿಂದ ತೊಲಗಿಸಬೇಕು. ವಿಷಯಗಳ ಅತಿಸೇವನೆಯೂ, ಅತ್ಯಂತ ವರ್ಜನೆಯೂ ರೋಗಕ್ಕೆ ಕಾರಣವೆಂದೂ, ಆಗ ರೋಗವಶತ್ವವು ದೇಹಧರ್ಮವೆಂದೂ, ಶರೀರವು ಬ್ರಹ್ಮಜ್ಞಾನಕ್ಕೆ ಸಾಧನೇಚ್ಛೆಯಿರುವಾಗ ಕಾರಣವೆಂದೂ ಭಾವವು.

ವೇದಾಸ್ತ್ಯಾಗಶ್ಚ ಯಜ್ಞಾಶ್ಚ ನಿಯಮಾಶ್ಚ ತಪಾಂಸಿ ಚ ।
ನ ವಿಪ್ರದುಷ್ಟಭಾವಸ್ಯ ಸಿದ್ಧಿಂ ಗಚ್ಛಂತಿ ಕರ್ಹಿಚಿತ್ ॥ ೯೭

ಇಂತಹದರ ಇಚ್ಛೆಯು ದುಃಖಕಾರಣವು—ಇಂತಹದರ ಇಚ್ಛೆಯು ಸುಖಕಾರಣ ಎಂಬ ಭಾವ ಶುದ್ಧಿಯಿಲ್ಲದುದು. ತುರಗಬ್ರಹ್ಮಚರ್ಯದಂತೆ ಬಲಾತ್ತ್ಯಾಗವು–ವೇದವು–ಯಜ್ಞವು–ನಿಯಮವು–ತಪಸ್ಸುಗಳು ಇವೆಲ್ಲ ಅನುಕೂಲ ಮನಸ್ಸಿನಿಂದ ಸಾಧಿಸಲ್ಪಡದಿದ್ದರೆ ಫಲದಾಯಕಗಳಲ್ಲ. ಭಾವಶುದ್ಧಿಯಿಂದ ಮನಸ್ಸು ಅವನ್ನು ಬಿಡುವಂತೆ ಮನಸ್ಸನ್ನು ಸಜ್ಜುಗೊಳಿಸಿ ಮನಃ

ಪೂರ್ವಕ ಆಚರಿಸಿದರೆ ಅವುಗಳಿಂದ ಹೇಳಿದ ಫಲಗಳು ಲಭಿಸುವವು. ಕ್ರಿಯೆಯಲ್ಲಿ ಮನಸ್ಸಿಲ್ಲದೆ ಅಭಿನಯಮಾತ್ರವಾದರೆ, ಯಾಂತ್ರಿಕ ಕ್ರಿಯೆಯಾದರೆ, ಮನಸ್ಸಿನ ಅಧೀನವಾದ ಫಲಗಳ ಉತ್ಪತ್ತಿಯಿಲ್ಲ. ಸಿದ್ಧಿಯಲ್ಲಿ ಮನಸ್ಸಿನ ಅಪೇಕ್ಷೆಯು ಇಷ್ಟು ಪರಿಮಾಣದಲ್ಲಿದೆ. ಮನಸ್ಸಿನ ಅಪೇಕ್ಷೆಯ ಮಾರ್ಗವು ಪರಿವರ್ತಿಸಿದರೆ ಅದೇ ಮನೋಜಯವು—ಅಭ್ಯಾಸೇನ ಚ ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ಎಂಬ ಗೀತಾವಾಕ್ಯವು ಈ ರೀತಿಯ ಮನೋಜಯದ ವಿಧಾನವನ್ನು ಸ್ಪಷ್ಟವಾಗಿ ಬೋಧಿಸುವುದು. ಪಾತಂಜಲಯೋಗವೂ ಇದರ ವಿವರವೇ. ಗುರುಸಹಾಯದಿಂದ ಸಾಕ್ಷಾತ್ ಸ್ವಾಧೀನವಾಗುವುದು. ಇದಕ್ಕೆ ಪ್ರತಿ ಕ್ಷಣದಲ್ಲೂ ಶಿಷ್ಯನಿಗೆ–ಸಾಧಕನಿಗೆ ಸಿದ್ಧಗುರುವಿನ ಸಹಾಯವು ಬೇಕು. ಇಲ್ಲವಾದರೆ ಅಪಾಯ ಉಂಟು. ಉನ್ಮಾದರೋಗ ಬಂದ ಉದಾಹರಣೆಯಿದೆ. ಪೂರ್ವಪುಣ್ಯವಿದ್ದರೆ ಅನಾಯಾಸವಾಗಿ ಸಿದ್ಧಿಯೂ ಬರಬಹುದು. ಅಲ್ಪಪುಣ್ಯನಿಗೆ ಸಾಧನೆಯ ಆವಶ್ಯಕತೆ ಉಂಟು. ಸಂಪೂರ್ಣವಾಗಿ ಮನಸ್ಸು ಸ್ವಾಧೀನವಾದರೆ ಹೀಗೆ—

ಶ್ರುತ್ವಾ ಸ್ಪೃಷ್ಟ್ವಾ ಚ ದೃಷ್ಟ್ವಾ ಚ ಭುಕ್ತ್ವಾ ಘ್ರಾತ್ವಾ ಚ ಯೋ ನರಃ ।
ನ ಹೃಷ್ಯತಿ ಗ್ಲಾಯತಿ ವಾ ಸ ವಿಜ್ಞೇಯೋ ಜಿತೇಂದ್ರಿಯಃ ॥ ೯೮

ಸ್ತುತಿ-ನಿಂದೆಗಳನ್ನು ಕೇಳಿ, ಮೆತ್ತಗೆ-ಒರಟು ಮುಟ್ಟಿ, ಕೊಳಕು-ಚಂದ ನೋಡಿ, ರುಚಿ-ಅರುಚಿ ತಿಂದು, ದುರ್ವಾಸನೆ-ಸುವಾಸನೆ ಮೂಸಿ ಯಾವನಲ್ಲಿ ಸುಖ-ದುಃಖಗಳು ಜನಿಸುವದಿಲ್ಲವೋ ಅವನು ಜಿತೇಂದ್ರಿಯನು. ಇದು ಬರಿ ವರ್ಣನೆಯಲ್ಲ; ಬೆಕ್ಕಿನ ಕೋಡು-ಗಗನಕುಸುಮದಂತೆ ಅಸತ್ ಅಲ್ಲ. ಸಾಧಿಸುವವರಿದ್ದಾರೆ. ಯೋಗಶಾಸ್ತ್ರದಲ್ಲಿ ವಿದ್ಯಾರಣ್ಯರ ಕಾಲದಲ್ಲಿ ಪ್ರತ್ಯಕ್ಷ ವಿಷಯ. ಈಗಲೂ ಹಿಮಾಲಯದಲ್ಲಿ ಅಂತಹರಿದ್ದಾರೆ.

ಇಂದ್ರಿಯಾಣಾಂ ತು ಸರ್ವೇಷಾಂ ಯದ್ಯೇಕಂ ಕ್ಷರತೀಂದ್ರಿಯಂ ।
ತೇನಾಸ್ಯ ಕ್ಷರತಿ ಪ್ರಜ್ಞಾ ದೃತೇಃ ಪಾದಾದಿವೋದಕಂ ॥ ೯೯

ಹತ್ತು ಇಂದ್ರಿಯಗಳಲ್ಲಿ ಒಂದು ವಿಷಯಚಲನೆಯುಳ್ಳದ್ದಾದರೆ, ಹನ್ನೊಂದನೆಯದಾದ ದಶೇಂದ್ರಿಯಗಳ ಅಧಿಪತಿಯು ಮನಸ್ಸು ಅಜಿತವಾದು

ದರ ಲಕ್ಷಣವು. ತುಂಬಿದ ನೀರಿನ ಪಾತ್ರೆಯು ಬರಿದಾದರೆ, ಅದರ ಬುಡಕ್ಕೆ ತೂತಿದೆಯೆಂದು ತಿಳಿಯಬಹುದು. ಅದರಂತೆ—

ವಶೇ ಕೃತ್ವೇಂದ್ರಿಯಗ್ರಾಮಂ ಸಂಯಮ್ಯ ಚ ಮನಸ್ತಥಾ ।
ಸರ್ವಾನ್ಸಂಸಾಧಯೇದರ್ಥಾನ್ ಅಕ್ಷಿಣ್ವನ್ಯೋಗತಸ್ತನುಂ ॥ ೧೦೦

ಯೋಗದ ಸಾಧನೆಯಿಂದ ದೇಹಕ್ಕೆ ಹಿಂಸೆ (ರೋಗ) ಯಾಗದಂತೆ ಮನಸ್ಸನ್ನು ನಿಯಮಿಸಿ, ಆ ಮೂಲಕ ಇತರ ಇಂದ್ರಿಯಗಳನ್ನು ವಶೀಕರಿಸಿ ಸರ್ವಾರ್ಥಗಳನ್ನು ಸಾಧಿಸಬೇಕು. ಕೆಲವರ ದೇಹವು ಉಪವಾಸ ಮುಂತಾದ ಕಠಿನ ದಂಡನೆಯನ್ನು ಸಹಿಸುವುದಾಗಿರುತ್ತದೆ. ಎಲ್ಲ ದೇಹಗಳೂ ಹಾಗಲ್ಲ. ಅದನ್ನು ಗಮನಿಸುತ್ತಿರಬೇಕು.

ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ಸಾವಿತ್ರೀಮಾರ್ಕದರ್ಶನಾತ್ ।
ಪಶ್ಚಿಮಾಂ ತು ಸಮಾಸೀನಃ ಸಮ್ಯಗೃಕ್ಷವಿಭಾವನಾತ್ ॥ ೧೦೧

ಪ್ರಾತಃಕಾಲದಲ್ಲಿ ಸೂರ್ಯ ದರ್ಶನವಾಗುವವರೆಗೆ (ಅರುಣೋದಯದಿಂದ) ಸಾಯಂಕಾಲ ತುಂಬ ನಕ್ಷತ್ರ ಕಾಣುವವರೆಗೆ (ಸೂರ್ಯಾಸ್ತದ ಬಳಿಕ) ಜಪ ಮಾಡುತ್ತಿರಬೇಕು.

ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠನ್ನೈಶಮೇನೋ ವ್ಯಪೋಹತಿ ।
ಪಶ್ಚಿಮಾಂ ತು ಸಮಾಸೀನೋ ಮಲಂ ಹಂತಿ ದಿವಾಕೃತಂ ॥ ೧೦೨

ಪ್ರಾತಃಸಂಧ್ಯಾವಂದನೆಯಿಂದ ರಾತ್ರಿಕೃತ ಪಾಪನಾಶವಾಗುವದು. ನಿಂತುಕೊಂಡು ಜಪ ಮಾಡಬೇಕು. ಸಾಯಂಕಾಲ ಕುಳಿತು ಜಪ ಮಾಡಬೇಕು. ಅದರಿಂದ ಹಗಲು ಮಾಡಿದ ಪಾಪವು ನಿವಾರಿತವಾಗುವುದು.

ನ ತಿಷ್ಠತಿ ತು ಯಃ ಪೂರ್ವಾಂ ನೋಪಾಸ್ತೇ ಯಶ್ಚ ಪಶ್ಚಿಮಾಂ ।
ಸ ಶೂದ್ರವದ್ಬಹಿಷ್ಕಾರ್ಯಃ ಸರ್ವಸ್ಮಾದ್ದ್ವಿಜಕರ್ಮಣಃ ॥ ೧೦೩

ಸಂಧ್ಯಾವಂದನೆ ಮಾಡದ ದ್ವಿಜನು ಸಹವಾಸಯೋಗ್ಯನಲ್ಲ. ಸಂಧ್ಯಾವಂದನೆಯು ಪ್ರಶಸ್ತವು ಮತ್ತು ನಿತ್ಯವೂ ಆಗಿದೆ.

ಅಪಾಂ ಸಮೀಪೇ ನಿಯತೋ ನೈತ್ಯಕಂ ವಿಧಿಮಾಸ್ಥಿತಃ ।
ಸಾವಿತ್ರೀಮಪ್ಯಧೀಯೀತ ಗತ್ವಾರಣ್ಯಂ ಸಮಾಹಿತಃ ॥ ೧೦೪

ನಿತ್ಯವೂ ಬ್ರಹ್ಮಯಜ್ಞ ಮಾಡುವಾಗ ಶಾಂತವಾದ ಅರಣ್ಯ ಮುಂತಾದ ಪ್ರದೇಶದಲ್ಲಿ, ಜಲಾಶಯದ ಸಮೀಪದಲ್ಲಿ ಗಾಯತ್ರಿಯನ್ನು ಜಪಿಸಬೇಕು.

ವೇದೋಪಕರಣೇ ಚೈವ ಸ್ವಾಧ್ಯಾಯೇ ಚೈವ ನೈತ್ಯಕೇ ।
ನಾನುರೋಧೋಽಸ್ತ್ಯನಧ್ಯಾಯೇ ಹೋಮಮಂತ್ರೇಷು ಚೈವ ಹಿ ॥ ೧೦೫

ವೇದಾಂಗ–ನಿತ್ಯವೇದಪಾರಾಯಣ–ಹೋಮ – ಮಂತ್ರಗಳಿಗೆ ಅನಧ್ಯಾಯ ದಿನಗಳಲ್ಲಿ ನಿಷೇಧವಿಲ್ಲ.

ನೈತ್ಯಕೇ ನಾಸ್ತ್ಯನಧ್ಯಾಯೋ ಬ್ರಹ್ಮಸತ್ರಂ ಹಿ ತತ್ಸ್ಮೃತಂ ।
ಬ್ರಹ್ಮಾಹುತಿಹುತಂ ಪುಣ್ಯಮನಧ್ಯಾಯವಷಟ್ಕೃತಂ ॥ ೧೦೬

ನಿತ್ಯ ಜಪದಲ್ಲಿಯೂ ಅನಧ್ಯಾಯವಿಲ್ಲ. ಅದು ಬ್ರಹ್ಮಸತ್ರವು. ಆ ಯಾಗದಲ್ಲಿ ಬ್ರಹ್ಮಹವನರೂಪ ಜಪವು ಪುಣ್ಯವೇ.

ಯಃ ಸ್ವಾಧ್ಯಾಯಮಧೀತೇಽಬ್ದಂ ವಿಧಿನಾ ನಿಯತಃ ಶುಚಿಃ ।
ತಸ್ಯ ನಿತ್ಯಂ ಕ್ಷರತ್ಯೇಷ ಪಯೋ ದಧಿ ಘೃತಂ ಮಧು ॥ ೧೦೭

ಯಾವನು ಪ್ರತಿದಿನವೂ ವೇದಾಧ್ಯಯನವನ್ನು ಮಾಡುತ್ತ ಜೇನು, ಹಾಲು, ಮೊಸರು, ತುಪ್ಪಗಳಿಂದ ದೇವ-ಪಿತೃ ತೃಪ್ತಿಯನ್ನು ಮಾಡುತ್ತಾನೋ ಅವನಿಗೆ ಜೇನು, ಹಾಲು ಸಮೃದ್ಧಿಯಾಗುವುದು.

ಅಗ್ನಿಂಧನಂ ಭೈಕ್ಷಚರ್ಯಾಮಧಃಶಯ್ಯಾಂ ಗುರೋರ್ಹಿತಂ ।
ಆ ಸಮಾವರ್ತನಾತ್ಕುರ್ಯಾತ್ಕೃತೋಪನಯನೋ ದ್ವಿಜಃ ॥ ೧೦೮

ಉಪನೀತನಾದವನು ಗುರುಕುಲದಲ್ಲಿ ಅಗ್ನಿಕಾರ್ಯ–ಭಿಕ್ಷಾಟನ– ಗುರು ಕಾರ್ಯಗಳನ್ನು ಮಾಡುತ್ತ ಸಮಾರ್ತನ ಪರ್ಯಂತ ವಾಸಿಸಬೇಕು.

ಆಚಾರ್ಯಪುತ್ರಃ ಶುಶ್ರೂಷುರ್ಜ್ಞಾನದೋ ಧಾರ್ಮಿಕಃ ಶುಚಿಃ ।
ಆಪ್ತಃ ಶಕ್ತೋಽರ್ಥದಃ ಸಾಧುಃ ಸ್ವೋಽಧ್ಯಾಪ್ಯಾ ದಶ ಧರ್ಮತಃ ॥ ೧೦೯

ಆಚಾರ್ಯನ ಮಗ, ಗುರುಕಾರ್ಯವನ್ನು ತಾನು ಮಾಡಿ ಗುರುವಿನ ವಿರಾಮದಲ್ಲಿ ಅಧ್ಯಯನೇಚ್ಛುವು, ವಿದ್ಯಾವಿನಿಮಯ ಕರ್ತೃ, ಧರ್ಮ-ಶ್ರದ್ಧಾಲು, ಶುಚಿ, ಬಂಧು, ಬುದ್ಧಿಮಾನ್, ಧನದಾತಾ, ಹಿತಾಭಿಲಾಷಿ, ಕುಲಜ—ಈ ಹತ್ತುಮಂದಿಯು ವಿದ್ಯಾದಾನಪಾತ್ರರು.

ನಾಪೃಷ್ಟಃ ಕಸ್ಯಚಿದ್ಬ್ರೂಯಾನ್ನ ಚಾನ್ಯಾಯೇನ ಪೃಚ್ಛತಃ ।
ಜಾನನ್ನಪಿ ಹಿ ಮೇಧಾವೀ ಜಡವಲ್ಲೋಕ ಆಚರೇತ್ ॥ ೧೧೦

ಕೇಳದವನಿಗೆ ಹೇಳಬಾರದು. ತಿಳಿಯುವ ಇಚ್ಛೆಯಿದ್ದರೆ ನ್ಯಾಯ ವಾದ ಪ್ರಶ್ನೆ ಕೇಳುವನು. ಅನ್ಯಾಯದಿಂದ ತಿಳಿದಿದ್ದೂ ಕೇಳುವ ಕುಹಕಿಗೆ ಹೇಳುವುದು ಬೇಡ. ಮೇಧಾವಿಯು ತಿಳಿದಿದ್ದರೂ ಲೋಕದಲ್ಲಿ ಮೂಕ ನಂತಿರಬೇಕು.

ಅಧರ್ಮೇಣ ಚ ಯಃ ಪ್ರಾಹ ಯಶ್ಚಾಧರ್ಮೇಣ ಪೃಚ್ಛತಿ ।
ತಯೋರನ್ಯತರಃ ಪ್ರೈತಿ ವಿದ್ವೇಷಂ ವಾಧಿಗಚ್ಛತಿ ॥ ೧೧೧

ಮೊದಲು ಹೇಳಿದ ಗುರು-ಶಿಷ್ಯ ಧರ್ಮವನ್ನು ಮೀರಿ ಪ್ರಶ್ನೋತ್ತರ, ಅಧ್ಯಯನಾಧ್ಯಾಪನಗಳನ್ನು ಮಾಡುವವರು ಬಾಳುವುದಿಲ್ಲ. ಕಾಲಾಂತರದಲ್ಲಿ ಅವರವರಲ್ಲಿ ದ್ವೇಷೋತ್ಪತ್ತಿಯಾಗುವುದು.

ಧರ್ಮಾರ್ಥೌ ಯಸ್ಯ ನ ಸ್ಯಾತಾಂ ಶುಶ್ರೂಷಾ ವಾಪಿ ತದ್ವಿಧಾ।
ತತ್ರ ವಿದ್ಯಾ ನ ಕರ್ತವ್ಯಾ ಶುಭಂ ಬೀಜಮಿವೋಷರೆ ॥ ೧೧೨

ಒಳ್ಳೆ ಬೀಜವು ನಿರ್ಜಲ ಮರಳುಭೂಮಿಯಲ್ಲಿ ನಿಷ್ಫಲವಾದಂತೆ—ಧರ್ಮ, ಅರ್ಥ, ಶುಶ್ರೂಷಾ ಇಲ್ಲದವನಿಗೆ ವಿದ್ಯಾಪ್ರದಾನವು ಕರ್ತವ್ಯವಲ್ಲ.

ವಿದ್ಯಯೈವ ಸಮಂ ಕಾಮಂ ಮರ್ತವ್ಯಂ ಬ್ರಹ್ಮವಾದಿನಾ ।
ಆಪದ್ಯಪಿ ಹಿ ಘೋರಾಯಾಂ ನ ತ್ವೇನಾಮಿರಿಣೇ ವಪೇತ್ ॥ ೧೧೩

ಅವಿಧೇಯನಿಗೆ ವಿದ್ಯಾದಾನ ಮಾಡುವುದಕ್ಕಿಂತ, ಬ್ರಹ್ಮವಾದಿಗೆ ವಿದ್ಯಾ ಸಹಿತ ಮರಣವೂ ಶುಭವು. ಘೋರ ವಿಪತ್ತೇ ಬರಲಿ; ಆದರೆ ನಿಷ್ಪ್ರಯೋಜಕನ ಕಾರ್ಯವು ಕ್ರಿಯಾರ್ಹವಲ್ಲ.

ವಿದ್ಯಾ ಬ್ರಾಹ್ಮಣಮೇತ್ಯಾಹ ಶೇವಧಿಷ್ಟೇಽಸ್ಮಿ ರಕ್ಷ ಮಾಂ ।
ಅಸೂಯಕಾಯ ಮಾಂ ಮಾದಾಸ್ತಥಾ ಸ್ಯಾಂ ವೀರ್ಯವತ್ತಮಾ ॥ ೧೧೪

ವಿದ್ಯಾದೇವಿ ಜ್ಞಾನಿಯನ್ನು ಕುರಿತು:— ನಿನಗೆ ನಾನು ನಿಧಿಯಾಗಿ; ಈ ಭಾಗ್ಯನಿಧಿಯನ್ನು ಕಾಪಾಡು. ಅನರ್ಹದುರಭಿಮಾನಿಗೆ, ಮತ್ಸರಿಗೆ ಉಪ ದೇಶಿಸದಿದ್ದರೆ ನಾನು ವೀರ್ಯವತಿಯಾಗಿ ಇರುವೆನು.

ಯಮೇವ ತು ಶುಚಿಂ ವಿದ್ಯಾನ್ನಿಯತಬ್ರಹ್ಮಚಾರಿಣಂ ।
ತಸ್ಮೈ ಮಾಂ ಬ್ರೂಹಿ ವಿಪ್ರಾಯ ನಿಧಿಪಾಯಾಪ್ರಮಾದಿನೇ ॥ ೧೧೫

ಮನಸ್ಸು–ಶರೀರ ಶುಚಿಯಿದ್ದು, ಯಥಾರ್ಥವಾಗಿ ಬ್ರಹ್ಮಶ್ರದ್ಧೆಯುಳ್ಳವನಿಗೆ, ನಿನ್ನಂತೆ ಅಪ್ರಮಾದದಿಂದ ನನ್ನ ರಕ್ಷಕನಾದವನಿಗೆ ನನ್ನನ್ನು ಉಪದೇಶಿಸು (ಹೇಳು)

ಬ್ರಹ್ಮ ಯಸ್ತ್ವನನುಜ್ಞಾತಮಧೀಯಾನಾದವಾಪ್ನುಯಾತ್ ।
ಸ ಬ್ರಹ್ಮಸ್ತೇಯಸಂಯುಕ್ತೋ ನರಕಂ ಪ್ರತಿಪದ್ಯತೇ ॥ ೧೧೬

ವಿದ್ಯಾರ್ಥಿಯ ಅಧ್ಯಯನ ಕಾಲದಲ್ಲಿ ಅವನಿಂದ ಕೇಳಿ ಇನ್ನೊಬ್ಬನು ತಾನು ವಿದ್ಯೆಯ ಸ್ವೀಕಾರ ಮಾಡಿದರೆ ಅದು ವಿದ್ಯಾಚೌರ್ಯವಾಗುವುದು. ವಿದ್ಯಾಭಿಲಾಷೆಯು ಕೆರಳುವಷ್ಟು ವಿದ್ಯಾಪ್ರಚಾರ ಮಾಡಬಹುದು. ವಿದ್ಯಾಮರ್ಮವು ಅತಿ ಸುಲಭದಲ್ಲಿ ಯಾರಿಗೂ ವಶವಾಗಲಾರದು. ಆದುದರಿಂದ ಈ ಪ್ರಶಂಸಾ ವಾಕ್ಯಗಳು ವಿದ್ಯಾರ್ಥಿಯಲ್ಲಿ ಉತ್ಕಂಠೆಯನ್ನು ಪರೀಕ್ಷಿಸಲು ಎಚ್ಚರಿಸುತ್ತವೆ. ನಿರಭಿಲಾಷಿಗೆ ಪ್ರವಚನವು ವೃಥಾ ಕಂಠಕ್ಷೋಭವಾಗುವುದು.

ಲೌಕಿಕಂ ವೈದಿಕಂ ವಾಪಿ ತಥಾಧ್ಯಾತ್ಮಿಕಮೇವ ಚ ।
ಆದದೀತ ಯತೋ ಜ್ಞಾನಂ ತಂ ಪೂರ್ವಮಭಿವಾದಯೇತ್ ॥ ೧೧೭

ವಂದನೀಯರು ತುಂಬ ಇದ್ದ ಸಭೆಯಲ್ಲಿ ಬ್ರಹ್ಮಜ್ಞಾನ, ವೇದಾರ್ಥ, ಅರ್ಥಶಾಸ್ತ್ರ ಉಪದೇಶಕರನ್ನು ಕ್ರಮವಾಗಿ ಮೊತ್ತಮೊದಲು ವಂದಿಸಬೇಕು. ಲಿಪಿ, ಓದು-ಬರಹ, ದೇಶ ಭಾಷೆ, ದ್ವೀಪಾಂತರಭಾಷೆ ಕಲಿಸುವವರು ಜಘನ್ಯ ವಂದ್ಯರು. ಈಗ ಕಪಟವಂದನೆಯು ಪ್ರಚಾರದಲ್ಲಿರುವುದರಿಂದ, ಅಭಿನಯ ವಂದನೆಯು ಈ ಶಾಸ್ತ್ರದ ವಿಚಾರ ವಿಷಯವಲ್ಲ. ಜೀವನಾವಶ್ಯಕವಾಗಿ ಸರ್ವವಂದನೆಯು ಆಪದ್ಧರ್ಮವು.

ಸಾವಿತ್ರೀಮಾತ್ರಸಾರೋಽಪಿ ವರಂ ವಿಪ್ರಃ ಸುಯಂತ್ರಿತಃ ।
ನಾಯಂತ್ರಿತಸ್ತ್ರಿವೇದೋಽಪಿ ಸರ್ವಾಶೀ ಸರ್ವವಿಕ್ರಯೀ ॥ ೧೧೮ ॥

ಗಾಯತ್ರೀಮಂತ್ರವನ್ನು ಮಾತ್ರ ಬಲ್ಲವನಿದ್ದು ಶಾಸ್ತ್ರನಿಯಮದಂತೆ ಸಂಯಮಿಯಾದ ವಿಪ್ರನು ಮಾನ್ಯನು. ಅಭಕ್ಷಭಕ್ಷಕನೂ, ಪ್ರತಿಷಿದ್ಧ ವಸ್ತು ವಿಕ್ರಯಿಯೂ ಆದವನು ಮೂರು ವೇದಗಳನ್ನು ಬಲ್ಲವನಾಗಿದ್ದರೂ ಮಾನ್ಯ ನಲ್ಲ.

ಶಯ್ಯಾಸನೇಽಧ್ಯಾಚರಿತೇ ಶ್ರೇಯಸಾ ನ ಸಮಾವಿಶೇತ್ ।
ಶಯ್ಯಾಸನಸ್ಥಶ್ಚೈವೈನಂ ಪ್ರತ್ಯುತ್ಥಾಯಾಭಿವಾದಯೇತ್ ॥ ೧೧೯

ಮಹನೀಯರ ಆಸನಾದಿಗಳನ್ನು ತಾನು ಉಪಯೋಗಿಸಬಾರದು. ತಾನು ತನ್ನ ಆಸನದಲ್ಲಿ ಇದ್ದಾಗ ಅಭಿಮುಖರಾದ ಮಹನೀಯರನ್ನು ತಾನು ಎದ್ದು ವಂದಿಸಬೇಕು.

ಊರ್ಧ್ವಂ ಪ್ರಾಣಾ ಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಯತಿ।
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥ ೧೨೦ ॥

ದೊಡ್ಡದು ಸಣ್ಣದನ್ನು ಆಕರ್ಷಿಸುವುದು ಜಡಸಾಧಾರಣ ವಿಷಯ. ಚುಂಬಕವು ಕಬ್ಬಿಣವನ್ನು ಸೆಳೆಯುವುದು. ಹಿರಿಯರಿಗೆ ಕಿರಿಯರು ಈ ರೀತಿ ಯಲ್ಲಿ ಮೊದಲು ವಂದಿಸಿ ಬಳಿಕ ಸ್ವಸ್ಥಾನದಲ್ಲಿರಬೇಕು.

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ತಸ್ಯ ವರ್ಧಂತೇ ಆಯುರ್ವಿದ್ಯಾ ಯಶೋ ಬಲಂ ॥ ೧೨೧ ॥

ಹಿರಿಯರನ್ನು ಸನ್ಮಾನಿಸುವ ಕಿರಿಯನಿಗೆ ಶ್ರೇಯಸ್ಸು ಒದಗುವುದು. ಆಯುಸ್ಸು, ವಿದ್ಯೆ, ಯಶಸ್ಸು, ಬಲ ಇವು ನಾಲ್ಕು ಶ್ರೇಯಸ್ಸು.

ಅಭಿವಾದಾತ್ಪರಂ ವಿಪ್ರೋ ಜ್ಯಾಯಾಂಸಮಭಿವಾದಯನ್ ।
ಅಸೌನಾಮಾಹಮಸ್ಮೀತಿ ಸ್ವಂ ನಾಮ ಪರಿಕೀರ್ತಯೇತ್ ॥ ೧೨೨ ॥

ಹಿರಿಯರನ್ನು ವಂದಿಸುವಾಗ ತನ್ನ ಹೆಸರು ಹೇಳಬೇಕು.

ನಾಮಧೇಯಸ್ಯ ಯೇ ಕೇಚಿದಭಿವಾದಂ ನ ಜಾನತೇ ।
ತಾನ್ಪ್ರಾಜ್ಞೋಽಹಮಿತಿ ಬ್ರೂಯಾತ್ಸ್ತ್ರಿಯಃ ಸರ್ವಾಸ್ತಥೈವ ಚ ॥ ೧೨೩ ॥

ಸ್ವನಾಮ ಸಹಿತವಾಗಿ ಅಭಿವಾದವಾಕ್ಯ ತಿಳಿಯದವರು ಅಹಂ ಎಂದು ವಂದಿಸಬೇಕು.

ಭೋಃಶಬ್ದಂ ಕೀರ್ತಯೇದಂತೇ ಸ್ವಸ್ಯ ನಾಮ್ನೋಽಭಿವಾದನೇ ।
ನಾಮ್ನಾಂ ಸ್ವರೂಪಭಾವೋ ಹಿ ಭೋಭಾವ ಋಷಿಭಿಃ ಸ್ಮೃತಃ॥ ೧೨೪

ಅಭಿವಾದವಾಕ್ಯದಲ್ಲಿ ಕೊನೆಗೆ ಭೋಃ ಶಬ್ದವು ನಿಲ್ಲಬೇಕು. ಭೋಃ ಶಬ್ದವು ಮುಖ್ಯಾರ್ಥವುಳ್ಳದ್ದು. 'ಅಭಿವಾದಯೇ ಶುಭಶರ್ಮಾಹಮಸ್ಮಿ ಭೋಃ' ಒಂದು ವಾಕ್ಯವು.

ಆಯುಷ್ಮಾನ್ ಭವ ಸೌಮ್ಯೇತಿ ವಾಚ್ಯೋ ವಿಪ್ರೋಽಭಿವಾದನೇ ।
ಅಕಾರಶ್ಚಾಸ್ಯ ನಾಮ್ನೋಽನ್ತೇ ವಾಚ್ಯಃ ಪೂರ್ವಾಕ್ಷರಃ ಪ್ಲುತಃ ॥ ೧೨೫

ಅಭಿವಾದನದ ಉತ್ತರರೂಪವಾದ ವಾಕ್ಯವು "ಆಯುಷ್ಮಾನ್‌ಭವ ಸೌಮ್ಯ" ಎಂದಿರಬೇಕು, ವಾಕ್ಯದಲ್ಲಿ ವ್ಯಕ್ತಿನಾಮದ ಅವರ್ಣಕ್ಕೆ ಪ್ಲುತಸ್ವರವನ್ನು ಹೇಳಬೇಕು.

ಯೋ ನ ವೇತ್ತ್ಯಭಿವಾದಸ್ಯ ವಿಪ್ರಃ ಪ್ರತ್ಯಭಿವಾದನಂ ।
ನಾಭಿವಾದ್ಯಃ ಸ ವಿದುಷಾ ಯಥಾ ಶೂದ್ರಸ್ತಥೈವ ಸಃ ॥ ೧೨೬

ಪ್ರತ್ಯಭಿವಾದನವಾಕ್ಯವನ್ನು ಶಾಸ್ತ್ರೀಯವಾಗಿ ಬುದ್ಧಿವಂತರು ತಿಳಿದಿರಬೇಕು. ಇಲ್ಲವಾದರೆ ಕೇವಲ ನಮಸ್ಕಾರ ಶಬ್ದದ ವಂದನೆಗೆ ಅಂತಹರು ತಕ್ಕವರು.

ಬ್ರಾಹ್ಮಣಂ ಕುಶಲಂ ಪೃಚ್ಛೇತ್ಕ್ಷತ್ರಬಂಧುಮನಾಮಯಂ ।
ವೈಶ್ಯಂ ಕ್ಷೇಮಂ ಸಮಾಗಮ್ಯ ಶೂದ್ರಮಾರೋಗ್ಯಮೇವ ಚ ॥ ೧೨೭

ಈ ಶತಮಾನದ ಘನಸರಕಾರದ ನೌಕರರ ಅಧಿಕಾರಗ್ರಹಣದ ಆರಂಭದಲ್ಲಿ ನಿಯಮಬದ್ಧ ಪ್ರತಿಜ್ಞಾವಾಕ್ಯವಿರುವಂತೆ, ಜನರ ಕುಶಲ ಪ್ರಶ್ನೆಗೂ ವ್ಯವಸ್ಥೆಯಿದೆ. ಸಮಾನತೆಯ ಪಟಾಟೋಪದ ಸಾಮ್ರಾಜ್ಯದಲ್ಲೂ ತಾರತಮ್ಯವು ರೂಢಮೂಲವಾಗಿದೆ. ಒಂದನೆವರ್ಗ, ಎರಡನೆವರ್ಗ, ಮೂರನೆವರ್ಗ, ನಾಲ್ಕನೆವರ್ಗದ ನೌಕರರೆಂದು ನೂತನ ಪದಬಂಧದ ಸಂಜ್ಞೆಯಿಂದ ಕರೆದರೂ, ಭಾವವೂ-ಕ್ರಿಯೆಯೂ ವ್ಯತ್ಯಸ್ತವಾಗಲಿಲ್ಲ. ವಸ್ತುಸ್ಥಿತಿಯೆಂದರೆ ಇದೇ. ಹಣದ ಅಳತೆ (ವೇತನಮಟ್ಟ) ಯ ಮೇಲೆ ಈಗ ವರ್ಗ ರಚನೆಯಿದ್ದರೆ, ಬರಿ ಜನ್ಮವನ್ನು ಆಧರಿಸಿದ ವರ್ಗರಚನೆಯು ಅಸಿಂಧುವೆನ್ನಲು ದುರಾಗ್ರಹವಲ್ಲದೆ ಬೇರೆ ಕಾರಣ ಯಾವುದು ? ಜನ್ಮದ ನಿಯಮವು

ಧನಕ್ಕೆ ಪರಿವರ್ತನೆ ಹೊಂದಿರುವುದು ಮಾತ್ರ ಹೊಸದು. ಕುಶಲ-ಅನಾಮಯ–ಕ್ಷೇಮ–ಆರೋಗ್ಯ ಪದಗಳಿಂದ ಬ್ರಾಹ್ಮಣ – ಕ್ಷತ್ರಿಯ – ವೈಶ್ಯ – ಶೂದ್ರ ಜಾತಿಯ ಸಮಾನರ ಸಮಾಗಮದಲ್ಲಿ ಸಂಭಾಷಣಾರಂಭವನ್ನು ಆಚರಿಸಬೇಕು. ಈಗ ತಾನೇ ಹೊರಟಿರುವ ಶೀಲಸಂಹಿತೆಯು ಶಾಸನ ಸಭಾಸದಸ್ಯರನ್ನು, ವೈತನಿಕ ನೌಕರರನ್ನು ಉದ್ದೇಶಿಸಿರುವುದು ಈ ಮಾದರಿಯದು.

ಅವಾಚ್ಯೋ ದೀಕ್ಷಿತೋ ನಾಮ್ನಾ ಯವೀಯಾನಪಿ ಯೋ ಭವೇತ್ ।
ಭೋಭವತ್ಪೂರ್ವಕಂ ತ್ವೇನಮಭಿಭಾಷೇತ ಧರ್ಮವತ್ ॥ ೧೨೮

ವ್ರತಸ್ಥನು ಕಿರಿಯನಾದರೂ ( ಗುಣವಯಸ್ಸು ) ವ್ಯಕ್ತಿನಾಮವನ್ನು ಬಿಟ್ಟು ಭೋ ಭವತ್ (ತಾವು) ಪದಗಳಿಂದ ಸಂಬೋಧಿಸಿ ಸಂಭಾಷಿಸುವುದು ಸದಾಚಾರವು, ವ್ರತಕ್ಕೆ ಕೊಡುವ ಗೌರವವು.

ಪರಪತ್ನೀ ತು ಯಾ ಸ್ತ್ರೀ ಸ್ಯಾದಸಂಬಂಧಾ ಚ ಯೋನಿತಃ ।
ತಾಂ ಬ್ರೂಯಾದ್ ಭವತೀತ್ಯೇವಂ ಸುಭಗೇ ಭಗಿನೀತಿ ಚ ॥ ೧೨೯

ಅಕ್ಕ–ತಂಗಿ, ಅಮ್ಮ–ತಾಯಿ ಎಂದು ಈಗ ನಾವೆನ್ನುವಂತೆ ಸಂಬಂಧವಿಲ್ಲದ ಪರಸ್ತ್ರೀಯನ್ನು ಭವತಿ ! ಸುಭಗೇ ! ಭಗಿನಿ ! ಎಂದು ಕರೆಯುವುದು ಪ್ರಾಚೀನ ಸಂಪ್ರದಾಯವು. ಅವಿವಾಹಿತೆಯನ್ನು ಆಯುಷ್ಮತಿ ಎನ್ನುವುದು ಕುಮಾರಿ ಎಂದಂತೆ.

ಮಾತುಲಾಂಶ್ಚ ಪಿತೃವ್ಯಾಂಶ್ಚ ಶ್ವಶುರಾನೃತ್ವಿಜೋ ಗುರೂನ್ ।
ಅಸಾವಹಮಿತಿ ಬ್ರೂಯಾತ್ಪ್ರತ್ಯುತ್ಥಾಯ ಯವೀಯಸಃ ॥ ೧೩೦

ತಾಯಿಯ ಅಣ್ಣ ತಮ್ಮ, ತಂದೆಯ ಅಣ್ಣ ತಮ್ಮ, ಹೆಂಡತಿಯ ತಂದೆ, ಋತ್ವಿಜರು, ಜ್ಞಾನ ತಪೋವೃದ್ಧರು ವಯಸ್ಸಿನಲ್ಲಿ ಕಿರಿಯರಾದರೂ ಅವರ ಸಮ್ಮುಖದಲ್ಲಿ ಎದ್ದು ನಿಂತು — 'ಗಿರಿಧರಶರ್ಮಾಹಂ' — ಇತ್ಯಾದಿಯಾಗಿ ವಚನೋಪಚಾರ ಮಾತ್ರವಲ್ಲದೆ ಪಾದಗ್ರಹಣವಿಲ್ಲ.

ಮಾತೃಷ್ವಸಾ ಮಾತುಲಾನೀ ಶ್ವಶ್ರೂರಥ ಪಿತೃಷ್ವಸಾ ।
ಸಂಪೂಜ್ಯಾ ಗುರುಪತ್ನೀವತ್ ಸಮಸ್ತಾ ಗುರುಭಾರ್ಯಯಾ ॥ ೧೩೧

ತಾನು ಹಿರಿಯನಾಗಿದ್ದು, ತಾಯಿಯ ತಂಗಿ, ಮಾತುಲಪತ್ನೀ, ಹೆಂಡತಿಯ ತಾಯಿ, ತಂದೆಯ ತಂಗಿಯರು ವಯಸ್ಸಿನಲ್ಲಿ ತನಗಿಂತ ಕಿರಿಯರಾದರೂ ಪಾದಗ್ರಹಣಾರ್ಹರು, ಗುರುಪತ್ನಿಗೆ ಸಮರು.

ಭ್ರಾತುರ್ಭಾರ್ಯೋಪಸಂಗ್ರಾಹ್ಯಾ ಸವರ್ಣಾಹನ್ಯಹನ್ಯಪಿ ।
ವಿಪ್ರೋಷ್ಯ ತೂಪಸಂಗ್ರಾಹ್ಯಾ ಜ್ಞಾತಿಸಂಬಂಧಿಯೋಷಿತಃ ॥ ೧೩೨

ಅಣ್ಣನ ಹೆಂಡತಿ ಸವರ್ಣಸ್ತ್ರೀಯಾಗಿದ್ದರೆ ಕಿರಿಯಳಾದರೂ ಪ್ರತಿದಿನ ಅಭಿವಂದ್ಯಳು, ಪಿತೃಪಕ್ಷದ ಮತ್ತು ಮಾತೃಪಕ್ಷದ ಸ್ತ್ರೀಯರು ಪ್ರವಾಸಾದಿ ನಿವೃತ್ತಿನಿಮಿತ್ತದಲ್ಲಿ ವಂದ್ಯರು.

ಪಿತುರ್ಭಗಿನ್ಯಾಂ ಮಾತುಶ್ಚ ಜ್ಯಾಯಸ್ಯಾಂ ಚ ಸ್ವಸರ್ಯಪಿ।
ಮಾತೃವದ್ವೃತ್ತಿಮಾತಿಷ್ಠೇನ್ಮಾತಾ ತಾಭ್ಯೋ ಗರೀಯಸೀ ॥ ೧೩೩

ತಾಯ್ತಂದೆಯ ಅಕ್ಕತಂಗಿಯರು, ತನ್ನ ಅಕ್ಕಂದಿರು—ಇವರು ತಾಯಿಗೆ ಸಮಾನರು. ಆದರೂ ತಾಯಿ ಇವರಿಗಿಂತಲೂ ಹೆಚ್ಚಿನವಳು.

ದಶಾಬ್ದಾಖ್ಯಂ ಪೌರಸಖ್ಯಂ ಪಂಚಾಬ್ದಾಖ್ಯಂ ಕಲಾಭೃತಾಂ ।
ತ್ರ್ಯಬ್ದಪೂರ್ವಂ ಶ್ರೋತ್ರಿಯಾಣಾಂ ಸ್ವಲ್ಪೇನಾಪಿ ಸ್ವಯೋನಿಷು ॥ ೧೩೪

ನೆರೆಮನೆಯನು ತನಗಿಂತ ಹತ್ತು ವರ್ಷಗಳಿಗೆ ಕಿರಿಯನಾದರೂ, ಸಂಗೀತ-ಚಿತ್ರಾದಿ ಕಲಾವಂತನು ಐದುವರ್ಷಕ್ಕೆ ಕಿರಿಯನಾದರೂ, ವೇದಾಧ್ಯಾಯಿಯು ಮೂರು ವರ್ಷಕ್ಕೆ, ಸಪಿಂಡರು ಸ್ವಲ್ಪೇ ಕಿರಿಯರಾದರೂ ಗೆಳೆಯರಾಗಿ ಸಮಾನತೆಯ ವ್ಯವಹಾರಯೋಗ್ಯರು.

ಬ್ರಾಹ್ಮಣಂ ದಶವರ್ಷಂ ತು ಶತವರ್ಷಂ ತು ಭೂಮಿಪಂ ।
ಪಿತಾಪುತ್ರೌ ವಿಜಾನೀಯಾದ್ಬ್ರಾಹ್ಮಣಸ್ತು ತಯೋಃ ಪಿತಾ ॥ ೧೩೫

ಬ್ರಾಹ್ಮಣನು ಹತ್ತುವಯಸ್ಸಿನವನಾದರೂ, ನೂರುವರ್ಷ ವಯಸ್ಸಿನ ಭೂಮಿಪನಿಗೆ ಪಿತೃಸಮಾನನು. ಇದು ಜಾತಿ ವ್ಯವಸ್ಥೆಯು. ಅವರಿಬ್ಬರಲ್ಲಿ ಬ್ರಾಹ್ಮಣನೇ ತಂದೆ.

ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಭವತಿ ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಂ ॥ ೧೩೬

ಹಣ, ಬಂಧುತ್ವ, ವಯಸ್ಸು, ವೈದಿಕಕರ್ಮ, ಅಧ್ಯಾತ್ಮವಿದ್ಯೆಗಳಲ್ಲಿ ಕೊನೆ ಮೊದಲಾಗಿ (ಕೊನೆಯಿಂದ ಮೊದಲಿನವರೆಗೆ) ಅತ್ಯಂತ ಪೂಜಾ (ಗೌರವ) ಹೇತುವು. ಆದರೆ ಈ ಕಾಲದಲ್ಲಿ ಮೊದಲು ಮೊದಲಿನದೆ ಅತ್ಯಂತ ಮಾನ್ಯವಾಗಿರುವುದು ವಿಪರೀತ ಸ್ಥಿತಿಯು, ಅಜ್ಞಾನದ ವೈಪರೀತ್ಯವು.

ಪಂಚಾನಾಂ ತ್ರಿಷು ವರ್ಣೇಷು ಭೂಯಾಂಸಿ ಗುಣವಂತಿ ಚ ।
ಯತ್ರ ಸ್ಯುಃ ಸೋಽತ್ರ ಮಾನಾರ್ಹಃ ಶೂದ್ರೋಽಪಿ ದಶಮೀಂ ಗತಃ ॥ ೧೩೭

ಮೇಲಿನ ಐದುಗುಣಗಳಲ್ಲಿ ಹೆಚ್ಚು ಇರುವವನು ಪೂಜ್ಯನು. ಶೂದ್ರನಾದರೂ ತೊಂಬತ್ತರ ಮೇಲಿನ ವಯಸ್ಸಿನವನು ಮಾನ್ಯನು.

ಚಕ್ರಿಣೋ ದಶಮೀಸ್ಥಸ್ಯ ರೋಗಿಣೋ ಭಾರಿಣಃ ಸ್ತ್ರಿಯಾಃ ।
ಸ್ನಾತಕಸ್ಯ ಚ ರಾಜ್ಞಶ್ಚ ಪಂಥಾ ದೇಯೋ ವರಸ್ಯ ಚ ॥ ೧೩೮

ವಾಹನಾರೂಢನು, ಮುದುಕನು, ರೋಗಿ, ಭಾರಹೊರುವವನು, ಹೆಂಗಸು, ಸ್ನಾತಕ, ರಾಜ, ವರ ಇವರಿಗೆ ದಾರಿ ನಡೆಯುವಾಗ ದಾರಿ ಕೊಡಬೇಕು.

ತೇಷಾಂ ತು ಸಮವೇತಾನಾಂ ಮಾನ್ಯೌ ಸ್ನಾತಕಪಾರ್ಥಿವೌ ।
ರಾಜಸ್ನಾತಕಯೋಶ್ಚೈವ ಸ್ನಾತಕೋ ನೃಪಮಾನಭಾಕ್ ॥ ೧೩೯

ಮೇಲೆ ಹೇಳಿದವರಲ್ಲಿ ಸ್ನಾತಕನೂ,ರಾಜನೂ ಈ ಅನೇಕರಲ್ಲಿ ಮಾನ್ಯರು. ಸ್ನಾತಕನು ರಾಜಮಾನ್ಯನು.

ಉಪನೀಯ ತು ಯಃ ಶಿಷ್ಯಂ ವೇದಮಧ್ಯಾಪಯೇದ್ದ್ವಿಜಃ ।
ಸಕಲ್ಪಂ ಸರಹಸ್ಯಂ ಚ ತಮಾಚಾರ್ಯಂ ಪ್ರಚಕ್ಷತೇ ॥ ೧೪೦

ಈಗ ಕೆಲವು ಸಂಜ್ಞೆಗಳನ್ನು ಹೇಳುತ್ತಾರೆ. ಆ ಪದಗಳಿಂದ ಈ ಶಾಸ್ತ್ರದಲ್ಲಿ ವ್ಯವಹಾರವಿದೆ. ಒಬ್ಬ ಹುಡುಗನಿಗೆ ಉಪನಯನಮಾಡಿ ಶಿಷ್ಯನನ್ನಾಗಿ

ಸ್ವೀಕರಿಸಿ ವೇದ–ಮಂತ್ರವನ್ನು, ಯಜ್ಞವಿದ್ಯೆ–ಬ್ರಹ್ಮವಿದ್ಯೆಗಳನ್ನು ಕೂಡ ಯಾವನು ಕಲಿಸುವನೋ ಅವನು ಆಚಾರ್ಯನು. ತಾನು ಆಚರಿಸಿ ಇತರರಿಗೆ ಬೋಧಿಸಲು ಶಕ್ತನಾದವನು (ಆ–ಚಾರ್ಯ).

ಏಕದೇಶಂ ತು ವೇದಸ್ಯ ವೇದಾಂಗಾನ್ಯಪಿ ವಾ ಪುನಃ ।
ಯೋಽಧ್ಯಾಪಯತಿ ವೃತ್ತ್ಯರ್ಥಮುಪಾಧ್ಯಾಯಃ ಸ ಉಚ್ಯತೇ ॥ ೧೪೧

ಯಾರು ಜೀವನೋಪಾಯಕ್ಕಾಗಿ ಧನ ಸ್ವೀಕಾರ ಮಾಡಿ ವೇದದ ಸ್ವಲ್ಪ ಭಾಗವನ್ನು ಅಥವಾ ವೇದಾಂಗವನ್ನು (ಶಾಸ್ತ್ರವನ್ನು) ಕಲಿಸುವನೋ ಅವನು ಉಪಾಧ್ಯಾಯನು.

ನಿಷೇಕಾದೀನಿ ಕರ್ಮಾಣಿ ಯಃ ಕರೋತಿ ಯಥಾವಿಧಿ ।
ಸಂಭಾವಯತಿ ಚಾನ್ನೇನ ಸ ವಿಪ್ರೋ ಗುರುರುಚ್ಯತೇ ॥ ೧೪೨

ಜನಕ ತಂದೆಯು ಹೀಗೆ ಮಾಡಬಲ್ಲವನಾದರೆ ಅವನೂ ಗುರುವು. ಆತ ಗರ್ಭಾಧಾನಾದಿ ಸಂಸ್ಕಾರಗಳನ್ನು ಮಾಡಿ ಅನ್ನದಿಂದಲೂ ಪೋಷಿಸುವವನು. ಮೃತಪಿತೃಕನಿಗೆ ಬೇರೊಬ್ಬನು ಹೀಗೆ ಮಾಡಿದರೆ ಅವನೂ ಗುರುವಾಗಲು ವಿರೋಧವಿಲ್ಲ.

ಅಗ್ನ್ಯಾಧೇಯಂ ಪಾಕಯಜ್ಞಾನಗ್ನಿಷ್ಟೋಮಾದಿಕಾನ್ಮಖಾನ್ ।
ಯಃ ಕರೋತಿ ವೃತೋ ಯಸ್ಯ ಸ ತಸ್ಯರ್ತ್ವಿಗಿಹೋಚ್ಯತೇ ॥ ೧೪೩

ಆಹವನೀಯಾದಿ ಅಗ್ನಿ ಸ್ವೀಕಾರ, ಅಷ್ಟಕಾ, ಯಜ್ಞಗಳನ್ನು ಯಾವನನ್ನು ವರಿಸಿ ಗೃಹಪತಿಯು ಮಾಡುವನೋ, ಅವನು ಅವನಿಗೆ 'ಋತ್ವಿಕ್' ಎಂದು ಕರೆಯುವನು.

ಯ ಆವೃಣೋತ್ಯವಿತಥಂ ಬ್ರಹ್ಮಣಾ ಶ್ರವಣಾವುಭೌ ।
ಸ ಮಾತಾ ಸ ಪಿತಾ ಜ್ಞೇಯಸ್ತಂ ನ ದ್ರುಹ್ಯೇತ್ಕದಾಚನ ॥ ೧೪೪

ಯಾವನು ತನ್ನ ಕಿವಿಗಳಿಗೆ ಸರಿಯಾಗಿ ವೇದ-ಮಂತ್ರ ಪೂರಣವನ್ನು ಮಾಡಿರುವನೋ, ಅವನು ಜನನೀ ಜನಕರಿಗೆ ಸಮಾನನು. ಎಂದೂ ಅವನನ್ನು ದ್ವೇಷಿಸಬಾರದು.

ಉಪಾಧ್ಯಾಯಾನ್ದಶಾಚಾರ್ಯ ಆಚಾರ್ಯಾಣಾಂ ಶತಂ ಪಿತಾ ।
ಸಹಸ್ರಂ ತು ಪಿತೄನ್ಮಾತಾ ಗೌರವೇಣಾತಿರಿಚ್ಯತೇ ॥ ೧೪೫

ಉಪಾಧ್ಯಾಯ, ಆಚಾರ್ಯ, ಪಿತೃ-ಮಾತೃಗಳಲ್ಲಿ ಉತ್ತರೋತ್ತರ ಶ್ರೇಷ್ಠತ್ವವು ಇಲ್ಲಿ ಹೇಳಲಾಗಿದೆ. ಇದೊಂದು ಸಾಮಾನ್ಯವಾದ ಗಾದೆ. ಈ ಲೋಕಗಾಥೆಯನ್ನು ತತ್ತ್ವದೃಷ್ಟಿಯಿಂದ ವಿಶ್ಲೇಷಿಸುವುದನ್ನು ಕೂಡಲೇ ಕಾಣಬಹುದು. ಈ ಮೊದಲು ಉಪನಿಷತ್ತನ್ನು ಕಲಿಸುವುದು ಆಚಾರ್ಯ ಲಕ್ಷಣದಲ್ಲಿ ಬಂದಿದೆ.

ಉತ್ಪಾದಕಬ್ರಹ್ಮದಾತ್ರೋರ್ಗರೀಯಾನ್ ಬ್ರಹ್ಮದಃ ಪಿತಾ ।
ಬ್ರಹ್ಮಜನ್ಮ ಹಿ ವಿಪ್ರಸ್ಯ ಪ್ರೇತ್ಯ ಚೇಹ ಚ ಶಾಶ್ವತಂ ॥ ೧೪೬

ದೇಹಜನಕ, ಬ್ರಹ್ಮಜ್ಞಾನ ಜನಕರಲ್ಲಿ ಬ್ರಹ್ಮಜ್ಞಾನ ಜನಕನು ಶ್ರೇಷ್ಠನು. ಬ್ರಹ್ಮಜನ್ಮವು ಸ್ಥಿರಫಲವು; ಆದರೆ ದೇಹವು ವಿನಾಶಿಯು.

ಕಾಮಾನ್ಮಾತಾ ಪಿತಾ ಚೈನಂ ಯದುತ್ಪಾದಯತೋ ಮಿಥಃ ।
ಸಂಭೂತಿಂ ತಸ್ಯ ತಾಂ ವಿದ್ಯಾದ್ಯದ್ಯೋನಾವಭಿಜಾಯತೇ ॥ ೧೪೭

ಮಾತಾ-ಪಿತೃಗಳಿಂದ ಆಗುವ ದೇಹಜನ್ಮವು ಪ್ರಾಣಿಸಮಾನವು. ದೇಹ ಜನ್ಮದಾನವನ್ನು ಪಶುಗಳೂ ಮಾಡುವುವು. ಅದಕ್ಕೆ ಮಹತ್ವವಿಲ್ಲ. ಆಚಾರ್ಯತ್ವದ ಎದುರು ಮಾತಾ-ಪಿತೃತ್ವವು ಕಿರಿದು.

ಆಚಾರ್ಯಸ್ತ್ವಸ್ಯ ಯಾಂ ಜಾತಿಂ ವಿಧಿವದ್ವೇದಪಾರಗಃ ।
ಉತ್ಪಾದಯತಿ ಸಾವಿತ್ರ್ಯಾ ಸಾ ಸತ್ಯಾ ಸಾಽಜರಾಽಮರಾ ॥ ೧೪೮

ವೇದವಿದ್ಯಾಪಾರಂಗತನಾದ ಆಚಾರ್ಯನು ಬ್ರಹ್ಮಜನ್ಮವನ್ನು ಮಾಡುವನು. ಈ ಜನ್ಮವು ಶಾಶ್ವತವು. ಪೂರ್ವಕಾಲದಲ್ಲಿ ಉಪನಯನಕರ್ತೃವು ಆಚಾರ್ಯನು; ಇಂದಿನ ಕಾಲದಲ್ಲಿ ತಂದೆಯು. ಈಗ ಅಧ್ಯಯನ ವ್ಯವಸ್ಥೆಯು ನಾಶವಾಗಿದೆ. ಅಧ್ಯಾಪಕರು ವಿರಲ. ಆ ಅಧ್ಯಯನವು ಈಗ ಪ್ರಿಯವೂ ಅಲ್ಲ. ಆದುದರಿಂದ ದೇಹಜನಕನು ಉಪನಯನ ತಂತ್ರವನ್ನು ಮಾತ್ರ ಮಾಡುವುದಾಗಿದೆ. ಸತ್ಯವಾದ ಬ್ರಹ್ಮಜ್ಞಾನದಾನವು ವೇದಾಂಗ ಸಹಿತವಾಗಿ, ವೇದೋಪನಿಷತ್ತುಗಳನ್ನು ಮೀಮಾಂಸಾ ಸಹಿತವಾಗಿ ಅಧ್ಯಾಪನ ಮಾಡಿಸಿ

ದಾಗ ಮಾತ್ರ ಪೂರ್ಣವಾಗುವುದು. ಅಂತಹ ವೇದಾಧ್ಯಯನಕ್ಕೆ ಉಪಕ್ರಮವು ಉಪನಯನವು. ಇಂತಹ ಜನ್ಮವು ದೇಹಜನ್ಮಕ್ಕಿಂತ ಬಹುಗುಣವು. ಅತಏವ ಆಚಾರ್ಯನು ಶ್ರೇಷ್ಠನು.

**ಅಲ್ಪಂ ವಾ ಬಹು ವಾ ಯಸ್ಯ ಶ್ರುತಸ್ಯೋಪಕರೋತಿ ಯಃ |**
**ತಮಪೀಹ ಗುರುಂ ವಿದ್ಯಾಚ್ಛ್ರುತೋಪಕ್ರಿಯಯಾ ತಯಾ || ೧೪೯**

ಸ್ವಲ್ಪವಾದ ಶಾಸ್ತ್ರಾಧ್ಯಯನಕ್ಕೆ ಉಪಕಾರ ಮಾಡುವವನನ್ನು ಕೂಡ ಈ ಶಾಸ್ತ್ರದಲ್ಲಿ ಗುರುವೆಂದು ಸಮ್ಮತಿಸುತ್ತೇವೆ. ಶಾಸ್ತ್ರಜ್ಞಾನ ಉಪಕಾರವು ಆಗಲೂ ಉಂಟಾಯಿತು. ಹಿಂದೆ ಹೇಳಿದಂತೆ ಕೇವಲ ಸಂಸ್ಕಾರ ಕರ್ತೃವು ಗುರುಸಂಜ್ಞಾಯೋಗ್ಯನಾದರೂ ಇವನು ಅರ್ಥದಲ್ಲಿ ಗುರುವು, ಮಹತ್ವ ಉಳ್ಳವನು.

**ಬ್ರಾಹ್ಮಸ್ಯ ಜನ್ಮನಃ ಕರ್ತಾ ಸ್ವಧರ್ಮಸ್ಯ ಚ ಶಾಸಿತಾ |**
**ಬಾಲೋಽಪಿ ವಿಪ್ರೋ ವೃದ್ಧಸ್ಯ ಪಿತಾ ಭವತಿ ಧರ್ಮತಃ || ೧೫೦**

ವೇದವಿದ್ಯಾವ್ಯಾಖ್ಯಾನ, ಬ್ರಹ್ಮಜ್ಞಾನಗಳನ್ನು ಉಂಟುಮಾಡುವ ಬಾಲಕನು ಕೂಡ ವಯೋವೃದ್ಧನಿಗೆ ಪಿತೃವು. ಆತನನ್ನು ಪಿತೃವಿನಂತೆ ಗೌರವಿಸಬೇಕು. ಇದಕ್ಕೆ ದೃಷ್ಟಾಂತವನ್ನು ಹೇಳುತ್ತೇನೆ:

**ಅಧ್ಯಾಪಯಾಮಾಸ ಪಿತೄನ್ ಶಿಶುರಾಂಗಿರಸಃ ಕವಿಃ |**
**ಪುತ್ರಕಾ ಇತಿಹೋವಾಚ ಜ್ಞಾನೇನ ಪರಿಗೃಹ್ಯ ತಾನ್ || ೧೫೧**

ಅಂಗಿರಸ್ಸಿನ ಮಗನು ವಿದ್ಯಾವಂತನಾಗಿದ್ದ. ತಂದೆಯ ಸೋದರರು, ಅವರ ಮಕ್ಕಳು ಮುಂತಾದವರಿಗೆ ಆತ ಕಲಿಸಿದನು. ಅವರು ವಯಸ್ಸಿನಲ್ಲಿ ಹಿರಿಯರಾಗಿದ್ದರು. ಅವರನ್ನೆಲ್ಲ ಶಿಷ್ಯರಾಗಿ ಭಾವಿಸಿ ಆತ ಅವರನ್ನು 'ಮಕ್ಕಳೆ' ಎಂದು ಕರೆದನು.

**ತೇ ತಮರ್ಥಮಪೃಚ್ಛಂತ ದೇವಾನಾಗತಮನ್ಯವಃ |**
**ದೇವಾಶ್ಚೈತಾನ್ ಸಮೇತ್ಯೋಚುರ್ನ್ಯಾಯ್ಯಂ ವಃ ಶಿಶುರುಕ್ತವಾನ್ || ೧೫೨**

ಆ ವಿದ್ಯಾರ್ಥಿಗಳು ಅದಕ್ಕೆ ಸಿಟ್ಟುಗೊಂಡು ದೇವತೆಗಳಲ್ಲಿ ದೂರಿಕೊಂಡರು. ಅದಕ್ಕೆ ದೇವತೆಗಳು, 'ಅದು ಸರಿಯಾಗಿದೆ, ಆ ಹುಡುಗನು ನಿಮ್ಮನ್ನು ನ್ಯಾಯವಾಗಿ ನೋಡಿಕೊಂಡಿದ್ದಾನೆ' ಎಂದರು.

ಅಜ್ಞೋ ಭವತಿ ವೈ ಬಾಲಃ ಪಿತಾ ಭವತಿ ಮಂತ್ರದಃ ।
ಅಜ್ಞಂ ಹಿ ಬಾಲಮಿತ್ಯಾಹುಃ ಪಿತೇತ್ಯೇವ ತು ಮಂತ್ರದಂ ॥ ೧೫೩

ಹುಡುಗನಿಗೆ ತಿಳಿಯದು. ಆದ್ದರಿಂದ ತಿಳಿವಳಿಕೆ ಇಲ್ಲದವನನ್ನು ಹುಡುಗನೆನ್ನುವರು. ಆದರೆ ಅದೇ ಮಂತ್ರದಾಯಕನು ( ಗುರುವು ) ಪಿತೃವು.

ನ ಹಾಯನೈರ್ನ ಪಲಿತೈರ್ನ ವಿತ್ತೇನ ನ ಬಂಧುಭಿಃ ।
ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥ ೧೫೪

ವರ್ಷ–ನೆರೆತ–ಹಣ-ಬಂಧುತ್ವಗಳ ಆಧಾರವನ್ನು ಋಷಿಗಳು ಧರ್ಮದ ಕುರಿತು ಕಾಣುವುದಿಲ್ಲ. ಅವರಿಗೆ ಸಾಂಗವೇದಾಧ್ಯಾಯಿಯೇ ಮಹಾತ್ಮನು.

ವಿಪ್ರಾಣಾಂ ಜ್ಞಾನತೋ ಜ್ಯೈಷ್ಠ್ಯಂ ಕ್ಷತ್ರಿಯಾಣಾಂ ತು ವೀರ್ಯತಃ ।
ವೈಶ್ಯಾನಾಂ ಧಾನ್ಯಧನತಃ ಶೂದ್ರಾಣಾಮೇವ ಜನ್ಮತಃ ॥ ೧೫೫

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಜ್ಞಾನ, ಬಲ, ಧನ-ಧಾನ್ಯ, ಜನ್ಮಗಳು ಮಹತ್ವಹೇತುಗಳು. ಪದಶಕ್ಯತಾವಚ್ಛೇದಕಗಳು. ಜಾತಿಯ ಗುಣವನ್ನು ಪೋಷಿಸಿಕೊಂಡು ವ್ಯಕ್ತಿಯು ಪೂರ್ಣನಾಗಿರಬೇಕೆಂದು ಆಶಯವು.

ನ ತೇನ ವೃದ್ಧೋ ಭವತಿ ಯೇನಾಸ್ಯ ಪಲಿತಂ ಶಿರಃ ।
ಯೋ ವೈ ಯುವಾಪ್ಯಧೀಯಾನಸ್ತಂ ದೇವಾಃ ಸ್ಥವಿರಂ ವಿದುಃ ॥ ೧೫೬

ತಲೆಗೂದಲು ನೆರೆತ ಮಾತ್ರಕ್ಕೆ ವೃದ್ಧನಲ್ಲ. ಯುವಕನಾದರೂ ವಿದ್ವಾಂಸನಾದರೆ ವೃದ್ಧ(ಜ್ಞಾನದಿಂದ ಬೆಳೆದವನು)ನೆನ್ನುವರು.

ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ ।
ಯಶ್ಚ ವಿಪ್ರೋಽನಧೀಯಾನಸ್ತ್ರಯಸ್ತೇ ನಾಮ ಬಿಭ್ರತಿ ॥ ೧೫೭

ಮರದಆನೆ, ಚರ್ಮದಮೃಗ, ಕಲಿಯದವಿಪ್ರ—ಇವರು ಹೆಸರಿಗೆ ಮಾತ್ರ ಇರುವವರು. ಮರದಆನೆ ಆನೆಯ ಕೆಲಸ ಮಾಡಬಲ್ಲುದೆ? ಆದುದರಿಂದ ಅವರವರ ಗುಣವನ್ನು ಅವರವರು ತುಂಬಿಕೊಳ್ಳಬೇಕು.

ಯಥಾ ಷಂಢೋಽಫಲಃ ಸ್ತ್ರೀಷು ಯಥಾ ಗೌರ್ಗವಿ ಚಾಫಲಾ ।
ಯಥಾ ಚಾಜ್ಞೇಽಫಲಂ ದಾನಂ ತಥಾ ವಿಪ್ರೋಽನೃಚೋಽಫಲಃ ॥ ೧೫೮

ಸ್ತ್ರೀಗೆ ಷಂಡನು, ಗೋವಿಗೆ ಗೋವು, ಹೆಡ್ಡನಿಗೆ ಧನದಾನ ಇವುಗಳ ದಾನ ನಿಷ್ಫಲಗಳಾದಂತೆ, ಜ್ಞಾನಹೀನ ವಿಪ್ರನು ಪರಿಹಾಸಪಾತ್ರನಾಗಿ, ಉನ್ಮಾದಾದಿ ರೋಗಿಯಂತೆ ಕಾರ್ಯಕಾರಿಯಲ್ಲ. ಮುಖವು ತನ್ನ ಜ್ಞಾನೇಂದ್ರಿಯಗಳಿಂದ ಬಾಹ್ಯ ವಸ್ತುಗಳ ಪರಿಜ್ಞಾನ ಮೂಲಕ ಹಿತಾಹಿತವನ್ನು ತನಗೂ ಇತರರಿಗೂ ತಿಳಿಸಬಲ್ಲಂತೆ, ಮುಖತುಲ್ಯನಾದವನು ವಿದ್ಯಾಹೀನನಾದರೆ ಪರರಿಗೆ ಮುಖ ಕಾರ್ಯವನ್ನು ಒದಗಿಸಲಾರನು ಎಂದು ಅಭಿಪ್ರಾಯವು.

ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋಽನುಶಾಸನಂ ।
ವಾಕ್ಚೈವ ಮಧುರಾ ಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮಿಚ್ಛತಾ ॥ ೧೫೯

ತನ್ನ ಉಪದೇಶವು ಯಥಾರ್ಥ-ಪೂರ್ಣ-ಪರಿಣಾಮಕಾರಿಯಾಗಬೇಕಾದರೆ ಶಿಷ್ಯ-ಹೆಂಡತಿ-ಮಕ್ಕಳು-ಸೇವಕರು-ಮಿತ್ರರು-ಶತ್ರುಗಳು-ನೆರೆಯವರು-ಊರವರು-ದೂರದವರು ಮುಂತಾದ ಹೇಳಬೇಕಾದವರಿಗೆಲ್ಲರಿಗೂ ಮೃದು ಮಧುರವಾದ ವಚನಗಳನ್ನು ಉಪಯೋಗಿಸಬೇಕು. ವಿದ್ಯಾದಾನ, ಆಜ್ಞಾದಾನ, ಅನುಭವದಾನ ಎಲ್ಲ ಹೀಗಿರಬೇಕು. "ಜಿಹ್ವಾಮೇ ಮಧುಮತ್ತಮಾ-ಮಧುಮತೀಂ ವಾಚಮುದ್ಯಾಸಂಶುಶ್ರೂಷೇಣ್ಯಾಂ" ಪ್ರೀತಿಯು ಮಹಾ ಅಸ್ತ್ರವು ಅದು ಎಲ್ಲರನ್ನು ವಶೀಕರಿಸುವುದು. ಮನುಷ್ಯನು ಮನಸ್ಸಿನಿಂದ ಪ್ರವೃತ್ತಿಯುಳ್ಳವನು. ಮಹಾತ್ಮಾ ಗಾಂಧಿಯರ ಅಹಿಂಸಾತತ್ವವೂ ಇದೇ, ಹೊಸದಲ್ಲ. ಅಹಿಂಸೆಯು ಸಾಧಿಸುವುದನ್ನು ದಂಡವು (ದೊಣ್ಣೆ) ಸಾಧಿಸಲಾರದು. ಇದು ಧರ್ಮಮರ್ಮವು, ಪ್ರತ್ಯಕ್ಷವು, ಧರ್ಮದ ಖನಿಯು.

ಯಸ್ಯ ವಾಙ್ಮನಸೀ ಶುದ್ಧೇ ಸಮ್ಯಗ್ಗುಪ್ತೇ ಚ ಸರ್ವದಾ ।
ಸ ವೈ ಸರ್ವಮವಾಪ್ನೋತಿ ವೇದಾಂತೋಪಗತಂ ಫಲಂ ॥ ೧೬೦

ಮಾತು-ಮನಸ್ಸುಗಳೆರಡೂ ಶುದ್ಧವಾಗಿ ರಕ್ಷಿಸಲ್ಪಟ್ಟಿದ್ದರೆ (ಮೇಲೆ ಹೇಳಿದಂತೆ) ಅವನು ಎಲ್ಲವನ್ನು ಪಡೆಯುತ್ತಾನೆ. ಸರ್ವಜ್ಞತ್ವ-ಸರ್ವಶಕ್ತತ್ವಗಳು ಲೌಕಿಕವಾಗಿಯೂ, ತಾತ್ವಿಕವಾಗಿಯೂ ಸಿದ್ಧಿಸುವುವು. ಇದಕ್ಕೆ ಶ್ರೀ

ರಾಮನು ಉತ್ತಮ ಉದಾಹರಣೆ. ರಾಮನು ವನದಲ್ಲಿ ಸುಗ್ರೀವ, ವಿಭೀಷಣ, ವಾನರಸಖ್ಯವನ್ನು ಗಳಿಸಿದನು. ಬಂಧಿತಳಾದ ಸೀತೆಯನ್ನು ತಂದನು. ಭಾರತೀಯ ಮನಶ್ಶಾಸ್ತ್ರವು ಇಲ್ಲಿ ಅಡಗಿದೆ. ಮುಂದೆ ಹೆಚ್ಚಿನ ವಿವರವಿದೆ.

**ನಾರುಂತುದಃ ಸ್ಯಾದಾರ್ತೋಽಪಿ ನ ಪರದ್ರೋಹಕರ್ಮಧೀಃ ।**
**ಯಯಾಸ್ಯೋದ್ವಿಜತೇ ವಾಚಾ ನಾಲೋಕ್ಯಾಂ ತಾಮುದೀರಯೇತ್ ॥ ೧೬೧**

ದುಃಖಿತಾವಸ್ಥೆಯಲ್ಲೂ ಕೂಡ ತಾನು ಮರ್ಮಪೀಡಕವಚನ, ಅಪ್ರಿಯ ಕರ್ಮ, ವಿರೋಧ ಬುದ್ಧಿಗಳನ್ನು ಮಾಡಬಾರದು. ಪರೋದ್ವೇಜಕ ವಚನವು ಲೋಕಪ್ರೀತಿಕರವಲ್ಲ. ಆದುದರಿಂದ ಅದನ್ನು ಆಡಬಾರದು. ಇತರರ ವಿಷಯದಲ್ಲಿ ತಾನು ಹೀಗಿರಬೇಕು. ಆದರೂ ತಾನು ಪ್ರಶಂಸಾ ಪ್ರಿಯನಾಗಬಾರದು.

**ಸಮ್ಮಾನಾದ್ ಬ್ರಾಹ್ಮಣೋ ನಿತ್ಯಮುದ್ವಿಜೇತ ವಿಷಾದಿವ ।**
**ಅಮೃತಸ್ಯೇವ ಚಾಕಾಂಕ್ಷೇದವಮಾನಸ್ಯ ಸರ್ವದಾ ॥ ೧೬೨**

ವ್ಯಕ್ತಿ ಪೂಜಾಪ್ರಿಯನಾಗಬಾರದು. ಅದಕ್ಕೆ ವಿಷದಂತೆ ಹೇಸಬೇಕು. ಅವಮಾನವು ಕರ್ತವ್ಯ–ಪ್ರಯತ್ನಗಳಿಗೆ ಪ್ರೇರಕವಾಗುವುದು. ಅದರಿಂದ ಅದಕ್ಕೆ ಅಮೃತದಷ್ಟು ಆಸೆಪಡಬಹುದು. ಆಗ ಬ್ರಾಹ್ಮಣನು ದೇವನು.

**ಸುಖಂ ಹ್ಯವಮತಃ ಶೇತೇ ಸುಖಂ ಚ ಪ್ರತಿಬುಧ್ಯತೇ ।**
**ಸುಖಂ ಚರತಿ ಲೋಕೇಽಸ್ಮಿನ್ ಅವಮಂತಾ ವಿನಶ್ಯತಿ ॥ ೧೬೩**

ಅನುಮಾನ ಹೊಂದಿದವನು ಇನ್ನೊಬ್ಬರ ಅಜ್ಞತೆಯನ್ನೂ, ತನ್ನ ವಿಜ್ಞತೆಯನ್ನೂ ನೆನೆದು ಧೀರಚಿತ್ತದಿಂದ ಸಹಿಸಿ, ಶಾಂತವಾಗಿದ್ದರೆ, ಸುಖವಾಗಿ ನಿದ್ರಿಸಿ ಎಚ್ಚತ್ತರೆ, ಸಂತೋಷದಿಂದ ಸಂಚರಿಸಿದರೆ, ಆಗ ಅಪಮಾನ ಕರ್ತೃವು ತಾನು ನಾಚಿಕೊಂಡು ಮಾಯವಾಗುವನು. ಅವನ ಅಜ್ಞಾನವು ಅವನಿಗೆ ಗೋಚರಿಸುವುದು.

**ಅನೇನ ಕ್ರಮಯೋಗೇನ ಸಂಸ್ಕೃತಾತ್ಮಾ ದ್ವಿಜಃ ಶನೈಃ ।**
**ಗುರೌ ವಸನ್ ಸಂಚಿನುಯಾತ್ ಬ್ರಹ್ಮಾಧಿಗಮಿಕಂ ತಪಃ ॥ ೧೬೪**

ಈ ವರೆಗೆ ಹೇಳಿದ ಕ್ರಮದಿಂದ ದೇಹ-ಮನಸ್ಸುಗಳ ಸಂಸ್ಕಾರವಂತನಾಗಿ ಬ್ರಹ್ಮಲಾಭಕರವಾದ ತಪಸ್ಸನ್ನು ಕೂಡ ಸಂಪಾದಿಸಬೇಕು.

**ತಪೋ ವಿಶೇಷೈರ್ವಿವಿಧೈರ್ವ್ರತೈಶ್ಚ ವಿಧಿಚೋದಿತೈಃ ।**
**ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ ॥ ೧೬೫**

ಆಚಮನ, ಸ್ನಾನ ಮುಂತಾದ ಮುಂದೆ ಹೇಳುವ ವ್ರತಗಳೊಡನೆ ಆಮೂಲಾಗ್ರವೇದವನ್ನು ಅರ್ಥಸಹಿತವಾಗಿ ಹೊಂದಬೇಕು.

**ವೇದಮೇವ ಸದಾಭ್ಯಸ್ಯೇತ್ತಪಸ್ತಪ್ಸ್ಯಂದ್ವಿಜೋತ್ತಮಃ ।**
**ವೇದಾಭ್ಯಾಸೋ ಹಿ ವಿಪ್ರಸ್ಯ ತಪಃ ಪರಮಿಹೋಚ್ಯತೇ ॥ ೧೬೬**

ತಪಸ್ಸನ್ನು ಆಚರಿಸಬೇಕೆಂದಿರುವ ಬ್ರಾಹ್ಮಣನು ವೇದವನ್ನು ಯಾವಾಗಲೂ ಅಭ್ಯಸಿಸಬೇಕು. ಯಾಕಂದರೆ ವೇದಾಭ್ಯಾಸವು ಬ್ರಾಹ್ಮಣನ ಶ್ರೇಷ್ಠ ತಪಸ್ಸೆಂದು ಹೇಳಲಾಗಿದೆ.

**ಆ ಹೈವ ಸ ನಖಾಗ್ರೇಭ್ಯಃ ಪರಮಂ ತಪ್ಯತೇ ತಪಃ ।**
**ಯಃ ಸ್ರಗ್ವ್ಯಪಿ ದ್ವಿಜೋಽಧೀತೇ ಸ್ವಾಧ್ಯಾಯಂ ಶಕ್ತಿತೋಽನ್ವಹಂ ॥ ೧೬೭**

ವೇದಾಧ್ಯಯನವು ಪಾದಾದಿಚೂಡಾಂತ ಕಠಿಣ ತಪಸ್ಸು. ಪುಷ್ಪಮಾಲ್ಯವರ್ಜನವು ಅದಕ್ಕಿಂತ ದೊಡ್ಡ ವ್ರತವಲ್ಲ. ಅಲಂಕಾರ ಪ್ರಿಯನಾಗಬಹುದು. ಸ್ವಾಧ್ಯಾಯ ಬಿಡಬಾರದು.

**ಯೋಽನಧೀತ್ಯ ದ್ವಿಜೋ ವೇದಮನ್ಯತ್ರ ಕುರುತೇ ಶ್ರಮಂ ।**
**ಸ ಜೀವನ್ನೇವ ಶೂದ್ರತ್ವಮಾಶು ಗಚ್ಛತಿ ಸಾನ್ವಯಃ ॥ ೧೬೮**

ಧರ್ಮ, ಅರ್ಥ, ಕಾಮ, ಮೋಕ್ಷಪ್ರಾಪಕವಾದ ವಿದ್ಯೆಯು ಅಡಗಿರುವ ವೇದಾಧ್ಯಯನ ಬಿಟ್ಟು ಇತರ ವಿದ್ಯೆಗಳಲ್ಲಿ ಶ್ರಮಿಸುವವನು ನಿಕೃಷ್ಟನಾಗುವನು.

**ಮಾತುರಗ್ರೇಽಧಿಜನನಂ ದ್ವಿತೀಯಂ ಮೌಂಜಿಬಂಧನೇ ।**
**ತೃತೀಯಂ ಯಜ್ಞದೀಕ್ಷಾಯಾಂ ದ್ವಿಜಸ್ಯ ಶ್ರುತಿಚೋದನಾತ್ ॥ ೧೬೯**

ಗರ್ಭದಿಂದ, ಉಪನಯನದಿಂದ, ಯಜ್ಞದೀಕ್ಷೆಯಿಂದ ಹೀಗೆ ಮೂರು ಬಾರಿ ದೊಡ್ಡ ಪರಿವರ್ತನೆಯ ಘಟನೆಗಳು. ಯಜ್ಞದಲ್ಲಿ ಆಯಾ ದ್ರವ್ಯಗಳ

ಅಗ್ನಿದಾನವು ಅಲೌಕಿಕ ಫಲದೊಡನೆ, ದಹನ ಕಾಲದಲ್ಲಿ ದಹನಕ್ರಿಯೆಯಿಂದ ವಾತಾವರಣದಲ್ಲಿ ರಾಸಾಯನಿಕ ಅದ್ಭುತ ವಿಪರಿಣಾಮ ಮಾಡುವುದು. ವಾಯುವು ಗುಣಪೂರ್ಣವಾಗಿ ಶ್ವಾಸಕೋಶವನ್ನು ಪ್ರವೇಶಿಸುವುದು. ಸೂಕ್ಷ್ಮಾತಿಸೂಕ್ಷ್ಮ ಅಣುರೂಪದ ದ್ರವ್ಯ (ಘೃತ–ಸಮಿತ್) ಘಟಕವು ಸರ್ವ ಶರೀರ ವ್ಯಾಪಿಯಾಗುವುದು. ಭಂಗಿ–ತಂಬಾಕು ವಿವಿಧ ವನಸ್ಪತಿಗಳ ಧೂಮ ಪಾನವು ಈಗ ಆಚರಣೆಯಲ್ಲಿರುವುದರಿಂದ ಅದರ ಪರಿಣಾಮವು ದೇಹದ ಅಂಗಾಂಗಗಳಲ್ಲಿ ಆಗುವುದು ಪ್ರತ್ಯಕ್ಷವು. ಆಯುರ್ವೇದವು ಔಷಧ ಧೂಮ ಪಾನದ ಅನಂತಗುಣವರ್ಣನೆ ಮಾಡಿದೆ. ಅದರಂತೆ ಹೋಮಯಜ್ಞಗಳ ಧೂಮವು ಮಹಾಗುಣವು.

ತತ್ರ ಯದ್ಬ್ರಹ್ಮಜನ್ಮಾಸ್ಯ ಮೌಂಜೀಬಂಧನಚಿಹ್ನಿತಂ ।
ತತ್ರಾಸ್ಯ ಮಾತಾ ಸಾವಿತ್ರೀ ಪಿತಾ ತ್ವಾಚಾರ್ಯ ಉಚ್ಯತೇ ॥ ೧೭೦

ಬ್ರಾಹ್ಮಣನ ಉಪನಯನಜನ್ಮದಲ್ಲಿ ಗಾಯತ್ರಿಯು ತಾಯಿ, ಆಚಾರ್ಯನು ಪಿತೃವು.

ವೇದಪ್ರದಾನಾದಾಚಾರ್ಯಂ ಪಿತರಂ ಪರಿಚಕ್ಷತೇ ।
ನ ಹ್ಯಸ್ಮಿನ್ಯುಜ್ಯತೇ ಕರ್ಮ ಕಿಂಚಿದಾಮೌಂಜಿಬಂಧನಾತ್ ॥ ೧೭೧

ಉಪನಯನವಾಗದೆ ಕರ್ಮಾಧಿಕಾರವು ಬಾರದಿರುವುದರಿಂದ ವೇದ ದಾಯಕನೇ ಪಿತೃಗುಣಪೂರ್ಣನು.

ನಾಭಿವ್ಯಾಹಾರಯೇದ್ಬ್ರಹ್ಮ ಸ್ವಧಾನಿನಯನಾದೃತೇ ।
ಶೂದ್ರೇಣ ಹಿ ಸಮಸ್ತಾವತ್ ಯಾವದ್ವೇದೇನ ಜಾಯತೇ ॥ ೧೭೨

ಉಪನಯನವಾಗದೆ ವೇದೋಚ್ಚಾರವಿಲ್ಲದಿರುವುದರಿಂದ ಆಗ ಅವನು ಉಪನಯನ ಇಲ್ಲದವನಿಗೆ ಸಮನು.

ಕೃತೋಪನಯನಸ್ಯಾಸ್ಯ ವ್ರತಾದೇಶನಮಿಷ್ಯತೇ ।
ಬ್ರಹ್ಮಣೋ ಗ್ರಹಣಂ ಚೈವ ಕ್ರಮೇಣವಿಧಿಪೂರ್ವಕಂ ॥ ೧೭೩

ಉಪನಯನದ ಬಳಿಕ ವ್ರತವಿದೆ. ವೇದಾಧ್ಯಯನವಿದೆ.

ಯದ್ಯಸ್ಯ ವಿಹಿತಂ ಚರ್ಮ ಯತ್ಸೂತ್ರಂ ಯಾ ಚ ಮೇಖಲಾ ।
ಯೋ ದಂಡೋ ಯಚ್ಚ ವಸನಂ ತತ್ತದಸ್ಯ ವ್ರತೇಷ್ವಪಿ ॥ ೧೭೪

ಗೋದಾನಾದಿ ವೇದವ್ರತಗಳಲ್ಲಿ ಉಪನಯನದಂತೆ ಉತ್ತರೀಯ, ಅಧರೀಯ, ಉಪವೀತ, ದಂಡಗಳನ್ನು ಹೊಸದು ತಕ್ಕೊಳ್ಳಬೇಕು. ಅಲ್ಲದೆ

ಸೇವೇತೇಮಾಂಸ್ತು ನಿಯಮಾನ್ಬ್ರಹ್ಮಚಾರೀ ಗುರೌ ವಸನ್ ।
ಸನ್ನಿಯಮ್ಯೇಂದ್ರಿಯಗ್ರಾಮಂ ತಪೋವೃದ್ಧ್ಯರ್ಥಮಾತ್ಮನಃ ॥ ೧೭೫

ಗುರುಕುಲದಲ್ಲಿದ್ದು ವೇದಾಧ್ಯಯನದೊಡನೆ ಈ ನಿಯಮಗಳನ್ನು ಪಾಲಿಸುತ್ತ ಇಂದ್ರಿಯಗಳನ್ನು ಜಯಿಸಿ ತಪೋವೃದ್ಧಿಗಾಗಿ ಆಚರಿಸುತ್ತಿರಬೇಕು.

ನಿತ್ಯಂ ಸ್ನಾತ್ವಾ ಶುಚಿಃ ಕುರ್ಯಾದ್ದೇವರ್ಷಿಪಿತೃತರ್ಪಣಂ ।
ದೇವತಾಭ್ಯರ್ಚನಂ ಚೈವ ಸಮಿದಾಧಾನಮೇವ ಚ ॥ ೧೭೬

ಸ್ನಾನ–ದೇವರ್ಷಿಪಿತೃತರ್ಪಣ–ದೇವತಾರ್ಚನೆ– ಸಮಿದ್ಧೋಮಗಳನ್ನು ಮಾಡುತ್ತಿರಬೇಕು.

ವರ್ಜಯೇನ್ಮಧು ಮಾಂಸಂ ಚ ಗಂಧಂ ಮಾಲ್ಯಂ ರಸಾನ್‌ಸ್ತ್ರಿಯಃ ।
ಶುಕ್ತಾನಿ ಯಾನಿ ಸರ್ವಾಣಿ ಪ್ರಾಣಿನಾಂ ಚೈವ ಹಿಂಸನಂ ॥ ೧೭೭

ಮಧು, ಮಾಂಸ, ಗಂಧ, ಮಾಲ್ಯ, ಗುಡಾದಿಕೃತ್ರಿಮಮಧುರರಸ,ಸ್ತ್ರೀ, ಕೊಳೆಸಿ ಹುಳಿಮಾಡಿದ ಮಾದಕಪದಾರ್ಥ, ಪ್ರಾಣಿ ಹಿಂಸೆ ಇವುಗಳನ್ನು ಬಿಡಬೇಕು. ಇವುಗಳು ಕಾಮೋತ್ತೇಜಕಗಳಾದುದರಿಂದ ವರ್ಜನೀಯಗಳು.

ಅಭ್ಯಂಗಮಂಜನಂ ಚಾಕ್ಷ್ಣೋರುಪಾನಚ್ಛತ್ರಧಾರಣಂ ।
ಕಾಮಂ ಕ್ರೋಧಂ ಚ ಲೋಭಂ ಚ ನರ್ತನಂ ಗೀತವಾದನಂ ॥ ೧೭೮

ಅಭ್ಯಂಗಾದಿಗಳೂ ಕಾಮೋತ್ತೇಜಕಗಳು. ಪ್ರಯಾಣಶ್ರಮಾದಿಗಳುಳ್ಳ ಗೃಹಸ್ಥನಿಗೆ ಅವಶ್ಯವಿರುವವುಗಳು. ಆದುದರಿಂದ ಬ್ರಹ್ಮಚಾರಿಗೆ ಬೇಡವು.

ದ್ಯೂತಂ ಚ ಜನವಾದಂ ಚ ಪರಿವಾದಂ ತಥಾನೃತಂ ।
ಸ್ತ್ರೀಣಾಂ ಚ ಪ್ರೇಕ್ಷಣಾಲಂಭಮುಪಘಾತಂ ಪರಸ್ಯ ಚ ॥ ೧೭೯

ದ್ಯೂತ, ಜನವಾದ, ಪರಿವಾದ, ಸುಳ್ಳು, ಸ್ತ್ರೀಪ್ರೇಕ್ಷಣೆ ಇತ್ಯಾದಿಗಳು ವಿದ್ಯಾರ್ಥಿಗೆ ಅಧಿಕಪ್ರಸಂಗಗಳು. ಅವುಗಳಲ್ಲಿ ತನ್ಮಯನಾದಂತೆ ಆತನ ವಿದ್ಯಾಭಂಗವಾಗುತ್ತದೆ.

ಏಕಃ ಶಯೀತ ಸರ್ವತ್ರ ನ ರೇತಃ ಸ್ಕಂದಯೇತ್ಕ್ವಚಿತ್ ।
ಕಾಮಾದ್ಧಿ ಸ್ಕಂದಯನ್ ರೇತೋ ಹಿನಸ್ತಿ ವ್ರತಮಾತ್ಮನಃ ॥ ೧೮೦

ಒಂಟಿಯಾಗಿ ಮಲಗಬೇಕು. ಇಲ್ಲವಾದರೆ ಸಲಿಂಗ ರತಿಗೆ ಅವಕಾಶವು. ಸ್ವರತಿಯಿಂದ ರೇತಃ ಸ್ಖಲನ ಮಾಡಬಾರದು. ಸ್ವಯಂ ವೀರ್ಯಕೋಶವು ಪೂರ್ಣತುಂಬಿ ವೀರ್ಯಪಾತವಾದರೆ ಅದು ರೋಗವಲ್ಲ; ಪಾಪವಲ್ಲ; ಪ್ರಾಯಶ್ಚಿತ್ತಾರ್ಹವಲ್ಲ.

ಸ್ವಪ್ನೇ ಸಿಕ್ತ್ವಾ ಬ್ರಹ್ಮಚಾರೀ ದ್ವಿಜಃ ಶುಕ್ರಮಕಾಮತಃ ।
ಸ್ನಾತ್ವಾರ್ಕಮರ್ಚಯಿತ್ವಾ ತ್ರಿಃ ಪುನರ್ಮಾಮಿತ್ಯೃಚಂ ಜಪೇತ್ ॥ ೧೮೧

ಸ್ವಪ್ನದಲ್ಲಿ ರೇತಃ ಸ್ಖಲನವಾದರೆ ಮಿಂದು ಪುನರ್ಮಾಮಿತ್ಯಾದಿ ಮಂತ್ರವನ್ನು ಜಪಿಸಬೇಕು.

ಉದಕುಂಭಂ ಸುಮನಸೋ ಗೋಶಕೃನ್ಮೃತ್ತಿಕಾಕುಶಾನ್ ।
ಆಹರೇದ್ಯಾವದರ್ಥಾನಿ ಭೈಕ್ಷಂ ಚಾಹರಹಶ್ಚರೇತ್ ॥ ೧೮೨

ಗುರುವಿಗೆ ಅವಶ್ಯವಿದ್ದಷ್ಟು ನೀರು, ಹೂ, ಗೋಮಯ, ಮೃತ್ತಿಕಾ, ಕುಶಗಳನ್ನು ತರಬೇಕು. ಹೆಚ್ಚು ತಂದು ದುರುಪಯೋಗಪಡಿಸಬಾರದು. ಪ್ರತಿದಿನ ಭಿಕ್ಷಾಟನ ಮಾಡಬೇಕು.

ವೇದಯಜ್ಞೈರಹೀನಾನಾಂ ಪ್ರಶಸ್ತಾನಾಂ ಸ್ವಕರ್ಮಸು ।
ಬ್ರಹ್ಮಚಾರ್ಯಾಹರೇದ್ಭೈಕ್ಷಂ ಗೃಹೇಭ್ಯಃ ಪ್ರಯತೋಽನ್ವಹಂ ॥ ೧೮೩

ಸ್ವಕಾರ್ಯನಿರತರಲ್ಲದವರ ಮನೆಯಿಂದ ಭಿಕ್ಷಾನ್ನ ಸ್ವೀಕರಿಸಬಾರದು.

ಗುರೋಃ ಕುಲೇ ನ ಭಿಕ್ಷೇತ ನ ಜ್ಞಾತಿಕುಲಬಂಧುಷು ।
ಅಲಾಭೇ ತ್ವನ್ಯಗೇಹಾನಾಂ ಪೂರ್ವಂ ಪೂರ್ವಂ ವಿವರ್ಜಯೇತ್ ॥ ೧೮೪

ಗುರುಸಪಿಂಡರು, ತನ್ನಸಪಿಂಡರು, ಮಾತೃಸಪಿಂಡರು ಇಷ್ಟರಲ್ಲಿ ಭಿಕ್ಷಾಟನ ಮಾಡಬಾರದು. ಬೇರೆ ದೊರೆಯದಿದ್ದ ಪ್ರಸಂಗದಲ್ಲಿ ಈಗ ಹೇಳಿದುದರಲ್ಲಿ ಮೊದಲು ಮೊದಲಿನದನ್ನು ಬಿಡಬೇಕು. (ಅನಿವಾರ್ಯವಾಗಿ, ನಂತರ ಹೇಳಿದವರಲ್ಲಿ ಭಿಕ್ಷಾಟನ ನಡೆಯುಬಹುದು).

ಸರ್ವಂ ವಾಪಿ ಚರೇದ್ಗ್ರಾಮಂ ಪೂರ್ವೋಕ್ತಾನಾಮಸಂಭವೇ ।
ನಿಯಮ್ಯ ಪ್ರಯತೋ ವಾಚಮಭಿಶಸ್ತಾಂಸ್ತು ವರ್ಜಯೇತ್ ॥ ೧೮೫

ಗ್ರಾಮದಲ್ಲಿ ಯೋಗ್ಯರು ದೊರೆಯದಿದ್ದರೆ ಅಯೋಗ್ಯರಿಂದಲೂ ಮೌನವಾಗಿ ಭಿಕ್ಷೆಪಡೆಯಬಹುದು. ಮಹಾಪಾತಕಿಗಳನ್ನು ಸರ್ವಥಾ ವರ್ಜಿಸಬೇಕು.

ದೂರಾದಾಹೃತ್ಯ ಸಮಿಧಃ ಸನ್ನಿದಧ್ಯಾದ್ವಿಹಾಯಸಿ ।
ಸಾಯಂ ಪ್ರಾತಶ್ಚ ಜುಹುಯಾತ್ತಾಭಿರಗ್ನಿಮತಂದ್ರಿತಃ ॥ ೧೮೬

ದೂರದಿಂದ ಸಮಿತ್ತುಗಳನ್ನು ತಂದು ಹೊರಗೆ ಹರವಬೇಕು. ಸಾಯಂ-ಪ್ರಾತಃ ಅವನ್ನು ಹೋಮಿಸಬೇಕು.

ಅಕೃತ್ವಾ ಭೈಕ್ಷಚರಣಮಸಮಿಧ್ಯ ಚ ಪಾವಕಂ ।
ಅನಾತುರಃ ಸಪ್ತರಾತ್ರಮವಕೀರ್ಣಿವ್ರತಂ ಚರೇತ್ ॥ ೧೮೭

ರೋಗಾವಸ್ಥೆಯ ಹೊರತು ಭಿಕ್ಷಾ–ಅಗ್ನಿಕಾರ್ಯಗಳನ್ನು ಏಳುದಿನ ಮಾಡದಿದ್ದರೆ ವ್ರತವು ಲೋಪವಾಯಿತೆಂದು ಭಾವಿಸಬೇಕು.

ಭೈಕ್ಷೇಣ ವರ್ತಯೇನ್ನಿತ್ಯಂ ನೈಕಾನ್ನಾದೀ ಭವೇದ್ವ್ರತೀ ।
ಭೈಕ್ಷೇಣ ವ್ರತಿನೋ ವೃತ್ತಿರುಪವಾಸಸಮಾ ಸ್ಮೃತಾ ॥ ೧೮೮

ಬ್ರಹ್ಮಚಾರಿಯು ಭಿಕ್ಷಾನ್ನವನ್ನು ಭುಂಜಿಸಬೇಕು. ಈ ವೃತ್ತಿಯು ಉಪವಾಸಸಮಗುಣವು.

ವ್ರತವದ್ದೇವದೈವತ್ಯೇ ಪಿತ್ರ್ಯೇ ಕರ್ಮಣ್ಯಥರ್ಷಿವತ್ ।
ಕಾಮಮಭ್ಯರ್ಥಿತೋಽಶ್ನೀಯಾದ್ವ್ರತಮಸ್ಯ ನ ಲುಪ್ಯತೇ ॥ ೧೮೯

ದೇವ-ಪಿತೃಗಳ ಕಾರ್ಯಗಳಿಗೆ ಕರೆದರೆ ಇಚ್ಛೆಯಿದ್ದರೆ ಏಕಾನ್ನಭೋಜನವು ವ್ರತಲೋಪಕವಲ್ಲ. ಆದರೆ ಆಗಲೂ ವ್ರತನಿಷಿದ್ಧ ಪದಾರ್ಥಗಳನ್ನು ಸೇವಿಸಬಾರದು.

ಬ್ರಾಹ್ಮಣಸ್ಯೈವ ಕರ್ಮೈತದುಪದಿಷ್ಟಂ ಮನೀಷಿಭಿಃ ।
ರಾಜನ್ಯವೈಶ್ಯಯೋಸ್ತ್ವೇವಂ ನೈತತ್ಕರ್ಮ ವಿಧೀಯತೇ ॥ ೧೯೦

ಈಗ ಹೇಳಿದ ನಿಯಮವು ಬ್ರಾಹ್ಮಣನಿಗೆ ಮಾತ್ರ, ಇತರರಿಗಲ್ಲ.

ಚೋದಿತೋ ಗುರುಣಾ ನಿತ್ಯಮಪ್ರಚೋದಿತ ಏವ ವಾ ।
ಕುರ್ಯಾದಧ್ಯಯನೇ ಯತ್ನಮಾಚಾರ್ಯಸ್ಯ ಹಿತೇಷು ಚ ॥ ೧೯೧

ನಿತ್ಯಾಭ್ಯಾಸದಲ್ಲಿ ಗುರುಪ್ರೇರಣೆಯನ್ನು ಕಾಯಬಾರದು. ಸದಾ ಓದುತ್ತಿರಬೇಕು. ಗುರುಹಿತದಲ್ಲೂ ತಪ್ಪಬಾರದು.

ಶರೀರಂಚೈವ ವಾಚಂ ಚ ಬುದ್ಧೀಂದ್ರಿಯಮನಾಂಸಿ ಚ ।
ನಿಯಮ್ಯ ಪ್ರಾಂಜಲಿಸ್ತಿಷ್ಠೇ ದ್ವೀಕ್ಷಮಾಣೋ ಗುರೋರ್ಮುಖಂ ॥ ೧೯೨

ಶರೀರ–ವಾಕ್–ಇಂದ್ರಿಯ–ಮನಸ್ಸುಗಳನ್ನು ನಿಯಮಿಸಿ ಅಂಜಲಿಬದ್ಧನಾಗಿ ಗುರುಮುಖವನ್ನು ನೋಡುತ್ತ ಗುರುಸಮ್ಮುಖದಲ್ಲಿ ನಿಲ್ಲಬೇಕು.

ನಿತ್ಯಮುದ್ಧೃತಪಾಣಿಃ ಸ್ಯಾತ್ಸಾಧ್ವಾಚಾರಃ ಸುಸಂಯುತಃ ।
ಆಸ್ಯತಾಮಿತಿ ಚೋಕ್ತಃ ಸನ್ನಾಸೀತಾಭಿಮುಖಂ ಗುರೋಃ ॥ ೧೯೩

ಬ್ರಹ್ಮವಸ್ತ್ರ ಮುಂತಾದ ಸದಾಚಾರಯುಕ್ತನಾಗಿ, ಗುರು ಕುಳಿತುಕೋ ಎಂದ ಮೇಲೆ, ಗುರುವಿಗೆ ಅಭಿಮುಖವಾಗಿ ಕುಳಿತುಕೊಳ್ಳಬೇಕು.

ಹೀನಾನ್ನವಸ್ತ್ರವೇಷಃ ಸ್ಯಾತ್ಸರ್ವದಾ ಗುರುಸನ್ನಿಧೌ ।
ಉತ್ತಿಷ್ಠೇತ್ಪ್ರಥಮಂ ಚಾಸ್ಯ ಚರಮಂ ಚೈವ ಸಂವಿಶೇತ್ ॥ ೧೯೪

ಗುರುವಿಗಿಂತ ಅಧಿಕ (ಅಲಂಕಾರ) ಉತ್ತಮ ವಸ್ತ್ರ-ವೇಶ ಉಳ್ಳವನಾಗಬಾರದು. ಗುರುವಿಗಿಂತ ಮೊದಲು ಬೆಳಿಗ್ಗೆ ಎಚ್ಚರಗೊಳ್ಳಬೇಕು. ಸಾಯಂ ಬಳಿಕ ಮಲಗಬೇಕು. ಎಂದರೆ ಅಧ್ಯಯನ, ಗುರುಸೇವೆಗಳಲ್ಲಿ ಅಶ್ರದ್ಧೆಯಿರಬಾರದೆಂದು ಮಾತ್ರ ತಾತ್ಪರ್ಯ. ಗುರುವಿಗಿಂತ ಶಿಷ್ಯನು ವಯಸ್ಸಿನಲ್ಲಿ ಕಿರಿಯನಾದುದರಿಂದ ಅಧಿಕ ನಿದ್ರೆಯು ದೇಹಕ್ಕೆ ಅವಶ್ಯವಿದೆ. ನಿದ್ರಾಪರಿತ್ಯಾಗದಿಂದ ಆರೋಗ್ಯವು ಕೆಟ್ಟು ಅಭ್ಯಾಸವು ವಿಘ್ನವುಳ್ಳದ್ದಾಗಬಾರದು. ವೈಯಕ್ತಿಕವಾಗಿಯೂ ಕೆಲವು ದೇಹಕ್ಕೆ ನಿದ್ದೆ–ಆಹಾರಗಳಲ್ಲಿ ಪ್ರತ್ಯೇಕವಾದ ಅಳತೆ ಸಾತ್ಮ್ಯ ಇರುವುದು. ಆದುದರಿಂದ ವಿದ್ಯೆಯಲ್ಲಿ ಆದರ-ಆರೋಗ್ಯ ದೃಷ್ಟಿ ಎರಡರಿಂದಲೂ ಆಚಾರ-ವಿಚಾರವನ್ನು ಸಾಧಿಸಬೇಕು. 'ಶರೀರಮಾದ್ಯಂ ಖಲು ಧರ್ಮಸಾಧನಂ.'

ಪ್ರತಿಶ್ರವಣಸಂಭಾಷೇ ಶಯಾನೋ ನ ಸಮಾಚರೇತ್ |
ನಾಸೀನೋ ನ ಚ ಭುಂಜಾನೋ ನ ತಿಷ್ಠನ್ನ ಪರಾಙ್ಮುಖಃ || ೧೯೫

ಮಲಗಿ - ಕುಳಿತು - ಉಣ್ಣುತ್ತ - ಬೆನ್ನುಹಾಕಿಕೊಂಡು ಆಜ್ಞಾಂಗೀಕಾರ ಮತ್ತು ಸಂಭಾಷಣೆಗಳನ್ನು ಮಾಡಬಾರದು.

ಆಸೀನಸ್ಯ ಸ್ಥಿತಃ ಕುರ್ಯಾದಭಿಗಚ್ಛಂಸ್ತು ತಿಷ್ಠತಃ |
ಪ್ರತ್ಯುದ್ಗಮ್ಯ ತ್ವಾವ್ರಜತಃ ಪಶ್ಚಾದ್ಧಾವಂಸ್ತು ಧಾವತಃ || ೧೯೬

ಗುರು ಕುಳಿತಿದ್ದರೆ ನಿಂತು, ನಿಂತಿದ್ದರೆ ಬಳಿಗೆ ಹೋಗಿ, ಬರುತ್ತಿದ್ದರೆ ಎದುರು ಹೋಗಿ, ಓಡುತ್ತಿದ್ದರೆ ಹಿಂದಿನಿಂದ ಓಡಿ ತಾನು ಗುರುವಚನವನ್ನು ಆಲಿಸಬೇಕು, ಪಾಲಿಸಬೇಕು.

ಪರಾಙ್ಮುಖಸ್ಯಾಭಿಮುಖೋ ದೂರಸ್ಥಸ್ಯೈತ್ಯ ಚಾಂತಿಕಂ |
ಪ್ರಣಮ್ಯ ತು ಶಯಾನಸ್ಯ ನಿದೇಶೇ ಚೈವ ತಿಷ್ಠತಃ || ೧೯೭

ಗುರು ತಿರುಗಿಕೊಂಡಿರುವಾಗ ಎದುರು ಹೋಗಿ, ದೂರದಲ್ಲಿದ್ದರೆ ಬಳಿಗೆ ಹೋಗಿ, ಮಲಗಿದ್ದರೆ ಬಗ್ಗಿ, ಗುರುವಚನವನ್ನು ತಾನು ಸ್ವೀಕರಿಸಬೇಕು.

ನೀಚಂ ಶಯ್ಯಾಸನಂ ಚಾಸ್ಯ ಸರ್ವದಾ ಗುರುಸನ್ನಿಧೌ |
ಗುರೋಸ್ತು ಚಕ್ಷುರ್ವಿಷಯೇ ನ ಯಥೇಷ್ಟಾಸನೋ ಭವೇತ್ || ೧೯೮

ಗುರುವಿನ ಆಸನಕ್ಕಿಂತ ತನ್ನ ಆಸನವು ತಗ್ಗಾಗಿರಬೇಕು. ಗುರು ಸಮ್ಮುಖದಲ್ಲಿ ಕೈಕಾಲು ಚಾಚಿ ಕುಳಿತುಕೊಳ್ಳಬಾರದು.

ನೋದಾಹರೇದಸ್ಯ ನಾಮ ಪರೋಕ್ಷಮಪಿ ಕೇವಲಂ |
ನ ಚೈವಾಸ್ಯಾನುಕುರ್ವೀತ ಗತಿಭಾಷಿತಚೇಷ್ಟಿತಂ || ೧೯೯

ಗುರುನಾಮವನ್ನು ಕೇವಲವಾಗಿ ಹೇಳಬಾರದು. ನಡೆ-ನುಡಿಯನ್ನು ಅನುಕರಣೆ ಮಾಡಿ ನಗಬಾರದು.

ಗುರೋರ್ಯತ್ರ ಪರೀವಾದೋ ನಿಂದಾ ವಾಪಿ ಪ್ರವರ್ತತೇ |
ಕರ್ಣೌ ತತ್ರ ಪಿಧಾತವ್ಯೌ ಗಂತವ್ಯಂ ವಾ ತತೋಽನ್ಯತಃ || ೨೦೦

ಎಲ್ಲಿಯಾದರೂ ಗುರುನಿಂದೆ ಆಗುವುದಿದ್ದರೆ ಅಲ್ಲಿ ಕಿವಿಮುಚ್ಚಿಕೊಳ್ಳಬೇಕು. ಅಥವಾ ದೂರ ಸರಿಯಬೇಕು.

ಪರೀವಾದಾತ್ಖರೋ ಭವತಿ ಶ್ವಾ ವೈ ಭವತಿ ನಿಂದಕಃ ।
ಪರಿಭೋಕ್ತಾ ಕೃಮಿರ್ಭವತಿ ಕೀಟೋ ಭವತಿ ಮತ್ಸರೀ ॥ ೨೦೧

ಇಲ್ಲಸಲ್ಲದ ಅಪಾದನೆ-ಮತ್ಸರ-ಗುರುಧನಹರಣದಿಂದ ಮನುಷ್ಯನು ನೀಚ ಜನ್ಮವನ್ನು ಪಡೆಯುತ್ತಾನೆ.

ದೂರಸ್ಥೋ ನಾರ್ಚಯೇದೇನಂ ನ ಕ್ರುದ್ಧೋ ನಾಂತಿಕೇ ಸ್ತ್ರಿಯಾಃ ।
ಯಾನಾಸನಸ್ಥಶ್ಚೈವೈನಮವರುಹ್ಯಾಭಿವಾದಯೇತ್ ॥ ೨೦೨

ತಾನು ದೂರದಲ್ಲಿದ್ದು, ಇತರರಿಂದ ಮತ್ತು ಸಿಡುಕಿನಿಂದ, (ಪರ) ಸ್ತ್ರೀಯರ ಎದುರು, ಗುರುವನ್ನು ಗೌರವಿಸಬಾರದು, ವಾಹನದಿಂದ ಇಳಿದು ವಂದಿಸಬೇಕು.

ಪ್ರತಿವಾತೇಽನುವಾತೇ ಚ ನಾಸೀತ ಗುರುಣಾ ಸಹ ।
ಅಸಂಶ್ರವೇ ಚೈವ ಗುರೋರ್ನ ಕಿಂಚಿದಪಿ ಕೀರ್ತಯೇತ್ ॥ ೨೦೩

ತನ್ನ ಮೇಲೆ ಬೀಸಿದ ಗಾಳಿಯು ಗುರುವಿಗೂ, ಗುರುವಿನ ಮೇಲೆ ಬೀಸಿದ ಗಾಳಿಯು ತನಗೂ ಬೀಸದಂತೆ ಕುಳಿತುಕೊಳ್ಳಬೇಕು.

ಗೋಽಶ್ವೋಷ್ಟ್ರಯಾನಪ್ರಾಸಾದಪ್ರಸ್ತರೇಷು ಕಟೇಷು ಚ ।
ಆಸೀತ ಗುರುಣಾ ಸಾರ್ಧಂ ಶಿಲಾಫಲಕನೌಷು ಚ ॥ ೨೦೪

ವಾಹನ, ಉಪ್ಪರಿಗೆ, ಚಾಪೆ, ಕಲ್ಲಿನ ಮೇಲೆ, ದೋಣಿ ಮುಂತಾದುವುಗಳಲ್ಲಿ ಗುರುವಿನೊಡನೆ ಸಹಾಸನದಲ್ಲಿ ಕುಳಿತುಕೊಳ್ಳಬಹುದು.

ಗುರೋರ್ಗುರೌ ಸನ್ನಿಹಿತೇ ಗುರುವದ್ವೃತ್ತಿಮಾಚರೇತ್ ।
ನ ಚಾನಿಸೃಷ್ಟೋ ಗುರುಣಾ ಸ್ವಾನ್ ಗುರೂನಭಿವಾದಯೇತ್ । ೨೦೫

ಗುರುವಿನ ಗುರುವಿಗೂ ಗುರುವಿನ ಗೌರವವು ಸಲ್ಲತಕ್ಕದ್ದು. ತನ್ನ ಹಿರಿಯರನ್ನು ಗುರುಸಮ್ಮುಖದಲ್ಲಿ ಗುರ್ವನುಜ್ಞೆಯಿಲ್ಲದೆ ವಂದಿಸಬಾರದು.

ವಿದ್ಯಾಗುರುಷ್ವೇತದೇವ ನಿತ್ಯಾ ವೃತ್ತಿಃ ಸ್ವಯೋನಿಷು ।
ಪ್ರತಿಷೇಧತ್ಸು ಚಾಧರ್ಮಾನ್ ಹಿತಂ ಚೋಪದಿಶತ್ಸ್ವಪಿ ॥ ೨೦೬

ಅಧರ್ಮನಿವೃತ್ತಿ, ಧರ್ಮಬೋಧೆ, ಇತರ ಆರ್ಯ ವಿದ್ಯಾದಾನ ಮಾಡುವವರು—ತನ್ನ ಜನ್ಮದ ಹಿರಿಯರು ಇವರಲ್ಲಿ ಗುರುವಿನಂತೆ ವರ್ತಿಸಬೇಕು.

ಶ್ರೇಯಃಸು ಗುರುವದ್ವೃತ್ತಿಂ ನಿತ್ಯಮೇವ ಸಮಾಚರೇತ್ ।
ಗುರುಪುತ್ರೇಷು ಚಾರ್ಯೇಷು ಗುರೋಶ್ಚೈವ ಸ್ವಬಂಧುಷು ॥ ೨೦೭

ವಿದ್ಯಾ-ತಪಸ್ಸಿನಿಂದೊಡಗೂಡಿದವರಲ್ಲಿ, ಗುರುಗಳಲ್ಲಿ ತೋರತಕ್ಕ ಆದರವನ್ನೇ ತೋರಿಸತಕ್ಕದ್ದು. ಅದರಂತೆ, ಗುರುಪುತ್ರರಲ್ಲಿಯೂ ಗುರುಗಳ ಸಂಬಂಧಿಕರಲ್ಲಿಯೂ ಅದೇ ತರದ ಪೂಜ್ಯಭಾವವನ್ನು ತಾಳಬೇಕು.

ಬಾಲಃ ಸಮಾನಜನ್ಮಾ ವಾ ಶಿಷ್ಯೋ ವಾ ಯಜ್ಞಕರ್ಮಣಿ ।
ಅಧ್ಯಾಪಯನ್ ಗುರುಸುತೋ ಗುರುವನ್ಮಾನಮರ್ಹತಿ ॥ ೨೦೮

ಗುರುಪುತ್ರನು ತನಗೆ ಅಧ್ಯಾಪಕನಾದರೆ ಶಿಷ್ಯನು ಯಜ್ಞಪ್ರಕ್ರಿಯೆ ಬಲ್ಲವನಾಗಿದ್ದರೆ ಅವರು ವಯಸ್ಸಿನಲ್ಲಿ ಸಮರು ಕಿರಿಯರು ಆಗಿದ್ದರೂ ಗುರುಪೂಜಾರ್ಹರು.

ಉತ್ಸಾದನಂ ಚ ಗಾತ್ರಾಣಾಂ ಸ್ನಾಪನೋಚ್ಛಿಷ್ಟಭೋಜನೆ ।
ನ ಕುರ್ಯಾದ್ಗುರುಪುತ್ರಸ್ಯ ಪಾದಯೋಶ್ಚಾವನೇಜನಂ ॥ ೨೦೯

ಅಂಗಮರ್ದನ, ಸ್ನಾನಮಾಡಿಸುವುದು, ಕಾಲು ತೊಳೆಯುವುದು ಮುಂತಾದುವನ್ನು ಗುರುಪುತ್ರನಲ್ಲಿ ಆಚರಿಸಬಾರದು.

ಗುರುವತ್ಪ್ರತಿಪೂಜ್ಯಾಃ ಸ್ಯುಃ ಸವರ್ಣಾ ಗುರುಯೋಷಿತಃ ।
ಅಸವರ್ಣಾಸ್ತು ಸಂಪೂಜ್ಯಾಃ ಪ್ರತ್ಯುತ್ಥಾನಾಭಿವಾದನೈಃ ॥ ೨೧೦

ಸವರ್ಣರಾದ ಗುರುಸ್ತ್ರೀಯರು ಗುರುಸಮರು. ಗುರುವಿನ ಅಸವರ್ಣ ಸ್ತ್ರೀಯರು (ಹೆಂಡತಿಯರು) ಎದ್ದು ನಿತ್ತು ಮತ್ತು ಅಭಿವಾದನ ಮಾಡಿ ಗೌರವಿಸಲ್ಪಡತಕ್ಕವರು.

ಅಭ್ಯಂಜನಂ ಸ್ನಾಪನಂ ಚ ಗಾತ್ರೋತ್ಸಾದನಮೇವ ಚ ।
ಗುರುಪತ್ನ್ಯಾ ನ ಕಾರ್ಯಾಣಿ ಕೇಶಾನಾಂ ಚ ಪ್ರಸಾಧನಂ ॥ ೨೧೧

ಗುರುಪತ್ನಿಯು ಗುರುಸಮಳಾದರೂ, ಶಿಷ್ಯನ ಅಂಭ್ಯಂಜನಾದಿಗಳನ್ನು ಮಾಡತಕ್ಕದಲ್ಲ.

ಗುರುಪತ್ನೀ ತು ಯುವತಿರ್ನಾಭಿವಾದ್ಯೇಹ ಪಾದಯೋಃ ।
ಪೂರ್ಣವಿಂಶತಿವರ್ಷೇಣ ಗುಣದೋಷೌ ವಿಜಾನತಾ ॥ ೨೧೨

ಗುರುಪತ್ನಿಯು ಯುವತಿಯಾಗಿ ತಾನು ಯುವಕನಾಗಿದ್ದರೆ ಪಾದಗ್ರಹಣ ಮಾಡಬಾರದು. ದೂರ ನೆಲಮುಟ್ಟಿ ವಂದಿಸುವುದು.

ಸ್ವಭಾವ ಏಷ ನಾರೀಣಾಂ ನರಾಣಾಮಿಹ ದೂಷಣಂ ।
ಅತೋಽರ್ಥಾನ್ನ ಪ್ರಮಾದ್ಯಂತಿ ಪ್ರಮದಾಸು ವಿಪಶ್ಚಿತಃ ॥ ೨೧೩

ಸ್ತ್ರೀಯರಿಗೆ ಪುರುಷಮೋಹಕತ್ವವು ಜನ್ಮಸಿದ್ಧವು. ಆದುದರಿಂದ ಬುದ್ಧಿವಂತರು ಸ್ತ್ರೀಯರ ವಿಷಯದಲ್ಲಿ ಅಜಾಗರೂಕತೆ ವಹಿಸಬಾರದು.

ಅವಿದ್ವಾಂಸಮಲಂ ಲೋಕೇ ವಿದ್ವಾಂಸಮಪಿ ವಾ ಪುನಃ ।
ಪ್ರಮದಾ ಹ್ಯುತ್ಪಥಂ ನೇತುಂ ಕಾಮಕ್ರೋಧವಶಾನುಗಂ ॥ ೨೧೪

ಕಾಮಕ್ರೋಧವಶನಾದ ಪಂಡಿತನನ್ನಾಗಲಿ, ಪಾಮರನನ್ನಾಗಲಿ ಹೆಂಗಸು ಮಾರ್ಗಭ್ರಷ್ಟನನ್ನಾಗಿ ಮಾಡಲು ಸಮರ್ಥಳು.

ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ವಿವಿಕ್ತಾಸನೋ ಭವೇತ್ ।
ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥ ೨೧೫

ತಾಯಿ, ಸೋದರಿ, ಮಗಳು ಇವರ ಒಡನೆ ಗಂಡಸು ಒಂಟಿಯಾಗಿರ ಬಾರದು. (ಅಂತಹ ಸನ್ನಿವೇಶಗಳು) ಇಂದ್ರಿಯಗಳು ಬುದ್ಧಿವಂತನ ಮನಸ್ಸನ್ನು ಕೂಡ ಪ್ರಬಲ ಪರವಶತೆಗೆ ಗುರಿಪಡಿಸುತ್ತವೆ.

ಕಾಮಂ ತು ಗುರುಪತ್ನೀನಾಂ ಯುವತೀನಾಂ ಯುವಾ ಭುವಿ ।
ವಿಧಿವದ್ವಂದನಂ ಕುರ್ಯಾತ್ ಅಸಾವಹಮಿತಿ ಬ್ರುವನ್ ॥ ೨೧೬

ಗುರುಪತ್ನಿಯರು ಯುವತಿಯರಾಗಿ ತಾನು ಯುವಕನಾಗಿದ್ದಾಗ ವಂದನೆ ಮಾಡುವಾಗ ಪಾದಗ್ರಹಣ ಮಾಡದೆ ನೆಲಮುಟ್ಟಿ ಅಭಿವಾದ ವಾಕ್ಯವನ್ನು ಹೇಳಬೇಕು.

ವಿಪ್ರೋಷ್ಯ ಪಾದಗ್ರಹಣಮನ್ವಹಂ ಚಾಭಿವಾದನಂ ।
ಗುರುದಾರೇಷು ಕುರ್ವೀತ ಸತಾಂ ಧರ್ಮಮನುಸ್ಮರನ್ ॥ ೨೧೭

ದೂರ ಪ್ರಯಾಣ ಮಾಡಿಬಂದು ಪಾದಗ್ರಹಣವನ್ನೂ, ಪ್ರತಿದಿನ ಕೇವಲ ಅಭಿವಾದನವನ್ನೂ ಮಾಡುವುದು ಸತ್ಸಂಪ್ರದಾಯವು.

ಯಥಾ ಖನನ್ ಖನಿತ್ರೇಣ ನರೋ ವಾರ್ಯಧಿಗಚ್ಛತಿ ।
ತಥಾ ಗುರುಗತಾಂ ವಿದ್ಯಾಂ ಶುಶ್ರೂಷುರಧಿಗಚ್ಛತಿ ॥ ೨೧೮

ಗುದ್ದಲಿಯಿಂದ ಅಗೆದು ಆಳದನೀರನ್ನು ಹೊಂದುವಂತೆ ಗುರುವಿದ್ಯೆಯನ್ನು ಸೇವೆಯಿಂದ ಹೊಂದಬೇಕು.

ಮುಂಡೋ ವಾ ಜಟಿಲೋ ವಾ ಸ್ಯಾದಥವಾ ಸ್ಯಾಚ್ಛಿಖಾಜಟಃ ।
ನೈನಂ ಗ್ರಾಮೇಽಭಿನಿಮ್ಲೋಚೇತ್ ಸೂರ್ಯೋ ನಾಭ್ಯುದಿಯಾತ್ ಕ್ವಚಿತ್ ॥ ೨೧೯

ವಟುವು ಕ್ಷೌರ ಮಾಡಿಸಿಕೊಳ್ಳಬಹುದು, ಜಡೆ ಬೆಳೆಸಬಹುದು. ಎಲ್ಲ ಕೂದಲನ್ನು ತೆಗೆಸಬಹುದು; ಕೆಲವನ್ನು ಉಳಿಸಬಹುದು. ಸಾಯಂ ಮತ್ತು ಪ್ರಾತಃ ಉದಯಾಸ್ತಗಳಲ್ಲಿ ನಿದ್ರಿಸುತ್ತಿರಬಾರದು.

ತಂ ಚೇದಭ್ಯುದಿಯಾತ್ಸೂರ್ಯಃ ಶಯಾನಂ ಕಾಮಚಾರತಃ ।
ನಿಮ್ಲೋಚೇದ್ವಾಪ್ಯವಿಜ್ಞಾನಾಜ್ಜಪನ್ನುಪವಸೇದ್ದಿನಂ ॥ ೨೨೦

ಬ್ರಹ್ಮಚಾರಿಯು ಅಕಸ್ಮಾತ್ ಸೂರ್ಯೋದಯಾಸ್ತಗಳಲ್ಲಿ ಮಲಗಿಕೊಂಡಿದ್ದರೆ, ಎದ್ದು ಜಪಿಸುತ್ತ ಉಪವಾಸವಿರಬೇಕು. ರಾತ್ರಿ ಉಣ್ಣಬೇಕು.

ಸೂರ್ಯೇಣ ಹ್ಯಭಿನಿರ್ಮುಕ್ತಃ ಶಯಾನೋಽಭ್ಯುದಿತಶ್ಚ ಯಃ ।
ಪ್ರಾಯಶ್ಚಿತ್ತಮಕುರ್ವಾಣೋ ಯುಕ್ತಃ ಸ್ಯಾನ್ಮಹತೈನಸಾ ॥ ೨೨೧

ಸೂರ್ಯೋದಯಾಸ್ತಗಳಲ್ಲಿ ಮಲಗಿಕೊಂಡೂ ಪ್ರಾಯಶ್ಚಿತ್ತ ಮಾಡದಿದ್ದರೆ ಅಂಥವನಿಗೆ ಪಾಪವು ಬರುವುದು.

ಆಚಮ್ಯ ಪ್ರಯತೋ ನಿತ್ಯಮುಭೇ ಸಂಧ್ಯೇ ಸಮಾಹಿತಃ ।
ಶುಚೌ ದೇಶೇ ಜಪನ್‍ಜಪ್ಯಮುಪಾಸೀತ ಯಥಾವಿಧಿ ॥ ೨೨೨

ತಪ್ಪದೆ, ಆಚಮನಮಾಡಿ ಶುಚಿಯಾಗಿ ಸಂಧ್ಯಾಕಾಲದಲ್ಲಿ ಜಪಿಸುತ್ತ ಇರಬೇಕು.

ಯದಿ ಸ್ತ್ರೀ ಯದ್ಯವರಜಃ ಶ್ರೇಯಃ ಕಿಂಚಿತ್ಸಮಾಚರೇತ್ ।
ತತ್ಸರ್ವಮಾಚರೇದ್ಯುಕ್ತೋ ಯತ್ರ ವಾಸ್ಯ ರಮೇನ್ಮನಃ ॥ ೨೨೩

ಓರ್ವ ಸ್ತ್ರೀ, ಒಬ್ಬ ಕಿರಿಯನು ಏನಾದರೊಂದು ಆಚರಿಸುವುದರಲ್ಲಿ ಶ್ರೇಯಸ್ಸು ಕಂಡರೆ, ಅದು ತನಗಿಷ್ಟವಾದರೆ ಮತ್ತು ಶಾಸ್ತ್ರವಿರುದ್ಧವಲ್ಲದಿದ್ದರೆ ಅವೆಲ್ಲವನ್ನು ಆಚರಿಸಬಹುದು.

ಧರ್ಮಾರ್ಥಾವುಚ್ಯತೇ ಶ್ರೇಯಃ ಕಾಮಾರ್ಥೌ ಧರ್ಮ ಏವ ಚ ।
ಅರ್ಥ ಏವೇಹವಾ ಶ್ರೇಯಸ್ತ್ರಿವರ್ಗ ಇತಿ ತು ಸ್ಥಿತಿಃ ॥ ೨೨೪

ಕೆಲವರು ಶ್ರೇಯಃ ಪದಕ್ಕೆ ಧರ್ಮ–ಅರ್ಥಗಳು, ಕಾಮ–ಅರ್ಥಗಳು, ಧರ್ಮವೊಂದೇ, ಅರ್ಥವೊಂದೇ–ಮುಖ್ಯಾರ್ಥವೆಂದು ಹೇಳುತ್ತಾರೆ. ಧರ್ಮ, ಅರ್ಥ, ಕಾಮ ಮೂರೂ ಅರ್ಥವೆಂದು ವಸ್ತುಸ್ಥಿತಿಯು.

ಆಚಾರ್ಯಶ್ಚ ಪಿತಾ ಚೈವ ಮಾತಾ ಭ್ರಾತಾ ಚ ಪೂರ್ವಜಃ ।
ನಾರ್ತೇನಾಪ್ಯವಮಂತವ್ಯಾ ಬ್ರಾಹ್ಮಣೇನ ವಿಶೇಷತಃ ॥ ೨೨೫

ಆಚಾರ್ಯ, ಪಿತೃ, ಮಾತೃ, ಜ್ಯೇಷ್ಠಭ್ರಾತೃ ಇವರನ್ನು ವಿಷಮ ಕಾಲದಲ್ಲಿಯೂ ಅವಮಾನಿಸಬಾರದು.

ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ।
ಮಾತಾ ಪೃಥಿವ್ಯಾ ಮೂರ್ತಿಸ್ತು ಭ್ರಾತಾ ಸ್ವೋ ಮೂರ್ತಿರಾತ್ಮನಃ ॥ ೨೨೬

ಅವರು ಬ್ರಹ್ಮ–ಪ್ರಜಾಪತಿ–ಪೃಥಿವೀ–ತಾನು ಇವರಿಗೆ ಸಮಾನರು. ಅವರು ಹಾಸ್ಯಾಸ್ಪದರಾಗುವುದು ಹೇಗೆ?

ಯಂ ಮಾತಾಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಂ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥ ೨೨೭

ಮನುಷ್ಯನ ಈ ಜನ್ಮದ ಕುರಿತಾಗಿ ಮಾತಾ-ಪಿತೃಗಳ ಸಹಿಸಿದ ದುಃಖದ ಪರಿಹಾರಕ್ಕೆ ನೂರುವರ್ಷ ಋಣಿಯಾಗಿದ್ದರೂ ಸಾಲದು. ಆದುದರಿಂದ

ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ಚ ಸರ್ವದಾ ।
ತೇಷ್ವೇವ ತ್ರಿಷು ತುಷ್ಟೇಷು ತಪಃ ಸರ್ವಂ ಸಮಾಪ್ಯತೇ ॥ ೨೨೮

ಮಾತಾ-ಪಿತೃಗಳಿಗೂ, ಆಚಾರ್ಯನಿಗೂ ಅಪ್ರಿಯವನ್ನು ಮಾಡಬಾರದು. ಆ ಮೂವರಿಗೆ ಸಂತೋಷವಾದರೆ ಅದು ದೊಡ್ಡ ತಪಸ್ಸಿದ್ಧಿಯು.

ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ ।
ನ ತೈರಭ್ಯನನುಜ್ಞಾತೋ ಧರ್ಮಮನ್ಯಂ ಸಮಾಚರೇತ್ ॥ ೨೨೯

ಆ ಮೂವರ ಸೇವೆಯು ಉತ್ತಮ ತಪಸ್ಸು. ಅವರ ಸಮ್ಮತಿಯಿಲ್ಲದೆ ಏನನ್ನೂ ಮಾಡಬಾರದು.

ತ ಏವ ಹಿ ತ್ರಯೋ ಲೋಕಾಸ್ತ ಏವ ತ್ರಯ ಆಶ್ರಮಾಃ ।
ತ ಏವ ಹಿ ತ್ರಯೋ ವೇದಾಸ್ತ ಏವೋಕ್ತಾಸ್ತ್ರಯೋಽಗ್ನಯಃ ॥ ೨೩೦

ತ್ರೇತಾಗ್ನಿ—ವೇದತ್ರಯ—ಆಶ್ರಮತ್ರಯ—ಲೋಕತ್ರಯಗಳಿಗೆ ಆ ಮೂವರು ಸಮಾನರು. ಇದರ ವಿವರ ಮುಂದಿದೆ:

ಪಿತಾ ವೈ ಗಾರ್ಹಪತ್ಯೋಽಗ್ನಿರ್ಮಾತಾಗ್ನಿರ್ದಕ್ಷಿಣಃ ಸ್ಮೃತಃ ।
ಗುರುರಾಹವನೀಯಸ್ತು ಸಾಗ್ನಿತ್ರೇತಾ ಗರೀಯಸಿ ॥ ೨೩೧

ತಂದೆಯು ಗಾರ್ಹಪತ್ಯವು ತಾಯಿಯು ದಕ್ಷಿಣವು ಗುರುವು ಆಹವನೀಯವು ಇವು ಮೂರು ಪೂಜ್ಯವೇ.

ತ್ರಿಷ್ವಪ್ರಮಾದ್ಯನ್ನೇತೇಷು ತ್ರೀಂಲ್ಲೋಕಾನ್ ವಿಜಯೇದ್ಗೃಹೀ ।
ದೀಪ್ಯಮಾನಃ ಸ್ವವಪುಷಾ ದೇವವದ್ದಿವಿ ಮೋದತೇ ॥ ೨೩೨

ಆ ಮೂವರಲ್ಲಿ ಅಜಾಗರೂಕನಾಗದೆ ಇದ್ದರೆ ಬ್ರಹ್ಮಚಾರಿಯೂ ಗೃಹಸ್ಥನೂ ಶ್ರೇಯೋಭಾಜನನಾಗುತ್ತಾನೆ.

ಇಮಂ ಲೋಕಂ ಮಾತೃಭಕ್ತ್ಯಾ ಪಿತೃಭಕ್ತ್ಯಾ ತು ಮಧ್ಯಮಂ ।
ಗುರುಶುಶ್ರೂಷಯಾ ತ್ವೇವಂ ಬ್ರಹ್ಮಲೋಕಂ ಸಮಶ್ನುತೇ ॥ ೨೩೩

ಮಾತೃಪಿತ್ರಾಚಾರ್ಯರ ಈ ಮೂವರಲ್ಲಿಯ ಭಕ್ತಿಯಿಂದ ಕ್ರಮವಾಗಿ ಭೂಮಿ–ಸ್ವರ್ಗ–ಬ್ರಹ್ಮಲೋಕಗಳನ್ನು ಹೊಂದುತ್ತಾನೆ.

ಸರ್ವೇ ತಸ್ಯಾದೃತಾ ಧರ್ಮಾ ಯಸ್ಯೈತೇ ತತ್ರ ಆದೃತಾಃ ।
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥ ೨೩೪

ಬ್ರಹ್ಮಚಾರಿಯು ಈ ಮೂವರನ್ನು ಗೌರವಾರ್ಹರೆಂದು ತಿಳಿದರೆ ಧರ್ಮವು ಗೌರವಿಸಲ್ಪಟ್ಟಂತೆ, ಇಲ್ಲವಾದರೆ ಎಲ್ಲವೂ ನಿಷ್ಫಲ.

ಯಾವತ್ತ್ರಯಸ್ತೇ ಜೀವೇಯುಸ್ತಾವನ್ನಾನ್ಯಂ ಸಮಾಚರೇತ್ ।
ತೇಷ್ವೇವ ನಿತ್ಯಂ ಶುಶ್ರೂಷಾಂ ಕುರ್ಯಾತ್ಪ್ರಿಯಹಿತೇ ರತಃ ॥ ೨೩೫

ಮಾತೃಪಿತ್ರಾಚಾರ್ಯರು ಬದುಕಿರುವಾಗ ಅವರ ಹಿತದಲ್ಲಿ ಗಮನವಿಟ್ಟು ಅವರ ಸೇವೆಯನ್ನು ಮಾಡುತ್ತಿರಬೇಕು.

ತೇಷಾಮನುಪರೋಧೇನ ಪಾರತ್ರ್ಯಂ ಯದ್ಯದಾಚರೇತ್ ।
ತತ್ತನ್ನಿವೇದಯೇತ್ತೇಭ್ಯೋ ಮನೋವಚನಕರ್ಮಭಿಃ ॥ ೨೩೬

ಅವರ ಸೇವೆಗೆ ಕೊರತೆಯಾಗದೆ ತನಗಿಷ್ಟವಾದ ಪರಲೋಕ ಸಾಧನೆಯನ್ನು ಮಾಡಿದರೆ ಅದನ್ನು ಅವರಿಗೆ ನಿವೇದಿಸಬೇಕು.

ತ್ರಿಷ್ವೇತೇಷ್ವಿತಿಕೃತ್ಯಂ ಹಿ ಪುರುಷಸ್ಯ ಸಮಾಪ್ಯತೇ ।
ಏಷ ಧರ್ಮಃ ಪರಃ ಸಾಕ್ಷಾದುಪಧರ್ಮೋಽನ್ಯ ಉಚ್ಯತೇ ॥ ೨೩೭

ಮನುಷ್ಯನು ಇವರ ಸೇವಾತತ್ಪರನಾದರೆ ಅದರಿಂದ ಅವನ ಇತಿಕರ್ತವ್ಯವು ಪೂರ್ಣವಾಯಿತು. ಅಂತಹ ಧರ್ಮಕ್ಕಿಂತ ಬೇರೆಯದು ಮುಖ್ಯವಲ್ಲ.

ಶ್ರದ್ಧಧಾನಃ ಶುಭಾಂ ವಿದ್ಯಾಮಾದದೀತಾವರಾದಪಿ ।
ಅಂತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ ॥ ೨೩೮

ಶ್ರದ್ಧೆಯಿಂದ ಅಂತ್ಯಜನಿಂದಲೂ ವಿದ್ಯೆಯನ್ನು ಸ್ವೀಕರಿಸಬೇಕು. ಆ ಕಾಲದಲ್ಲಿ ಇತರರಿಂದ ಅದು ದೊರೆಯದೆ ಪೂರ್ವಪುಣ್ಯಬಲದಿಂದ ವಿಷವೈದ್ಯ, ಮಂತ್ರಸಿದ್ಧಿ, ಆತ್ಮಜ್ಞಾನಗಳು ಅಂತ್ಯಜನಲ್ಲಿ ಫಲಿಸಿದ್ದರೆ ಅದು ಪರಿತ್ಯಾಗಾರ್ಹವಲ್ಲ. ಜಾತಿದೋಷವು ವಿದ್ಯೆಗಿಲ್ಲ. ಸ್ತ್ರೀರತ್ನವು ದುಷ್ಕುಲದಿಂದಲೂ ಗ್ರಾಹ್ಯವಾಗಿದೆ. ಇದು ಆರ್ಯರ ನಿರ್ಮತ್ಸರತೆಗೆ ಉತ್ತಮ ಸಾಕ್ಷಿಯು. ಅವರು ಜಾತಿವಾದದ ದುರಭಿಮಾನಿಗಳಲ್ಲ. ಮುಂದೆಯೂ ಇದರ ಆಧಾರ ಬರುವುದು.

ವಿಷಾದಪ್ಯಮೃತಂ ಗ್ರಾಹ್ಯಂ ಬಾಲಾದಪಿ ಸುಭಾಷಿತಂ |
ಅಮಿತ್ರಾದಪಿ ಸದ್ವೃತ್ತಂ ಅಮೇಧ್ಯಾದಪಿ ಕಾಂಚನಂ || ೨೩೯

ಅಮೃತವು ಆಕಸ್ಮಾತ್ ವಿಷಪದಾರ್ಥದಲ್ಲಿ ಬೆರೆತಿದ್ದರೂ, ಸೂಕ್ತಿಯನ್ನು ಮಗುವಿನಿಂದಲೂ, ಶತ್ರುವಿನಲ್ಲಿದ್ದ ಸದಾಚಾರವನ್ನೂ, ಮಲದಲ್ಲಿದ್ದ ಸ್ವರ್ಣ ಖಂಡವನ್ನೂ ಬಿಡಬಾರದು.

ಸ್ತ್ರಿಯೋ ರತ್ನಾನ್ಯಥೋ ವಿದ್ಯಾ ಧರ್ಮಃ ಶೌಚಂ ಸುಭಾಷಿತಂ |
ವಿವಿಧಾನಿ ಚ ಶಿಲ್ಪಾನಿ ಸಮಾದೇಯಾನಿ ಸರ್ವತಃ || ೨೪೦

ಹೆಣ್ಣು, ರತ್ನ, ವಿದ್ಯೆ, ಧರ್ಮ, ಶೌಚ, ಸೂಕ್ತಿ, ಶಿಲ್ಪಗಳನ್ನು ಎಲ್ಲಿದ್ದರೂ ಸ್ವೀಕರಿಸಬಹುದು.

ಅಬ್ರಾಹ್ಮಣಾದಧ್ಯಯನಮಾಪತ್ಕಾಲೇ ವಿಧೀಯತೇ |
ಅನುವ್ರಜ್ಯಾ ಚ ಶುಶ್ರೂಷಾ ಯಾವದಧ್ಯಯನಂ ಗುರೋಃ || ೨೪೧

ವಿದ್ಯಾವಂತ ಬ್ರಾಹ್ಮಣರು ದುರ್ಲಭರಾಗಿ, ಇತರರಲ್ಲಿದ್ದ ವಿದ್ಯೆಯನ್ನು ಈ ಆಪತ್ಕಾಲದಲ್ಲಿ ಪರಿಗ್ರಹಿಸಬಹುದು. ಅಂತಹ ಕಡೆ ಅಧ್ಯಯದ ಕಾಲದಲ್ಲಿ ಮಾತ್ರ ಗುರುಭಾವವು.

ನಾಬ್ರಾಹ್ಮಣೇ ಗುರೌ ಶಿಷ್ಯೋ ವಾಸಮಾತ್ಯಂತಿಕಂ ವಸೇತ್ |
ಬ್ರಾಹ್ಮಣೇ ಚಾನನೂಚಾನೇ ಕಾಂಕ್ಷನ್ಗತಿಮನುತ್ತಮಾಂ || ೨೪೨

ನೈಷ್ಠಿಕ ಬ್ರಹ್ಮಚಾರಿಯಾಗಿ ಮರಣಾಂತ ಗುರುಕುಲವಾಸದಲ್ಲಿ ಇಷ್ಟವುಳ್ಳವನು ಸಾಂಗವೇದಾಧ್ಯಾಯಿ ಬ್ರಾಹ್ಮಣನನ್ನು ಆಶ್ರಯಿಸಬೇಕು. ಅನ್ಯಥಾ ಬ್ರಹ್ಮವಿದ್ಯಾಫಲವೋಕ್ಷವು ದುರ್ಲಭವು.

ಯದಿ ತ್ವಾತ್ಯಂತಿಕಂ ವಾಸಂ ರೋಚಯೇತ ಗುರೋಃ ಕುಲೇ ।
ಯುಕ್ತಃ ಪರಿಚರೇದೇನಮಾಶರೀರವಿಮೋಕ್ಷಣಾತ್ ॥ ೨೪೩

ಒಂದು ವೇಳೆ ಶಿಷ್ಯನಾದವನು ನೈಷ್ಠಿಕ ಬ್ರಹ್ಮಚರ್ಯವನ್ನು ಪಾಲಿಸುತ್ತ ಗುರುಕುಲದಲ್ಲಿ ವಾಸಿಸಲು ಬಯಸಿದರೆ, ಜೀವವಿರುವವರೆಗೆ ಯೋಗ್ಯರೀತಿಯಿಂದ ಗುರು ಶುಶ್ರೂಶೆಯಲ್ಲಿ ಕಾಲಕಳೆಯಬೇಕು.

ಆ ಸಮಾಪ್ತೇಃ ಶರೀರಸ್ಯ ಯಸ್ತು ಶುಶ್ರೂಷತೇ ಗುರುಂ ।
ಸ ಗಚ್ಛತ್ಯಂಜಸಾ ವಿಪ್ರೋ ಬ್ರಹ್ಮಣಃ ಸದ್ಮ ಶಾಶ್ವತಂ ॥ ೨೪೪

ಮರಣಾಂತ ಗುರುಸೇವೆಯನ್ನು ಮಾಡಿದರೆ ಬ್ರಹ್ಮಪ್ರಾಪ್ತಿಯು ನಿಶ್ಚಯವಾಗಿ ಆಗುವುದು.

ನ ಪೂರ್ವಂ ಗುರವೇ ಕಿಂಚಿದುಪಕುರ್ವೀತ ಧರ್ಮವಿತ್ ।
ಸ್ನಾಸ್ಯಂಸ್ತು ಗುರುಣಾಜ್ಞಪ್ತಃ ಶಕ್ತ್ಯಾ ಗುರ್ವರ್ಥಮಾಹರೇತ್ ॥ ೨೪೫

ವ್ರತಸಮಾವರ್ತನೆಗೆ ಇಚ್ಛಿಸುವವನು ಗುರುಸಮ್ಮತಿಯಿಂದ ದಕ್ಷಿಣೆ ಕೊಡಬೇಕು. ಮೊದಲು ಕೊಡುವ ಅವಶ್ಯವಿಲ್ಲ. ಇವನು ಉಪಕುರ್ವಾಣನು.

ಕ್ಷೇತ್ರಂ ಹಿರಣ್ಯಂ ಗಾಮಶ್ವಂ ಛತ್ರೋಪಾನಹಮಾಸನಂ ।
ಧಾನ್ಯಂ ಶಾಕಂ ಚ ವಾಸಾಂಸಿ ಗುರವೇ ಪ್ರೀತಿಮಾವಹೇತ್ ॥ ೨೪೬

ಭೂಮಿ, ಸ್ವರ್ಣ, ಗೋ, ಅಶ್ವ, ಛತ್ರೋಪಾನಹ್, ಆಸನ, ಧಾನ್ಯ, ಶಾಕ, ಬಟ್ಟೆಬರೆ ಎಲ್ಲವನ್ನು ಗುರುವಿಗೆ ಪ್ರಿಯವಾದರೆ ಕೊಡಬಹುದು.

ಆಚಾರ್ಯೇ ತು ಖಲು ಪ್ರೇತೇ ಗುರುಪುತ್ರೇ ಗುಣಾನ್ವಿತೇ ।
ಗುರುದಾರೇ ಸಪಿಂಡೇ ವಾ ಗುರುವದ್ವೃತ್ತಿಮಾಚರೇತ್ ॥ ೨೪೭

ಆಚಾರ್ಯನು ಸತ್ತರೆ ನೈಷ್ಠಿಕ ಬ್ರಹ್ಮಚಾರಿಯು ಗುಣಾನ್ವಿತ ಗುರುಪತ್ನಿ ಗುರುಸಪಿಂಡರು ಇವರಲ್ಲಿ ವಾಸಿಸಬಹುದು.

ಏತೇಷ್ವವಿದ್ಯಮಾನೇಷು ಸ್ನಾನಾಸನವಿಹಾರವಾನ್ ।
ಪ್ರಯುಂಜಾನೋಽಗ್ನಿಶುಶ್ರೂಷಾಂ ಸಾಧಯೇದ್ದೇಹಮಾತ್ಮನಃ ॥ ೨೪೮

ಇವರಾರೂ ಇಲ್ಲದಿದ್ದರೆ ಗುರುವಿನ ಅಗ್ನಿಪರಿಚರ್ಯೆ ಮಾಡುತ್ತ ಶೇಷಾಯುಷ್ಯವನ್ನು ಕಳೆಯಬಹುದು. ಆಗಲೂ ಬ್ರಹ್ಮಪ್ರಾಪ್ತಿಯೋಗ್ಯನಾಗುವನು.

ಏವಂ ಚರತಿ ಯೋ ವಿಪ್ರೋ ಬ್ರಹ್ಮಚರ್ಯಮವಿಪ್ಲುತಃ ।
ಸ ಗಚ್ಛತ್ಯುತ್ತಮಸ್ಥಾನಂ ನ ಚೇಹಾಜಾಯತೇ ಪುನಃ ॥ ೨೪೯

ಹೀಗೆ ವಿಪ್ರನು ಬ್ರಹ್ಮಚರ್ಯವನ್ನು ಸಾಧಿಸಿದರೆ ಉತ್ತಮ ಸ್ಥಾನವನ್ನು ಹೊಂದಿ ಪುನರ್ಜನ್ಮ ಇಲ್ಲದಾಗುವನು.

# ಅಧ್ಯಾಯ ೩.

ವಿವಾಹೇಚ್ಛೆಯಿದ್ದರೆ ಬ್ರಹ್ಮಚರ್ಯವ್ರತವನ್ನು ಬಿಡಬೇಕು. ವಿವಾಹ ವಾಗಬೇಕು. ಅದಕ್ಕೆ ವಯಸ್ಸು ಕನ್ಯಾಲಕ್ಷಣಾದಿಗಳನ್ನು ಹೇಳಲು ಉಪ ಕ್ರಮಿಸುತ್ತಾರೆ.

**ಷಟ್ತ್ರಿಂಶದಾಬ್ದಿಕಂ ಚರ್ಯಂ ಗುರೌ ತ್ರೈವೇದಿಕಂ ವ್ರತಂ ।**
**ತದರ್ಧಿಕಂ ಪಾದಿಕಂ ವಾ ಗ್ರಹಣಾಂತಿಕಮೇವ ವಾ ॥ ೧**

ಮೂರು ವೇದಗಳ ಸಾಂಗೋಪಾಂಗ ಅಧ್ಯಯನಕ್ಕೆ ಮೂವತ್ತಾರು ವರ್ಷ ಬ್ರಹ್ಮಚರ್ಯವ್ರತ ಗುರುಕುಲವಾಸಗಳು. ಅದರರ್ಧ ಹದಿನೆಂಟು ಅದರರ್ಧ ಒಂಬತ್ತು ಅಥವಾ ಗ್ರಹಣ ಧಾರಣಶಕ್ತಿ ತುಂಬ ಇದ್ದರೆ ಅಧ್ಯಯನ ಸಮಾಪ್ತಿಪರ್ಯಂತ ಗುರುಕುಲದಲ್ಲಿ ಇರಬೇಕು. ಬ್ರಹ್ಮಪದಕ್ಕೆ ವೇದವು ಅರ್ಥ. ವೇದದ ಮುಖ್ಯಾರ್ಥವು ಬ್ರಹ್ಮವು. ಆದುದರಿಂದ ವೇದದ ಅಧ್ಯಯನ ವಿಚಾರಗಳು ತದುಪಯೋಗಿ ಗುರುಸೇವೆ ಅಧ್ಯಯನ ಪ್ರತಿಬಂಧಕ ರಾಗದ್ವೇಷ, ಕಾಮವರ್ಧಕ, ಅನ್ನಪಾನ ಆಚಾರಗಳ ವರ್ಜನೆಗಳು ಬ್ರಹ್ಮ ಚರ್ಯವು. ಅದನ್ನು ಮಾಡುವವನು ಬ್ರಹ್ಮಚಾರಿಯು.

**ವೇದಾನಧೀತ್ಯ ವೇದೌ ವಾ ವೇದಂ ವಾಪಿ ಯಥಾಕ್ರಮಂ ।**
**ಅವಿಪ್ಲುತಬ್ರಹ್ಮಚರ್ಯೋ ಗೃಹಸ್ಥಾಶ್ರಮಮಾವಸೇತ್ ॥ ೨**

ನಾಲ್ಕು–ಮೂರು–ಎರಡು–ಒಂದು ವೇದವನ್ನು ಶಕ್ತ್ಯಾನುಸಾರವಾಗಿ ಕಲಿತು ಬ್ರಹ್ಮಚರ್ಯವ್ರತಿಯಾದವನು ಮದುವೆಯಾಗಬೇಕು. ಪುಂಸ್ತ್ವ ಪೂರ್ಣನಾಗಿ ಸ್ತ್ರೀಜನ್ಯರೋಗ ನೈಸರ್ಗಿಕ ಲೈಂಗಿಕ ರೋಗಗಳಿಗೆ ಬಲಿಯಾಗ ದವನು ವಿವಾಹಾಧಿಕಾರಿಯು. ಸ್ವರತಿ (ಮುಷ್ಟಿಮೈಥುನ) ಸರತಿ (ಸಲಿಂಗಿ ಗಳ ಅಭಿರತಿ) ದುಷ್ಟ ಸ್ತ್ರೀಸಹವಾಸಗಳಿಂದ ಸಾಂಕ್ರಾಮಿಕ ರೋಗ ವೀರ್ಯ

ಕ್ಷೀಣತೆ ಇಂದ್ರಿಯ ಬಲಕ್ಷೀಣತೆ ಇದ್ದವನು ಮದುವೆಯಾದರೆ ವಿವಾಹಫಲವಾದ ಉತ್ತಮ ರತಿ ಸತ್ಸಂತಿ ಧರ್ಮ ಏನೊಂದೂ ಸಿದ್ಧಿಸದು ಮಾತ್ರವಲ್ಲ, ಸ್ತ್ರೀಯ ನಿಂದೆಗೂ ವೈಫಲ್ಯಕ್ಕೂ ಕಾರಣನಾಗುವನು. ಧನ–ವಿದ್ಯೆ–ದೇಹಾರೋಗ್ಯಗಳು ಇಲ್ಲದೆ ತನ್ನ ಪತ್ನಿಯ ಸಂತತಿಯ ಪೋಷಣೆ ಮಾಡಲಾರನು. ಈ ರೂಪದಿಂದ ಬ್ರಹ್ಮಚರ್ಯ ಇದ್ದವನು ವಿವಾಹಾಧಿಕಾರಿಯು. ಧರ್ಮ ಅರ್ಥಕಾಮಗಳು ಪುರುಷಾರ್ಥಗಳಾದುದರಿಂದ ತಪ್ಪದೆ ಅಂತಹ ಗ್ರಂಥಗಳ ಅಧ್ಯಯನವು ಶಾಸ್ತ್ರಸಮ್ಮತವಾಗುವುದು. ಅಧ್ಯಯನ ಮಾಡಿಯೇ ಇರಬೇಕು ಗೃಹಸ್ಥನಾಗಲು. ಆದುದರಿಂದ ಋಷಿಗಳು ಸಂಸ್ಕೃತದಲ್ಲಿ ಅಂತಹ ಎಲ್ಲ ಗ್ರಂಥಗಳನ್ನು ತುಂಬಿದ್ದಾರೆ. ಆದರೆ ಈ ಕಾಲದ ವಿದ್ಯಾಭ್ಯಾಸ ಪದ್ಧತಿಯು ಧನವೊಂದನ್ನೆ ಗಮನಿಸಿ ಧರ್ಮಕಾಮಗಳ ಅಧ್ಯಯನವನ್ನು ವಿದ್ಯಾರ್ಥಿಗಳಿಗೆ ತಳ್ಳಿಹಾಕಿದೆ. ಅದರಿಂದ ಕುಂಟುಕುದುರೆಯಂತೆ ಜನಜೀವನವು ಅಪೂರ್ಣ ಲುಪ್ತ ದಾಂಪತ್ಯದ ವೈರಸ್ಯ ಅಶಾಂತ ಸಮಾಜ ಜೀವನಗಳು ಕಾಮಶಾಸ್ತ್ರ ಧರ್ಮಶಾಸ್ತ್ರಗಳ ಮಾರ್ಮಿಕ ಅಧ್ಯಯನದಿಂದ ತೊಲಗದಿರಲಾರವು. ಆದುದರಿಂದ ಈ ಕಾಲದ ಜನರನ್ನು ಯಾವ ಅಂಶದಲ್ಲೂ ಪ್ರಶಂಸಿಸುವ ಸಂಭವವಿಲ್ಲ. ಮಹರ್ಷಿಗಳ ದೃಷ್ಟಿಯು ಪರಿಪೂರ್ಣವು.

**ತಂ ಪ್ರತೀತಂ ಸ್ವಧರ್ಮೇಣ ಬ್ರಹ್ಮದಾಯಹರಂ ಪಿತುಃ ।**
**ಸ್ರಗ್ವಿಣಂ ತಲ್ಪ ಆಸೀನಂ ಅರ್ಹಯೇತ್ಪ್ರಥಮಂ ಗವಾ ॥** ೩

ಬ್ರಹ್ಮಚಾರಿಯಾದವನು ಅಪತಿತ ಅಕ್ಲೀಬ ದಶದೋಷವಿವರ್ಜಿತನು ದ್ವಿತೀಯ ಪಿತೃವಿನಿಂದ (ಆಚಾರ್ಯನಿಂದ) ಬ್ರಹ್ಮದಾನ ಪರಿಗ್ರಹ ಮಾಡಿದವನು ಆದುದರಿಂದ ಅವನನ್ನು ಈಗ ವಿವಾಹಪೂರ್ವದಲ್ಲಿ ಗಂಧಮಾಲ್ಯಾದಿಗಳಿಂದ ಅಲಂಕರಿಸಿ ಉನ್ನತಾಸನದಲ್ಲಿ ಕುಳ್ಳಿರಿಸಿ ಸನ್ಮಾನಿಸಬೇಕು.

**ಗುರುಣಾನುಮತಃ ಸ್ನಾತ್ವಾ ಸಮಾವೃತ್ತೋ ಯಥಾವಿಧಿ ।**
**ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಂ ॥** ೪

ಮೊದಲು ವ್ರತಸಮಾರ್ತನೆಯನ್ನು ಪದ್ಧತಿಯ ಪ್ರಕಾರ ಮಾಡಬೇಕು. ಬಳಿಕ ಮಂಗಲಲಕ್ಷಣದಿಂದ ಕೂಡಿದ ಜಾತಿಸ್ತ್ರೀಯನ್ನು ಹೆಂಡತಿಯಾಗಿ ಸ್ವೀಕರಿಸಬೇಕು.

ಅಸಪಿಂಡಾ ಚ ಯಾ ಮಾತುರಸಗೋತ್ರಾ ಚ ಯಾ ಪಿತುಃ ।
ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ॥ ೫

ಹೆಂಡತಿಯ ಕೆಲಸವಾದ ದೇವಪಿತೃಕಾರ್ಯ, ದೇಹಪರಿಚರ್ಯಾ, ಗೃಹಕೃತ್ಯಗಳಲ್ಲಿ ಮತ್ತು ಸುರತ–ಸಂತತಿಗಳಲ್ಲಿ ಇಂತಹಳು ಪ್ರಶಸ್ತಳು: ತಾಯಿಯ ಮತ್ತು ತಂದೆಯ ರಕ್ತಸಂಬಂಧವನ್ನು ಹೊಂದಿದ ಏಳು ಸಂತತಿಯ ಒಳಗಿನವಳಾಗಬಾರದು. ತಂದೆಯಗೋತ್ರದವಳೂ ಆಗಬಾರದು. ತಿಳಿದರೆ ತಾಯಿಯ ಗೋತ್ರವನ್ನು ಬಿಡುವುದು ಲೇಸು. ದೇಹವಿಜ್ಞಾನವು ಸಮಾನ ದೇಹಾಣುಗಳ ಸಂಬಂಧದಿಂದ ಹುಟ್ಟುವ ಪ್ರಜೆಯು ಉತ್ತಮವಾಗುವುದಿಲ್ಲ ವೆನ್ನುವುದು. ಆದುದರಿಂದ ಜೀವಾಣು, ಡಿಂಭಾಣುಗಳ ಅತ್ಯಂತ ಭಿನ್ನ ವರ್ಗದವುಗಳಾದರೆ ಬಹುಫಲವೆಂದು ಹೇಳುತ್ತದೆ. ಆ ಕಾರಣದಿಂದ ಸಂಬಂಧೀಸ್ತ್ರೀಯು ವಿವಾಹಯೋಗ್ಯವಲ್ಲವೆನ್ನಲಾಗಿದೆ.

ಮಹಾನ್ತ್ಯಪಿ ಸಮೃದ್ಧಾನಿ ಗೋಜಾವಿಧನಧಾನ್ಯತಃ ।
ಸ್ತ್ರೀಸಂಬಂಧೇ ದಶೈತಾನಿ ಕುಲಾನಿ ಪರಿವರ್ಜಯೇತ್ ॥

ಸರ್ವಸಂಪತ್ಸಮೃದ್ಧವಾಗಿದ್ದರೂ ಕೆಟ್ಟ ಕುಲದ ಹೆಣ್ಣನ್ನು ಬಿಡುವುದು ಒಳ್ಳೆಯದು. ಸಂತತಿಯ ಕ್ಷೇಮವನ್ನೇ ಗುರಿಯಿಟ್ಟು ದೋಷವನ್ನು ಹುಡುಕ ಲಾಗಿದೆ. ರತಿಯು ಸಿಕ್ಕಿದರೂ ಧರ್ಮಸಂತತಿಗಳಾದ ವಿವಾಹ ಫಲಗಳ ಸಾಧನೆಯು ಆಗುವಂತಿರಬೇಕು. ಏಕವಿವಾಹವು ಪುರುಷ ಸಾಧ್ಯವಾದರೆ ಇದನ್ನು ಮರೆಯಲಾಗದು. ಬಹುವಿವಾಹವು ಸದಾ ಸುಖಮಯವಲ್ಲ; ಅನರ್ಥ ಸಂಭವವೇ ಬಹಳ. ಧನ ಮತ್ತು ವ್ಯವಹಾರ ಚಾತುರ್ಯವು ಅತೀವ ಇರಬೇಕು, ಆಗ ಬಹುವಿವಾಹವು ನಿಂದ್ಯವಲ್ಲ. ಮತ್ಸರ ಕಲಹ ಗಳು ಉಲ್ಬಣಿಸುವುದನ್ನು ತಡೆಯಬೇಕು. ಕಾಮವೇಗವು ಬಹಳವಿದ್ದವನು ನಿರುಪಾಯನಾಗಿ ಬಹುವಿವಾಹ ಮಾಡಿಕೊಳ್ಳಬೇಕಾದರೂ ಇವನ್ನು ಗಮನಿಸ ಬೇಕು. ಕಾಮಜೀವನದೊಂದಿಗೆ ಧರ್ಮಅರ್ಥಜೀವನವು ದುಃಖಮಯವಾಗ ದಿರಲು ಕನ್ಯಾಪರೀಕ್ಷಣವು ಅವಶ್ಯವಿದೆ. ಎಲ್ಲರ ಶೀಲವು ಒಂದೇ ತೆರನಿರುವು ದಿಲ್ಲ. ಪುಣ್ಯಬಲದಿಂದ ಧನದ ವೃದ್ಧಿ-ಹ್ರಾಸಗಳು ಮನುಷ್ಯನಿಗೆ ಬರುವುದ ರಿಂದ ಧನಿಕಕುಲದ ಹೆಣ್ಣು ಲಾಭಕರವಲ್ಲ.

ಹೀನಕ್ರಿಯಂ ನಿಷ್ಪುರುಷಂ ನಿಶ್ಛಂದೋ ರೋಮಶಾರ್ಶಸಂ ।
ಕ್ಷಯ್ಯಾಮಯಾವ್ಯಪಸ್ಮಾರಿಶ್ವಿತ್ರಿಕುಷ್ಠಿಕುಲಾನಿ ಚ ॥ ೭

ಸಂಸ್ಕಾರಹೀನ, ಪುರುಷ ಸಂತತಿ ಕಡಿಮೆ ಇರುವ, ವಿದ್ಯಾವಂತವಲ್ಲದ, ಅರ್ಶಸ್, ಕ್ಷಯ, ಮಂದಾಗ್ನಿ, ಅಪಸ್ಮಾರ, ತೊನ್ನು, ಕುಷ್ಠರೋಗದ ಕುಲವನ್ನು ಬಿಡಬೇಕು.

ನೋದ್ವಹೇತ್ಕಪಿಲಾಂ ಕನ್ಯಾಂ ನಾಧಿಕಾಂಗೀಂ ನ ರೋಗಿಣೀಂ ।
ನಾಲೋಮಿಕಾಂ ನಾತಿಲೋಮಾಂ ನ ವಾಚಾಟಾಂ ನ ಪಿಂಗಲಾಂ ॥ ೮

ಕಂದು ಕೂದಲು, ಬಿಳಿಕಣ್ಣು, ಅಧಿಕಾಂಗ, ರೋಗ, ರೋಮಹೀನತೆ, ಅಧಿಕರೋಮ, ಪರುಷಧ್ವನಿಯುಳ್ಳ ಹೆಣ್ಣನ್ನು ಮದುವೆಯಾಗಬಾರದು.

ನರ್ಕ್ಷವೃಕ್ಷನದೀನಾಮ್ನೀಂ ನಾಂತ್ಯಪರ್ವತನಾಮಿಕಾಂ ।
ನ ಪಕ್ಷ್ಯಹಿಪ್ರೇಷ್ಯನಾಮ್ನೀಂ ನ ಚ ಭೀಷಣನಾಮಿಕಾಂ ॥ ೯

ನಕ್ಷತ್ರ, ಮರ, ನದಿ, ಅಂತ್ಯಜ, ಪರ್ವತ, ಪಕ್ಷಿ, ನಾಗಭಯಂಕರ ಇತ್ಯಾದಿ ಅರ್ಥದ ಹೆಸರು ಹುಡುಗಿಗೆ ಇರಬಾರದು.

ಅವ್ಯಂಗಾಂಗೀಂ ಸೌಮ್ಯನಾಮ್ನೀಂ ಹಂಸವಾರಣಗಾಮಿನೀಂ ।
ತನುಲೋಮಕೇಶದಶನಾಂ ಮೃದ್ವಂಗೀಮುದ್ವಹೇತ್ಸ್ತ್ರಿಯಂ ॥ ೧೦

ಊನಾಂಗ ಇರಬಾರದು. ನಾಮವರ್ಣಗಳು ಮೃದುವಾಗಿರಬೇಕು. ಹಂಸ–ಮದಗಜಗಳಂತೆ ಚಂದ ನಡಿಗೆಯುವಳು, ಮೃದು, ಗಿಡ್ಡ, ನುಣುಪು ಹಲ್ಲು, ರೋಮ-ಕೂದಲು ಉಳ್ಳವಳು, ಕೋಮಲಾಂಗಳು ಉಳ್ಳವಳನ್ನು ಮದುವೆಯಾಗಬೇಕು.

ಯಸ್ಯಾಸ್ತು ನ ಭವೇದ್ಭ್ರಾತಾ ನ ವಿಜ್ಞಾಯೇತ ವಾ ಪಿತಾ ।
ನೋಪಯಚ್ಛೇತ ತಾಂ ಪ್ರಾಜ್ಞಃ ಪುತ್ರಿಕಾಧರ್ಮಶಂಕಯಾ ॥ ೧೧

ಯಾವಳಿಗೆ ಸೋದರರು ಇಲ್ಲ, ತಂದೆಯಾರೆಂದು ತಿಳಿಯದು ಆಗ ಸಗೋತ್ರ ಕೃತ್ರಿಮ ಪುತ್ರ ಸಂಶಯ ಉಳಿಯುವುದು, ಸಂತತಿಗೆ ದೋಷವು. ಸಂತತಿಯ ಲಾಭವಿಲ್ಲ. ಆದುದರಿಂದ ಅಂತಹ ಹುಡುಗಿಯನ್ನು ಬಿಡಬೇಕು. ಸಗೋತ್ರ

ದವಳು ತಂಗಿ, ಅತ್ತೆ ಆಗಿರಬಹುದು. ಅಂತಹರು ಹೆಂಡತಿಯಾಗತಕ್ಕವರಲ್ಲ. ರಕ್ತಭೇದವಿಲ್ಲ. ರಕ್ತಭೇದದಿಂದ ಅಭಿವೃದ್ಧಿಯನ್ನು ಒಪ್ಪುವಾಗ ಇದು ವಿರುದ್ಧವು.

ಸವರ್ಣಾಗ್ರೇ ದ್ವಿಜಾತೀನಾಂ ಪ್ರಶಸ್ತಾ ದಾರಕರ್ಮಣಿ ।
ಕಾಮತಸ್ತು ಪ್ರವೃತ್ತಾನಾಮಿಮಾಃ ಸ್ಯುಃ ಕ್ರಮಶೋ ವರಾಃ ॥ ೧೨

ಎಲ್ಲರಿಗೂ ಮದುವೆ ಆಗುವಾಗ ಮೊದಲಿನ ಮದುವೆಗೆ ತನ್ನ ಜಾತಿಯ ಹುಡುಗಿ ಆಗಬೇಕು. ಕಾಮಕ್ಕಾಗಿ ಮಾತ್ರ ಆಗುವ ಮದುವೆಗೆ ಜಾತಿನಿಯಮ ವಿಲ್ಲ.

ಶೂದ್ರೈವ ಭಾರ್ಯಾ ಶೂದ್ರಸ್ಯ ಸಾ ಚ ಸ್ವಾ ಚ ವಿಶಃ ಸ್ಮೃತೇ ।
ತೇ ಚ ಸ್ವಾ ಚೈವ ರಾಜ್ಞಶ್ಚ ತಾಶ್ಚ ಸ್ವಾ ಚಾಗ್ರಜನ್ಮನಃ ॥ ೧೩

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಮೊದಲನೆಯವರಿಗೆ ಅನಂತರ ಜಾತಿಯ ಎಲ್ಲ ಸ್ತ್ರೀಯರು ವಿವಾಹಯೋಗ್ಯರು.

ನ ಬ್ರಾಹ್ಮಣಕ್ಷತ್ರಿಯಯೋರಾಪದ್ಯಪಿ ಹಿ ತಿಷ್ಠತೋಃ ।
ಕಸ್ಮಿಂಶ್ಚಿದಪಿ ವೃತ್ತಾಂತೇ ಶೂದ್ರಾ ಭಾರ್ಯೋಪದಿಶ್ಯತೇ ॥ ೧೪

ಪ್ರಥಮ ವಿವಾಹದಲ್ಲಿ ಶೂದ್ರ ಸ್ತ್ರೀಯನ್ನು ಬಿಡಬೇಕು. ಸವರ್ಣ ಸ್ತ್ರೀಯು ಸರ್ವಥಾ ಸಿಗದಿದ್ದರೂ ಈ ವರೆಗೆ ಅನ್ಯವರ್ಣದ ಸ್ತ್ರೀಯನ್ನು ಮದುವೆಯಾದ ಉದಾಹರಣೆ ಇಲ್ಲ.

ಹೀನಜಾತಿಸ್ತ್ರಿಯಂ ಮೋಹಾದುದ್ವಹಂತೋ ದ್ವಿಜಾತಯಃ ।
ಕುಲಾನ್ಯೇವ ನಯಂತ್ಯಾಶು ಸಸಂತಾನಾನಿ ಶೂದ್ರತಾಂ ॥ ೧೫
ಶೂದ್ರಾವೇದೀ ಪತತ್ಯತ್ರೇರುತಥ್ಯತನಯಸ್ಯ ಚ ।
ಶೌನಕಸ್ಯ ಸುತೋತ್ಪತ್ತ್ಯಾ ತದಪತ್ಯತಯಾ ಭೃಗೋಃ ॥ ೧೬

ಕಾಮದಿಂದ ಮದುವೆಯಾದಾಗ ಸಂತತಿಗೆ ಅವ್ಯವಸ್ಥೆಯಾಗುವುದು. ಮಿಶ್ರಸಂತತಿಯು ಮಿಶ್ರವಾಗಿ ಇತರರ. ವಕ್ರದೃಷ್ಟಿಗೆ ಪಾತ್ರವಾಗುವುದು.

ಸ್ವಜಾತಿ ಸಂತತಿಯಿದ್ದರೆ, ಬಳಿಕ ಪರಜಾತಿ ಸ್ತ್ರೀಯಲ್ಲಿ ಸಂತತಿಯು ಜನಕನಿಗೆ ಅಷ್ಟು ನಿಂದಾರ್ಹವಲ್ಲ. ತನ್ನ ಕುಲವೃದ್ಧಿಗೆ, ರಕ್ಷಣೆಗೆ ವ್ಯವಸ್ಥೆಯಾಯಿತು. ಮಿಶ್ರಸಂತತಿಯು ಅದರಪುಣ್ಯಾನುಸಾರ ಜೀವಿಸುತ್ತಿರಲಿ. ಜೀವನದ ಹೊಣೆಯು ತಂದೆಗೆ ಮಕ್ಕಳ ವಿಷಯದಲ್ಲಿ ಕಡಿಮೆ. ದೈವವಾದದಲ್ಲಿ ಅವರವರ ಪಾಪ ಪುಣ್ಯವು ಅವರವರ ಸುಃಖ-ದುಃಖಗಳಿಗೆ ನಿಯಾಮಕವಾದಾಗ ಮಾತಾಪಿತೃಗಳ ಹೊಣೆಯನ್ನು ಎತ್ತಿಹಿಡಿಯುವ ಅವಶ್ಯವಿಲ್ಲ. ಪಿತೃಧನದಿಂದ ಜೀವನ ನಿರೀಕ್ಷೆಯು ಅನರ್ಥಕಾರಿಯು. ಸಂತತಿಯು ಯಾರಿಗೂ ಸ್ವೇಚ್ಛೆಯಿಂದ ಹಲುಬಿದವರಿಗೆ ಸಿಗುವುದಿಲ್ಲ. ಸಂತತಿಯ ಸಮಸ್ಯೆಯಿಂದ ವಿವಾಹದಲ್ಲಿ ಸಂಖ್ಯಾನಿಯಮವು ಜಾತಿನಿಯಮವು ಅಷ್ಟು ನಿಷ್ಠುರವಲ್ಲ. ಮನಸ್ಸು ಸ್ವಾಧೀನ ಇರುವುದಾದರೆ ಪರೀಕ್ಷಿಸಿ ಸ್ವೀಕರಿಸಿದ ಸ್ತ್ರೀಯಲ್ಲಿ ಕಾಮಪ್ರೇಮಗಳು ಬೆಳೆಯುವುದು ನ್ಯಾಯವು. ತನ್ನ ಜಾತಿಯ ಹೆಣ್ಣು ಸಿಗದಿರುವುದು ಸಾಮಾನ್ಯವಾಗಿ ಸುಳ್ಳು. ಮನಸ್ಸು ಸಿಕ್ಕಾಪಟ್ಟೆ ಹರಿಯುವ ಮನುಷ್ಯನು ಕಾಮದಲ್ಲಿ ಮಾತ್ರವಲ್ಲ, ಧರ್ಮ–ಅರ್ಥಗಳ ಲೋಕವ್ಯವಹಾರದಲ್ಲೂ ತಪ್ಪುವನು. ಅಯಶಸ್ವಿಯಾಗುವನು. ಈ ಮನೋಬಲದ ಅಳತೆಯನ್ನು ಸೂಚಿಸಲು ಈ ಕಟ್ಟುಪಾಡುಗಳು ಸಹಾಯಕವಾಗಿವೆ. ಪರಜಾತಿಯಸ್ತ್ರೀಯು ಹೆಂಡತಿಯಾದರೆ ತನ್ನ ಕುಲಮರ್ಯಾದೆಯ, ದೇವಪಿತೃಗಳ ಕಾರ್ಯಗಳಿಗೆ ಅವಳು ಸೇರುವುದನ್ನು ಇತರರು ಸಂತೋಷಿಸುವುದಿಲ್ಲ.

ಶೂದ್ರಾಂ ಶಯನಮಾರೋಪ್ಯ ಬ್ರಾಹ್ಮಣೋ ಯಾತ್ಯಧೋಗತಿಂ ।
ಜನಯಿತ್ವಾ ಸುತಂ ತಸ್ಯಾಂ ಬ್ರಾಹ್ಮಣ್ಯಾದೇವ ಹೀಯತೇ ॥ ೧೭

ಬ್ರಾಹ್ಮಣನು ಸ್ವಜಾತಿಯ ಸ್ತ್ರೀಯನ್ನು ಮದುವೆಯಾಗಿ ಅವಳಲ್ಲಿ ಸುಖಜೀವನ-ಸಂತತಿಗಳನ್ನು ಪಡೆಯದೆ, ಕೇವಲ ಅನ್ಯಜಾತಿ ಸ್ತ್ರೀಯನ್ನು ಸ್ವೇಚ್ಛೆಯಿಂದ ಭೋಗಿಸಿದರೆ ಅಪರಾಧವು. ಇಲ್ಲವಾದರೆ ಕಾಮವಿವಾಹಕ್ಕೆ ಸಮ್ಮತಿಯು ನ್ಯಾಯವಲ್ಲ.

ದೈವಪಿತ್ರ್ಯಾತಿಥೇಯಾನಿ ತತ್ಪ್ರಧಾನಾನಿ ಯಸ್ಯ ತು ।
ನಾಶ್ನಂತಿ ಪಿತೃದೇವಾಸ್ತನ್ನ ಚ ಸ್ವರ್ಗಂ ಸ ಗಚ್ಛತಿ ॥ ೧೮

ಅತಿಥಿಸತ್ಕಾರ, ದೇವಕಾರ್ಯ, ಪಿತೃಕಾರ್ಯಗಳನ್ನು ಅನ್ಯಜಾತಿಸ್ತ್ರೀಯೊಡನೆ ಮಾಡಿದರೆ ಸ್ವಜಾತಿಯವರು, ದೇವಪಿತೃಗಳು ಅದನ್ನು ಸ್ವೀಕರಿಸುವುದಿಲ್ಲ.

ವೃಷಲೀಫೇನಪೀತಸ್ಯ ನಿಃಶ್ವಾಸೋಪಹತಸ್ಯ ಚ ।
ತಸ್ಯಾಂ ಚೈವ ಪ್ರಸೂತಸ್ಯ ನಿಷ್ಕೃತಿರ್ನ ವಿಧೀಯತೇ ॥ ೧೯

ಸ್ವಜಾತಿಸ್ತ್ರೀಯಲ್ಲದೆ ಮದುವೆಯಾದ ಪರಜಾತಿಯ ಕಾಮಸ್ತ್ರೀಯಲ್ಲಿ ಸಂತತಿ, ಅಧರಚುಂಬನ, ಸಹಶಯ್ಯೆ ಮಾಡದೆ ಕೇವಲ ಅಂಗಸಂಗ ಅನುಭವಿಸುವುದು ಒಳ್ಳೆಯದು. ಅದಕ್ಕೆ ಋತುಕಾಲಹೊರತು ಸುಖ ಅನುಭವಿಸುವುದು ಉಪಾಯವು. ಶಸ್ತ್ರಕ್ರಿಯೆ ಸಾಧ್ಯವಾದರೆ ತುಂಬ ಒಳ್ಳೆಯದು. ಕಾಮದಿಂದ ಮದುವೆಯಾದವಳಿಗೆ ಸಂತತಿಯ ಆಶೆ ಇಲ್ಲದಿರುವುದು ಸ್ವಾಭಾವಿಕ. ಸಂತತಿಗಾಗಿ ಮದುವೆಯಾಗುವವಳು ವಿವಾಹಿತನನ್ನು ಕಾಮಲೀಲೆಯಿಂದ ಸಂತೋಷಪಡಿ(ಅಪೇಕ್ಷಿ)ಸದಿರುವುದು ಯಥಾರ್ಥ. ಕೈಕೇಯಿಯಂತೆ ಕಾಮಸ್ತ್ರೀಯರು ಸಂತತಿಯ ಅಧಿಕಾರಕ್ಕೆ ವಾದಿಸುವುದು ಕಪಟವು. ಈ ಅನರ್ಥವೇ ಬಹುವಿವಾಹ ನಿಂದೆಗೆ ಕಾರಣ. ಕಾಮೇಚ್ಛೆಯಿಲ್ಲದವರು ಸನ್ಯಾಸ, ಬ್ರಹ್ಮಚರ್ಯ ರೀತಿಯಿಂದ ವಿವಾಹವಿಲ್ಲದಿರುವುದು ಸರಿಯಾದರೆ, ಇಚ್ಛೆಯಿದ್ದವರು ಬಹುವಿವಾಹವಾಗುವುದು ಯುಕ್ತಿವಿರುದ್ಧವಲ್ಲ. ಅನರ್ಥವು ಒಂದು ಮದುವೆಯ ಸಂತತಿಯಿಂದಲೂ ಆದ ಉದಾಹರಣೆ ಇದೆ. ಕಳ್ಳರು ಇರುವರೆಂದು ನಾವು ಬೆಳೆ ಮಾಡದಿರಲು ಸಾಧ್ಯವೆ ? ದೈವವಾದದಲ್ಲಿ ದುಃಖಕ್ಕೆ (ಪರರ) ತಾನು ಕಾರಣನಲ್ಲ. ದಶರಥನು ದುಃಖಿಸಿರುವುದು ಧರ್ಮಸಂಕಟಕ್ಕೆ. ಕೈಕೇಯಿಯನ್ನು ಸಂತತಿಗಾಗಿ ತಂದನು. ಅದಾಗಲಿಲ್ಲ. ಆದುದರಿಂದ ಸಂತತಿಯ ಅಧಿಕಾರದ ಪ್ರಶ್ನೆ ಆಗ ಇರಲಿಲ್ಲ. ಇದ್ದರೆ ದಶರಥನು ಸೋಲುತ್ತಿರಲಿಲ್ಲ. ಕುಲಧರ್ಮವನ್ನು ಮೀರಿದ ವರದ ಕಪಟದಿಂದ ಧರ್ಮಸಂಕಟವಾದುದು. ದಶರಥನು ಕಾಮಿಯಾಗಿ ಅಪರಾಧಿಯಲ್ಲ. ಕೈಕೇಯಿಯ ಕಾಮಮೋಹವನ್ನು ಕವಿಗಳು ದಶರಥನಿಗೆ ವರ್ಣಿಸಿದರೆ ಅದು ಕಾಮಬುದ್ಧಿಯ ನಿಂದೆಯ ನೀತಿ-ಬೋಧೆಯಾಗಬಹುದೇ ಹೊರತು ದಶರಥನ ನಿಂದೆಯಲ್ಲ. ಧರ್ಮ—ರತಿ—ಸಂತತಿಗಾಗಿ ಆದ ಧರ್ಮ ವಿವಾಹವು ಕೈಕೇಯಿಯದು ಹೌದು. ಸ್ವಸ್ತ್ರೀಯಲ್ಲಿ ಕಾಮವು ಅಪರಾಧವಾದರೆ ಸ್ತ್ರೀಸೃಷ್ಟಿಯೂ, ವಿವಾಹವೂ ನ್ಯಾಯವಲ್ಲ.

ಚತುರ್ಣಾಮಪಿ ವರ್ಣಾನಾಂ ಪ್ರೇತ್ಯ ಚೇಹ ಹಿತಾಹಿತಾನ್ ।
ಅಷ್ಟಾವಿಮಾನ್ ಸಮಾಸೇನ ಸ್ತ್ರೀವಿವಾಹಾನ್ನಿಬೋಧತ ॥ ೨೦

ಈ ವಿವಾಹ ಪ್ರಕರಣದ ವಿಷಯವು ಮನುಷ್ಯರೆಲ್ಲರಿಗೂ ಸಮಾನವು. ಮದುವೆಯ ಗುಣದೋಷಗಳು ಸಮಾನವೇ. ತತ್ತ್ವದೃಷ್ಟಿಯಿಂದ ಜಗತ್ತಿನ ಜನ ನಾಲ್ಕುವರ್ಗವೆಂದು ಸೃಷ್ಟಿಪ್ರಕರಣದಲ್ಲಿ ವಿವರಿಸಲಾಗಿದೆ. ಬ್ರಾಹ್ಮಣಾದಿ ಶಬ್ದವು ಸಾರ್ಥಕವಿಭಾಗವಾಗಿ ವರ್ಗವಾಚಕವು. ವಿವಾಹವು ಎಂಟು ವಿಧ.

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥ ೨೧

ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ; ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ–ಎಂದು ಎಂಟು ವಿವಾಹಗಳು.

ಯೋ ಯಸ್ಯ ಧರ್ಮ್ಯೋ ವರ್ಣಸ್ಯ ಗುಣದೋಷೌ ಚ ಯಸ್ಯ ಯೌ ।
ತದ್ವಃ ಸರ್ವಂ ಪ್ರವಕ್ಷ್ಯಾಮಿ ಪ್ರಸವೇ ಚ ಗುಣಾಗುಣಾನ್ ॥ ೨೨

ಯಾರಿಗೆ ಯಾವುದು ಧರ್ಮವಿರುದ್ಧವಲ್ಲ, ವಿವಾಹದಲ್ಲಿ ಯಾವುವು ಗುಣದೋಷಗಳು ಅದೆಲ್ಲವನ್ನು ನಿಮಗೆ ಹೇಳುತ್ತೇನೆ. ಸಂತತಿಯು ಗುಣಾವಗುಣಗಳನ್ನು ಬಿಡುವುದಿಲ್ಲ.

ಷಡಾನುಪೂರ್ವ್ಯಾ ವಿಪ್ರಸ್ಯ ಕ್ಷತ್ರಸ್ಯ ಚತುರೋಽವರಾನ್ ।
ವಿಟ್ಶೂದ್ರಯೋಸ್ತು ತಾನೇವ ವಿದ್ಯಾದ್ಧರ್ಮ್ಯಾನರಾಕ್ಷಸಾನ್ । ೨೩

ಮೊದಲಿನಿಂದ ಆರು ವಿಪ್ರನಿಗೆ, ಕೊನೆಯಿಂದ ನಾಲ್ಕು ಕ್ಷತ್ರಿಯನಿಗೆ, ರಾಕ್ಷಸವೊಂದು ಹೊರತು ವಿಟ್ಶೂದ್ರರಿಗೆ ಉಳಿದ ಮೂರು–ವಿವಾಹಗಳು ಧರ್ಮಸಮ್ಮತಗಳು.

ಚತುರೋ ಬ್ರಾಹ್ಮಣಸ್ಯಾದ್ಯಾನ್ ಪ್ರಶಸ್ತಾನ್ ಕವಯೋ ವಿದುಃ।
ರಾಕ್ಷಸಂ ಕ್ಷತ್ರಿಯಸ್ಯೈಕಮಾಸುರಂ ವೈಶ್ಯಶೂದ್ರಯೋಃ ॥ ೨೪
ಪಂಚಾನಾಂ ತು ತ್ರಯೋ ಧರ್ಮ್ಯಾ ದ್ವಾವಧರ್ಮ್ಯೌ ಸ್ಮೃತಾವಿಹ ।
ಪೈಶಾಚಶ್ಚಾಸುರಶ್ಚೈವ ನ ಕರ್ತವ್ಯೌ ಕದಾಚನ ॥ ೨೫

ಪೃಥಕ್ಪೃಥಗ್ವಾ ಮಿಶ್ರೌ ವಾ ವಿವಾಹೌ ಪೂರ್ವಚೋದಿತೌ ।
ಗಾಂಧರ್ವೋ ರಾಕ್ಷಸಶ್ಚೈವ ಧರ್ಮ್ಯೌ ಕ್ಷತ್ರಸ್ಯ ತೌ ಸ್ಮೃತೌ ॥ ೨೬

ಮೇಲೆ ಹೇಳಿದ ಎಂಟುವಿಧ ವಿವಾಹದಲ್ಲಿ ಕೆಲವರಿಗೆ ಕೆಲವು ಸಮ್ಮತವೂ ವಿಮತವೂ ಆಗುವುದು. ಅಲ್ಲದೆ ಕೆಲವು ಸಂದರ್ಭದಲ್ಲಿ ಈ ವಿವಾಹಗಳು ಮಿಶ್ರ ಲಕ್ಷಣಗಳನ್ನು ಹೊಂದಬಹುದು.

ಆಚ್ಛಾದ್ಯ ಚಾರ್ಚಯಿತ್ವಾ ಚ ಶ್ರುತಿಶೀಲವತೇ ಸ್ವಯಂ ।
ಆಹೂಯ ದಾನಂ ಕನ್ಯಾಯಾ ಬ್ರಾಹ್ಮೋ ಧರ್ಮಃ ಪ್ರಕೀರ್ತಿತಃ ॥ ೨೭

ಬಟ್ಟೆಬರೆ, ಸ್ವರ್ಣರಜತ ರತ್ನಾದಿಭೂಷಣಗಳಿಂದ ಕನ್ಯೆಯನ್ನು ಅಲಂಕರಿಸಿ, ವಿದ್ಯಾಶೀಲಾದಿ ಗುಣವಂತವರನನ್ನು ಕರೆದು ಅವನು ಬೇಡದೆ ದಾನಮಾಡುವುದು ಬ್ರಾಹ್ಮವಿವಾಹವು.

ಯಜ್ಞೇ ತು ವಿತತೇ ಸಮ್ಯಗೃತ್ವಿಜೇ ಕರ್ಮ ಕುರ್ವತೇ ।
ಅಲಂಕೃತ್ಯ ಸುತಾದಾನಂ ದೈವಂ ಧರ್ಮಂ ಪ್ರಚಕ್ಷತೇ ॥ ೨೮

ಜ್ಯೋತಿಷ್ಟೋಮಾದಿ ಯಜ್ಞದಲ್ಲಿ ಋತ್ವಿಜನಾಗಿ ವ್ಯಾಪೃತನಾದವನಿಗೆ ಅಲಂಕೃತ ಕನ್ಯಾದಾನವು ದೈವವಿವಾಹವು.

ಏಕಂ ಗೋಮಿಥುನಂ ದ್ವೇ ವಾ ವರಾದಾದಾಯ ಧರ್ಮತಃ ।
ಕನ್ಯಾಪ್ರದಾನಂ ವಿಧಿವದಾರ್ಷೋ ಧರ್ಮಃ ಸ ಉಚ್ಯತೇ ॥ ೨೯

ವರನಿಂದ ಒಂದು ಎತ್ತಾಗಲಿ, ಗೋವಾಗಲಿ ಅಥವಾ ಎರಡನ್ನೂ (ಜೋಡಿ) ತಕ್ಕೊಂಡು ಮಾಡುವ ಕನ್ಯಾದಾನವು ಆರ್ಷ ವಿವಾಹವು.

ಸಹೋಭೌ ಚರತಾಂ ಧರ್ಮಮಿತಿ ವಾಚಾನುಭಾಷ್ಯ ಚ ।
ಕನ್ಯಾಪ್ರದಾನಮಭ್ಯರ್ಚ್ಯ ಪ್ರಾಜಾಪತ್ಯೋ ವಿಧಿಃ ಸ್ಮೃತಃ ॥ ೩೦

ವರನನ್ನು ಸತ್ಕರಿಸಿ, 'ನೀವಿಬ್ಬರು ಸಹಜೀವನವನ್ನು ನಡೆಸಿರಿ' ಎಂದು ಕನ್ಯಾದಾನ ಮಾಡುವುದು ಪ್ರಾಜಾಪತ್ಯವಿವಾಹ.

ಜ್ಞಾತಿಭ್ಯೋ ದ್ರವಿಣಂ ದತ್ತ್ವಾ ಕನ್ಯಾಯೈ ಚೈವ ಶಕ್ತಿತಃ ।
ಕನ್ಯಾಪ್ರದಾನಂ ಸ್ವಾಚ್ಛಂದ್ಯಾದಾಸುರೋ ಧರ್ಮ ಉಚ್ಯತೆ ॥ ೩೧

ಮನಬಂದಂತೆ ಕನ್ಯಾಬಂಧುಗಳಿಗೆ ಹಣ ಕೊಟ್ಟು ಹುಡುಗಿಯನ್ನು ಧನದಿಂದ ಸಂತೋಷಪಡಿಸಿ ಕನ್ಯಾಸ್ವೀಕಾರವು ಆಸುರವು.

ಇಚ್ಛಯಾನ್ಯೋನ್ಯಸಂಯೋಗಃ ಕನ್ಯಾಯಾಶ್ಚ ವರಸ್ಯ ಚ ।
ಗಾಂಧರ್ವಃ ಸ ತು ವಿಜ್ಞೇಯೋ ಮೈಥುನ್ಯಃ ಕಾಮಸಂಭವಃ ॥ ೩೨

ಹುಡುಗ-ಹುಡುಗಿಯರು ತಾವೇ ಸ್ವೇಚ್ಛೆಯಿಂದ ಅನ್ಯೋನ್ಯ ಸಂಬಂಧವನ್ನು ಹಿರಿಯರ ತಿಳುವಳಿಕೆ ಇಲ್ಲದೆ ಮಾಡುವುದು ಗಾಂಧರ್ವವು. ಈ ವಿವಾಹದಲ್ಲಿ ಯಾರಿಗೂ ಧನಾದಿದಾನವಿಲ್ಲದೆ ಕಾಮವೇ ನಿಯಾಮಕವಾಗಿದೆ.

ಹತ್ವಾ ಛಿತ್ವಾ ಚ ಭಿತ್ವಾ ಚ ಕ್ರೋಶಂತೀಂ ರುದತೀಂ ಗೃಹಾತ್ ।
ಪ್ರಸಹ್ಯ ಕನ್ಯಾಹರಣಂ ರಾಕ್ಷಸೋ ವಿಧಿರುಚ್ಯತೇ ॥ ೩೩

ಹುಡುಗಿಗೆ ಇಷ್ಟವಿಲ್ಲದಿದ್ದರೂ, ಅಳುತ್ತಿದ್ದರೂ, ವಿರೋಧಿಸುವವರಿದ್ದರೆ ಹೊಡೆದು-ಬಡಿದು ಬಲಾತ್ಕಾರದ ಕನ್ಯಾಪಹಾರವು ರಾಕ್ಷಸವು.

ಸುಪ್ತಾಂ ಮತ್ತಾಂ ಪ್ರಮತ್ತಾಂ ವಾ ರಹೋ ಯತ್ರೋಪಗಚ್ಛತಿ ।
ಸ ಪಾಪಿಷ್ಠೋ ವಿವಾಹಾನಾಂ ಪೈಶಾಚಶ್ಚಾಷ್ಟಮೋಽಧಮಃ ॥ ೩೪

ಹುಡುಗಿಯು ನಿದ್ದೆಮಾಡುತ್ತಿರುವಾಗ, ಮದ್ಯ ಮತ್ತಳಾದಾಗ, ಅಜಾಗರೂಕಳಾಗಿ ಒಂಟಿಯಾಗಿರುವಾಗ, ಅವಳ ಶೀಲಭಂಗ ಮಾಡಿ ಆಗುವ ಮದುವೆಯು ಪೈಶಾಚವು.

ಅದ್ಭಿರೇವ ದ್ವಿಜಾಗ್ರ್ಯಾಣಾಂ ಕನ್ಯಾದಾನಂ ವಿಶಿಷ್ಯತೇ ।
ಇತರೇಷಾಂ ತು ವರ್ಣಾನಾಮಿತರೇತರಕಾಮ್ಯಯಾ ॥ ೩೫

ಉಪನಯನ ಸಂಸ್ಕಾರ ಇರುವವರಿಗೆ (ಬ್ರಾಹ್ಮಣ) ಕನ್ಯಾದಾನವನ್ನು ಜಲಧಾರಾಪೂರ್ವಕವಾಗಿ ಮಾಡುವುದು ಪ್ರಶಸ್ತ. ಇತರರಿಗೆ ವಿಧಿಪೂರ್ವಕ ದಾನಸ್ವೀಕಾರವಿಲ್ಲದಿರುವುದರಿಂದ ಪರಸ್ಪರ ಸಮ್ಮತಿಯೇ ಸಾಕಾಗಿ(ರುವುದು)ದೆ.

ಯೋ ಯಸ್ಯೈಷಾಂ ವಿವಾಹಾನಾಂ ಮನುನಾ ಕೀರ್ತಿತೋ ಗುಣಃ |
ಸರ್ವಂ ಶೃಣುತ ತಂ ವಿಪ್ರಾಃ ಸರ್ವಂ ಕೀರ್ತಯತೋ ಮಮ || ೩೬

ಯಾವ ಯಾವ ವಿವಾಹದಲ್ಲಿ ಏನೇನು ವಿಶೇಷಗುಣವು ಎಂಬ ಮನು ವಿಮರ್ಶೆಯನ್ನು ನಿಮಗೆ ಹೇಳುತ್ತೇನೆ.

ದಶ ಪೂರ್ವಾನ್ಪರಾನ್ವಂಶ್ಯಾನಾತ್ಮಾನಂ ಚೈಕವಿಂಶಕಂ |
ಬ್ರಾಹ್ಮೀಪುತ್ರಃ ಸುಕೃತಕೃತ್ ಮೋಚಯೇದೇನಸಃ ಪಿತೄನ್ || ೩೭

ತನಗಿಂತ ಹಿಂದಿನ ಹತ್ತುಮಂದಿ ಹಿರಿಯರು, ನಂತರದ ಹತ್ತುಮಂದಿ ಕಿರಿಯರು ಮತ್ತು ತನ್ನನ್ನು ಕೂಡಿ ಇಪ್ಪತೊಂದು ಮಂದಿಯನ್ನು ಬ್ರಾಹ್ಮೀ ಪುತ್ರನಾದ ಶ್ರೇಷ್ಠ ವಿವಾಹ ಜನ್ಯಔರಸಪುತ್ರನು ಉದ್ಧಾರ ಮಾಡುವವನು. ಧರ್ಮಿಷ್ಠರಾದ ಪಿತೃಗಳು ಇಂತಹ ವಿವಾಹದ ಸತ್ಸಂತತಿಯನ್ನು ಸಂತೋಷ ದಿಂದ ಬಯಸುತ್ತಾರೆ. ಆದುದರಿಂದ ಇದೇ ಪರಮಧರ್ಮವು.

ದೈವೋಢಾಜಃ ಸುತಶ್ಚೈವ ಸಪ್ತ ಸಪ್ತ ಪರಾವರಾನ್ |
ಆರ್ಷೋಢಾಜಃ ಸುತಸ್ತ್ರೀಂಸ್ತ್ರೀನ್ ಷಟ್‌ಷಟ್ ಕಾಯೋಢಜಃ ಸುತಃ || ೩೮

ದೈವ, ಪ್ರಾಜಾಪತ್ಯ, ಆರ್ಷವಿವಾಹಜನ್ಯಪುತ್ರರು ಕ್ರಮವಾಗಿ ನಿಕೃಷ್ಟರು. ಪ್ರಶಸ್ತವಿವಾಹವನ್ನು ಆಚರಿಸುವುದು ಪ್ರಶಸ್ತವು.

ಬ್ರಾಹ್ಮಾದಿಷು ವಿವಾಹೇಷು ಚತುರ್ಷ್ವೇವಾನುಪೂರ್ವಶಃ |
ಬ್ರಹ್ಮವರ್ಚಸ್ವಿನಃ ಪುತ್ರಾ ಜಾಯಂತೇ ಶಿಷ್ಟಸಮ್ಮತಾಃ || ೩೯

ರೂಪಸತ್ವಗುಣೋಪೇತಾ ಧನವಂತೋ ಯಶಸ್ವಿನಃ |
ಪರ್ಯಾಪ್ತಭೋಗಾ ಧರ್ಮಿಷ್ಠಾ ಜೀವಂತಿ ಚ ಶತಂ ಸಮಾಃ || ೪೦

ಇತರೇಷು ತು ಶಿಷ್ಟೇಷು ನೃಶಂಸಾನೃತವಾದಿನಃ |
ಜಾಯಂತೇ ದುರ್ವಿವಾಹೇಷು ಬ್ರಹ್ಮಧರ್ಮದ್ವಿಷಃ ಸುತಾಃ || ೪೧

ಅನಿಂದಿತೈಃ ಸ್ತ್ರೀವಿವಾಹೈರನಿಂದ್ಯಾ ಭವತಿ ಪ್ರಜಾ |
ನಿಂದಿತೈರ್ನಿಂದಿತಾ ನೃಣಾಂ ತಸ್ಮಾನ್ನಿಂದ್ಯಾನ್ವಿವರ್ಜಯೇತ್ || ೪೨

ನಿಂದಿತ ವಿವಾಹದಿಂದ ನಿಂದಿತ ಸಂತತಿಯು. ಬಲಾತ್ಕಾರ ಸಂಭೋಗ ದಲ್ಲಿ ಸಂತೋಷವಿಲ್ಲ, ಪಿತೃಸಮ್ಮತಿಯಿಲ್ಲ. ಸತ್ಸಂಕಲ್ಪದಿಂದ ಪ್ರತಿಬಂಧಕ

ವಿಲ್ಲದಿದ್ದರೆ ಮಾತ್ರ ಸತ್ಫಲವು ಸಿದ್ಧಿಸುವುದು. ಪಿತೃಸಮ್ಮತಿ, ಸ್ತ್ರೀ–ಪುರುಷರ ಮನಃ ಸಂತೋಷಗಳಿಂದ ಒಳ್ಳೆಯದು ಆಗುವುದು. ರೂಪ, ಸತ್ವ, ಯಶಸ್ಸು, ಧನ, ಭೋಗಗಳು ಪಾಮರರು ಮೆಚ್ಚುವ ವಿಷಯ. ಅದರ ಲಾಭದ ಆಸೆಯಿಂದಲಾದರೂ ಧಾರ್ಮಿಕ ವಿವಾಹವನ್ನು ಆಶಿಸಲಿ ಎಂದು ಪ್ರಶಂಸೆಯು. ದೈವವು ಪ್ರಬಲ ವಿರೋಧಿಯಾಗಿದ್ದಾಗ ಧಾರ್ಮಿಕ ವಿವಾಹದಿಂದಲೂ ಕುಸಂತತಿಯು ಜನಿಸುವುದು ಪ್ರತ್ಯಕ್ಷವು. ಪ್ರಯತ್ನಪೂರ್ವಕ ಸದಾಚಾರದಿಂದ ನಿರ್ಬಂಧದ ಮನಃ ಪರಿವರ್ತನೆಯು ಆಗಲಿ ಎಂದು ಹಾರೈಸಿ ನಿಯಮವನ್ನು ಹೇರುತ್ತಾರೆ. ಅದೃಷ್ಟವು ದುರ್ಬಲವಾದಾಗ ಪ್ರಯತ್ನವು ಫಲಿಸುವುದರಿಂದ ಲೌಕಿಕ–ಶಾಸನಿಕ–ಧಾರ್ಮಿಕ ನಿರ್ಬಂಧಗಳು ಪ್ರವೃತ್ತವಾಗಿವೆ. ಹೀಗೆ ಅದು ನಿರಾಧಾರವಲ್ಲ.

ಪಾಣಿಗ್ರಹಣ ಸಂಸ್ಕಾರಃ ಸವರ್ಣಾಸೂಪದಿಶ್ಯತೇ ।
ಅಸವರ್ಣಾಸ್ವಯಂ ಜ್ಞೇಯೋ ವಿಧಿರುದ್ವಾಹಕರ್ಮಣಿ ॥ ೪೩

ಹಿಂದೆ ಹೇಳಿದ ವಿವಾಹವಿಧಿಯು ಅದರ ಫಲವು, ಸ್ತ್ರೀ–ಪುರುಷರು ಸಜಾತಿಯವರಾದಾಗ. ಕಾಮಜನ್ಯ ಇತರ ಸ್ತ್ರೀಪರಿಗ್ರಹವು ಬೇಕಾದರೆ ಅದರ ವಿಧಿಯು ಬೇರೆಯಿದೆ. ಅದನ್ನು ಮುಂದೆ ಹೇಳಲಾಗುವುದು.

ಶರಃ ಕ್ಷತ್ರಿಯಯಾ ಗ್ರಾಹ್ಯಃ ಪ್ರತೋದೋ ವೈಶ್ಯಕನ್ಯಯಾ ।
ವಸನಸ್ಯ ದಶಾ ಗ್ರಾಹ್ಯಾ ಶೂದ್ರಯೋತ್ಕೃಷ್ಟವೇದನೇ ॥ ೪೪

ಅಸವರ್ಣವಿವಾಹದಲ್ಲಿ ಕ್ಷತ್ರಿಯಸ್ತ್ರೀಯು ಬಾಣವನ್ನು, ವೈಶ್ಯಸ್ತ್ರೀ ದೊಣ್ಣೆಯನ್ನು, ಶೂದ್ರಸ್ತ್ರೀಯು ಗಂಡನ ಉತ್ತರೀಯದ ತುದಿಯನ್ನು ಹಿಡಿದುಕೊಳ್ಳಬೇಕು. ಇದು ಅನುಲೋಮ ವಿವಾಹದಲ್ಲಿ. ಪ್ರತಿಲೋಮ ವಿವಾಹದಲ್ಲಿ ಏನೂ ಇಲ್ಲ.

ಋತುಕಾಲಾಭಿಗಾಮೀ ಸ್ಯಾತ್ ಸ್ವದಾರನಿರತಃ ಸದಾ ।
ಪರ್ವವರ್ಜಂ ವ್ರಜೇಚ್ಚೈನಾಂ ತದ್ವ್ರತೋ ರತಿಕಾಮ್ಯಯಾ ॥ ೪೫

ಸಂತತಿಗಾಗಿ ಮದುವೆಯಾಗುವುದರಿಂದ, ಸಂತತಿಯಾಗುವವರೆಗೆ, ಋತುದರ್ಶನವಾಗಿ ಹದಿನಾರು ದಿನದವರೆಗೆ ಸ್ತ್ರೀಸಂಗವನ್ನು ಹೊಂದಬೇಕು. ಇದು

ಉತ್ತಮ ಪಕ್ಷ. ತಪ್ಪಬಾರದು. ಆಮೇಲೆ ತನ್ನ ಮತ್ತೆ ಹೆಂಡತಿಯ ಇಚ್ಛೆಯಂತೆ ಕಾಮಸಂಬಂಧ ಹೊಂದಬಹುದು. ಆದಕ್ಕೆ ಯಾವ ನಿಯಮವೂ ಇಲ್ಲ. ಸ್ತ್ರೀಯ ಇಚ್ಛೆಯಭಂಗವಾದರೆ ಪರಪುರುಷನನ್ನು ಕಾಮಿಸುವ ಸಂಭವವಿದೆ. ಅದು ಅನೇಕ ಅನರ್ಥಕ್ಕೆ ಕಾರಣವು. ಉಭಯ ಸಮ್ಮತಿಯಿಂದ ಪರ್ವಕಾಲದಲ್ಲಿ ಸಂಭೋಗವರ್ಜನೆ ಮಾಡಿದರೆ ಒಳ್ಳೆಯದು. ಪುರುಷನಿಗೂ ಪರಸ್ತ್ರೀಸಂಗಕ್ಕಿಂತ ಸ್ವಸ್ತ್ರೀಸಂಗವು ಶ್ರೇಯಸ್ಕರವು.

ಋತುಃ ಸ್ವಾಭಾವಿಕಃ ಸ್ತ್ರೀಣಾಂ ರಾತ್ರಯಃ ಷೋಡಶ ಸ್ಮೃತಾಃ ।
ಚತುರ್ಭಿರಿತರೈಃ ಸಾರ್ಧಮಹೋಭಿಃ ಸದ್ವಿಗರ್ಹಿತೈಃ ॥ ೪೬

ರಜೋದರ್ಶನದಿಂದ ಆರಂಭಿಸಿ ಹದಿನಾರು ದಿನ ಪರ್ಯಂತ ಋತುಕಾಲವು. ಆದರೆ ಋತುವು (ರಜಸ್ಸು ಅತ್ಯಲ್ಪವಾಗಿ) ಪ್ರತ್ಯಕ್ಷವಾಗದೆ ಗರ್ಭಧಾರಣೆ ಆದುದು ತುಂಬ ಇದೆ. ಇದು ಪ್ರಥಮ ದ್ವಿತೀಯಾದಿ ಗರ್ಭಗಳಲ್ಲಿ ಸಾಮಾನ್ಯ.

ತಾಸಾಮಾದ್ಯಾಶ್ಚತಸ್ರಸ್ತು ನಿಂದಿತೈಕಾದಶೀ ಚ ಯಾ ।
ತ್ರಯೋದಶೀ ಚ ಶೇಷಾಸ್ತು ಪ್ರಶಸ್ತಾ ದಶ ರಾತ್ರಯಃ ॥ ೪೭

ರಜೋದರ್ಶನ ಕಾಲದಿಂದ ಮೊದಲಿನ ನಾಲ್ಕು, ಹನ್ನೊಂದು, ಹದಿಮೂರು ಎಂದು ಆರು ರಾತ್ರಿಗಳು ಪ್ರಶಸ್ತವಲ್ಲ. ರಜಸ್ಸಿನ ಆರಂಭವು ರಾತ್ರಿಯಾದಾಗ ದಿನಕಾಲವು ಅಸ್ತವ್ಯಸ್ತವಾಗುವುದು. ದೈಹಿಕವಾಗಿ ವ್ಯತ್ಯಾಸವು ಇರುವುದರಿಂದ ಇದು ಸಾಮಾನ್ಯ ವಿಷಯವು. ಸಂತತಿಯ ಕ್ಷೇಮ ವಿಚಾರವನ್ನು ಹಿಂದೆ ಮಾಡಿ ಆಗಿದೆ.

ಯುಗ್ಮಾಸು ಪುತ್ರಾ ಜಾಯಂತೇ ಸ್ತ್ರಿಯೋಽಯುಗ್ಮಾಸು ರಾತ್ರಿಷು ।
ತಸ್ಮಾದ್ಯುಗ್ಮಾಸು ಪುತ್ರಾರ್ಥೀ ಸಂವಿಶೇದಾರ್ತವೇ ಸ್ತ್ರಿಯಂ ॥ ೪೮

೬-೮-೧೦-೧೨-೧೪-೧೬ ನೆ ರಾತ್ರಿಗಳಲ್ಲಿ ಜನಿಸಿದ ಗರ್ಭವು ಗಂಡು, ೫-೭-೯-೧೫ ನೆ ರಾತ್ರಿಗಳಲ್ಲಿ ಸ್ತ್ರೀ ಪ್ರಜೆಯು ಎಂದು ಸಿದ್ಧಾಂತವು. ಇದನ್ನು ಅತ್ಯಲ್ಪ ಕಾಮದ ಸ್ತ್ರೀ-ಪುರುಷರು ಪ್ರತ್ಯಕ್ಷ ಪ್ರಯೋಗ ಮಾಡಿ ನೋಡಬಹುದು. ಗರ್ಭನಿಶ್ಚಯ ಆಗುವತನಕ ಈ ನಿರ್ಣಯದಂತೆ ಸಂಭೋಗ ಸಾಧನೆಗೆ ಸಾಧ್ಯವಾಗಬೇಕು.

ಪುಮಾನ್ ಪುಂಸೋಽಧಿಕೇ ಶುಕ್ರೇ ಸ್ತ್ರೀ ಭವತ್ಯಧಿಕೇ ಸ್ತ್ರಿಯಾಃ ।
ಸಮೇಽಪುಮಾನ್ ಪುಂಸ್ತ್ರಿಯೌ ವಾ ಕ್ಷೀಣೇಽಲ್ಪೇ ಚ ವಿಪರ್ಯಯಃ ॥ ೪೯

ಪುಂ-ಜೀವಾಣುವಿಗೆ ಅಧಿಕ ಶಕ್ತಿಯಾದರೆ ಗಂಡು, ಡಿಂಭಾಣುವಿಗೆ ಪ್ರಾಬಲ್ಯವಿದ್ದರೆ ಹೆಣ್ಣು, ಸಮಾನತೆಯಲ್ಲಿ ಮಿಶ್ರಸಂತತಿ. ಕ್ಷೀಣತೆಯಿದ್ದರೆ ಗರ್ಭೋತ್ಪತ್ತಿಯಿಲ್ಲ. ಸ್ತ್ರೀ-ಪುರುಷಾಣುಗಳು ಸಮಬಲಗಳಾಗಿದ್ದರೆ ಯಮಲ ಸಂತತಿಯೆಂದೂ ಈ ವಾಕ್ಯಕ್ಕೆ ಅರ್ಥಬರುವುದು. ಆದರೆ ಈಗ ಎರಡು ಜೀವಾಣುಗಳು ಏಕಕಾಲದಲ್ಲಿ ಫಲಿಸಿದರೆ ಜೋಡು ಹುಡುಗರು ಹುಟ್ಟುವರೆಂದು ಹೇಳುವರು. ಅಣುಶಬ್ದವು ಈ ಶ್ಲೋಕದಲ್ಲಿಲ್ಲ. ಆಧಿಕ್ಯವು ಬಲದಿಂದಲೊ ಸಂಖ್ಯೆಯಿಂದಲೋ ಅದೂ ತಿಳಿಯದು ಇದು ಗರ್ಭಕೋಶದ ಒಳಗಿನ ವಿಷಯವಾದುದರಿಂದ ನಿರ್ಣಯವು ಕಷ್ಟ. ಪ್ರಯೋಗವು ಶ್ರಮಸಾಧ್ಯ. ಯೋಗದೃಷ್ಟಿಯು ಯೋಗಜ್ಞರಿಗೆ.

ನಿಂದ್ಯಾಸ್ವಷ್ಟಾಸು ಚಾನ್ಯಾಸು ಸ್ತ್ರಿಯೋ ರಾತ್ರಿಷು ವರ್ಜಯನ್ ।
ಬ್ರಹ್ಮಚಾರ್ಯೇವ ಭವತಿ ಯತ್ರತತ್ರಾಶ್ರಮೇ ವಸನ್ ॥ ೫೦

ಗಂಡಸಿನ ವಯಸ್ಸಿಗಿಂತ ಹುಡುಗಿಯು ಮೂರನೆ ಒಂದು ಪಾಲು ವಯಸ್ಸಿನಷ್ಟು ಕಿರಿಯವಳಾಗಿರುವುದು ಆರ್ಯರಿಗೆ ಪ್ರಿಯವು. ಆದುದರಿಂದ ಮಕ್ಕಳು ಹುಟ್ಟಿ-ಸತ್ತು, ವಿಧಿಯಂತೆ ೫೦ ವಯಸ್ಸಿಗೆ ವನವಾಸ ಮಾಡಿದರೆ, ಆಗ ಸ್ತ್ರೀಯು ಋತುಮತಿಯಾದರೆ-ಸಂತತಿಯು ಇಷ್ಟವಾಗಿರುವುದರಿಂದ ಆಗಲೂ ಸಂಭೋಗವು ನಿಷಿದ್ಧವಲ್ಲ. ಪ್ರಶಸ್ತ ದಿನವನ್ನು ಹುಡುಕುತ್ತಿರುವುದು ಒಳ್ಳೆಯದು ಎಂದು ಅರ್ಥವು.

ನ ಕನ್ಯಾಯಾಃ ಪಿತಾ ವಿದ್ವಾನ್ ಗೃಹ್ಣೀಯಾಚ್ಛುಲ್ಕಮಣ್ವಪಿ ।
ಗೃಹ್ಣಂಶ್ಶುಲ್ಕಂ ಹಿ ಲೋಭೇನ ಸ್ಯಾನ್ನರೋಽಪತ್ಯವಿಕ್ರಯೀ ॥ ೫೧

ಬುದ್ಧಿವಂತನಾದ ತಂದೆಯು ಕನ್ಯಾವಿವಾಹ ಕಾಲದಲ್ಲಿ ಹಣ ತಕ್ಕೊಳ್ಳಬಾರದು. ತೆಕ್ಕೊಂಡರೆ ಮಾರಾಟ ಮಾಡಿದಂತಾಗುವುದು. ಈ ಕಾರಣ ತೆಗೆದುಕೊಳ್ಳದಿರುವುದು ಉತ್ತಮ.

ಸ್ತ್ರೀಧನಾನಿ ತು ಯೇ ಮೋಹಾದುಪಜೀವಂತಿ ಬಾಂಧವಾಃ ।
ನಾರೀ ಯಾನಾನಿ ವಸ್ತ್ರಂ ವಾ ತೇ ಪಾಪಾ ಯಾಂತ್ಯಧೋಗತಿಂ ॥ ೫೨

ಬಂಧುಗಳು, ಸೊಸೆ, ಮಗಳು ಮುಂತಾದ ಸ್ತ್ರೀಯರ ಸೊತ್ತನ್ನು (ಹಣ, ಬಟ್ಟೆಬರೆ, ಪಶು, ವಾಹನ) ತಾವು ಉಪಯೋಗಿಸುವುದು ನಾಚಿಕೆ; ದುಡಿಯಲಾರದ ಷಂಡರ ಕೆಲಸ.

ಆರ್ಷೇ ಗೋಮಿಥುನಂ ಶುಲ್ಕಂ ಕೇಚಿದಾಹುರ್ಮೃಷೈವ ತತ್ ।
ಅಲ್ಪೋಽಪ್ಯೇವಂ ಮಹಾನ್ವಾಪಿ ವಿಕ್ರಯಸ್ತಾವದೇವ ಸಃ ॥ ೫೩

ಆರ್ಷವಿವಾಹದಲ್ಲಿ ಗೋಮಿಥುನ ಸ್ವೀಕಾರವು ಶುಲ್ಕವೆಂದು ಕೆಲವರು ಹೇಳುತ್ತಾರೆ. ಆದರೆ ಅದು ಶುಲ್ಕವಲ್ಲ. ಸ್ತ್ರೀ ಮತ್ತು ಗೋಮಿಥುನಗಳ ಬದಲಾವಣೆಗೆ ಅಲ್ಲಿ ತಾತ್ಪರ್ಯ, ಲೋಭವಿಲ್ಲ.

ಯಾಸಾಂ ನಾದದತೇ ಶುಲ್ಕಂ ಜ್ಞಾತಯೋ ನ ಸ ವಿಕ್ರಯಃ ।
ಅರ್ಹಣಂ ತತ್ಕುಮಾರೀಣಾಮಾನೃಶಂಸ್ಯಂ ಚ ಕೇವಲಂ ॥ ೫೪

ಗಂಡಸು ವಿವಾಹಕಾಲದಲ್ಲಿ ಏನನ್ನಾದರೂ ಹುಡುಗಿಗೆ ಕೊಟ್ಟರೆ ಅದನ್ನು ಸಂಬಂಧಿಕರು ಸ್ವೀಕರಿಸದೆ (ಅವಳಿಗೆ) ಕೊಟ್ಟರೆ, ಅದು ಸತ್ಕಾರ— ದಯೆ ಎಂದಾಗುವುದು. ವಿಕ್ರಯವಲ್ಲ.

ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।
ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥ ೫೫

ತಂದೆ-ತಾಯಿ, ಬಂಧು-ಬಳಗ, ಅಣ್ಣ-ತಮ್ಮ, ಗಂಡ ಅವನ ಅಣ್ಣ-ತಮ್ಮಂದಿರು ಎಲ್ಲರಿಂದಲೂ ಎಲ್ಲ ಹೆಂಗುಸರು ಅನ್ನ-ವಸ್ತ್ರ ಅಲಂಕಾರ, ಪೋಷಣೆ-ಪಾಲನೆ ಮಾಡಿ ಸಂತೋಷಗೊಳಿಸಲ್ಪಡತಕ್ಕವರು. ಆರ್ಯರು ಹೆಂಗುಸನ್ನು ದಾಸಿಯಂತೆ ಕಾಣಲಿಲ್ಲ. ಅವಳ ರಕ್ಷಣೆಯು ತಮಗೆ ಭೂಷಣ—ಕರ್ತವ್ಯ. ಅವಳು ತಾನೇ ತನ್ನಿಂದ ರಕ್ಷಿಸಲ್ಪಡುವ ಅಸಹಾಯಕ ಸ್ಥಿತಿಗೆ ಅವಳನ್ನು ತಳ್ಳುವುದು ಪುರುಷಲಕ್ಷಣವಲ್ಲ. ಅದು ಅವಳ ಪಾರತಂತ್ರ್ಯವೂ ಅಲ್ಲ, ಸ್ವಾತಂತ್ರ್ಯ ಅಪಹರಣವೂ ಅಲ್ಲ. ದಯಾ, ಅನುಕಂಪ, ಕರುಣೆಯ ಉದಾತ್ತ ಭಾವವು.

ಎನ್ನುವ ಅಭಿಪ್ರಾಯವಿರುವುದರಿಂದ 'ಸ್ವಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ವಾಕ್ಯ ಕೇಳಿ ರೇಗುವುದು, ಭಾವಾವೇಶಕ್ಕೆ ಒಳಗಾಗುವುದು ಬುದ್ಧಿಮಂದ್ಯವು. ಗರ್ಭಾವಸ್ಥೆ, ಪ್ರಸೂತಾವಸ್ಥೆಗಳಲ್ಲಿ ಸ್ತ್ರೀಯು ನೈಸರ್ಗಿಕವಾಗಿ ಪರಾಧೀನಳು. ಅದು ಆಪತ್ತಲ್ಲ. ರೋಗವು ಹೆಣ್ಣು-ಗಂಡಿಗೆ ಸಮಾನವು. ಸ್ತ್ರೀಯು ಮನೆಯಲ್ಲಿ ಪ್ರಸನ್ನಚಿತ್ತಳಾಗಿರುವುದು ಶುಭವೆಂದು ವಿಸ್ತಾರವಾಗಿ ವರ್ಣಿಸಲ್ಪಡುವುದು.

ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।
ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ೫೬

ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಂ ।
ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ ॥ ೫೭

ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।
ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥ ೫೮

ತಸ್ಮಾದೇತಾಃ ಸದಾ ಪೂಜ್ಯಾ ಭೂಷಣಾಚ್ಛಾದನಾಶನೈಃ ।
ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥ ೫೯

ಹಿಂದೆ ಹೇಳಿದಂತೆ ರಕ್ಷಣೀಯ ಸ್ತ್ರೀಯರನ್ನು ಯಥಾಶಕ್ತಿ ಪೋಷಿಸಿ, ದುಃಖಿಸುವಂತೆ ಮಾಡದಿದ್ದರೆ ಧನ-ಧಾನ್ಯ, ಸಂಪತ್ತು, ದೇವರ, ಪಿತೃಗಳ ಸಂತೋಷವು ಲಭಿಸಿ ವೃದ್ಧಿಯಾಗುವುದು. ಶುಭಶೋಭನಗಳಲ್ಲಿ ಹರ್ಷವಾಗುವಂತೆ ಮಾಡಬೇಕು.

ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಂ ॥ ೬೦

ಪತಿ-ಪತ್ನಿಯರು ಅನ್ಯೋನ್ಯ ಸಂತುಷ್ಟರಾಗಿದ್ದರೆ ಆ ಕುಲವು ಕಲ್ಯಾಣವಾಗುವುದು. ನಿಂದೆ-ಕಲಹ-ಮತ್ಸರ ಮುಂತಾದವುಗಳನ್ನು ಮಾಡುತ್ತಿದ್ದರೆ ಗೃಹವಾಸಿಗಳಿಗೆ ಒಡಕು ಉಂಟಾಗುವುದು. ಮಕ್ಕಳು ದುರ್ಮಾರ್ಗದ ಅನುಕರಣೆ ಮಾಡುವರು. ಪತಿ-ಪತ್ನಿಯರು ತಮ್ಮ ಸಂತೋಷಕ್ಕೆ ಇತರರನ್ನು ಹುಡುಕಬೇಕಾಗುವುದು. ಇದರಿಂದ ಆತ್ಮಹತ್ಯೆಗಳು ನಡೆಯಬಹುದು.

ಯದಿ ಹಿ ಸ್ತ್ರೀ ನ ರೋಚೇತ ಪುಮಾಂಸಂ ನ ಪ್ರಮೋದಯೇತ್ ।
ಅಪ್ರಮೋದಾತ್ಪುನಃ ಪುಂಸಃ ಪ್ರಜನಂ ನ ಪ್ರವರ್ತತೇ ॥ ೬೧

ಸ್ತ್ರೀಯು ಗಂಡನನ್ನು ಮೆಚ್ಚುವಂತೆ ಗಂಡನು ವರ್ತಿಸದಿದ್ದರೆ ಮತ್ತು ಸ್ತ್ರೀಯು ಗಂಡನು ಸಂತೋಷದಿಂದ ತನ್ನನ್ನು ಮೆಚ್ಚುವಂತೆ ಗೃಹಕೃತ್ಯ, ಧನಾರ್ಜನೆ, ವೇಷ-ಭೂಷಣ, ಪ್ರಿಯವರ್ತನೆ, ಸಂಭಾಷಣೆ ಮಾಡದಿದ್ದರೆ, ಅನ್ಯೋನ್ಯ ವಿರಸವಾದರೆ ಗರ್ಭೋತ್ಪತ್ತಿಯೂ ಆಗದು,ಸಂತತಿ ಪೋಷಣೆಯೂ ಆಗದು.

ಸ್ತ್ರಿಯಾಂ ತು ರೋಚಮಾನಾಯಾಂ ಸರ್ವಂ ತದ್ರೋಚತೇ ಕುಲಂ ।
ತಸ್ಯಾಂ ತ್ವರೋಚಮಾನಾಯಾಂ ಸರ್ವಮೇವ ನ ರೋಚತೇ ॥ ೬೨

ಸ್ತ್ರೀಯು ಅಲಂಕೃತಳಾಗಿ ಗಂಡನಿಗೆ ಮನೋಹರಳಾಗದಿದ್ದರೆ ಮನೆಯವರಿಗೂ ತನಗೂ ಸುಖವಿಲ್ಲ. ಸಂತೋಷವಿಲ್ಲ. ಪರಪುರುಷ ಸಂಕ್ರಾಂತಳಾದರೆ ಪವಿತ್ರತೆಯೂ ಇಲ್ಲ.

ಕುವಿವಾಹೈಃ ಕ್ರಿಯಾಲೋಪೈರ್ವೇದಾನಧ್ಯಯನೇನ ಚ ।
ಕುಲಾನ್ಯಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮೇಣ ಚ ॥ ೬೩

ನಿಷಿದ್ಧವಾದ (ಕೊನೆಯ) ವಿವಾಹಗಳಿಂದ, ಸಂಸ್ಕಾರವಿಲ್ಲದೆ ಬ್ರಹ್ಮವಿದ್ಯೆಯಿಲ್ಲದೆ ಇದ್ದರೆ ಒಳ್ಳೆ ಕುಲವೂ ಕೆಟ್ಟುಹೋಗುವುದು.

ಶಿಲ್ಪೇನ ವ್ಯವಹಾರೇಣ ಶೂದ್ರಾಪತ್ಯೈಶ್ಚ ಕೇವಲೈಃ ।
ಗೋಭಿರಶ್ವೈಶ್ಚ ಯಾನೈಶ್ಚ ಕೃಷ್ಯಾ ರಾಜೋಪಸೇವಯಾ ॥ ೬೪
ಅಯಾಜ್ಯಯಾಜನೈಶ್ಚೈವ ನಾಸ್ತಿಕ್ಯೇನ ಚ ಕರ್ಮಣಾಂ ।
ಕುಲಾನ್ಯಾಶು ವಿನಶ್ಯಂತಿ ಯಾನಿ ಹೀನಾನಿ ಮಂತ್ರತಃ ॥ ೬೫

ಶಿಲ್ಪ, ಬಡ್ಡಿಗೆ ಹಣಕೊಡುವುದು, ಸ್ವಜಾತಿಯಲ್ಲಿ ಸಂತತಿಯಿಲ್ಲದೆ ಶೂದ್ರಸ್ತ್ರೀ ಸಂತತಿ ಮಾತ್ರವಿರುವುದು, ಗೋವು–ಕುದುರೆಗಳ ಮಾರಾಟ, ಕೃಷಿ, ರಾಜಸೇವೆಗಳಿಂದ ಕುಲವು ಕೆಡುವುದು. ಮತ್ತು ಅಯಾಜ್ಯಯಾಜನ ನಾಸ್ತಿಕ್ಯಗಳೂ ಭೂಷಣಗಳಲ್ಲ. ಇವುಗಳನ್ನು ಮಾಡುತ್ತಿರುವುದರಿಂದ ಸ್ವಕರ್ಮವನ್ನು ಬಿಟ್ಟಂತಾಗುವುದೆಂಬ ದೋಷವು.

ಮಂತ್ರತಸ್ತು ಸಮೃದ್ಧಾನಿ ಕುಲಾನ್ಯಲ್ಪಧನಾನ್ಯಪಿ ।
ಕುಲಸಂಖ್ಯಾಂ ಚ ಗಚ್ಛಂತಿ ಕರ್ಷಂತಿ ಚ ಮಹದ್ಯಶಃ ॥ ೬೬

ವೇದಶಾಸ್ತ್ರಗಳನ್ನು ಸಮೃದ್ಧವಾಗಿ ಸಂಪಾದಿಸಿಕೊಂಡು ನಿರ್ಧನರಾಗಿದ್ದರೂ ಆ ಕುಲವು ಸತ್ಕುಲವು. ಕೀರ್ತಿಯುಳ್ಳದ್ದು. ಈ ವರೆಗೆ ವಿವಾಹಗಳ ಭೇದ ಪ್ರಾಶಸ್ತ್ಯ, ಕೆಲವು ಸದಾಚಾರಗಳನ್ನು ತಿಳಿಸಿ ಈಗ ವಿವಾಹಾಗ್ನಿಯಲ್ಲಿ ಮಾಡತಕ್ಕ ಕರ್ಮಗಳನ್ನು ಉಪದೇಶಿಸುತ್ತಾರೆ.

ವೈವಾಹಿಕೇಽಗ್ನೌ ಕುರ್ವೀತ ಗೃಹ್ಯಂ ಕರ್ಮ ಯಥಾವಿಧಿ ।
ಪಂಚಯಜ್ಞವಿಧಾನಂ ಚ ಪಂಕ್ತಿಂ ಚಾನ್ವಾಹಿಕೀಂ ಗೃಹೀ ॥ ೬೭

ಔಪಾಸನ, ಅಷ್ಟಕ ಮುಂತಾದ ಗೃಹ್ಯಕರ್ಮಗಳು ಪಂಚಯಜ್ಞ–ಭೋಜನಾನ್ನ ಸಾಧನೆ ಎಲ್ಲವನ್ನು ವಿವಾಹಲಬ್ಧ ಅಗ್ನಿಯಲ್ಲಿ ಮಾಡಬೇಕು.

ಪಂಚ ಸೂನಾ ಗೃಹಸ್ಥಸ್ಯ ಚುಲ್ಲೀ ಪೇಷಣ್ಯುಪಸ್ಕರಃ ।
ಕಂಡನೀ ಚೋದಕುಂಭಶ್ಚ ಬಧ್ಯತೇ ಯಾಸ್ತು ವಾಹಯನ್ ॥ ೬೮

ಒಲೆ, ಕಡೆಯುವಕಲ್ಲು, ಕಸಬರಿಕೆ, ಒರಳು, ಒನಕೆ, ಜಲಪಾತ್ರ ಇವು ಐದು ಹಿಂಸಾಸಾಧನಗಳು. ಇವು ಅನಿವಾರ್ಯವಾದ ಹಿಂಸೆಗಳು, ಆದರೂ ಪಾಪವಿದೆ.

ತಾಸಾಂ ಕ್ರಮೇಣ ಸರ್ವಾಸಾಂ ನಿಷ್ಕೃತ್ಯರ್ಥಂ ಮಹರ್ಷಿಭಿಃ ।
ಪಂಚ ಕ್ಲಪ್ತಾ ಮಹಾಯಜ್ಞಾಃ ಪ್ರತ್ಯಹಂ ಗೃಹಮೇಧಿನಾಂ ॥ ೬೯

ಹಿಂದೆ ಹೇಳಿದ ಐದು ಹಿಂಸಾಪರಾಧ ನಿವೃತ್ತಿಗಾಗಿ ಗೃಹಸ್ಥರಿಗೆ ಪ್ರತಿದಿನ ಪಂಚಯಜ್ಞಗಳನ್ನು ವಿಧಿಸಿದ್ದಾರೆ.

ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಂ ।
ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಮ್ ॥ ೭೦

ಅಧ್ಯಾಪನಾಧ್ಯಯನಗಳು, ಪಿತೃತರ್ಪಣ, ವೈಶ್ವದೇವ, ಭೂತಬಲಿ, ಅತಿಥಿಸತ್ಕಾರಗಳು ಹಿಂಸಾಪ್ರಾಯಶ್ಚಿತ್ತಗಳು.

ಪಂಚೈತಾನ್ಯೋ ಮಹಾಯಜ್ಞಾನ್ನ ಹಾಪಯತಿ ಶಕ್ತಿತಃ ।
ಸ ಗೃಹೇಽಪಿ ವಸನ್ನಿತ್ಯಂ ಸೂನಾದೋಷೈರ್ನ ಲಿಪ್ಯತೇ ॥ ೭೧

ಈ ಐದು ಯಜ್ಞಗಳನ್ನು ಲೋಪಮಾಡದೆ ಶಕ್ತ್ಯನುಸಾರ ಆಚರಿಸುತ್ತಿದ್ದರೆ ಗೃಹವಾಸ ಮಾಡಿದ ಮತ್ತು ಸೂನಾದೋಷದ ಸಂಬಂಧವಿರುವುದಿಲ್ಲ.

ದೇವತಾತಿಥಿಭೃತ್ಯಾನಾಂ ಪಿತೃಣಾಮಾತ್ಮನಶ್ಚ ಯಃ ।
ನ ನಿರ್ವಪತಿ ಪಂಚಾನಾಮುಚ್ಛ್ವಸನ್ನ ಸ ಜೀವತಿ ॥ ೭೨

ದೇವ, ತಿರ್ಯಕ್, ಮನುಷ್ಯ, ಜೀವಂತಪಿತೃ, ಮೃತಪಿತೃ, ಸ್ವ-ಆತ್ಮ (ತಾನು) ಇವರ ಪೋಷಣೆ ಮಾಡುವ ಪಂಚಯಜ್ಞ ಮಾಡದಿದ್ದರೆ ಬದುಕಿಯೂ ಸತ್ತಂತೆ.

ಅಹುತಂ ಚ ಹುತಂ ಚೈವ ತಥಾ ಪ್ರಹುತಮೇವ ಚ ।
ಬ್ರಾಹ್ಮ್ಯಂ ಹುತಂ ಪ್ರಾಶಿತಂ ಚ ಪಂಚಯಜ್ಞಾನ್ಪ್ರಚಕ್ಷತೇ ॥ ೭೩

ಜಪೋಽಹುತೋ ಹುತೋ ಹೋಮಃ ಪ್ರಹುತೋ ಭೌತಿಕೋ ಬಲಿಃ ।
ಬ್ರಾಹ್ಮ್ಯಂ ಹುತಂ ದ್ವಿಜಾಗ್ರ್ಯಾರ್ಚಾ ಪ್ರಾಶಿತಂ ಪಿತೃತರ್ಪಣಂ ॥ ೭೪

ವೇದಾಧ್ಯಯನಾದಿ ಪಂಚಯಜ್ಞಗಳಿಗೆ ಹುತ–ಅಹುತ ಮುಂತಾದ ಪ್ರಾಚೀನ ಸಂಜ್ಞಾವಿವರವು ಈ ರೀತಿಯಿದೆ.

ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾದ್ದೈವೇ ಚೈವೇಹ ಕರ್ಮಣಿ ।
ದೈವಕರ್ಮಣಿ ಯುಕ್ತೋ ಹಿ ಬಿಭರ್ತೀದಂ ಚರಾಚರಂ ॥ ೭೫

ದಾರಿದ್ರ್ಯದಿಂದ ಅತಿಥಿಸತ್ಕಾರವು ಕಷ್ಟಸಾಧ್ಯವಾದರೂ ವೇದಾಧ್ಯಯನ, ವೈಶ್ವದೇವ ಹೋಮಗಳು ಸುಲಭಸಾಧ್ಯಗಳು. ಅದು ಮುಖ್ಯವಾದುದರಿಂದ ಬಿಡಬಾರದು.

ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।
ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥ ೭೬

ಅಗ್ನಿಯಲ್ಲಿ ಹೋಮಿಸಿದ ಆಹುತಿಯು ಸೂಕ್ಷ್ಮರೂಪದಲ್ಲಿ ಸೂರ್ಯನನ್ನು ಸೇರುತ್ತದೆ. ಸೂರ್ಯನಿಂದ ಮಳೆಯಾಗಿ ಅದು ಪರಿವರ್ತಿಸಲ್ಪಡು

ತ್ತದೆ. ಮಳೆಯಿಂದ ಅನ್ನ, ಅನ್ನದಿಂದ ಪ್ರಜೆಗಳು ಜನಿಸುತ್ತಾರೆ. ಆದುದರಿಂದ ಹೋಮವು ರಾಸಾಯನಿಕವಾಗಿ ನಮ್ಮನ್ನು ಪೋಷಿಸುತ್ತದೆ.

ಯಥಾ ವಾಯುಂ ಸಮಾಶ್ರಿತ್ಯ ವರ್ತಂತೇ ಸರ್ವಜಂತವಃ |
ತಥಾ ಗೃಹಸ್ಥಮಾಶ್ರಿತ್ಯ ವರ್ತಂತೇಸರ್ವ ಆಶ್ರಮಾಃ || ೭೭

ವಾಯುವಿಲ್ಲದೆ ಪ್ರಾಣಿಗಳು ಜೀವಧಾರಣೆ ಮಾಡಲಾರವು. ಅದರಂತೆ ಗೃಹಸ್ಥನಿಲ್ಲದೆ ಬ್ರಹ್ಮಚಾರಿಗಳು, ಪರಿವ್ರಾಜಕರು ಜೀವಿಸುವುದಿಲ್ಲ.

ಯಸ್ಮಾತ್ತ್ರಯೋಽಪ್ಯಾಶ್ರಮಿಣೋ ಜ್ಞಾನೇನಾನ್ನೇನ ಚಾನ್ವಹಂ |
ಗೃಹಸ್ಥೇನೈವ ಧಾರ್ಯಂತೇ ತಸ್ಮಾಜ್ಜ್ಯೇಷ್ಠಾಶ್ರಮೋ ಗೃಹೀ || ೭೮

ಜ್ಞಾನದಾನ, ಅನ್ನದಾನಗಳನ್ನು ಗೃಹಸ್ಥನೇ ಮಾಡಬೇಕಾಗಿರುವುದರಿಂದ ಬ್ರಹ್ಮಚಾರಿ, ವನಪ್ರಸ್ಥ, ಸನ್ಯಾಸಿಗಳು ಪರಾವಲಂಬಿಗಳು. ಗೃಹಸ್ಥಾಶ್ರಮವು ಶ್ರೇಷ್ಠವು.

ಸ ಸಂಧಾರ್ಯಃ ಪ್ರಯತ್ನೇನ ಸ್ವರ್ಗಮಕ್ಷಯಮಿಚ್ಛತಾ |
ಸುಖಂ ಚೇಹೇಚ್ಛತಾ ನಿತ್ಯಂ ಯೋಽಧಾರ್ಯೋ ದುರ್ಬಲೇಂದ್ರಿಯೈಃ || ೭೯

ಈ ಲೋಕದಲ್ಲಿ, ಪರಲೋಕದಲ್ಲಿ ಕ್ಷೇಮಕರವಾದ ಗೃಹಸ್ಥಾಶ್ರಮವನ್ನು ಸರಿಯಾಗಿ ಪಾಲಿಸಬೇಕು. ಸ್ತ್ರೀಸುಖ, ಪುಷ್ಕಲಾನ್ನ, ಆಶ್ರಮಾಂತರ ರಕ್ಷಣೆ, ಬ್ರಹ್ಮಜ್ಞಾನ ಆಗ ಲಭಿಸುವುದು. ದುರ್ಬಲ ಮನಸ್ಸಿನಿಂದ ಇವುಗಳ ಸಾಧನೆಯು ಆಗಲಾರದು. ಬೇರಾರಿಗೂ ಇಂತಹ ಸಕಲ ಸೌಲಭ್ಯವಿಲ್ಲ.

ಋಷಯಃ ಪಿತರೋ ದೇವಾ ಭೂತಾನ್ಯತಿಥಯಸ್ತಥಾ |
ಆಶಾಸತೇ ಕುಟುಂಬಿಭ್ಯಸ್ತೇಭ್ಯಃ ಕಾರ್ಯಂ ವಿಜಾನತಾ || ೮೦

ಋಷಿಗಳು, ಪಿತೃಗಳು, ದೇವತೆಗಳು, ಪ್ರಾಣಿಗಳು, ಅತಿಥಿಗಳು ಇವರು ಪತ್ನೀಸಹಿತನಿಂದ ಕೆಲವನ್ನು ಅಪೇಕ್ಷಿಸುತ್ತಾರೆ. ತಿಳಿದವನು ಅವುಗಳನ್ನು ಈಡೇರಿಸಬೇಕು.

ಸ್ವಾಧ್ಯಾಯೇನಾರ್ಚಯೇತರ್ಷೀನ್ ಹೋಮೈರ್ದೇವಾನ್ ಯಥಾವಿಧಿ |
ಪಿತೄನ್ ಶ್ರಾದ್ಧೈಶ್ಚ ನೄನನ್ನೈರ್ಭೂತಾನಿ ಬಲಿಕರ್ಮಣಾ || ೮೧

ವೇದಾಧ್ಯಯನ, ಶ್ರಾದ್ಧ, ಹೋಮ, ಬಲಿ, ಅನ್ನಗಳಿಂದ ಕ್ರಮವಾಗಿ ಅವರನ್ನು ಆದರಿಸಬೇಕು.

ಕುರ್ಯಾದಹರಹಃ ಶ್ರಾದ್ಧಮನ್ನಾದ್ಯೇನೋದಕೇನ ವಾ |
ಪಯೋಮೂಲಫಲೈರ್ವಾಪಿ ಪಿತೃಭ್ಯಃ ಪ್ರೀತಿಮಾವಹನ್ || ೮೨

ಅನ್ನ, ಎಳ್ಳು, ಭತ್ತ, ಯವ, ನೀರುಗಳಿಂದ ಪಿತೃಪ್ರೀತಿಗಾಗಿ ಪ್ರತಿದಿನ ಶ್ರಾದ್ಧಮಾಡಬೇಕು.

ಏಕಮಪ್ಯಾಶಯೇದ್ವಿಪ್ರಂ ಪಿತ್ರರ್ಥೇಪಾಂಚಯಜ್ಞಿಕೇ |
ನ ಚೈವಾತ್ರಾಶಯೇ ತ್ಕಂಚಿದ್ವೈಶ್ವದೇವಂ ಪ್ರತಿ ದ್ವಿಜಂ || ೮೩

ಪಿತೃಯಜ್ಞದಲ್ಲಿ ಒಬ್ಬ ಬ್ರಾಹ್ಮಣನನ್ನು ಆದರೂ ಭೋಜನ ಮಾಡಿಸಬೇಕು. ವಿಶ್ವೇದೇವಸ್ಥಾನದಲ್ಲಿ ಬ್ರಾಹ್ಮಣ ಭೋಜನವು ಬೇಡ.

ವೈಶ್ವದೇವಸ್ಯ ಸಿದ್ಧಸ್ಯ ಗೃಹ್ಯೇಽಗ್ನೌ ವಿಧಿಪೂರ್ವಕಂ |
ಆಭ್ಯಃ ಕುರ್ಯಾದ್ದೇವತಾಭ್ಯೋ ಬ್ರಾಹ್ಮಣೋ ಹೋಮಮನ್ವಹಂ || ೮೪

ವೈಶ್ವದೇವಹೋಮಕ್ಕಾಗಿ ಸಿದ್ಧವಾದ ಅನ್ನದಿಂದ ಗೃಹ್ಯಾಗ್ನಿಯಲ್ಲಿ ವಿಧಿವತ್ತಾಗಿ ಕೆಳಗೆ ಹೇಳುವ ದೇವತೆಗಳಿಗೆ ಆಹುತಿಕೊಡಬೇಕು.

ಅಗ್ನೇಃ ಸೋಮಸ್ಯ ಚೈವಾದೌ ತಯೋಶ್ಚೈವ ಸಮಸ್ತಯೋಃ |
ವಿಶ್ವೇಭ್ಯಶ್ಚೈವ ದೇವೇಭ್ಯೋ ಧನ್ವಂತರಯ ಏವ ಚ || ೮೫
ಕುಹ್ವೈ ಚೈವಾನುಮತ್ಯೈ ಚ ಪ್ರಜಾಪತಯ ಏವ ಚ |
ಸಹದ್ಯಾವಾಪೃಥಿವ್ಯೋಶ್ಚ ತಥಾ ಸ್ವಿಷ್ಟಕೃತೇಂತತಃ || ೮೬

ಅಗ್ನಿ–ಸೋಮ ಅವರಿಬ್ಬರು, ವಿಶ್ವೇದೇವರು, ಧನ್ವಂತರಿ, ಕೂಹೂ, ಅನುಮತಿ, ಪ್ರಜಾಪತಿ, ದ್ಯಾವಾಪೃಥಿವೀ, ಸ್ವಿಷ್ಟಕೃತ್ ಈ ದೇವತೆಗಳಿಗೆ ಹೋಮವಾಗಬೇಕು.

ಏವಂ ಸಮ್ಯಗ್ಘವಿರ್ಹುತ್ವಾ ಸರ್ವದಿಕ್ಷು ಪ್ರದಕ್ಷಿಣಂ ।
ಇಂದ್ರಾಂತಕಾಪ್ಪತೀಂದುಭ್ಯಃ ಸಾನುಗೇಭ್ಯೋ ಬಲಿಂ ಹರೇತ್ ॥ ೮೭

ಮೇಲೆ ಹೇಳಿದಂತೆ ಹೋಮಮಾಡಿ ಆ ಮೇಲೆ ಎಲ್ಲ ದಿಕ್ಕುಗಳಲ್ಲಿ ಪ್ರದಕ್ಷಿಣಾಕಾರದಿಂದ ಇಂದ್ರ, ಯಮ, ವರುಣ, ಇಂದು ಎಂಬ ಸಪರಿವಾರ ದೇವತೆಗಳಿಗೆ ಬಲಿಹರಣ ಮಾಡಬೇಕು.

ಮರುದ್ಭ್ಯ ಇತಿ ತು ದ್ವಾರಿ ಕ್ಷಿಪೇದಪ್ಸ್ವದ್ಭ್ಯ ಇತ್ಯಪಿ ।
ವನಸ್ಪತಿಭ್ಯ ಇತ್ಯೇವಂ ಮುಸಲೋಲೂಖಲೇ ಹರೇತ್ ॥ ೮೮

ಮನೆಬಾಗಿಲಿನಲ್ಲಿ ಮರುತ್, ನೀರಿನಲ್ಲಿ ಅಪ, ಒರಳು–ಒನಕೆಗಳಲ್ಲಿ ವನಸ್ಪತಿ ಎಂಬ ದೇವತೆಗಳಿಗೆ ಬಲಿದಾನವು.

ಉಚ್ಛೀರ್ಷಕೇ ಶ್ರಿಯೈ ಕುರ್ಯಾದ್ಭದ್ರಕಾಲ್ಯೈ ಚ ಪಾದತಃ ।
ಬ್ರಹ್ಮವಾಸ್ತೋಷ್ಪತಿಭ್ಯಾಂ ತು ವಾಸ್ತುಮಧ್ಯೇ ಬಲಿಂ ಹರೇತ್ ॥ ೮೯

ತಲೆಮೇಲೆ ಈಶಾನ್ಯಕಡೆಗೆ ಶ್ರೀ, ಕಾಲಕೆಳಗೆ ಭದ್ರಕಾಲಿ, ಮನೆ ಮಧ್ಯದಲ್ಲಿ ಬ್ರಹ್ಮವಾಸ್ತೋಷ್ಪತಿ ಎಂಬ ದೇವತೆಗಳಿಗೆ ಬಲಿಹರಣವು.

ವಿಶ್ವೇಭ್ಯಶ್ಚೈವ ದೇವೇಭ್ಯೋ ಬಲಿಮಾಕಾಶ ಉತ್ಕ್ಷಿಪೇತ್ ।
ದಿವಾಚರೇಭ್ಯೋ ಭೂತೇಭ್ಯೋ ನಕ್ತಂಚಾರಿಭ್ಯ ಏವ ಚ ॥ ೯೦

ಆಕಾಶದಲ್ಲಿ ವಿಶ್ವೇದೇವರಿಗೆ (ಮನೆಯೊಳಗೆ), ಹಗಲು ದಿವಾಚರ ಭೂತಗಳಿಗೆ, ರಾತ್ರಿ ನಕ್ತಂಚಾರಿ ಭೂತಗಳಿಗೆ ಬಲ.

ಪೃಷ್ಠವಾಸ್ತುನಿ ಕುರ್ವೀತ ಬಲಿಂ ಸರ್ವಾತ್ಮಭೂತಯೇ ।
ಪಿತೃಭ್ಯೋ ಬಲಿಶೇಷಂ ತು ಸರ್ವಂ ದಕ್ಷಿಣತೋ ಹರೇತ್ ॥ ೯೧

ಉಪ್ಪರಿಗೆಯಲ್ಲಿ ಸರ್ವಾತ್ಮಭೂತಿ, ದಕ್ಷಿಣದಲ್ಲಿ ಪಿತೃಗಳಿಗೆ ಉಳಿದ ಎಲ್ಲ ಬಲಿದ್ರವ್ಯವನ್ನು ಎಸೆಯಬೇಕು.

ಶುನಾಂ ಚ ಪತಿತಾನಾಂ ಚ ಶ್ವಪಚಾಂ ಪಾಪರೋಗಿಣಾಂ ।
ವಾಯಸಾನಾಂ ಕೃಮೀಣಾಂ ಚ ಶನಕೈರ್ನಿರ್ವಪೇದ್ಭುವಿ ॥ ೯೨

ಶ್ವ, ಪತಿತ, ಶ್ವಪಚ, ಪಾಪರೋಗಿ, ವಾಯಸ, ಕ್ರಿಮಿ ಇವುಗಳಿಗೆ ಬೇರೆ ಅನ್ನತಂದು ಬಲಿಯನ್ನು ಮೆಲ್ಲಗೆ ನೆಲದ ಮೇಲೆ ಇಡಬೇಕು.

ಏವಂ ಯಃ ಸರ್ವಭೂತಾನಿ ಬ್ರಾಹ್ಮಣೋ ನಿತ್ಯಮರ್ಚತಿ ।
ಸ ಗಚ್ಛತಿ ಪರಂ ಸ್ಥಾನಂ ತೇಜೋಮೂರ್ತಿ ಪಥರ್ಜುನಾ ॥ ೯೩

ಮೇಲೆ ಹೇಳಿದಂತೆ ಬ್ರಾಹ್ಮಣನು ಭೂತಬಲಿಯನ್ನು ಮಾಡಿದರೆ ಸರಲವಾದ ವಕ್ರವಲ್ಲದ ಪ್ರಕಾಶವುಳ್ಳ ಮಾರ್ಗದಿಂದ ಸದ್ಗತಿಯನ್ನು ಹೊಂದುವನು.

ಕೃತ್ವೈತದ್ಬಲಿಕರ್ಮೈವಮತಿಥಿಂ ಪೂರ್ವಮಾಶಯೇತ್ ।
ಭಿಕ್ಷಾಂ ಚ ಭಿಕ್ಷವೇ ದದ್ಯಾದ್ವಿಧಿವದ್ಬ್ರಹ್ಮಚಾರಿಣೇ ॥ ೯೪

ಹಿಂದೆ ಹೇಳಿದ ಪ್ರಕಾರ ಬಲಿಹರಣ ಮಾಡಿ ಮೊದಲು ಅತಿಥಿಯ ಭೋಜನ ಆಗಬೇಕು, ಸನ್ಯಾಸಿ, ಬ್ರಹ್ಮಚಾರಿಗಳಿಗೆ ಭಿಕ್ಷೆಕೊಡಬೇಕು.

ಯತ್ಪುಣ್ಯಫಲಮಾಪ್ನೋತಿ ಗಾಂ ದತ್ವಾ ವಿಧಿವದ್ಗುರೋಃ ।
ತತ್ಪುಣ್ಯಫಲಮಾಪ್ನೋತಿ ಭಿಕ್ಷಾಂ ದತ್ವಾ ದ್ವಿಜೋ ಗೃಹೀ ॥ ೯೫

ಗುರುವಿಗೆ ಗೋದಾನ ಮಾಡಿದರೆ ಯಾವ ಫಲವೋ ಆ ಫಲವು ಭಿಕ್ಷಾದಾನದಿಂದ ಗೃಹಸ್ಥನಿಗೆ ಬರುವುದು.

ಭಿಕ್ಷಾಮಪ್ಯುದಪಾತ್ರಂ ವಾ ಸತ್ಕೃತ್ಯ ವಿಧಿಪೂರ್ವಕಂ ।
ವೇದತತ್ವಾರ್ಥವಿದುಷೇ ಬ್ರಾಹ್ಮಣಾಯೋಪಪಾದಯೇತ್ ॥ ೯೬

ವೇದತತ್ವಾರ್ಥ ಬಲ್ಲವನಾದ ಬ್ರಾಹ್ಮಣನಿಗೆ ಭಿಕ್ಷೆಯನ್ನು ತಾನು ದರಿದ್ರನಾದರೆ ಸ್ವಲ್ಪ ನೀರನ್ನಾದರೂ ಸ್ವಸ್ತಿವಾಚನ ಮಾಡಿಸಿ ದಾನಮಾಡಿದರೆ ತುಂಬ ಫಲವು. ಇದಕ್ಕೆ ತಪ್ಪಬಾರದು.

ನಶ್ಯಂತಿ ಹವ್ಯಕವ್ಯಾನಿ ನರಾಣಾಮವಿಜಾನತಾಂ ।
ಭಸ್ಮೀಭೂತೇಷು ವಿಪ್ರೇಷು ಮೋಹಾದ್ದತ್ತಾನಿ ದಾತೃಭಿಃ ॥ ೯೭

ದೇವಕಾರ್ಯ, ಪಿತೃಕಾರ್ಯಗಳಲ್ಲಿ ವೇದಶಾಸ್ತ್ರಜ್ಞಾನವಿಲ್ಲದವರಿಗೆ ದಾನ ಮಾಡಿದರೆ ಫಲವಿಲ್ಲ. ತನಗೆ ಪೂಜ್ಯವಾದ ಅದರ ರಕ್ಷಣೆ ತನಗೆ ಕರ್ತವ್ಯ. ಬ್ರಹ್ಮಚಾರಿ ಸನ್ಯಾಸಿಗಳಿಗೆ ಭಿಕ್ಷೆಕೊಟ್ಟು ಅವರು ಅವರ ಕರ್ತವ್ಯದಲ್ಲಿ ನಿರಾ

ತಂಕವಾಗಿ ವ್ಯವಸಾಯ ಮಾಡುತ್ತಿದ್ದರೆ ವೇದ, ಜ್ಞಾನಗಳ ರಕ್ಷಣೆ ಮಾಡಿದಂತಾಗುವುದು. ಇಲ್ಲವಾದರೆ ಪ್ರಜ್ವಲಿಸುವ ಅಗ್ನಿಯಲ್ಲಿ ಬೀಳಬೇಕಾದ ಆಹುತಿಯು ಭಸ್ಮದಲ್ಲಿ ಬಿದ್ದಂತಾಗುವುದು. ಹಾವಿಗೆ ಹಾಲೆರದೇನು ಫಲ ?

ವಿದ್ಯಾತಪಃಸಮೃದ್ಧೇಷು ಹುತಂ ವಿಪ್ರಮುಖಾಗ್ನಿಷು ।
ನಿಸ್ತಾರಯತಿ ದುರ್ಗಾಚ್ಚ ಮಹತಶ್ಚೈವ ಕಿಲ್ಬಿಷಾತ್ ॥ ೯೮

ಸತ್ಪಾತ್ರದಾನದಿಂದ ವ್ಯಾಧಿ, ಶತ್ರು, ರಾಜ, ಪಾಪ-ಪೀಡೆಗಳು ಬಾಧಿಸುವುದಿಲ್ಲ.

ಸಂಪ್ರಾಪ್ತಾಯ ತ್ವತಿಥಯೇ ಪ್ರದದ್ಯಾದಾಸನೋದಕೇ ।
ಅನ್ನಂ ಚೈವ ಯಥಾಶಕ್ತಿ ಸತ್ಕೃತ್ಯ ವಿಧಿಪೂರ್ವಕಂ ॥ ೯೯

ಮನೆಗೆ ಬಂದ ಅತಿಥಿಗೆ ಮುಖ-ಕೈಕಾಲುಗಳಿಗೆ ನೀರು, ಕುಡಿಯಲು ನೀರು, ಇದ್ದಷ್ಟು ಅನ್ನ, ಗೌರವವಾಗಿ ಕೊಡಬೇಕು.

ಶಿಲಾನಪ್ಯುಂಛತೋ ನಿತ್ಯಂ ಪಂಚಾಗ್ನೀನಪಿ ಜುಹ್ವತಃ ।
ಸರ್ವಂ ಸುಕೃತಮಾದತ್ತೇ ಬ್ರಾಹ್ಮಣಾನರ್ಚಿತೋ ವಸನ್ ॥ ೧೦೦

ನಿಯಮಬದ್ಧವಾದ ಶೀಲವೃತ್ತಿಯಿಂದ ಬಡವನಾಗಿ ಬದುಕಿ ಪಂಚಾಗ್ನಿವ್ರತಿಯಾಗಿದ್ದರೂ (ದಕ್ಷಿಣ–ಆಹವನೀಯ–ಗಾರ್ಹಪತ್ಯ–ಆವಸಥ್ಯ–ಸಭ್ಯ) ಬ್ರಾಹ್ಮಣನು ಅತಿಥಿಸತ್ಕಾರ ವಿಮುಖನಾದರೆ ಆಗ ಮನೆಯಲ್ಲಿದ್ದ ಅಸತ್ಕೃತ ಅತಿಥಿಯು ಗೃಹಪತಿಯ ಪುಣ್ಯಕ್ಕೆ ಅಧಿಕಾರಿಯಾಗುವನು. ಆರ್ಯರಿಗೆ ಬಡತನವು ಪ್ರಿಯವಾಗಿತ್ತು. ಕಳ್ಳರು, ರಾಜರು, ಬಡವರು, ಧನಿಕನನ್ನು ಪೀಡಿಸುತ್ತಾರೆ. ಬಹಳ ವಿಧದಿಂದ ಧನಲಾಭಕ್ಕೆ ಪ್ರಯತ್ನಿಸುತ್ತಾರೆ. ಆದುದರಿಂದ ಅದನ್ನು ಕಾಯುವ, ಉತ್ಪಾದಿಸುವ ಶ್ರಮವು ಶ್ರಮದ ಅಪವ್ಯಯವು, ವೇದಾಧ್ಯನ ಬ್ರಹ್ಮಜ್ಞಾನಗಳ ಶ್ರಮವು ಸಫಲಶ್ರಮವು. ಯಾರಿಗೂ ಸಿಗದ ಪುಣ್ಯವು ಅವನಿಗೆ ಅದರಿಂದ ಸಿಗುವುದು.

ತೃಣಾನಿ ಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ ।
ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ॥ ೧೦೧

ಚಾಪೆ, ನೆಲ, ನೀರು, ಒಳ್ಳೆಮಾತು ಇವು ಒಳ್ಳೆಯವರ ಮನೆಯಲ್ಲಿ ಸಿಗದಿರಲಾರವು. ಮೃಷ್ಟಾನ್ನವು (ಕೊಡುವವನಿಗೆ) ಧನ, ಆರೋಗ್ಯ ಇಲ್ಲದಾಗ ಯಾರಿಗೂ ಇಲ್ಲ. ಇದೆರಡು ಪ್ರಯತ್ನ ಲಭ್ಯವಲ್ಲವೆಂದು ಸಿದ್ಧಾಂತ.

ಏಕರಾತ್ರಂ ತು ನಿವಸನ್ನತಿಥಿರ್ಬ್ರಾಹ್ಮಣಃ ಸ್ಮೃತಃ ।
ಅನಿತ್ಯಂ ಹಿ ಸ್ಥಿತೋ ಯಸ್ಮಾತ್ತಸ್ಮಾದತಿಥಿರುಚ್ಯತೇ ॥ ೧೦೨

ನೈಕಗ್ರಾಮೀಣಮತಿಥಿಂ ವಿಪ್ರಂ ಸಾಂಗತಿಕಂ ತಥಾ ।
ಉಪಸ್ಥಿತಂ ಗೃಹೇ ವಿದ್ಯಾದ್ ಭಾರ್ಯಾ ಯತ್ರಾಗ್ನಯೋಽಪಿ ವಾ ॥ ೧೦೩

ಬ್ರಾಹ್ಮಣನು ಒಂದು ದಿನ ಹೆರವರ ಮನೆಯಲ್ಲಿದ್ದರೆ ಅತಿಥಿಯು. ಅತಿಥಿ ಪದವು ಅಂತಹ ಅರ್ಥವನ್ನು ಕೊಡುವುದು. ಅದೇ ಊರಿನವನು ಹೊಟ್ಟೆ ತುಂಬಲು ಏನಾದರೂ ನೆವದ ವೇಶದವನಾಗಿ ಮನೆಗೆ ಬಂದರೆ ಅವನು ಅತಿಥಿಯಾಗುವುದಿಲ್ಲ. ಅವನು ಪತ್ನೀ—ಅಗ್ನಿಸಂಯುಕ್ತನಾದರೂ ಬೆಲೆಯಿಲ್ಲ.

ಉಪಾಸತೇ ಯೇ ಗೃಹಸ್ಥಾಃ ಪರಪಾಕಮಬುದ್ಧಯಃ ।
ತೇನ ತೇ ಪ್ರೇತ್ಯ ಪಶುತಾಂ ವ್ರಜಂತ್ಯನ್ನಾದಿದಾಯಿನಾಂ ॥ ೧೦೪

ಪರರ ಅನ್ನಕ್ಕೆ ಆಸೆಪಟ್ಟು ತಾವು ದುಡಿಯದವರು ಬುದ್ಧಿಹೀನರು. ಜನ್ಮಾಂತರದಲ್ಲಿ ದುಡಿದು ತಿನ್ನದ ಪ್ರಾಣಿಜನ್ಮಕ್ಕೆ ಅರ್ಹರು.

ಅಪ್ರಣೋದ್ಯೋಽತಿಥಿಃ ಸಾಯಂ ಸೂರ್ಯೋಢೋ ಗೃಹಮೇಧಿನಾ ।
ಕಾಲೇ ಪ್ರಾಪ್ತಸ್ತ್ವಕಾಲೇ ವಾ ನಾಸ್ಯಾನಶ್ನನ್ ಗೃಹೇ ವಸೇತ್ ॥ ೧೦೫

ತನ್ನ ಮನೆ ತಲಪಲು ಸಮಯಸಾಲದೆ (ಕತ್ತಲೆಗೆ) ಸಾಯಂ ಬಂದ ಅತಿಥಿಯನ್ನು ನಿರಾಕರಿಸಬಾರದು. ಸಮಯ ಮೀರಿಬಂದರೂ ಅಸತ್ಕೃತನಾಗಿ ವಾಸಿಸಬಾರದು.

ನ ವೈ ಸ್ವಯಂ ತದಶ್ನೀಯಾತ್ ಅತಿಥಿಂ ಯನ್ನ ಭೋಜಯೇತ್ ।
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ವಾತಿಥಿಪೂಜನಂ ॥ ೧೦೬

ಅತಿಥಿಗೆ ಕೊಡದ ಆಹಾರ ಸಾಮಗ್ರಿಯನ್ನು ತಾನು ಸೇವಿಸಬಾರದು. ಧನ, ಯಶಸ್, ಆಯುಸ್, ಸುಖ ಎಲ್ಲವೂ ಅತಿಥಿ ಸತ್ಕಾರದಿಂದ ಲಭ್ಯಗಳು. ಆದುದರಿಂದ ಕೊಡದೆ ತಿನ್ನುವುದು ಹೇಗೆ ?

ಆಸನಾವಸಥೌ ಶಯ್ಯಾಮನುವ್ರಜ್ಯಾಮುಪಾಸನಂ ।
ಉತ್ತಮೇಷೂತ್ತಮಂ ಕುರ್ಯಾದ್ಧೀನೇ ಹೀನಂ ಸಮೇ ಸಮಂ ॥ ೧೦೭

ಆಸನ, ಸ್ಥಳ, ಶಯ್ಯಾದಿ ಉಪಚಾರವನ್ನು ಅವರವರ ಯೋಗ್ಯತಾನುಸಾರ ಮಾಡಬೇಕು. ಸಮಾನತೆಯು ಬೇಡ.

ವೈಶ್ವದೇವೇ ತು ನಿರ್ವೃತ್ತೇ ಯದ್ಯನ್ಯೋಽತಿಥಿರಾವ್ರಜೇತ್ ।
ತಸ್ಯಾಪ್ಯನ್ನಂ ಯಥಾಶಕ್ತಿ ಪ್ರದದ್ಯಾನ್ನ ಬಲಿಂ ಹರೇತ್ ॥ ೧೦೮

ವೈಶ್ವದೇವ ಮಾಡಿದ ಮೇಲೆ ಇನ್ನೊಬ್ಬ ಅತಿಥಿಯು ಬಂದರೆ ಅವನಿಗೂ ಅನ್ನಕೊಡಬೇಕು. ಬಲಿಹರಣ ಮಾಡಬಾರದು.

ನ ಭೋಜನಾರ್ಥಂ ಸ್ವೇ ವಿಪ್ರಃ ಕುಲಗೋತ್ರೇ ನಿವೇದಯೇತ್ ।
ಭೋಜನಾರ್ಥಂ ಹಿ ತೇ ಶಂಸನ್ ವಾಂತಾಶೀತ್ಯುಚ್ಯತೇ ಬುಧೈಃ ॥ ೧೦೯

ಬ್ರಾಹ್ಮಣನು ಊಟಕ್ಕಾಗಿ ತನ್ನ ಕುಲಗೋತ್ರ ಪರಿಚಯದ ಲಾಭಪಡೆಯಲು ಪ್ರಯತ್ನಿಸಬಾರದು. ಊಟಕ್ಕಾಗಿ ಹೇಳಿದರೆ ವಾಂತಿಮಾಡಿ ಅದನ್ನು ತಿಂದಂತಾಗುವುದು.

ನ ಬ್ರಾಹ್ಮಣಸ್ಯ ತ್ವತಿಥಿರ್ಗೃಹೇ ರಾಜನ್ಯ ಉಚ್ಯತೇ ।
ವೈಶ್ಯಶೂದ್ರೌ ಸಖಾ ಚೈವ ಜ್ಞಾತಯೋ ಗುರುರೇವ ಚ ॥ ೧೧೦

ಬ್ರಾಹ್ಮಣನಿಗೆ ರಾಜನ್ಯ, ವೈಶ್ಯ, ಶೂದ್ರ, ಗೆಳೆಯ, ಜ್ಞಾತಿಗಳು, ಗುರು ಇವರು ಅತಿಥಿಗಳಲ್ಲ.

ಯದಿ ತ್ವತಿಥಿಧರ್ಮೇಣ ಕ್ಷತ್ರಿಯೋ ಗೃಹಮಾವ್ರಜೇತ್ ।
ಭುಕ್ತವತ್ಸು ಚ ವಿಪ್ರೇಷು ಕಾಮಂ ತಮಪಿ ಭೋಜಯೇತ್ ॥ ೧೧೧
ವೈಶ್ಯಶೂದ್ರಾವಪಿ ಪ್ರಾಪ್ತೌ ಕುಟುಂಬೇಽತಿಥಿಧರ್ಮಿಣೌ ।
ಭೋಜಯೇತ್ಸಹ ಭೃತ್ಯೈಸ್ತಾವಾನೃಶಂಸ್ಯಂ ಪ್ರಯೋಜಯನ್ ॥ ೧೧೨
ಇತರಾನಪಿ ಸಖ್ಯಾದೀನ್ಸಂಪ್ರೀತ್ಯಾ ಗೃಹಮಾಗತಾನ್ ।
ಪ್ರಕೃತ್ಯಾನ್ನಂ ಯಥಾಶಕ್ತಿ ಭೋಜಯೇತ್ಸಹ ಭಾರ್ಯಯಾ ॥ ೧೧೩

ಮನೆಗೆ ಯಾರು ಬಂದರೂ ದಯೆಯಿಂದ ಅವರಿಗೆ ಬಡಿಸಬೇಕು. ವೈಭವವು ಐಶ್ವರ್ಯವನ್ನು ಹೊಂದಿದೆ.

ಸುವಾಸಿನೀಃ ಕುಮಾರೀಶ್ಚ ರೋಗಿಣೋ ಗರ್ಭಿಣೀಃ ಸ್ತ್ರಿಯಃ ।
ಅತಿಥಿಭ್ಯೋಽಗ್ರ ಏವೈತಾನ್ ಭೋಜಯೇದವಿಚಾರಯನ್ ॥ ೧೧೪

ಸದ್ಯ ಮದುವೆಯಾದಹುಡುಗಿಯರು-ಸೊಸೆ, ಮಗಳು ಮುಂತಾದವರು, ಮದುವೆಯಾಗದ ಹುಡುಗಿಯರು, ರೋಗಿಗಳು, ಗರ್ಭಿಣಿಯರು ಇವರಿಗೆ ಅತಿಥಿಗಳ ಮೊದಲು ಬಡಿಸಬೇಕು. ಸಂಶಯವಿಲ್ಲ.

ಅದತ್ವಾ ತು ಯ ಏತೇಭ್ಯಃ ಪೂರ್ವಂ ಭುಂಕ್ತೇ ವಿಚಕ್ಷಣಃ ।
ಸ ಭುಂಜಾನೋ ನ ಜಾನಾತಿ ಶ್ವಗೃಧ್ರೈರ್ಜಗ್ಧಿ ಮಾತ್ಮನಃ ॥ ೧೧೫

ಅತಿಥಿ, ಅಭ್ಯಾಗತ, ಸುವಾಸಿನೀ ಮುಂತಾದವರು ಮೊದಲು ಉಣ್ಣುವುದು ಒಳ್ಳೆ ಸಂಪ್ರದಾಯ. ಇಲ್ಲವಾದರೆ ನಾಯಿ, ನರಿ, ಹದ್ದು ತನ್ನ ಶವ ತಿನ್ನುವುದನ್ನು ಇಚ್ಛಿಸಿದಂತೆ.

ಭುಕ್ತವತ್ಸ್ವಥ ವಿಪ್ರೇಷು ಸ್ವೇಷು ಭೃತ್ಯೇಷು ಚೈವಹಿ ।
ಭುಂಜೀಯಾತಾಂ ತತಃ ಪಶ್ಚಾದವಶಿಷ್ಟಂ ತು ದಂಪತಿ ॥ ೧೧೬

ಗಂಡ-ಹೆಂಡಿರು, ಗೃಹಪತಿಗಳು ಕೊನೆಗೆ ಉಣ್ಣುವುದು ಒಳ್ಳೆದು.

ದೇವಾನೃಷೀನ್ಮನುಷ್ಯಾಂಶ್ಚ ಪಿತೄನ್ ಗೃಹ್ಯಾಶ್ಚ ದೇವತಾಃ।
ಪೂಜಯಿತ್ವಾ ತತಃ ಪಶ್ಚಾದ್ಗೃಹಸ್ಥಃ ಶೇಷಭುಗ್ಭವೇತ್ ॥ ೧೧೭

ದೇವ, ಋಷಿ, ಅತಿಥಿ, ಪಿತೃ, ದೇವರು (ಮನೆ) ಪ್ರಥಮ ಪೂಜ್ಯರು.

ಅಘಂ ಸ ಕೇವಲಂ ಭುಂಕ್ತೇ ಯಃ ಪಚತ್ಯಾತ್ಮಕಾರಣಾತ್ ।
ಯಜ್ಞಶಿಷ್ಟಾಶನಂ ಹ್ಯೇತತ್ಸತಾಮನ್ನಂ ವಿಧೀಯತೇ ॥ ೧೧೮

ತನಗಾಗಿ ಅಡುಗೆ ಮಾಡಿ ಉಣ್ಣುವುದು ಔದಾರ್ಯವಲ್ಲ. ದೇವಯಜನ ಪೂರ್ವಕ ತನ್ನ ಭೋಜನವನ್ನು ಸಜ್ಜನರು ಮೆಚ್ಚುವರು.

ರಾಜರ್ತ್ವಿಕ್‌ಸ್ನಾತಕಗುರೂನ್‌ಪ್ರಿಯಶ್ವಶುರಮಾತುಲಾನ್ ।
ಅರ್ಹಯೇನ್ಮಧುಪರ್ಕೇಣ ಪರಿಸಂವತ್ಸರಾತ್ಪುನಃ ॥ ೧೧೯

ವರ್ಷ ಕಳೆದು ಮನೆಗೆ ಬಂದ ರಾಜ, ಋತ್ವಿಕ್, ಸ್ನಾತಕ, ಗುರು (ಪ್ರಿಯ) ಅಳಿಯ, (ಮಗಳಗಂಡ)ಶ್ವಶುರ, ಮಾತುಲರನ್ನು ಮಧುಪರ್ಕದಿಂದ ಸತ್ಕರಿಸಬೇಕು.

ರಾಜಾ ಚ ಶ್ರೋತ್ರಿಯಶ್ಚೈವ ಯಜ್ಞಕರ್ಮಣ್ಯುಪಸ್ಥಿತೌ ।
ಮಧುಪರ್ಕೇಣ ಸಂಪೂಜ್ಯೌ ನ ತ್ವಯಜ್ಞ ಇತಿ ಸ್ಥಿತಿಃ ॥ ೧೨೦

ರಾಜ, ಶ್ರೋತ್ರಿಯರಿಗೆ ಯಜ್ಞದಿನ ಮಾತ್ರ ಮಧುಪರ್ಕ ಸಾಕು ಎಂದು ಕೆಲವರ ಮತ.

ಸಾಯಂ ತ್ವನ್ನಸ್ಯ ಸಿದ್ಧಸ್ಯ ಪತ್ನ್ಯಮಂತ್ರಂ ಬಲಿಂ ಹರೇತ್ ।
ವೈಶ್ವದೇವಂ ಹಿ ನಾಮೈತತ್ಸಾಯಂಪ್ರಾತರ್ವಿಧೀಯತೇ ॥ ೧೨೧

ಸಾಯಂಕಾಲ ಅನ್ನದಿಂದ ಪತ್ನಿಯು ಮೌನವಾಗಿ ಬಲಿಹರಣ ಮಾಡಬೇಕು. ವೈಶ್ವದೇವವು ಸಾಯಂಪ್ರಾತಃ ಎರಡು ಬಾರಿ ಆಗಬೇಕು.

ಪಿತೃಯಜ್ಞಂ ತು ನಿರ್ವರ್ತ್ಯ ವಿಪ್ರಶ್ಚೇಂದುಕ್ಷಯೇಽಗ್ನಿಮಾನ್ ।
ಪಿಂಡಾನ್ವಾಹಾರ್ಯಕಂ ಶ್ರಾದ್ಧಂ ಕುರ್ಯಾನ್ಮಾಸಾನುಮಾಸಿಕಂ ॥ ೧೨೨

ಸಪತ್ನೀತನಾದ ಗೃಹಪತಿಯು ಪಿಂಡಪಿತೃಯಜ್ಞ ಮಾಡಿದ ಮೇಲೆ ಅಮಾವಾಸ್ಯೆ ದಿನ ಪ್ರತಿಮಾಸದಲ್ಲಿ ಪಾರ್ವಣಶ್ರಾದ್ಧವನ್ನು ಮಾಡಬೇಕು.

ಪಿತೄಣಾಂ ಮಾಸಿಕಂ ಶ್ರಾದ್ಧಮನ್ವಾಹಾರ್ಯಂ ವಿದುರ್ಬುಧಾಃ ।
ತಚ್ಚಾಮಿಷೇಣ ಕರ್ತವ್ಯಂ ಪ್ರಶಸ್ತೇನ ಪ್ರಯತ್ನತಃ ॥ ೧೨೩

ಮಾಸಿಕ ಶ್ರಾದ್ಧವು ಪಿತೃಯಜ್ಞದ ಬಳಿಕವೇ ಆಗಬೇಕು. ಮಾಂಸಾಹಾರಿಗಳು ಒಳ್ಳೆ ಮಾಂಸವನ್ನು ಉಪಯೋಗಿಸಬಹುದು.

ತತ್ರ ಯೇ ಭೋಜನೀಯಾಃ ಸ್ಯುರ್ಯೇ ಚ ವರ್ಜ್ಯಾ ದ್ವಿಜೋತ್ತಮಾಃ ।
ಯಾವಂತಶ್ಚೈವ ಯೈಶ್ಚಾನ್ನೈಸ್ತಾನ್ಪ್ರವಕ್ಷ್ಯಾಮ್ಯಶೇಷತಃ ॥ ೧೨೪

ಆ ಶ್ರಾದ್ಧದಲ್ಲಿ ಅರ್ಚನ, ಭೋಜನಗಳಿಗೆ ಅರ್ಹರು-ಅನರ್ಹರು ಯಾರು ಯಾರು, ಎಷ್ಟು ಮಂದಿ, ಅನ್ನ ಎಂತಹದು ಎಬಿತ್ಯಾದಿ ಎಲ್ಲ ವಿವರವು ಕೊಡಲ್ಪಡುವುದು.

ದ್ವೌ ದೈವೇ ಪಿತೃಕಾರ್ಯೇ ತ್ರೀನೇಕೈಕಮುಭಯತ್ರ ವಾ ।
ಭೋಜಯೇತ್ಸುಸಮೃದ್ಧೋಽಪಿ ನ ಪ್ರಸಜ್ಜೇತ ವಿಸ್ತರೇ ॥ ೧೨೫

ವಿಶ್ವೇದೇವಸ್ಥಾನದಲ್ಲಿ ಇಬ್ಬರು, ಪಿತೃಸ್ಥಾನದಲ್ಲಿ ಮೂವರು, ಅಥವಾ ಎರಡೂ ಸ್ಥಾನದಲ್ಲಿ ಒಬ್ಬೊಬ್ಬರು ಅರ್ಚಿಸಲ್ಪಡತಕ್ಕವರು. ಬಹಳ ಐಶ್ವರ್ಯವಂತನಾದರೂ ಅಧಿಕವು ಬೇಡ.

ಸತ್ಕ್ರಿಯಾಂ ದೇಶಕಾಲೌ ಚ ಶೌಚಂ ಬ್ರಾಹ್ಮಣಸಂಪದಃ ।
ಪಂಚೈತಾನ್ವಿಸ್ತರೋ ಹಂತಿ ತಸ್ಮಾನ್ನೇಹೇತ ವಿಸ್ತರಂ ॥ ೧೨೬

ಸತ್ಕಾರ, ದಕ್ಷಿಣಪ್ರವಣದೇಶ, ಅಪರಾಹ್ನ, ಯೋಗ್ಯಬ್ರಾಹ್ಮಣ ಇವೈದು ವಿಸ್ತಾರ ಸಂದರ್ಭದಲ್ಲಿ ಲೋಪಹೊಂದುವುವು. ಆದುದರಿಂದ ಅಧಿಕ ಪ್ರಸಂಗವನ್ನು ಬಿಡಬೇಕು.

ಪ್ರಥಿತಾ ಪ್ರೇತಕೃತ್ಯೈಷಾ ಪಿತ್ರ್ಯಂ ನಾಮ ವಿಧುಕ್ಷಯೇ ।
ತಸ್ಮಿನ್ಯುಕ್ತಸ್ಯೈತಿ ನಿತ್ಯಂ ಪ್ರೇತಕೃತ್ಯೈವ ಲೌಕಿಕೀ ॥ ೧೨೭

ಅಮಾವಾಸ್ಯಾ ದಿನದಲ್ಲಿ ಮಾಡುವ ಈ ಪಿತೃಕ್ರಿಯಾ ಶ್ರದ್ಧಾಲುವಿಗೆ ಅದು ಸಮೃದ್ಧಿರೂಪದಲ್ಲಿ ಪುನಃ ತನ್ನನ್ನೇ ಸೇರುವುದು.

ಶ್ರೋತ್ರಿಯಾಯೈವ ದೇಯಾನಿ ಹವ್ಯಕವ್ಯಾನಿ ದಾತೃಭಿಃ ।
ಅರ್ಹತ್ತಮಾಯ ವಿಪ್ರಾಯ ತಸ್ಮೈ ದತ್ತಂ ಮಹಾಫಲಂ ॥ ೧೨೮

ದೇವ-ಪಿತೃಕಾರ್ಯಗಳಲ್ಲಿ ವೇದಶಾಸ್ತ್ರಪಾರಂಗತನಿಗೆ ಅರ್ಚನೆ ಮಾಡಿದರೆ ತುಂಬ ಫಲವು.

ಏಕೈಕಮಪಿ ವಿದ್ವಾಂಸಂ ದೈವೇ ಪಿತ್ರ್ಯೇ ಚ ಭೋಜಯೇತ್ ।
ಪುಷ್ಕಲಂ ಫಲಮಾಪ್ನೋತಿ ನಾಮಂತ್ರಜ್ಞಾನ್ಬಹೂನಪಿ ॥ ೧೨೯

ಮಂತ್ರಹೀನರಾದ ಬಹುಬ್ರಾಹ್ಮಣರ ಅರ್ಚನೆಗಿಂತ ಘನವಿದ್ವಾಂಸನನ್ನು ಒಬ್ಬನನ್ನು ಭೋಜನ ಮಾಡಿಸಿದರೆ ಬಹುಫಲ.

ದೂರಾದೇವ ಪರೀಕ್ಷೇತ ಬ್ರಾಹ್ಮಣಂ ವೇದಪಾರಗಂ ।
ತೀರ್ಥಂ ತದ್ಧವ್ಯಕವ್ಯಾನಾಂ ಪ್ರದಾನೇ ಸೋಽತಿಥಿಃಸ್ಮೃತಃ ॥ ೧೩೦

ಪಿತೃಪಿತಾಮಹಾದಿ ಬಹಳ ಹಿಂದಿನ ತಲೆಮಾರುಗಳಿಂದಲೇ ವೇದ ಶಾಸ್ತ್ರಾಧ್ಯಯನ ಸದಾಚಾರಸಂಪನ್ನ ಕುಲವನ್ನು ಹಿಡಿಯಬೇಕು.

ಸಹಸ್ರಂ ಹಿ ಸಹಸ್ರಾಣಾಮನೃಚಾಂ ಯತ್ರ ಭುಂಜತೇ ।
ಏಕಸ್ತಾನ್ ಮಂತ್ರವಿತ್ ಪ್ರೀತಃ ಸರ್ವಾನರ್ಹತಿ ಧರ್ಮತಃ ॥ ೧೩೧

ವೇದ ಹೀನ ಸಾವಿರಮಂದಿಯೂ, ಒಬ್ಬ ಮಂತಜ್ಞನೂ ಪ್ರೀತರಾದರೆ ಫಲವು ಸಮಾನ.

ಜ್ಞಾನೋತ್ಕೃಷ್ಟಾಯ ದೇಯಾನಿ ಕವ್ಯಾನಿ ಚ ಹವೀಂಷಿ ಚ ।
ನ ಹಿ ಹಸ್ತಾವಸೃಗ್ದಿಗ್ಧೌ ರುಧಿರೇಣೈವ ಶುಧ್ಯತಃ ॥ ೧೩೨

ರಕ್ತದಿಂದ ಮಲಿನವಾದ ಕೈಯನ್ನು ರಕ್ತದಿಂದ ತೊಳೆದರೆ ಶುದ್ಧ ವಾಗದು. ಶುದ್ಧೋದಕದಿಂದ ತೊಳೆಯಬೇಕು. ಹಾಗೆಯೇ ದೇವಪಿತೃ ಗಳ ಆರಾಧನೆಯಲ್ಲಿ ಜ್ಞಾನೋತ್ಕೃಷ್ಟನು ಪೂಜಿಸಲ್ಪಡಬೇಕು.

ಯಾವತೋ ಗ್ರಸತೇ ಗ್ರಾಸಾನ್ ಹವ್ಯಕವ್ಯೇಷ್ವಮಂತ್ರವಿತ್ ।
ತಾವತೋ ಗ್ರಸತೇ ಪ್ರೇತ್ಯ ದೀಪ್ತಶೂಲಷ್ಟ್ಯಯೋಗುಡಾನ್ ॥ ೧೩೩

ಮಂತ್ರಹೀನನು ಹವ್ಯಕವ್ಯಗಳನ್ನು ತಿನ್ನುವುದಕ್ಕಿಂತ ಕಾದಕಬ್ಬಿಣದ ಗುಂಡನ್ನು ನುಂಗುವುದು ಒಳ್ಳೆಯದು. ಹೋಮಶೇಷವು ಹವಿಸ್ಸು–ಹವ್ಯ, ಪಿತೃಶೇಷವು ಕವ್ಯ.

ಜ್ಞಾನನಿಷ್ಠಾ ದ್ವಿಜಾಃ ಕೇಚಿತ್ತಪೋನಿಷ್ಠಾಸ್ತಥಾಪರೇ ।
ತಪಃಸ್ವಾಧ್ಯಾಯನಿಷ್ಠಾಶ್ಚ ಕರ್ಮನಿಷ್ಠಾಸ್ತಥಾಪರೇ ॥ ೧೩೪

ಕೆಲವರು ಆತ್ಮಜ್ಞಾನದಲ್ಲಿ, ತಪಸ್ಸುಗಳಲ್ಲಿ, ತಪಸ್ಸು–ವೇದಶಾಸ್ತ್ರಾಧ್ಯ ಯನಗಳಲ್ಲಿ, ಕೇವಲ ಯಾಗಗಳಲ್ಲಿ ಒಂದೊಂದರಲ್ಲಿ ಅತ್ಯಂತ ಆಸಕ್ತಿಯನ್ನು ತಾಳುವರು.

ಜ್ಞಾನನಿಷ್ಠೇಷು ಕವ್ಯಾನಿ ಪ್ರತಿಷ್ಠಾಪ್ಯಾನಿ ಯತ್ನತಃ ।
ಹವ್ಯಾನಿ ತು ಯಥಾನ್ಯಾಯಂ ಸರ್ವೇಷ್ವೇವ ಚತುರ್ಷ್ವಪಿ ॥ ೧೩೫

ಪಿತೃನ್ನಗಳನ್ನು ಮುಖ್ಯವಾಗಿ ಜ್ಞಾನಪ್ರಧಾನರಿಗೆ ಸಮರ್ಪಿಸಬೇಕು. ದೇವಾನ್ನಗಳನ್ನು ಮೇಲೆ ಹೇಳಿದ ವಿವಿಧ ಶ್ರದ್ಧೆಯಿರುವವರಿಗೆ ಕೊಡ ಬಹುದು.

ಅಶ್ರೋತ್ರಿಯಃ ಪಿತಾ ಯಸ್ಯ ಪುತ್ರಃ ಸ್ಯಾದ್ವೇದಪಾರಗಃ ।
ಅಶ್ರೋತ್ರಿಯೋ ವಾ ಪುತ್ರಃ ಸ್ಯಾತ್ಪಿತಾ ಸ್ಯಾದ್ವೇದಪಾರಗಃ ॥ ೧೩೬
ಜ್ಯಾಯಾಂಸಮನಯೋರ್ವಿದ್ಯಾದ್ಯಸ್ಯ ಸ್ಯಾಚ್ಛ್ರೋತ್ರಿಯಃ ಪಿತಾ ।
ಮಂತ್ರಸಂಪೂಜನಾರ್ಥಂ ತು ಸತ್ಕಾರಮಿತರೋಽರ್ಹತಿ ॥ ೧೩೭

ಒಂದು ಕಡೆ ತಂದೆಯು ವೇದಹೀನನಾಗಿ, ಮಗನು ವೇದಪಾರಂಗತ ನಾಗಿರಬಹುದು. ಇನ್ನೊಂದು ಕಡೆ ತಂದೆಯು ವೇದಪಾರಂಗತನಾಗಿ, ಮಗನು ಅಶ್ರೋತ್ರಿಯನಾಗಿರಬಹುದು. ಇಂತಹ ಸಂದರ್ಭದಲ್ಲಿ ಇಬ್ಬರೂ ಪೂಜ್ಯರು. ವಿದ್ಯೆಯೂ ಧನಾದಿಗಳಂತೆ ಪುಣ್ಯಲಭ್ಯವಾದುದರಿಂದ ಇಬ್ಬರೂ ಪೂಜಾರ್ಹರು. ಈಗಿನ ಮತ್ತು ಹಿಂದಿನ ವಿದ್ಯೆಯನ್ನು ಗುರಿಯಿಡಬೇಕು.

ನ ಶ್ರಾದ್ಧೇ ಭೋಜಯೇನ್ಮಿತ್ರಂ ಧನೈಃ ಕಾರ್ಯೋಽಸ್ಯ ಸಂಗ್ರಹಃ ।
ನಾರಿಂ ನ ಮಿತ್ರಂ ಯಂ ವಿದ್ಯಾತ್ತಂ ಶ್ರಾದ್ಧೇ ಭೋಜಯೇದ್ದ್ವಿಜಂ ॥ ೧೩೮

ಶ್ರಾದ್ಧದಲ್ಲಿ ಮಿತ್ರ, ಶತ್ರು ಅಲ್ಲದವರನ್ನು ಭೋಜನಕ್ಕೆ ಕರೆಯಬೇಕು. ಶ್ರಾದ್ಧ ಭೋಜನದಿಂದ ಗೆಳೆತನ ಕುದುರಿಸಬಾರದು.

ಯಸ್ಯ ಮಿತ್ರಪ್ರಧಾನಾನಿ ಶ್ರಾದ್ಧಾನಿ ಚ ಹವೀಂಷಿ ಚ ।
ತಸ್ಯ ಪ್ರೇತ್ಯ ಫಲಂ ನಾಸ್ತಿ ಶ್ರಾದ್ಧೇಷು ಚ ಹವಿಃಷು ಚ ॥ ೧೩೯

ಶ್ರಾದ್ಧ–ಹೋಮಗಳು ಮಿತ್ರರಿಂದ ಪೂರ್ಣವಾದರೆ ಆ ಕರ್ಮಗಳಿಗೆ ಸದ್ಗತಿ (ಪರಲೋಕದಲ್ಲಿ) ದಾನಶಕ್ತಿಯಿಲ್ಲ.

ಯಃ ಸಂಗತಾನಿ ಕುರುತೇ ಮೋಹಾಚ್ಛ್ರಾದ್ಧೇನ ಮಾನವಃ ।
ಸ ಸ್ವರ್ಗಾಚ್ಚ್ಯವತೇ ಲೋಕಾಚ್ಛ್ರಾದ್ಧಮಿತ್ರೋ ದ್ವಿಜಾಧಮಃ ॥ ೧೪೦

ಶ್ರಾದ್ಧದಿಂದ ಗೆಳೆತನ ಆರಂಭಿಸುವುದರಿಂದ ಅವನು ಅಯೋಗ್ಯನಾಗುತ್ತಾನೆ.

ಸಂಭೋಜನೀ ಸಾಭಿಹಿತಾ ಪೈಶಾಚೀ ದಕ್ಷಿಣಾ ದ್ವಿಜೈಃ ।
ಇಹೈವಾಸ್ತೇ ತು ಸಾ ಲೋಕೇ ಗೌರಂಧೇವೈಕವೇಶ್ಮನೀ ॥ ೧೪೧

ಕುರುಡು ಹಸು ಹಟ್ಟಿಯಿಂದ ಕದಲದಿರುವಂತೆ ಮಿತ್ರಭೋಜನರೂಪವಾದ ಆ ಸಂತೋಷ ಗೋಷ್ಠಿಯು, ಹೋಮವು, ಶ್ರಾದ್ಧವು ಆಗಿರದೆ ಈ ಲೋಕದ ಫಲವನ್ನು ಮಾತ್ರ ಕರ್ತೃವಿಗೆ ಕೊಡಬಲ್ಲುದು. ಜ್ಞಾನ ಪ್ರಧಾನವಾದರೆ ಮಾತ್ರ ಕರ್ಮವು ಜ್ಞಾನ ಸುಖದಾನ ಶಕ್ತಿಸಂಪನ್ನವಾಗುವುದು.

ಯಥೇರಿಣೇ ಬೀಜಮುಪ್ತ್ವಾ ನ ವಪ್ತಾ ಲಭತೇ ಫಲಂ ।
ತಥಾಽನೃಚೇ ಹವಿರ್ದತ್ವಾ ನ ದಾತಾ ಲಭತೇ ಫಲಂ ॥ ೧೪೨

ಮಳಲುಗಾಡಿನಲ್ಲಿ ಬೀಜಬಿತ್ತಿದರೆ ಆ ಕೃಷಿಯಿಂದ ಕೃಷಿಕನಿಗೆ ಯಾವ ಫಲವೂ ಇಲ್ಲದಿರುವಂತೆ, ವೇದಬಾಹ್ಯನಿಗೆ ದೇವಾನ್ನವನ್ನು ಕೊಟ್ಟರೆ ದಾನ ಫಲವಿಲ್ಲ.

ದಾತೃನ್ಪ್ರತಿಗ್ರಹೀತೃಂಶ್ಚ ಕುರುತೇ ಫಲಭಾಗಿನಃ ।
ವಿದುಷೇ ದಕ್ಷಿಣಾಂ ದತ್ವಾ ವಿಧಿವತ್ಪ್ರೇತ್ಯ ಚೇಹ ಚ ॥ ೧೪೩

ವೇದತತ್ವಜ್ಞನಿಗೆ ದಕ್ಷಿಣೆ ಕೊಟ್ಟರೆ ತಕ್ಕೊಂಡವನಿಗೂ, ಕೊಟ್ಟವನಿಗೂ ದೃಶ್ಯಾದೃಶ್ಯ ಫಲಪ್ರಾಪ್ತಿಯಾಗುವುದು. ಈ ಲೋಕದ ಫಲವು ದೃಶ್ಯಫಲ, ಅದೃಶ್ಯಫಲವು ಅನ್ಯದೇಶಕಾಲಗಳಲ್ಲಿ.

ಕಾಮಂ ಶ್ರಾದ್ಧೇಽರ್ಚಯೇನ್ಮಿತ್ರಂ ನಾಭಿರೂಪಮಪಿ ತ್ವರಿಂ ।
ದ್ವಿಷತಾ ಹಿ ಹವಿರ್ಭುಕ್ತಂ ಭವತಿ ಪ್ರೇತ್ಯ ನಿಷ್ಫಲಂ ॥ ೧೪೪

ಶ್ರಾದ್ಧದಲ್ಲಿ ಶತ್ರುವನ್ನು ಪೂಜಿಸುವುದಕ್ಕಿಂತ, ಮಿತ್ರಪೂಜೆಯು ಉತ್ತಮ.

ಯತ್ನೇನ ಭೋಜಯೇಚ್ಛ್ರಾದ್ಧೇ ಬಹ್ವೃಚಂ ವೇದಪಾರಗಂ ।
ಶಾಖಾಂತಗಮಥಾಧ್ವರ್ಯುಂ ಛಂದೋಗಂ ತು ಸಮಾಪ್ತಿಕಂ ॥ ೧೪೫

ಮೂರು ಋಗ್, ಯಜುಷ್, ಸಾಮವೇದಗಳಲ್ಲಿ ಸಮಗ್ರ ಅಧ್ಯಯನ ಮಾಡಿದವರನ್ನು ಶ್ರಾದ್ಧಕ್ಕೆ ನಿಮಂತ್ರಿಸುವುದು ಬಹಳ ಒಳ್ಳೆದು. ಸಂಹಿತಾ ಮಾತ್ರ ಓದಿದವನು, ಶ್ರೋತ್ರಿಯನು, ಅವನಿಗಿಂತ ಆದ್ಯಂತ ವೇದ ಓದಿದವನು ಶ್ರೇಷ್ಠನು.

ಏಷಾಮನ್ಯತಮೋ ಯಸ್ಯ ಭುಂಜೀತ ಶ್ರಾದ್ಧಮರ್ಚಿತಃ ।
ಪಿತೄಣಾಂ ತಸ್ಯ ತೃಪ್ತಿಃ ಸ್ಯಾಚ್ಛಾಶ್ವತೀ ಸಾಪ್ತಪೌರುಷೀ ॥ ೧೪೬

ಈಗ ಹೇಳಿದ ಸಂಪೂರ್ಣ ವೇದ ಓದಿದವನನ್ನು ಶ್ರಾದ್ಧದಲ್ಲಿ ಅರ್ಚನೆ ಮಾಡಿದರೆ ಏಳು ಪಿತೃಗಳಿಗೆ ತೃಪ್ತಿಯು.

ಏಷ ವೈ ಪ್ರಥಮಃ ಕಲ್ಪಃ ಪ್ರದಾನೇ ಹವ್ಯಕವ್ಯಯೋಃ ।
ಅನುಕಲ್ಪಸ್ತ್ವಯಂ ಜ್ಞೇಯಃ ಸದಾ ಸದ್ಭಿರನುಷ್ಠಿತಃ ॥ ೧೪೭

ಈ ವರೆಗೆ ಹೇಳಿದುದು ಶ್ರಾದ್ಧದ ವಿಷಯದಲ್ಲಿ ಶ್ರೇಷ್ಠ ಪದ್ಧತಿಯು. ಅದು ಅಸಾಧ್ಯವಾದರೆ ಅನುಕಲ್ಪವು ಗೌಣಪಕ್ಷವು ಈ ರೀತಿ ಇದೆ. ಮುಂದೆ ಹೇಳಲ್ಪಡುವುದು ಸದಾಚಾರವು.

ಮಾತಾಮಹಂ ಮಾತುಲಂ ಚ ಸ್ವಸ್ರೀಯಂ ಶ್ವಶುರಂ ಗುರುಂ ।
ದೌಹಿತ್ರಂ ವಿಟ್ಪತಿಂ ಬಂಧುಮೃತ್ವಿಗ್ಯಾಜ್ಯೌ ಚ ಭೋಜಯೇತ್ ॥ ೧೪೮

ತಾಯಿಯ ತಂದೆ, ತಾಯಿಯ ಸೋದರ, ತನ್ನ ಸೋದರಿಯ ಮಗ, ಹೆಂಡತಿಯ ತಂದೆ, ಆಚಾರ್ಯ, ಮಗಳ ಮಗ, ಮಗಳ ಗಂಡ, ತಾಯಿಯ ಸೋದರೀ ಪುತ್ರರು, ಋತ್ವಿಗ್, ಯಾಜ್ಯ (ಪೌರೋಹಿತ್ಯ ಮಾಡಿಸಿಕೊಳ್ಳುವವರು) ಈ ಹತ್ತು ವಿಧರನ್ನು ಶ್ರಾದ್ಧದಲ್ಲಿ ಉಣ್ಣಿಸಬೇಕು. ಇದರಿಂದ ಪಿತೃತೃಪ್ತಿಯು.

ನ ಬ್ರಾಹ್ಮಣಂ ಪರೀಕ್ಷೇತ ದೈವೇ ಕರ್ಮಣಿ ಧರ್ಮವಿತ್ ।
ಪಿತ್ರ್ಯೇ ಕರ್ಮಣಿ ತು ಪ್ರಾಪ್ತೇ ಪರೀಕ್ಷೇತ ಪ್ರಯತ್ನತಃ ॥ ೧೪೯

ದೇವಕಾರ್ಯದಲ್ಲಿ ಬ್ರಾಹ್ಮಣಪರೀಕ್ಷೆಯು ಬಹಳ ಬೇಡವಾದರೂ, ಪಿತೃಕಾರ್ಯದಲ್ಲಿ ಮಾಡುವುದು ತುಂಬ ಒಳ್ಳೆಯದು.

ಯೇ ಸ್ತೇನಪತಿತಕ್ಲೀಬಾ ಯೇ ಚ ನಾಸ್ತಿಕವೃತ್ತಯಃ ।
ತಾನ್ ಹವ್ಯಕವ್ಯಯೋರ್ವಿಪ್ರಾನನರ್ಹಾನ್ ಮನುರಬ್ರವೀತ್ ॥ ೧೫೦

ಕಳ್ಳ, ಪತಿತ, ನಪುಂಸಕ, ನಾಸ್ತಿಕರು ಹವ್ಯಕವ್ಯಗಳಿಗೆ ಪಾತ್ರರಲ್ಲ.

ಜಟಿಲಂ ಚಾನಧೀಯಾನಂ ದುರ್ಬಲಂ ಕಿತವಂ ತಥಾ ।
ಯಾಜಯಂತಿ ಚ ಯೇ ಪೂಗಾಂಸ್ತಾಂಶ್ಚ ಶ್ರಾದ್ಧೇ ನ ಭೋಜಯೇತ್ ॥ ೧೫೧

ವೇದಾಧ್ಯಯನ ಮಾಡದ ಬ್ರಹ್ಮಚಾರಿ, ದುಶ್ಚರ್ಮ, ಜೂಜುಕೋರ, ಪೂಗಯಾಜಕ ಇವರು ಶ್ರಾದ್ಧದಲ್ಲಿ ಪ್ರಶಸ್ತರಲ್ಲ.

ಚಿಕಿತ್ಸಕಾನ್ ದೇವಲಕಾನ್ಮಾಂಸವಿಕ್ರಯಿಣಸ್ತಥಾ ।
ವಿಪಣೇನ ಚ ಜೀವಂತೋ ವರ್ಜ್ಯಾಃ ಸ್ಯುರ್ಹವ್ಯಕವ್ಯಯೋಃ ॥ ೧೫೨

ಚಿಕಿತ್ಸಕ (ದೇವಪೂಜಕ), ಅರ್ಚಕ, ಮಾಂಸವಿಕ್ರಯಿ, ವಾಣಿಜ್ಯಜೀವಿ ಇವರು ಹವ್ಯಕವ್ಯಗಳಿಗೆ ಅರ್ಹರಲ್ಲ.

ಪ್ರೇಷ್ಯೋ ಗ್ರಾಮಸ್ಯ ರಾಜ್ಞಶ್ಚ ಕುನಖೀ ಶ್ಯಾವದಂತಕಃ ।
ಪ್ರತಿರೋದ್ಧಾ ಗುರೋಶ್ಚೈವ ತ್ಯಕ್ತಾಗ್ನಿರ್ವಾರ್ಧುಷಿಸ್ತಥಾ ॥ ೧೫೩
ಯಕ್ಷ್ಮೀ ಚ ಪಶುಪಾಲಶ್ಚ ಪರಿವೇತ್ತಾ ನಿರಾಕೃತಿಃ ।
ಬ್ರಹ್ಮದ್ವಿಟ್ ಪರಿವಿತ್ತಿಶ್ಚ ಗಣಾಭ್ಯಂತರ ಏವ ಚ ॥ ೧೫೪
ಕುಶೀಲವೋಽವಕೀರ್ಣೀ ಚ ವೃಷಲೀಪತಿರೇವ ಚ ।
ಪೌನರ್ಭವಶ್ಚ ಕಾಣಶ್ಚ ಯಸ್ಯ ಚೋಪಪತಿರ್ಗೃಹೇ ॥ ೧೫೫
ಭೃತಕಾಧ್ಯಾಪಕೋ ಯಶ್ಚ ಭೃತಕಾಧ್ಯಾಪಿತಸ್ತಥಾ ।
ಶೂದ್ರಶಿಷ್ಯೋ ಗುರುಶ್ಚೈವ ವಾಗ್ದುಷ್ಟಃ ಕುಂಡಗೋಲಕೌ ॥ ೧೫೬
ಅಕಾರಣಪರಿತ್ಯಕ್ತಾ ಮಾತಾಪಿತ್ರೋರ್ಗುರೋಸ್ತಥಾ ।
ಬ್ರಾಹ್ಮೈರ್ಯೌನೈಶ್ಚ ಸಂಬಂಧೈಃ ಸಂಯೋಗಂ ಪತಿತೈರ್ಗತಃ ॥ ೧೫೭
ಅಗಾರದಾಹೀ ಗರದಃ ಕುಂಡಾಶೀ ಸೋಮವಿಕ್ರಯೀ ।
ಸಮುದ್ರಯಾಯೀ ಬಂದೀ ಚ ತೈಲಿಕಃ ಕೂಟಕಾರಕಃ ॥ ೧೫೮

ಪಿತ್ರಾ ವಿವದಮಾನಶ್ಚ ಕಿತವೋ ಮದ್ಯಪಸ್ತಥಾ ।
ಪಾಪರೋಗ್ಯಭಿಶಸ್ತಶ್ಚ ದಾಂಭಿಕೋ ರಸವಿಕ್ರಯೀ ॥ ೧೫೯
ಧನುಃಶರಾಣಾಂ ಕರ್ತಾ ಚ ಯಶ್ಚಾಗ್ರೇದಿಧಿಷೂಪತಿಃ ।
ಮಿತ್ರಧ್ರುದ್ಯೂತವೃತ್ತಿಶ್ಚ ಪುತ್ರಾಚಾರ್ಯಸ್ತಥೈವ ಚ ॥ ೧೬೦

ಸಂಬಳ ತೆಕ್ಕೊಂಡು ರಾಜನ ಗ್ರಾಮದ ದೂತ, ಕೆಟ್ಟ ಉಗುರಿನವ, ಕಪ್ಪುಹಲ್ಲಿನವ, ಗುರುವಿರೋಧಿ, ಶ್ರೌತಸ್ಮಾರ್ತಾಗ್ನಿ ಪರಿತ್ಯಾಗಿ, ಬಡ್ಡಿಗೆ ಹಣ ಕೊಟ್ಟು ಜೀವಿಸುವವರು—ಇವರು ಅನರ್ಹರು. ಕ್ಷಯರೋಗಿ ಜೀವನಕ್ಕಾಗಿ ಜಾನುವಾರು ಸಾಕುವವನು, ಹಿರಿಯನನ್ನು ಬಿಟ್ಟು ಮದುವೆಯಾದ ಕಿರಿಯ–ಹಿರಿಯ, ಬ್ರಾಹ್ಮಣದ್ವೇಷಿ, ಅನೇಕ ಅಧಿಕಾರಿಗಳ ಹಣದಲ್ಲಿ ಜೀವಿಸುವ ಒಬ್ಬನು, ನಟಭಗ್ನವ್ರತಯತಿ, ಬ್ರಹ್ಮಚಾರಿ, ಕೇವಲ ಶೂದ್ರಾಪತಿ ಎರಡನೆ ಮದುವೆಯಲ್ಲಿ ಹೆಂಗಸಿಗೆ ಹುಟ್ಟಿದವ, ಕುರುಡುಮಿಂಡರಿರುವ ಹೆಂಡತಿಯಗಂಡ, ವೇತನಕ್ಕೆ ಕಲಿಸುವವ–ಕಲಿಯುವವ, ಶೂದ್ರ ಶಿಷ್ಯ, ಶೂದ್ರಗುರು, ಪರುಷ ಭಾಷಿ, ಗಂಡನು ಇರುವಾಗಲೂ ಇಲ್ಲದಾಗಲೂ ಇತರರಿಂದ ಜನಿಸಿದವ, ತಂದೆ–ತಾಯಿ ಗುರುಗಳನ್ನು ಕಾರಣವಿಲ್ಲದೆ ಬಿಟ್ಟವನು, ಪತಿತ (ಸಂಸರ್ಗಿ), ವಿದ್ಯಾ ವಿವಾಹ ಸಂಬಂಧವುಳ್ಳವನು, ಮನೆ ಸುಡುವವ, ವಿಷಕೊಡುವವ, ಕುಂಡ ಗೋಲಕ, ಭೋಜನ ಕರ್ತೃ, ಸೋಮಲತಾವಿಕ್ರಯಿ, ಸಮುದ್ರಯಾನ ಮಾಡುವವ, ಸ್ತುತಿಪಾಠಕ, ಎಣ್ಣೆಮಾರುವವ, ಸುಳ್ಳುಸಾಕ್ಷಿಹೇಳುವವ, ತಂದೆಯೊಡನೆ ಜಗಳಾಡುವವ, ಜೂಜಾಡಿಸುವವ, ಮದ್ಯಪಾಯಿ, ಪಾಪರೋಗಿ, ಮಹಾಪಾತಕಿ, ಕೀರ್ತಿಗೆ ಧರ್ಮಆಚರಿಸುವವ, ರಸವಿಕ್ರಯಿ, ಧನುರ್ಬಾಣಗಳನ್ನು ಮಾಡುವವ, ಅಕ್ಕನನ್ನು ಬಿಟ್ಟು ತಂಗಿಯನ್ನು ಮದುವೆಯಾದವನು, ಮಿತ್ರದ್ರೋಹಿ, ಜೂಜಿನ ಸದಸ್ಯ, ಮಗನಿಂದ ಕಲಿತವ ಇವರು ವರ್ಜ್ಯರು.

ಭ್ರಾಮರೀ ಗಂಡಮಾಲೀ ಚ ಶ್ವಿತ್ರ್ಯಥೋ ಪಿಶುನಸ್ತಥಾ ।
ಉನ್ಮತ್ತೋಽಂಧಶ್ಚ ವರ್ಜ್ಯಾಃ ಸ್ಯುರ್ವೇದನಿಂದಕ ಏವ ಚ ॥ ೧೬೧
ಹಸ್ತಿಗೋಽಶ್ವೋಷ್ಟ್ರದಮಕೋ ನಕ್ಷತ್ರೈರ್ಯಶ್ಚ ಜೀವತಿ ।
ಪಕ್ಷಿಣಾಂ ಪೋಷಕೋ ಯಶ್ಚ ಯುದ್ಧಾಚಾರ್ಯಸ್ತಥೈವ ಚ ॥ ೧೬೨
ಸ್ರೋತಸಾಂ ಭೇದಕೋ ಯಶ್ಚ ತೇಷಾಂ ಚಾವರಣೇ ರತಃ ।
ಗೃಹಸಂವೇಶಕೋ ದೂತೋ ವೃಕ್ಷಾರೋಪಕ ಏವ ಚ ॥ ೧೬೩

ಶ್ವಕ್ರೀಡೀ ಶ್ಯೇನಜೀವೀ ಚ ಕನ್ಯಾದೂಷಕ ಏವ ಚ ।
ಹಿಂಸ್ರೋ ವೃಷಲವೃತ್ತಿಶ್ಚ ಗಣಾನಾಂ ಚೈವ ಯಾಜಕಃ ॥ ೧೬೪

ಆಚಾರಹೀನಃ ಕ್ಲೀಬಶ್ಚ ನಿತ್ಯಂ ಯಾಚನಕಸ್ತಥಾ ।
ಕೃಷಿಜೀವೀ ಶ್ಲೀಪದೀ ಚ ಸದ್ಭಿರ್ನಿಂದಿತ ಏವ ಚ ॥ ೧೬೫

ಔರಭ್ರಿಕೋ ಮಾಹಿಷಿಕಃ ಪರಪೂರ್ವಾಪತಿಸ್ತಥಾ ।
ಪ್ರೇತನಿರ್ಯಾತಕಶ್ಚೈವ ವರ್ಜನೀಯಾಃ ಪ್ರಯತ್ನತಃ ॥ ೧೬೬

ಏತಾನ್ವಿಗರ್ಹಿತಾಚಾರಾನಪಾಂಕ್ತೇಯಾನ್ದ್ವಿಜಾಧಮಾನ್ ।
ದ್ವಿಜಾತಿಪ್ರವರೋ ವಿದ್ವಾನುಭಯತ್ರ ವಿವರ್ಜಯೇತ್ ॥ ೧೬೭

ಅಪಸ್ಮಾರೀ, ಗಂಡಮಾಲೆ ರೋಗದವ, ಕುಷ್ಠಿ, ತರಳೆಕೋರ, ಹುಚ್ಚ, ಕುರುಡ, ವೇದನಿಂದಕ ಇವರು ವರ್ಜ್ಯರು. ಎತ್ತು, ಹಸು, ಆನೆ, ಒಂಟೆಗಳನ್ನು ಪಳಗಿಸುವವ, ಜ್ಯೋತಿಶ್ಶಾಸ್ತ್ರದಿಂದ ಬದುಕುವವ, ಹಕ್ಕಿಸಾಕುವವ, ಯುದ್ಧ ವಿದ್ಯಾಶಿಕ್ಷಕ, ನೀರನ್ನು ಅಡ್ಡ ತಿರುಗಿಸುವವ, ಕಟ್ಟೆ ಒಡೆಯುವವ, ವಾಸ್ತು ವಿದ್ಯೆಯಿಂದ ಜೀವಿಸುವವ, ದೂತ, ಮರನೆಡುವವ, ನಾಯಿಯಿಂದ ಆಡುವವ, ಹದ್ದುಗಳಿಂದ ಬದುಕುವವ, ಹುಡುಗಿಯ ಅತ್ಯಾಚಾರ ಮಾಡುವವ, ಹಿಂಸಕ, ಶೂದ್ರಹಣದಿಂದ ಬದುಕುವವ, ಗಣಹೋಮ ಮಾಡಿಸುವವ, ವಿನಯಹೀನ, ನಪುಂಸಕ, ಬೇಡುವವ, ಕೃಷಿಜೀವಿ, ಆನೆಕಾಲುರೋಗದವ, ಸಜ್ಜನನಿಂದಿತ, ಕುರಿ, ಎಮ್ಮೆಗಳಿಂದ ಬದುಕುವವ, ಗಂಡಬಿಟ್ಟು ಎರಡನೆ ಮದುವೆಯಾದವಳ ಗಂಡ, ವೇತನದಿಂದ ಶವ ಹೊರುವವ—ಇವರು ವರ್ಜ್ಯರು. ನಿಂದಿತ ಕರ್ಮರಾದ ಇವರನ್ನು ದೇವ–ಪಿತೃಕಾರ್ಯಗಳಲ್ಲಿ ಅರ್ಚಿಸಬಾರದು.

ಬ್ರಾಹ್ಮಣಸ್ತ್ವನಧೀಯಾನಸ್ತೃಣಾಗ್ನಿರಿವ ಶಾಮ್ಯತಿ ।
ತಸ್ಮೈ ಹವ್ಯಂ ನ ದಾತವ್ಯಂ ನ ಹಿ ಭಸ್ಮನಿ ಹೂಯತೇ ॥ ೧೬೮

ಹುಲ್ಲಿನಲ್ಲಿ ಉರಿಯುವ ಬೆಂಕಿ ಹವಿಸ್ಸನ್ನು ದಹಿಸಲಾರದು. ಅಂತೆಯೇ ಅಧ್ಯಯನವಿಲ್ಲದ ಬ್ರಾಹ್ಮಣನಿಗೆ ದಾನ ಮಾಡಬಾರದು.

ಅಪಾಂಕ್ತದಾನೇ ಯೋ ದಾತುರ್ಭವತ್ಯೂರ್ಧ್ವಂ ಫಲೋದಯಃ ।
ದೈವೇ ಹವಿಷಿ ಪಿತ್ರ್ಯೇ ವಾ ತತ್ಪ್ರವಕ್ಷ್ಯಾಮ್ಯಶೇಷತಃ ॥ ೧೬೯

ಪಂಕ್ತಿಪಾವನರಲ್ಲದ ಬ್ರಾಹ್ಮಣರಿಗೆ ದಾನಮಾಡಿದರೆ ಸಿಗುವ ಫಲವನ್ನು ಹೇಳುತ್ತೇನೆ.

ಅವ್ರತೈರ್ಯದ್ದ್ವಿಜೈರ್ಭುಕ್ತಂ ಪರಿವೇತ್ರಾದಿಭಿಸ್ತಥಾ ।
ಅಪಾಂಕ್ತೇಯೈರ್ಯದನ್ಯೈಶ್ಚ ತದ್ವೈ ರಕ್ಷಾಂಸಿ ಭುಂಜತೇ ॥ ೧೭೦

ಅಯೋಗ್ಯ ಬ್ರಾಹ್ಮಣರಿಗೆ ದಾನಮಾಡಿದ ಹವ್ಯಕವ್ಯಗಳು ರಾಕ್ಷಸರಿಗೆ ಸೇರುವುವು.

ದಾರಾಗ್ನಿಹೋತ್ರಸಂಯೋಗಂ ಕುರುತೇ ಯೋಽಗ್ರಜೇ ಸ್ಥಿತೇ ।
ಪರಿವೇತ್ತಾ ಸ ವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜಃ ॥ ೧೭೧

ಅಣ್ಣನು ಮದುವೆಯಾಗದಿರುವಾಗ ಮದುವೆ ಶ್ರೌತಸ್ಮಾರ್ತ. ಅಗ್ನಿ ಸ್ವೀಕಾರ ಮಾಡಿದ ತಮ್ಮನು ಪರಿವೇತ್ತೃ. ಪರಿವಿತ್ತಿಯು ಅಣ್ಣನು. ಅಣ್ಣನು ರೋಗ ಅನಿಚ್ಛಾದಿ ಕಾರಣಗಳಿಂದ ವಿವಾಹ ಬಾಹ್ಯನಾಗಿದ್ದಾಗ ಈ ಅಪರಾಧ ವಿಲ್ಲ. ಸಮ್ಮತಿಯಿದ್ದರೂ ಹಾಗೆ ದೋಷವಿಲ್ಲ.

ಪರಿವಿತ್ತಿಃ ಪರಿವೇತ್ತಾ ಯಯಾ ಚ ಪರಿವಿದ್ಯತೇ ।
ಸರ್ವೇ ತೇ ನರಕಂ ಯಾಂತಿ ದಾತೃಯಾಜಕಪಂಚಮಾಃ ॥ ೧೭೨

ಹಿಂದೆ ಹೇಳಿದಂತೆ ಕಾರಣಗಳಿಲ್ಲದೆ ತ್ವರೆಯಿಂದ ವಿವಾಹವಾದಲ್ಲಿ, ಅಣ್ಣ, ತಮ್ಮ, ಕನ್ಯೆ ಅವಳ ತಂದೆ, ಪುರೋಹಿತ ಈ ಐದು ಮಂದಿಯು ಅಪರಾಧದ ಭಾಗಹರರು.

ಭ್ರಾತುರ್ಮೃತಸ್ಯ ಭಾರ್ಯಾಯಾಂ ಯೋಽನುರಜ್ಯೇತ ಕಾಮತಃ ।
ಧರ್ಮೇಣಾಪಿ ನಿಯುಕ್ತಾಯಾಂ ಸ ಜ್ಞೇಯೋ ದಿಧಿಷೂಪತಿಃ ॥ ೧೭೩

ಸೋದರರಲ್ಲಿ ಒಬ್ಬನು ಮೃತನಾಗಿ ನಿಃಸಂತತಿಯಾಗಿದ್ದರೆ ವಿಧಿವತ್ತಾಗಿ ಮುಂದೆ ಹೇಳುವ ನಿಯೋಗದಿಂದ ಗರ್ಭಾಧಾನಕ್ಕೆ ಸಮ್ಮತಿಯಿದ್ದರೂ ಇತರ ಕಾಮವಿಕಾರಗಳನ್ನು ಅನುರಾಗ ಪೂರ್ವಕವಾಗಿ ಸೋದರನ ಪತ್ನಿಯಲ್ಲಿ ಆಚ ರಿಸಬಾರದು. ಇಂತಹ ಕಾಮಪ್ರವೃತ್ತಿಯು ದಿಧಿಷೂಪತಿಯೆಂಬ ನಿಂದಾಕಾರಣ

ವಾಗಿ ಅವನ ಅಪಾತ್ರತೆಯನ್ನು ಕಲ್ಪಿಸುವುದು. ಹವ್ಯಕವ್ಯಗಳಿಗೆ ಅರ್ಹನಲ್ಲ. ಕಾಮಕ್ರೀಡೆಯಿಲ್ಲ. ಸಂತತಿ ಜನನವು ಮಾತ್ರ ಅಪೇಕ್ಷಿತವು.

ಪರದಾರೇಷು ಜಾಯೇತೇ ದ್ವೌ ಸುತೌ ಕುಂಡಗೋಲಕೌ ।
ಪತ್ಯೌ ಜೀವತಿ ಕುಂಡಃ ಸ್ಯಾನ್ಮೃತೇ ಭರ್ತರಿ ಗೋಲಕಃ ॥ ೧೭೪

ಕುಂಡ, ಗೋಲಕ ಎಂದು ಎರಡು ಪರಸತಿಯ ಸಂತತಿಯು. ಗಂಡನು ಬದುಕಿರುವಾಗ ವ್ಯಭಿಚಾರದಿಂದ ಹುಟ್ಟಿದವನು ಕುಂಡನು. ಪತಿಯು ಸತ್ತ ಬಳಿಕ ಪರಪುರುಷನಿಂದಾದವನು ಗೋಲಕನು

ತೌ ತು ಜಾತೌ ಪರಕ್ಷೇತ್ರೇ ಪ್ರಾಣಿನೌ ಪ್ರೇತ್ಯ ಚೇಹ ಚ ।
ದತ್ತಾನಿ ಹವ್ಯಕವ್ಯಾನಿ ನಾಶಯೇತೇ ಪ್ರದಾಯಿನಾಂ ॥ ೧೭೫

ಆ ಕುಂಡ, ಗೋಲಕರು ಪರಪುರುಷನಿಗೆ ಪರಸ್ತ್ರೀಯಲ್ಲಿ ಜನಿಸಿದವರು. ಆದುದರಿಂದ ಕಾಮಜ ಪ್ರಾಣಿಗಳು. ಧರ್ಮಜ ಸಂತತಿಯಲ್ಲ. ಅವರ ಸಂಬಂಧವುಳ್ಳ ಹವ್ಯಕವ್ಯಗಳು ನಿಷ್ಫಲ. ಪಾಪರೋಗ, ಬಿಳುಪುರೋಗ, ಅಪಘಾತಗಳಿಂದ ಕುರುಡನು, ಹುಟ್ಟುಕುರುಡನು, ಇವರು ನೋಡಿದರೆ ನೋಡುವಷ್ಟು ಸಮೀಪಕ್ಕೆ ಬಂದರೆ ಸಾವಿರ, ನೂರು, ಅರುವತ್ತು, ತೊಂಬತ್ತು ಮಂದಿ ಸಜ್ಜನರಿಗೆ ಭೋಜನ ದಾನ ಮಾಡಿದ ಫಲವು ನಷ್ಟವಾಗುವುದು. ಅವರು ದೂರ ಇರಬೇಕು. ಆಹ್ವಾನಿಸಬಾರದು. ಅಂಧತ್ವಾದಿಗಳು ಪಾಪ ಜನ್ಮಗಳಿಂದೂ ಅಂತಹ ಪಾಪದಲ್ಲಿ ತಾರತಮ್ಯವಿರುವುದರಿಂದ ಪ್ರಾಯಶ್ಚಿತ್ತವು ತರತಮವಾಗುವುದು.

ಅಪಾಂಕ್ತ್ಯೋ ಯಾವತಃ ಪಾಂಕ್ತ್ಯಾನ್ ಭುಂಜಾನಾನನುಪಶ್ಯತಿ ।
ತಾವತಾಂ ನ ಫಲಂ ತತ್ರ ದಾತಾ ಪ್ರಾಪ್ನೋತಿ ಬಾಲಿಶಃ ॥ ೧೭೬

ಸಹಭೋಜನಕ್ಕೆ ಅನರ್ಹರಾದ ಪಂಕ್ತಿಬಾಹ್ಯರು ಹವ್ಯಕವ್ಯಗಳ, ಭೋಜನ ಕೃತ್ಯಗಳನ್ನು ನೋಡಿದರೆ ಕರ್ಮವು ಭ್ರಷ್ಟವಾಗಿ ಫಲದಾಯಕವಾಗಲಾರದು.

ವೀಕ್ಷ್ಯಾಂಧೋ ನವತೇಃ ಕಾಣಃ ಷಷ್ಟೇಃ ಶ್ವಿತ್ರೀ ಶತಸ್ಯ ತು ।
ಪಾಪರೋಗೀ ಸಹಸ್ರಸ್ಯ ದಾತುರ್ನಾಶಯತೇ ಫಲಂ ॥ ೧೭೭

ಸಾವಿರ, ನೂರು, ಅರುವತ್ತು, ತೊಂಬತ್ತು ಮಂದಿ ಸಜ್ಜನರಿಗೆ ಭೋಜನದಾನ ಫಲವು ನಷ್ಟವಾಗುವುದು. ಪಾಪರೋಗ, ಬಿಳುಪುರೋಗ, ಅಪಘಾತಗಳಿಂದ ಕುರುಡನು, ಹುಟ್ಟುಕುರುಡನು—ಇವರು ಹವ್ಯಕವ್ಯ ಭೋಜನವನ್ನು ನೋಡಬಾರದು ಅಥವಾ ನೋಡುವಷ್ಟು ಸಮೀಪಕ್ಕೆ ಬರಬಾರದು. ಅವರನ್ನು ದೂರ ಇರಿಸಬೇಕು, ಬರಗೊಡಬಾರದು. ಆಹ್ವಾನಿಸಬಾರದು. ಅಂಧತ್ವಾದಿಗಳು ಪಾಪಜನ್ಯಗಳೆಂದೂ ಅಂತಹ ಪಾಪದಲ್ಲಿ ತಾರತಮ್ಯವಿರುವುದರಿಂದ ಪ್ರಾಯಶ್ಚಿತ್ತವು ಏರುಪೇರಾಗುವುದು.

ಯಾವತಃ ಸಂಸ್ಪೃಶೇದಂಗೈರ್ಬ್ರಾಹ್ಮಣಾಞ್ ಶೂದ್ರಯಾಜಕಃ ।
ತಾವತಾಂ ನ ಭವೇದ್ದಾತುಃ ಫಲಂ ದಾನಸ್ಯ ಪೌರ್ತಿಕಂ ॥ ೧೭೮

ಶೂದ್ರರಿಗೆ ದೇವಕಾರ್ಯ ಮಾಡುವವನ ಸಂಬಂಧವು ಹವ್ಯಕವ್ಯಗಳಿಗೆ ಉಂಟಾದರೆ ಅಂತಹ ಶ್ರಾದ್ಧಾದಿಕರ್ಮದಿಂದ ವಿಹಿತ ಫಲವು ಸಿದ್ಧಿಸುವುದಿಲ್ಲ.

ವೇದವಿಚ್ಚಾಪಿ ವಿಪ್ರೋಽಸ್ಯ ಲೋಭಾತ್ಕೃತ್ವಾ ಪ್ರತಿಗ್ರಹಂ ।
ವಿನಾಶಂ ವ್ರಜತಿ ಕ್ಷಿಪ್ರಂ ಆಮಪಾತ್ರಮಿವಾಂಭಸಿ ॥ ೧೭೯

ಮಣ್ಣಿನ ಮಡಿಕೆಯು ಬೆಂಕಿಯಿಂದ ಚೆನ್ನಾಗಿ ಬೇಯದಿದ್ದರೆ ಆ ಮಡಿಕೆ ನೀರಿನಲ್ಲಿ ಕರಗಿ ಮಣ್ಣಾಗುವುದು. ಅದರಂತೆ ಶೂದ್ರಯಾಜಕನಿಂದ ದಾನ ಸ್ವೀಕಾರ ಮಾಡಿದರೆ ಶ್ರೇಯಸ್ಸಿಲ್ಲ. ವೇದಜ್ಞನಾದರೂ ಈ ಪಾಪದಿಂದ ವಿಮುಕ್ತನಾಗುವುದಿಲ್ಲ.

ಸೋಮವಿಕ್ರಯಿಣೇ ವಿಷ್ಠಾ ಭಿಷಜೇ ಪೂಯಶೋಣಿತಂ ।
ನಷ್ಟಂದೇವಲಕೇ ದತ್ತಂ ಅಪ್ರತಿಷ್ಠಂ ತು ವಾರ್ಧುಷೌ ॥ ೧೮೦

ಸೋಮಲತೆಯ (ವಿಕ್ರಯ) ಮಾರಾಟ, ಭಿಷಜ, ದೇವಲ, ಬಡ್ಡಿಯಿಂದ ಬದುಕುವವ ಇವರಿಗೆ ದಾನಮಾಡಿದರೆ ಫಲವಿಲ್ಲ.

ಯತ್ತು ವಾಣಿಜಕೇ ದತ್ತಂ ನೇಹ ನಾಮುತ್ರ ತದ್ಭವೇತ್ ।
ಭಸ್ಮನೀವ ಹುತಂ ಹವ್ಯಂ ತಥಾ ಪೌನರ್ಭವೇ ದ್ವಿಜೇ ॥ ೧೮೧

ವಾಣಿಜ್ಯ ಜೀವಿಯಲ್ಲಿ ಮತ್ತು ಪುನರ್ಭೂಪುತ್ರನಲ್ಲಿ ದಾನ ಮಾಡಿದರೆ ಅದು ಭಸ್ಮಹೋಮದಂತೆ ಸಫಲವಲ್ಲ.

ಇತರೇಷು ತ್ವಪಾಂಕ್ತ್ಯೇಷು ಯಥೋದ್ದಿಷ್ಟೇಷ್ವಸಾಧುಷು ।
ಮೇದೋಸೃಙ್ಮಾಂಸಮಜ್ಜಾಸ್ಥಿ ವದಂತ್ಯನ್ನಂ ಮನೀಷಿಣಃ ॥ ೧೮೨

ಇತರ ಇಂತಹ ಅಸಾಧುಜನರಿಗೆ ದಾನವನ್ನು ಹೋಮ-ಶ್ರಾದ್ಧಗಳಲ್ಲಿ ಮಾಡಿದರೆ ಅದು ಮಾಂಸಾದಿತುಲ್ಯವು ನಿಷ್ಫಲವು.

ಅಪಾಂಕ್ತ್ಯೋಪಹತಾ ಪಂಕ್ತಿಃ ಪಾವ್ಯತೇ ಯೈರ್ದ್ವಿಜೋತ್ತಮೈಃ ।
ತಾನ್ನಿಬೋಧತ ಕಾರ್ತ್ಸ್ನ್ಯೇನ ದ್ವಿಜಾಗ್ರ್ಯಾನ್ ಪಂಕ್ತಿಪಾವನಾನ್ ॥ ೧೮೩

ಯಾರು ಇರುವ ಪಂಕ್ತಿಯು ಪಂಕ್ತಿದೂಷಕರಿಂದ ಕೂಡಿದ್ದಾದರೂ ಪವಿತ್ರವಾಗುವುದೋ—ಅಂತಹವರನ್ನು ಇನ್ನುಮೇಲೆ ವಿವರಿಸುತ್ತೇನೆ.

ಅಗ್ರ್ಯಾಃ ಸರ್ವೇಷು ವೇದೇಷು ಸರ್ವಪ್ರವಚನೇಷು ಚ ।
ಶ್ರೋತ್ರಿಯಾನ್ವಯಜಾಶ್ಚೈವ ವಿಜ್ಞೇಯಾಃ ಪಂಕ್ತಿಪಾವನಾಃ ॥ ೧೮೪

ಮನುಷ್ಯನಲ್ಲಿ ಗ್ರಹಣಧಾರಣ ಶಕ್ತಿಯು ವಿಚಿತ್ರವಾಗಿದೆ, ವಿಲಕ್ಷಣ ವಾಗಿದೆ. ಸಮವಲ್ಲ. ಆದುದರಿಂದ ಅರ್ಥಜ್ಞಾನವಿಲ್ಲದೆ ಚತುರ್ವೇದ ಶಾಖೆ ಗಳನ್ನು ಮುಖಪಾಠ ಮಾಡಿದವರು ಮತ್ತು ಅದರ ವಿವರರೂಪವಾದ ಬ್ರಾಹ್ಮಣ ಭಾಗವನ್ನು ಶುಕಪಾಠ ಮಾಡಿದವರು, ವೇದರಕ್ಷಣೆ, ವಿದ್ಯಾ ಪರಂಪರೆಯ ದೃಷ್ಟಿಯಿಂದ ವೇದಪಾರವು ಮುಖ್ಯವು. ಸ್ಮರಣಶಕ್ತಿಯು ಉಲ್ಬಣವು. ಸಂಪ್ರದಾಯಾಭಿಮಾನವು ಪೂಜ್ಯತಾಹೇತು. ಪುತ್ರಪೌತ್ರಾದಿ ಕ್ರಮೇಣ ಹತ್ತು ಸಂತತಿಗೆ ಕಡಿಮೆಯಿಲ್ಲದಷ್ಟು ತಪ್ಪದೆ ಸ್ವಶಾಖೆಯನ್ನು ಕಂಠಪಾಠಮಾಡಿದವರು—ಇವರು ಪೂಜ್ಯರು. ಪಂಕ್ತಿಪಾವನರು.

ತ್ರಿಣಾಚಿಕೇತಃ ಪಂಚಾಗ್ನಿಸ್ತ್ರಿಸುಪರ್ಣಃ ಷಡಂಗವಿತ್ ।
ಬ್ರಹ್ಮದೇಯಾತ್ಮಸಂತಾನೋ ಜ್ಯೇಷ್ಠಸಾಮಗ ಏವ ಚ ॥ ೧೮೫

ಯಜುರ್ವೇದದ ಕೆಲವು ಮಂತ್ರ, ಅದರ ವ್ರತ ಈ ಎರಡು ಉಳ್ಳ ವರು. ಅಗ್ನಿಹೋತ್ರಿಯು, ಋಗ್ವೇದದ ಕೆಲವು ಮಂತ್ರಗಳು ಅದರ ವ್ರತ

ಉಳ್ಳವರು. ಶಿಕ್ಷಾದಿ (ಆರು) ಷಡಂಗಗಳ ಜ್ಞಾನಉಳ್ಳವರು. ಬ್ರಾಹ್ಮವಿವಾಹ ಸಂತತಿ, ಜ್ಯೇಷ್ಠಸಾಮವೆಂಬ ಆರಣ್ಯಕ ಅಧ್ಯಾಯಿಗಳು—ಪಂಕ್ತಿಪಾವನರು.

ವೇದಾರ್ಥವಿತ್ಪ್ರವಕ್ತಾ ಚ ಬ್ರಹ್ಮಚಾರೀ ಸಹಸ್ರದಃ ।
ಶತಾಯುಶ್ಚೈವ ವಿಜ್ಞೇಯಾ ಬ್ರಾಹ್ಮಣಾಃ ಪಂಕ್ತಿಪಾವನಾಃ ॥ ೧೮೬

ಸಕಲವೇದಗಳ ಅರ್ಥಪರಿಜ್ಞಾನ ಉಳ್ಳವರು. ಮತ್ತು ವೇದಶಾಸ್ತ್ರಗಳ ಪ್ರವಚನ ಶಕ್ತಿಯುಳ್ಳವರು, ಬ್ರಹ್ಮಸಾಧನೆಯಲ್ಲಿ ನಿರತರಾದವರು, ಸಾವಿರ ಗೋದಾನ ಮಾಡಿದವರು, ದಾನಶೂರರು, ನೂರು ವಯಸ್ಸಿನವರು ಪಂಕ್ತಿಪಾವನರು.

ಪೂರ್ವೇದ್ಯುರಪರೇದ್ಯುರ್ವಾ ಶ್ರಾದ್ಧಕರ್ಮಣ್ಯುಪಸ್ಥಿತೇ ।
ನಿಮಂತ್ರಯೇತ ತ್ರ್ಯವರಾನ್ ಸಮ್ಯಗ್ವಿಪ್ರಾನ್ಯಥೋದಿತಾನ್ ॥ ೧೮೭

ಶ್ರಾದ್ಧದಿನ ಅಥವಾ ಆದರ ಹಿಂದಿನ ದಿನ ಬ್ರಾಹ್ಮಣರನ್ನು ಶ್ರಾದ್ಧಕ್ಕೆ ಕರೆಯಬೇಕು. ಸಂಖ್ಯಾವಿಷಯವನ್ನು ಹಿಂದೆ ಹೇಳಿದೆ.

ನಿಮಂತ್ರಿತೋ ದ್ವಿಜಃ ಪಿತ್ರ್ಯೇ ನಿಯತಾತ್ಮಾ ಭವೇತ್ಸದಾ ।
ನ ಚ ಛಂದಾಂಸ್ಯಧೀಯೀತ ಯಸ್ಯ ಶ್ರಾದ್ಧಂ ಚ ತದ್ಭವೇತ್ ॥ ೧೮೮

ಶ್ರಾದ್ಧ ಕೃತೃ ಮತ್ತು ಭೋಕ್ತೃ ಬ್ರಾಹ್ಮಣ ಇವರು ಪೂರ್ವದಿನದ ನಿಮಂತ್ರಣದ ಬಳಿಕ ಕಾಮಾಸಕ್ತರಾಗಬಾರದು. ನಿತ್ಯಕರ್ಮ ಹೊರತು ವೇದಾಧ್ಯಯನವನ್ನು ಮಾಡಬಾರದು.

ನಿಮಂತ್ರಿತಾನ್ ಹಿ ಪಿತರ ಉಪತಿಷ್ಠಂತಿ ತಾನ್ ದ್ವಿಜಾನ್ ।
ವಾಯುವಚ್ಚಾನುಗಚ್ಛಂತಿ ತಥಾಸೀನಾನುಪಾಸತೇ ॥ ೧೮೯

ಶ್ರಾದ್ಧ ನಿಮಂತ್ರಿತ ಬ್ರಾಹ್ಮಣರ ಹಿಂದಿನಿಂದ ಪಿತೃಗಳು ಹಿಂಬಾಲಿಸುತ್ತಾರೆ. ಅವರಲ್ಲಿ ವಾಸಿಸುತ್ತಾರೆ. ಆದುದರಿಂದ ಬ್ರಾಹ್ಮಣರು ಲೋಭಕ್ರೋಧ-ಕಾಮವಶರಾಗದೆ ನಿಯತೇಂದ್ರಿಯರಾಗಬೇಕು.

ಕೇತಿತಸ್ತು ಯಥಾನ್ಯಾಯಂ ಹವ್ಯಕವ್ಯೇ ದ್ವಿಜೋತ್ತಮಃ ।
ಕಥಂಚಿದಪ್ಯತಿಕ್ರಾಮನ್ ಪಾಪಃ ಸೂಕರತಾಂ ವ್ರಜೇತ್ ॥ ೧೯೦

ಮೇಲಿನ ನಿಯಮವನ್ನು ಮೀರಿದ ಶ್ರಾದ್ಧನಿಮಂತ್ರಿತನು, ದೇವ ಕಾರ್ಯಾಹೂತನು, ಕರ್ಮಕಾಲಕ್ಕೆ ಬಾರದವನು, ಸ್ವೈರವೃತ್ತಿಯ ದೋಷ ದಿಂದ ಅಂತಹ ಊರಹಂದಿಯ (ಸೂಕರ) ಜನ್ಮವನ್ನು ಹೊಂದಲು ತಕ್ಕವನು.

ಆಮಂತ್ರಿತಸ್ತು ಯಃ ಶ್ರಾದ್ಧೇ ವೃಷಲ್ಯಾ ಸಹ ಮೋದತೇ ।
ದಾತುರ್ಯದ್ದುಷ್ಕೃತಂ ಕಿಂಚಿತ್ತತ್ಸರ್ವಂ ಪ್ರತಿಪದ್ಯತೇ ॥ ೧೯೧

ಶ್ರಾದ್ಧನಿಮಂತ್ರಿತನು ನೀಚಸ್ತ್ರೀಯ ಸಂತೋಷವನ್ನು ಬಯಸಿದರೆ ತುಂಬ ಪಾಪವುಂಟಾಗುವುದು.

ಸಕ್ರೋಧನಾಃ ಶೌಚಪರಾಃ ಸತತಂ ಬ್ರಹ್ಮಚಾರಿಣಃ ।
ನ್ಯಸ್ತಶಸ್ತ್ರಾ ಮಹಾಭಾಗಾಃ ಪಿತರಃ ಪೂರ್ವದೇವತಾಃ ॥ ೧೯೨

ದೇವರೂಪ ಪಿತೃಗಳು ಕ್ರೋಧರಹಿತರು, ಶುಚಿವಂತರು, ಬ್ರಹ್ಮಚಾರಿ ಗಳು, ಆಯುಧಹೀನರು, ದಯಾದಿಗುಣಘನರು. ಅವರ ಅರ್ಚನೆಯಲ್ಲಿ ಸಂಬಂಧಿಗಳಾದ ಕರ್ತೃಭೋಕ್ತೃಗಳೂ ಶುದ್ಧರಾಗಿರಬೇಕು.

ಯಸ್ಮಾದುತ್ಪತ್ತಿರೇತೇಷಾಂ ಸರ್ವೇಷಾಮಪ್ಯಶೇಷತಃ ।
ಯೇ ಚ ಯೈರುಪಚರ್ಯಾಃ ಸ್ಯುರ್ನಿಯಮೈಸ್ತಾನ್ನಿಬೋಧತ ॥ ೧೯೩

ಎಲ್ಲ ಪಿತೃಗಳ ಉತ್ಪತ್ತಿ–ಉಪಚಾರ–ನಿಯಮ ಎಲ್ಲ ವಿವರಗಳನ್ನು ತಿಳಿಸುತ್ತೇನೆ.

ಮನೋರ್ಹೈರಣ್ಯಗರ್ಭಸ್ಯ ಯೇ ಮರೀಚ್ಯಾದಯಃ ಸುತಾಃ ।
ತೇಷಾಮೃಷೀಣಾಂ ಸರ್ವೇಷಾಂ ಪುತ್ರಾಃ ಪಿತೃಗಣಾಃ ಸ್ಮೃತಾಃ ॥ ೧೯೪

ಹಿರಣ್ಯಗರ್ಭ, ಮನುವಿನ ಮಕ್ಕಳು, ಮರೀಚ್ಯಾದಿಗಳು ಎಲ್ಲ ಪಿತೃಗಳು ಅವರ ಮಕ್ಕಳು ಅವರ ಹೆಸರು—

ವಿರಾಟ್ಸುತಾಃ ಸೋಮಸದಃ ಸಾಧ್ಯಾನಾಂ ಪಿತರಃ ಸ್ಮೃತಾಃ ।
ಅಗ್ನಿಷ್ವಾತ್ತಾಶ್ಚ ದೇವಾನಾಂ ಮಾರೀಚಾ ಲೋಕವಿಶ್ರುತಾಃ ॥ ೧೯೫

ವಿರಾಟ್ಸಂಭೂತರಾದ ಸೋಮಸದರು, ಸಾಧ್ಯರ ಪಿತೃಗಳು, ಮರೀಚಿ ಪುತ್ರ, ಅಗ್ನಿಷ್ವಾತ್ತರು, ದೇವಪಿತೃಗಳು, ಲೋಕಪ್ರಬದ್ಧರು;

ದೈತ್ಯದಾನವಯಕ್ಷಾಣಾಂ ಗಂಧರ್ವೋರಗರಕ್ಷಸಾಂ ।
ಸುಪರ್ಣಕಿನ್ನರಾಣಾಂ ಚ ಸ್ಮೃತಾ ಬರ್ಹಿಷದೋಽತ್ರಿಜಾಃ । ೧೯೬

ಅತ್ರಿಪುತ್ರರಾದ ಬರ್ಹಿಷದ ಪಿತೃಗಳು, ದೈತ್ಯ, ದಾನವ, ಗಂಧರ್ವ, ಉರಗ, ರಕ್ಷಸ್, ಸುವರ್ಣ, ಕಿನ್ನರರಿಗೆ ಪಿತೃಗಳು.

ಸೋಮಪಾ ನಾಮ ವಿಪ್ರಾಣಾಂ ಕ್ಷತ್ರಿಯಾಣಾಂ ಹವಿರ್ಭುಜಃ ।
ವೈಶ್ಯಾನಾಮಾಜ್ಯಪಾ ನಾಮ ಶೂದ್ರಾಣಾಂ ತು ಸುಕಾಲಿನಃ ॥ ೧೯೭

ವಿಪ್ರರಿಗೆ ಸೋಮಪರು, ಕ್ಷತ್ರಿಯರಿಗೆ ಹವಿರ್ಭುಜರು, ವೈಶ್ಯರಿಗೆ ಆಜ್ಯಪರು, ಶೂದ್ರರಿಗೆ ಸುಕಾಲಿಗಳು ಪಿತೃಗಳು.

ಸೋಮಪಾಸ್ತು ಕವೇಃ ಪುತ್ರಾ ಹವಿಷ್ಮಂತೋಽಂಗಿರಃಸುತಾಃ ।
ಪುಲಸ್ತ್ಯಸ್ಯಾಜ್ಯಪಾಃ ಪುತ್ರಾ ವಸಿಷ್ಠಸ್ಯ ಸುಕಾಲಿನಃ ॥ ೧೯೮

ಸೋಮಪರು ಶುಕ್ರನ, ಹವಿಷ್ಮಂತರು ಅಂಗಿರಸ್ಸಿನ, ಆಜಪ್ಯರು ಪುಲಸ್ತ್ಯನ, ಸುಕಾಲಿಗಳು ವಸಿಷ್ಠನ ಮಕ್ಕಳು.

ಅಗ್ನಿದಗ್ಧಾನಗ್ನಿದಗ್ಧಾನ್ ಕಾವ್ಯಾನ್ ಬರ್ಹಿಷದಸ್ತಥಾ ।
ಅಗ್ನಿಷ್ವಾತ್ತಾಂಶ್ಚ ಸೌಮ್ಯಾಂಶ್ಚ ವಿಪ್ರಾಣಾಮೇವ ನಿರ್ದಿಶೇತ್ ॥ ೧೯೯

ಅಗ್ನಿದಗ್ಧ, ಅನಗ್ನಿದಗ್ಧ, ಕಾವ್ಯ, ಬರ್ಹಿಷದ್, ಅಗ್ನಿಷ್ವಾತ್ತ, ಸೌಮ್ಯ ಎಂಬ ಹೆಸರಿನ ದೇವತೆಗಳು ವಿಪ್ರರ ಪಿತೃಗಳೇ.

ಯ ಏತೇ ತು ಗಣಾ ಮುಖ್ಯಾಃ ಪಿತೃಣಾಂ ಪರಿಕೀರ್ತಿತಾಃ ।
ತೇಷಾಮಪೀಹ ವಿಜ್ಞೇಯಂ ಪುತ್ರಪೌತ್ರಮನಂತಕಂ ॥ ೨೦೦

ಹಿಂದೆ ಹೇಳಿದವು ಪ್ರಧಾನ ಪಿತೃವರ್ಗವು. ಅವರ ಪುತ್ರಪೌತ್ರ ಸಂತತಿಯೂ ತುಂಬ ಇದೆ.

ಋಷಿಭ್ಯಃ ಪಿತರೋ ಜಾತಾಃ ಪಿತೃಭ್ಯೋ ದೇವಮಾನವಾಃ ।
ದೇವೇಭ್ಯಸ್ತು ಜಗತ್ಸರ್ವಂ ಚರಂ ಸ್ಥಾಣ್ವನುಪೂರ್ವಶಃ ॥ ೨೦೧

ಋಷಿಗಳಿಂದ ಪಿತೃಗಳು, ಪಿತೃಗಳಿಂದ ದೇವತೆಗಳು-ಮನುಷ್ಯರು, ದೇವತೆಗಳಿಂದ ಸ್ಥಾವರ ಜಂಗಮ ಸಕಲಜಗತ್ ಉಂಟಾಗುವುದು.

ರಾಜತೈರ್ಭಾಜನೈರೇಷಾಮಥೋ ವಾ ರಾಜತಾನ್ವಿತೈಃ ।
ವಾರ್ಯಪಿ ಶ್ರದ್ಧಯಾ ದತ್ತಮಕ್ಷಯಾಯೋಪಕಲ್ಪತೇ ॥ ೨೦೨

ಈ ಪಿತೃಗಳಿಗೆ ಬೆಳ್ಳಿಯ, ಬೆಳ್ಳಿಬೆರಸಿದ ಪಾತ್ರದಲ್ಲಿ ಶ್ರದ್ಧೆಯಿಂದ ನೀರು ಕೊಟ್ಟರೂ ತೃಪ್ತಿಯಾಗುವುದು. ಪಾಯಸಾದಿಗಳು, ನಮ್ಮ ಪ್ರಿಯಾನ್ನಗಳು ನಮ್ಮ ಕೃತಜ್ಞತೆಯ ಲಕ್ಷಣಗಳು. ಆದರಿಂದಲೂ ಅವರಿಗೆ ಪ್ರೀತಿಯು.

ದೇವಕಾರ್ಯಾದ್ದ್ವಿಜಾತೀನಾಂ ಪಿತೃಕಾರ್ಯಂ ವಿಶಿಷ್ಯತೇ ।
ದೈವಂ ಹಿ ಪಿತೃಕಾರ್ಯಸ್ಯ ಪೂರ್ವಮಾಪ್ಯಾಯನಂ ಸ್ಮೃತಂ ॥ ೨೦೩

ದ್ವಿಜನ್ಮರಿಗೆ ಪಿತೃಕಾರ್ಯವು ದೇವಕಾರ್ಯಕ್ಕಿಂತಲೂ ವಿಶೇಷವು. ಪಿತೃಕಾರ್ಯಕ್ಕೆ ದೇವಕಾರ್ಯವು ಪರಿಪೂರಕವಾಗಿದೆ.

ತೇಷಾಮಾರಕ್ಷಭೂತಂ ತು ಪೂರ್ವಂ ದೈವಂ ನಿಯೋಜಯೇತ್ ।
ರಕ್ಷಾಂಸಿ ಹಿ ವಿಲುಂಪಂತಿ ಶ್ರಾದ್ಧಮಾರಕ್ಷವರ್ಜಿತಂ ॥ ೨೦೪

ದೇವಕಾರ್ಯವು ಪಿತೃಕಾರ್ಯಕ್ಕೆ ರಕ್ಷಾಬಂಧವಾಗಿದೆ. ರಕ್ಷೆಯಿಲ್ಲದ ಕಾರ್ಯವು ರಾಕ್ಷಸಾಧೀನವಾಗುವುದು.

ದೈವಾದ್ಯಂತಂ ತದೀಹೇತ ಪಿತ್ರಾದ್ಯಂತಂ ನ ತದ್ಭವೇತ್ ।
ಪಿತ್ರಾದ್ಯಂತಂ ತ್ವೀಹಮಾನಃ ಕ್ಷಿಪ್ರಂ ನಶ್ಯತಿ ಸಾನ್ವಯಃ ॥ ೨೦೫

ಪಿತೃಕಾರ್ಯವು ಆದ್ಯಂತದಲ್ಲಿ ದೇವಕಾರ್ಯದಿಂದ ಅಲಂಕರಿಸಲ್ಪಡಬೇಕು. ವಿರುದ್ಧವಾದರೆ ಯಶಸ್ಸಿಲ್ಲ.

ಶುಚಿಂ ದೇಶಂ ವಿವಿಕ್ತಂ ಚ ಗೋಮಯೇನೋಪಲೇಪಯೇತ್ |
ದಕ್ಷಿಣಾಪ್ರವಣಂ ಚೈವ ಪ್ರಯತ್ನೇನೋಪಪಾದಯೇತ್ || ೨೦೬

(ನಿರ್ಜನವಾದ) ಜನ ಸಂಚಾರವಿಲ್ಲದ ಪರಿಶುದ್ಧ ಸ್ಥಳದಲ್ಲಿ ಸಗಣಿ ಸಾರಿಸಬೇಕು. ಆ ಸ್ಥಳವು ತೆಂಕಲು ತಗ್ಗಾಗಿ ರಚಿಸಬೇಕು.

ಅವಕಾಶೇಷು ಚೋಕ್ಷೇಷು ನದೀತೀರೇಷು ಚೈವ ಹಿ |
ವಿವಿಕ್ತೇಷು ಚ ತುಷ್ಯಂತಿ ದತ್ತೇನ ಪಿತರಃ ಸದಾಃ || ೨೦೭

ಶ್ರಾದ್ಧಪ್ರದೇಶವು ಜಲೋದ್ಗಮ, ನದೀರಟ, ಪ್ರಶಾಂತ ಸ್ಥಳವಾಗಿರಬೇಕು. ಪಿತೃಗಳಿಗೆ ಇದು ಸಂತೋಷ ಸ್ಥಾನವು.

ಆಸನೇಷೂಪಕ್ಲೃಪ್ತೇಷು ಬರ್ಹಿಷ್ಮತ್ಸು ಪೃಥಕ್ಪೃಥಕ್ |
ಉಪಸ್ಪೃಷ್ಟೋದಕಾನ್ ಸಮ್ಯಗ್ವಿಪ್ರಾಂಸ್ತಾನುಪವೇಶಯೇತ್ || ೨೦೮

ಅಂತಹ ಪವಿತ್ರ ಸ್ಥಳದಲ್ಲಿ ದರ್ಭೆ ಹಾಸಿ ಆಸನಗಳನ್ನು ಪರಿಷ್ಕರಿಸಬೇಕು. ಸ್ನಾನಾಚಮನ ಮಾಡಿದ ಬ್ರಾಹ್ಮಣರನ್ನು ಅದರಲ್ಲಿ ಕುಳ್ಳಿರಿಸಬೇಕು.

ಉಪವೇಶ್ಯ ತು ತಾನ್ವಿಪ್ರಾನಾಸನೇಷ್ವಜುಗುಪ್ಸಿತಾನ್ |
ಗಂಧಮಾಲ್ಯೈಃ ಸುರಭಿಭಿರರ್ಚಯೇದ್ದೈವಪೂರ್ವಕಂ || ೨೦೯

ಅಂತಹ ರೀತಿ ಆ ಸನೋವಿಷ್ಟರಾದ ಬ್ರಾಹ್ಮಣರನ್ನು ಸುರಭಿಗಂಧಯುಕ್ತಗಳಾದ ಮಾಲೆಗಳಿಂದ ಅಲಂಕರಿಸಬೇಕು.

ತೇಷಾಮುದಕಮಾನೀಯ ಸಪವಿತ್ರಾಂಸ್ತಿಲಾನಪಿ |
ಅಗ್ನೌ ಕುರ್ಯಾದನುಜ್ಞಾತೋ ಬ್ರಾಹ್ಮಣೋ ಬ್ರಾಹ್ಮಣೈಃ ಸಹ || ೨೧೦

ತಿಲಪವಿತ್ರಯುಕ್ತವಾಗಿ ಅವರಿಗೆ ಉದಕದಾನ ಮಾಡಿ ಅವರ ಅನುಜ್ಞೆಯಿಂದ ಮುಂದೇ ಹೇಳುವ ದೇವತೆಗಳಿಗೆ ಹೋಮಮಾಡಬೇಕು. ಮತ್ತು ಬ್ರಾಹ್ಮಣ ಭೋಜನವು.

ಅಗ್ನೇಃ ಸೋಮಯಮಾಭ್ಯಾಂ ಚ ಕೃತ್ವಾಪ್ಯಾಯನಮಾದಿತಃ |
ಹವಿರ್ದಾನೇನ ವಿಧಿವತ್ಪಶ್ಚಾತ್ಸಂತರ್ಪಯೇತ್ಪಿತೄನ್ || ೨೧೧

ಅಗ್ನಿ, ಸೋಮ, ಯಮ ಈ ದೇವತೆಗಳನ್ನು ವಿಧಿಪೂರ್ವಕವಾಗಿ ಆಹುತಿ ದಾನದಿಂದ ಸಂತುಷ್ಟ ಪಡಿಸಿ, ನಂತರ ಪಿತೃತರ್ಪಣ ಮಾಡಬೇಕು.

ಅಗ್ನ್ಯಭಾವೇ ತು ವಿಪ್ರಸ್ಯ ಪಾಣಾವೇವೋಪಪಾದಯೇತ್ ।
ಯೋ ಹ್ಯಗ್ನಿಃ ಸ ದ್ವಿಜೋ ವಿಪ್ರೈರ್ಮಂತ್ರದರ್ಶಿಭಿರುಚ್ಯತೇ ॥ ೨೧೨

ವಿಧುರನು, ಬ್ರಹ್ಮಚಾರಿಯು, ಅಗ್ನಿಶೂನ್ಯರು, ಅಗ್ನೌಕರಣ ಹೋಮ ಮಾಡುವಾಗ ಅಗ್ನಿಯು ಇಲ್ಲದಿರುವುದರಿಂದ ಬ್ರಾಹ್ಮಣನ ಕೈಯಲ್ಲಿ ಆಹುತಿ ಹಾಕಬೇಕು. ಅಗ್ನಿದೇವನೇ ಬ್ರಾಹ್ಮಣಾವತಾರವೆಂದು ಮಂತ್ರಜ್ಞರಮತ.

ಅಕ್ರೋಧನಾನ್ ಸುಪ್ರಸಾದಾನ್ ವದಂತ್ಯೇತಾನ್ ಪುರಾತನಾನ್ ।
ಲೋಕಸ್ಯಾಪ್ಯಾಯನೇ ಯುಕ್ತಾ ಞ್ಛ್ರಾದ್ಧದೇವಾನ್ದ್ವಿಜೋತ್ತಮಾನ್॥ ೨೧೩

ದ್ವಿಜೋತ್ತಮರು ಅಕ್ರೋಧನ ಸುಪ್ರಸಾದ ಪುರಾತನ ಲೋಕದ ಜೀವನಕ್ಕೆ ಆಧಾರವಾದ ಶ್ರಾದ್ಧದೇವರು ಎಂದು ಮನುಮತವು.

ಅಪಸವ್ಯಮಗ್ನೌ ಕೃತ್ವಾ ಸರ್ವಮಾವೃತ್ಯ ವಿಕ್ರಮಮ್ ।
ಅಪಸವ್ಯೇನ ಹಸ್ತೇನ ನಿರ್ವಪೇದುದಕಂ ಭುವಿ ॥ ೨೧೪

ಪ್ರದಕ್ಷಿಣಾವೃತ್ತವಾಗಿ ಅಗ್ನೌಕರಣ ಹೋಮವನ್ನು ಮಾಡಿ ಬಲಗೈ ಯಿಂದ ಪಿಂಡಭೂಮಿಯ ಮೇಲೆ ಉದಕದಾನವನ್ನು ಮಾಡಬೇಕು.

ತ್ರೀಂಸ್ತು ತಸ್ಮಾದ್ಧವಿಃಶೇಷಾತ್ಪಿಂಡಾನ್ ಕೃತ್ವಾ ಸಮಾಹಿತಃ ।
ಔದಕೇನೈವ ವಿಧಿನಾ ನಿರ್ವಪೇದ್ದಕ್ಷಿಣಾಮುಖಃ ॥ ೨೧೫

ಆ ಹೋಮಶೇಷದಿಂದ ಮೂರು ಪಿಂಡವನ್ನು ಮಾಡಿ ದಕ್ಷಿಣಾಮುಖ ನಾಗಿ ಕುಳಿತು ದರ್ಭೆಗಳ ಮೇಲೆ ಪಿಂಡಪ್ರದಾನವನ್ನು ಮಾಡಬೇಕು.

ನ್ಯುಪ್ಯ ಪಿಂಡಾಂಸ್ತತಸ್ತಾಂಸ್ತು ಪ್ರಯತೋ ವಿಧಿಪೂರ್ವಕಂ ।
ತೇಷು ದರ್ಭೇಷು ತಂ ಹಸ್ತಂ ನಿಮೃಜ್ಯಾಲ್ಲೇಪಭಾಗಿನಾಂ ॥ ೨೧೬

ಗೃಹ್ಯಸೂತ್ರದಲ್ಲಿ ಹೇಳಿದ ಪ್ರಕಾರ ಪಿಂಡಹಾಕಿದ ಮೇಲೆ ಅದೇ ದರ್ಭೆ ಗಳಿಂದ ಕೈಯನ್ನು ಒರೆಸಬೇಕು. ಅದು ಪಿಂಡಲೇಪಭೋಜಿಗಳಾದ ಪಿತೃ ಗಳಿಗೆ ಸಲ್ಲುವುದು.

ಆಚಮ್ಯೋದಕ್‌ಪರಾವೃತ್ಯ ತ್ರಿರಾಯಮ್ಯ ಶನೈರಸೂನ್ ।
ಷಡೃತೂಂಶ್ಚ ನಮಸ್ಕುರ್ಯಾತ್ ಪಿತೄನೇವ ಚ ಮಂತ್ರವಿತ್ ॥ ೨೧೭

ಆಚಮನ ಮಾಡಿದ ಮೇಲೆ ಉತ್ತರ ಮುಖನಾಗಿ ಮೂರು ಪ್ರಾಣಾ ಯಾಮಗಳನ್ನು ಮಾಡಿ–ಆರು ಋತುಗಳನ್ನು, ಪಿತೃಗಳನ್ನು ಮಂತ್ರಪೂರ್ವಕ ವಾಗಿ ನಮಸ್ಕರಿಸಬೇಕು.

ಉದಕಂ ನಿನಯೇಚ್ಛೇಷಂ ಶನೈಃ ಪಿಂಡಾಂತಿಕೇ ಪುನಃ ।
ಅವಜಿಘ್ರೇಚ್ಚ ತಾನ್ಪಿಂಡಾನ್ಯಥಾನ್ಯುಪ್ತಾನ್ಸಮಾಹಿತಃ ॥ ೨೧೮

ಉಳಿದ ನೀರನ್ನು ಪ್ರತಿ ಪಿಂಡದ ಬಳಿಯಲ್ಲಿ ಸುರಿಸಬೇಕು. ಪುನಃ ಸಮಾಧಾನದಿಂದ ಕ್ರಮೇಣ ಅವುಗಳನ್ನು ಆಘ್ರಾಣಿಸಬೇಕು.

ಪಿಂಡೇಭ್ಯಸ್ತ್ವಲ್ಪಿಕಾಂ ಮಾತ್ರಾಂ ಸಮಾದಾಯಾನುಪೂರ್ವಶಃ ।
ತೇನೈವ ವಿಪ್ರಾನಾಸೀನಾನ್ವಿಧಿವತ್ಪೂರ್ವಮಾಶಯೇತ್ ॥ ೨೧೯

ಪಿಂಡಗಳ ಚೂರನ್ನು ಕ್ರಮವಾಗಿ ತೆಗೆದು ಅದನ್ನು ಬ್ರಾಹ್ಮಣರಿಗೆ ಭೋಜನ ಪಾತ್ರಗಳಲ್ಲಿ ಬಡಿಸಬೇಕು. ಅವರು ಉಣ್ಣಬೇಕು.

ಧ್ರಿಯಮಾಣೇ ತು ಪಿತರಿ ಪೂರ್ವೇಷಾಮೇವ ನಿರ್ವಪೇತ್ ।
ವಿಪ್ರವದ್ವಾಪಿ ತಂ ಶ್ರಾದ್ಧೇ ಸ್ವಕಂ ಪಿತರಮಾಶಯೇತ್ ॥ ೨೨೦

ಪಿತೃ ಜೀವಂತನಿರುವಾಗ ಶ್ರಾದ್ಧ ಮಾಡಬೇಕಾದರೆ ಹಿಂದಿನ ಪಿತೃಗಳಿಗೆ ಮಾತ್ರ ಪಿಂಡದಾನವು. ಜೀವಂತನನ್ನು ಬ್ರಾಹ್ಮಣನಂತೆ ಭೋಜನ ಮಾಡಿಸಲೂಬಹುದು.

ಪಿತಾ ಯಸ್ಯ ನಿವೃತ್ತಃ ಸ್ಯಾಜ್ಜೀವೇಚ್ಚಾಪಿ ಪಿತಾಮಹಃ ।
ಪಿತುಃ ಸ ನಾಮ ಸಂಕೀರ್ತ್ಯ ಕೀರ್ತಯೇತ್ಪ್ರಪಿತಾಮಹಂ ॥ ೨೨೧

ತಂದೆಯು ಸತ್ತು ಅಜ್ಜನು ಬದುಕಿರುವಾಗ ಅವನನ್ನು ಬಿಟ್ಟು ನಂತರದ ಇಬ್ಬರು ಮತ್ತು ತಂದೆ ಹೀಗೆ ಮೂವರಿಗೆ ಪಿಂಡದಾನವು.

ಪಿತಾಮಹೋ ವಾ ತಚ್ಛ್ರಾದ್ಧಂ ಭುಂಜೀತೇತ್ಯಬ್ರವಿನ್ಮನುಃ ।
ಕಾಮಂ ವಾ ಸಮನುಜ್ಞಾತಃ ಸ್ವಯಮೇವ ಸಮಾಚರೇತ್ ॥ ೨೨೨

ಬದುಕಿರುವ ಅಜ್ಜನನ್ನು ಬ್ರಾಹ್ಮಣರಂತೆ ಉಣ್ಣಿಸಲೂಬಹುದು. ಅಜ್ಜನ ಸಮ್ಮತಿಯಿಂದ ಉಳಿದವರಿಗೆ ಶ್ರಾದ್ಧಮಾಡಬಹುದು.

ತೇಷಾಂ ದತ್ವಾ ತು ಹಸ್ತೇಷು ಸಪವಿತ್ರಂ ತಿಲೋದಕಂ ।
ತತ್ಪಿಂಡಾಗ್ರಂ ಪ್ರಯಚ್ಛೇತ ಸ್ವಧೈಷಾಮಸ್ತ್ವಿತಿ ಬ್ರುವನ್ ॥ ೨೨೩

ಪವಿತ್ರಸಹಿತ ಉದಕವನ್ನು ಬ್ರಾಹ್ಮಣ ಹಸ್ತದಲ್ಲಿ ಕೊಟ್ಟು ಆಗ ಹೇಳಿದಂತೆ ಪಿಂಡಭಾಗವನ್ನು ಸ್ವಧಾಪದದೊಡನೆ ದಾನ ಮಾಡಬೇಕು.

ಪಾಣಿಭ್ಯಾಂ ತೂಪಸಂಗೃಹ್ಯ ಸ್ವಯಮನ್ನಸ್ಯ ವರ್ಧಿತಂ ।
ವಿಪ್ರಾಂತಿಕೇ ಪಿತೄನ್ಧ್ಯಾಯನ್ ಶನಕೈರುಪನಿಕ್ಷಿಪೇತ್ ॥ ೨೨೪

ಪಕ್ವಾನ್ನಗಳನ್ನು ಪಾತ್ರದಲ್ಲಿ ತುಂಬಿತಂದು ಬ್ರಾಹ್ಮಣ ಸಮೀಪದಲ್ಲಿ ಪಿತೃಧ್ಯಾನ ಪೂರ್ವಕವಾಗಿ ಜೋಡಿಸಬೇಕು.

ಉಭಯೋರ್ಹಸ್ತಯೋರ್ಮುಕ್ತಂ ಯದನ್ನಮುಪನೀಯತೇ ।
ತದ್ವಿಪ್ರಲುಂಪಂತ್ಯಸುರಾಃ ಸಹಸಾ ದುಷ್ಟಚೇತಸಃ ॥ ೨೨೫

ಬ್ರಾಹ್ಮಣರಿಗೆ ಬಡಿಸುವಾಗ ಒಂದು ಕೈಯಿಂದ ತರಬಾರದು. ಅದನ್ನು ಅಸುರರು ಅಪಹರಿಸುತ್ತಾರೆ. ಆದುದರಿಂದ ಎರಡು ಕೈಗಳಿಂದ ಹಿಡಿದು ತರಬೇಕು.

ಗುಣಾಂಶ್ಚ ಸೂಪಶಾಕಾದ್ಯಾನ್ ಪಯೋ ದಧಿ ಘೃತಂ ಮಧು ।
ವಿನ್ಯಸೇತ್ಪ್ರಯತಃ ಪೂರ್ವಂ ಭೂಮಾವೇವ ಸಮಾಹಿತಃ ॥ ೨೨೬

ಹಾಲು, ಮೊಸರು, ತುಪ್ಪ, ಜೇನು, ತೊವೆ, ಮೇಲೋಗರಗಳನ್ನು ಬಳಿಯಲ್ಲಿ ನೆಲದಮೇಲಿಡಬೇಕು. ಎತ್ತರದಲ್ಲಿ ತಗಲಿಸಬಾರದು.

ಭಕ್ಷ್ಯಂ ಭೋಜ್ಯಂ ಚ ವಿವಿಧಂ ಮೂಲಾನಿ ಚ ಫಲಾನಿ ಚ ।
ಹೃದ್ಯಾನಿ ಚೈವ ಮಾಂಸಾನಿ ಪಾನಾನಿ ಸುರಭೀಣಿ ಚ ॥ ೨೨೭

ಉಪನೀಯ ತು ತತ್ಸರ್ವಂ ಶನಕೈಃ ಸುಸಮಾಹಿತಃ ।
ಪರಿವೇಷಯೀತ ಪ್ರಯತೋ ಗುಣಾನ್ಸರ್ವಾನ್ಪ್ರಚೋದಯನ್ ॥ ೨೨೮

ಚಕ್ಕುಲಿ, ಪಾಯಸ, ಹಣ್ಣು–ಹಂಪಲು, ಗಡ್ಡೆ–ಗೆಣಸು, ಸುಗಂಧಿ ಪಾನೀಯ—ಎಲ್ಲ ಬಳಿಗೆ ತಂದಿಟ್ಟು ಸಮಾಧಾನದಿಂದ ವಸ್ತುಗಳ ರುಚಿ, ರಸ, ಗುಣವರ್ಣನೆ ಮಾಡುತ್ತ ಯಥೇಷ್ಟ ಬಡಿಸಬೇಕು.

ನಾಸ್ರಮಾಪಾತಯೇಜ್ಜಾತು ನ ಕುಪ್ಯೇನ್ನಾನೃತಂ ವದೇತ್ ।
ನ ಪಾದೇನ ಸ್ಪೃಶೇದನ್ನಂ ನ ಚೈತದವಧೂನಯೇತ್ ॥ ೨೨೯

ಶ್ರಾದ್ಧಕಾಲದಲ್ಲಿ ಎಂದೂ ಕಣ್ಣೀರು ಸುರಿಸಬಾರದು. ಸಿಟ್ಟು-ಸುಳ್ಳು ಹುಟ್ಟಬಾರದು. ಕಾಲಿನಿಂದ ಅನ್ನ ಮುಟ್ಟಬಾರದು. ಅನ್ನವನ್ನು ಎತ್ತಿ ಎಸೆಯಬಾರದು. ಕಾಣುವ ದೋಷವಿಲ್ಲವಾದರೂ ಕಾಣದ ಪಾಪವಿದೆ.

ಅಸ್ರಂ ಗಮಯತಿ ಪ್ರೇತಾನ್ಕೋಪೋಽರೀನನೃತಂ ಶುನಃ ।
ಪಾದಸ್ಪರ್ಶಸ್ತು ರಕ್ಷಾಂಸಿ ದುಷ್ಕೃತೀನವಧೂನಯೇತ್ ॥ ೨೩೦

ಕಣ್ಣೀರು ಪ್ರೇತಗಳಿಗೆ ಕೋಪವು, ಶತ್ರುಗಳಿಗೆ ಸುಳ್ಳು, ನಾಯಿಗೆ ಕಾಲು ಸೋಂಕು, ರಕ್ಷಸ್ಸಿಗೆ ಎಸೆಯುವುದು, ಪಾಪಿಗಳಿಗೆ ಶ್ರಾದ್ಧ ಫಲವನ್ನು ತಲಪಿಸುವುದು.

ಯದ್ಯದ್ರೋಚೇತ ವಿಪ್ರೇಭ್ಯಸ್ತತ್ತದ್ದದ್ಯಾದಮತ್ಸರಃ ।
ಬ್ರಹೋದ್ಯಾಶ್ಚ ಕಥಾಃ ಕುರ್ಯಾತ್ಪಿತೃಣಾಮೇತದೀಪ್ಸಿತಂ ॥ ೨೩೧

ಬ್ರಾಹ್ಮಣರು ಅಪೇಕ್ಷಿಸಿದ್ದನ್ನೆಲ್ಲ ಮತ್ಸರವಿಲ್ಲದೆ ಕೊಡಬೇಕು. ಪರಮಾತ್ಮ ಪ್ರತಿಪಾದಕಸಂಕಥೆಗಳನ್ನು ಮಾಡಬೇಕು. ಅದು ಪಿತೃಗಳಿಗೆ ಅತ್ಯಂತ ಪ್ರಿಯವಾದುದು.

ಸ್ವಾಧ್ಯಾಯಂ ಶ್ರಾವಯೇತ್ಪಿತ್ರ್ಯೇ ಧರ್ಮಶಾಸ್ತ್ರಾಣಿ ಚೈವ ಹಿ ।
ಆಖ್ಯಾನಾನೀತಿಹಾಸಾಂಶ್ಚ ಪುರಾಣಾನಿ ಖಿಲಾನಿ ಚ । ೨೩೨

ಶ್ರಾದ್ಧಕಾಲದಲ್ಲಿ ಬ್ರಾಹ್ಮಣರು ಕೇಳಲು ವೇದ, ಧರ್ಮಶಾಸ್ತ್ರ ವೈದಿಕಾಖ್ಯಾನಗಳು, ಮಹಾಭಾರತ, ಪುರಾಣಗಳು, ಶ್ರೀಸೂಕ್ತ ಪಾರಾಯಣ ಮಾಡಬೇಕು.

ಹರ್ಷಯೇದ್ಬ್ರಾಹ್ಮಣಾಂಸ್ತುಷ್ಟೋ ಭೋಜಯೇಚ್ಚ ಶನೈಃ ಶನೈಃ ।
ಅನ್ನಾದ್ಯೇನಾಸಕೃಚ್ಚೈತಾನ್ಗುಣೈಶ್ಚ ಪರಿಚೋದಯೇತ್ ॥ ೨೩೩

ಭೋಜನಕ್ಕೆ ತ್ವರೆಮಾಡಬಾರದು. ಬ್ರಾಹ್ಮಣರು ಹರ್ಷಚಿತ್ತರಾಗಿರಬೇಕು. ಸಿದ್ಧಾನ್ನಗಳ ರಸಗುಣಗಳನ್ನು ವರ್ಣಿಸಿ ಆಸ್ವಾದಕ್ಕೆ ಒತ್ತಾಯಿಸಬೇಕು.

ವ್ರತಸ್ಥಮಪಿ ದೌಹಿತ್ರಂ ಶ್ರಾದ್ಧೇ ಯತ್ನೇನ ಭೋಜಯೇತ್ ।
ಕುತಪಂ ಚಾಸನೇ ದದ್ಯಾತ್ತಿಲೈಶ್ಚ ವಿಕಿರೇನ್ಮಹೀಂ ॥ ೨೩೪

ದೌಹಿತ್ರನು ಬ್ರಹ್ಮಚಾರಿಯಾದರೂ ಶ್ರಾದ್ಧದ ದಿನ ಉಣ್ಣಬೇಕು. ಆಸನಕ್ಕೆ ಊರ್ಣಾಸ್ತರಣವನ್ನು ಹೊದೆಸಬೇಕು. ನೆಲದಲ್ಲಿ ಎಳ್ಳು ಹರಡಬೇಕು.

ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ ।
ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಾಂ ॥ ೨೩೫

ದೌಹಿತ್ರ, ಕುತಪ, ತಿಲಗಳು ಶ್ರಾದ್ಧದಲ್ಲಿ ಪವಿತ್ರಗಳು. ಶೌಚ, ಅಕ್ರೋಧ, ಅತ್ವರೆಗಳು ಅವಶ್ಯವಾದವುಗಳು.

ಅತ್ಯುಷ್ಣಂ ಸರ್ವಮನ್ನಂ ಸ್ಯಾದ್ಭುಂಜೀರಂಸ್ತೇ ಚ ವಾಗ್ಯತಾಃ ।
ನ ಚ ದ್ವಿಜಾತಯೋ ಬ್ರೂಯುರ್ದಾತ್ರಾ ಪೃಷ್ಟಾ ಹವಿರ್ಗುಣಾನ್ ॥ ೨೩೬

ಅನ್ನವು ಬಿಸಿಯಾಗಿರಬೇಕು. ಮೌನವಾಗಿ ಉಣ್ಣಬೇಕು. ಪಕ್ವಾನ್ನದ ರುಚಿ ಪ್ರಶ್ನೆಗೆ ಉತ್ತರಕೊಡಬಾರದು.

ಯಾವದುಷ್ಣಂಭವತ್ಯನ್ನಂಯಾವದಶ್ನಂತಿ ವಾಗ್ಯತಾಃ ।
ಪಿತರಸ್ತಾವದಶ್ನಂತಿ ಯಾವನ್ನೋಕ್ತಾ ಹವಿರ್ಗುಣಾಃ ॥ ೨೩೭

ಸಿದ್ಧಾನ್ನಗಳ ಬಿಸಿ ಆರುವ ಮೊದಲು ಭೋಜನ ಕಾಲದಲ್ಲಿ ಮೌನಭೇದವಾಗುವ ಮೊದಲು ಅನ್ನರಸದ ವರ್ಣನೆಯನ್ನು ಬ್ರಾಹ್ಮಣರು ಮಾಡುವ ಮೊದಲು ಪಿತೃಗಳು ಸೇವಿಸುತ್ತಾರೆ.

ಯದ್ವೇಷ್ಟಿತಶಿರಾ ಭುಂಕ್ತೇ ಯದ್ಭುಂಕ್ತೇ ದಕ್ಷಿಣಾಮುಖಃ ।
ಸೋಪಾನತ್ಕಶ್ಚ ಯದ್ಭುಂಕ್ತೇ ತದ್ವೈ ರಕ್ಷಾಂಸಿ ಭುಂಜತೇ ॥ ೨೩೮

ತಲೆಗೆ ಬಟ್ಟೆ ಸುತ್ತಿಕೊಂಡು ಉಂಡರೆ, ದಕ್ಷಿಣಾಭಿಮುಖನಾಗಿ ಕುಳಿತು ಉಂಡರೆ, ಪಾದರಕ್ಷೆಧರಿಸಿಕೊಂಡು ಉಂಡರೆ ಅದು ರಾಕ್ಷಸರಿಗೆ ಸೇರುವುದು.

ಚಂಡಾಲಶ್ಚ ವರಾಹಶ್ಚ ಕುಕ್ಕುಟಃ ಶ್ವಾ ತಥೈವ ಚ ।
ರಜಸ್ವಲಾ ಚ ಷಂಢಶ್ಚ ನೇಕ್ಷೇರನ್ನಶ್ನತೋ ದ್ವಿಜಾನ್ ॥ ೨೩೯

ಚಂಡಾಲ, ಹಂದಿ, ಕೋಳಿ, ನಾಯಿ, ರಜಸ್ವಲೆ, ಷಂಢ ಇವರು ಬ್ರಾಹ್ಮಣರು ಉಣ್ಣುವಾಗ ನೋಡಬಾರದು.

ಹೋಮೇ ಪ್ರದಾನೇ ಭೋಜ್ಯೇ ಚ ಯದೇಭಿರಭಿವೀಕ್ಷ್ಯತೇ ।
ದೈವೇ ಕರ್ಮಣಿ ಪಿತ್ರ್ಯೇ ವಾ ತದ್ಗಚ್ಛತ್ಯಯಥಾತಥಂ ॥ ೨೪೦

ಹೋಮ, ದಾನ, ಭೋಜನಗಳನ್ನು ದೇವ-ಪಿತೃಕಾರ್ಯಗಳಲ್ಲಿ ಹಿಂದೆ ಹೇಳಿದವರು ನೋಡಿದರೆ ಆಯಾ ಕರ್ಮಫಲವು ಲಭಿಸುವುದಿಲ್ಲ.

ಘ್ರಾಣೇನ ಸೂಕರೋ ಹಂತಿ ಪಕ್ಷವಾತೇನ ಕುಕ್ಕುಟಃ ।
ಶ್ವಾ ತು ದೃಷ್ಟಿನಿಪಾತೇನ ಸ್ಪರ್ಶೇನಾವರವರ್ಣಜಃ ॥ ೨೪೧

ಹಂದಿ ಮೂಸಿದರೆ, ಕೋಳಿ ರೆಕ್ಕೆಗಾಳಿ ಬೀಸಿದರೆ, ನಾಯಿ ನೋಡಿದರೆ, ಶೂದ್ರನು ಮುಟ್ಟಿದರೆ, ಕರ್ಮವು ಫಲಶಕ್ತಿಯನ್ನು ಕಳೆದುಕೊಳ್ಳುವುದು.

ಖಂಜೋ ವಾ ಯದಿ ವಾ ಕಾಣೋ ದಾತುಃ ಪ್ರೇಷ್ಯೋಽಪಿ ವಾ ಭವೇತ್ ।
ಹೀನಾತಿರಿಕ್ತಗಾತ್ರೋ ವಾ ತಮಪ್ಯಪನಯೇತ್ಪುನಃ ॥ ೨೪೨

ಕುಂಟ, ಕುರುಡ, ಸೇವಕ, ಹೀನಾಧಿಕಾವಯವವುಳ್ಳವ ಇಂಥವರು ದೂರ ಇರಬೇಕು.

ಬ್ರಾಹ್ಮಣಂ ಭಿಕ್ಷುಕಂ ವಾಪಿ ಭೋಜನಾರ್ಥಮುಪಸ್ಥಿತಂ ।
ಬ್ರಾಹ್ಮಣೈರಭ್ಯನುಜ್ಞಾತಃ ಶಕ್ತಿತಃ ಪ್ರತಿಪೂಜಯೇತ್ ॥ ೨೪೩

ಅತಿಥಿ, ಅಭ್ಯಾಗತ, ಭಿಕ್ಷುಕರನ್ನು ಕ್ಷಣಬ್ರಾಹ್ಮಣ ಸಮ್ಮತಿಯಿಂದ ಯಥಾಶಕ್ತಿ ಸತ್ಕರಿಸಬೇಕು.

ಸಾರ್ವವರ್ಣಿಕಮನ್ನಾದ್ಯಂ ಸನ್ನೀಯಾಪ್ಲಾವ್ಯ ವಾರಿಣಾ ।
ಸಮುತ್ಸೃಜೇದ್ಭುಕ್ತವತಾಮಗ್ರತೋ ವಿಕಿರನ್ ಭುವಿ ॥ ೨೪೪

ಸರ್ವವಿಧವಾದ ಅಂದಿನ ಆಹಾರಸಾಮಗ್ರಿಗಳನ್ನು ಒಟ್ಟು ನೀರಿನಲ್ಲಿ ಕದಡಿ, ಉಂಡ ಬ್ರಾಹ್ಮಣರ ಸಮ್ಮುಖದಲ್ಲಿ ಹರಡಬೇಕು.

ಅಸಂಸ್ಕೃತ ಪ್ರಮೀತಾನಾಂ ತ್ಯಾಗಿನಾಂ ಕುಲಯೋಷಿತಾಂ ।
ಉಚ್ಛಿಷ್ಟಂ ಭಾಗಧೇಯಂ ಸ್ಯಾದ್ದರ್ಭೇಷು ವಿಕಿರಶ್ಚ ಯಃ ॥ ೨೪೫

ಪ್ರಣವಸಂಸ್ಕಾರ ಮಾತ್ರ ಇರುವ ಶಿಶುಬಾಲರು, ವಿವಾಹದ ಮೊದಲು ಸತ್ತ ಕನ್ಯೆಯರು—ಇಂತಹರಿಗೆ ದರ್ಭೆಯ ಮೇಲೆ ಹಾಕಿದ ಅನ್ನವು ಮತ್ತು ಭೋಜನ ಪಾತ್ರದೊಳಗಿನ ಶೇಷಾನ್ನವು ಸಲ್ಲುವುದು.

ಉಚ್ಛೇಷಣಂ ಭೂಮಿಗತಮಜಿಹ್ಮಸ್ಯಾಶಠಸ್ಯ ಚ ।
ದಾಸವರ್ಗಸ್ಯ ತತ್ಪಿತ್ರ್ಯೇ ಭಾಗಧೇಯಂ ಪ್ರಚಕ್ಷತೇ ॥ ೨೪೬

ಪಿತೃಕಾರ್ಯದಲ್ಲಿ ನೆಲದ ಮೇಲೆ ಬಿದ್ದ ಭೋಜನಕಾಲದ ಅನ್ನವು ಸೋಮಾರಿಯೂ, ಕಪಟಿಯೂ ಅಲ್ಲದ ಸೇವಕರಿಗೆ ಸಲ್ಲುವುದು.

ಆಸಪಿಂಡಕ್ರಿಯಾಕರ್ಮ ದ್ವಿಜಾತೇಃ ಸಂಸ್ಥಿತಸ್ಯ ತು ।
ಅದೈವಂ ಭೋಜಯೇಚ್ಛ್ರಾದ್ಧಂ ಪಿಂಡಮೇಕಂ ತು ನಿರ್ವಪೇತ್ ॥ ೨೪೭

ಮೃತ ದ್ವಿಜಾತಿ ವ್ಯಕ್ತಿಗೆ ಸಪಿಂಡೀಕರಣದ ಮೊದಲು ಮಾಡುವ ಶ್ರಾದ್ಧದಲ್ಲಿ ದೇವಪೂಜೆ (ವಿಶ್ವೇದೇವ) ಗೆ ಮೂರು ಪಿಂಡವು ಬೇಡ. ಒಂದು ಪಿಂಡವು ಸಾಕು.

ಸಹಪಿಂಡಕ್ರಿಯಾಯಾಂ ತು ಕೃತಾಯಾಮಸ್ಯ ಧರ್ಮತಃ ।
ಅನಯೈವಾವೃತಾ ಕಾರ್ಯಂ ಪಿಂಡನಿರ್ವಪಣಂ ಸುತೈಃ ॥ ೨೪೮

ಸಪಿಂಡೀಕರಣ ಮಾಡಿದ ಮೇಲೆ ಹಿಂದೆ ಹೇಳಿದ ಪರ್ವಕಾಲದ ಶ್ರಾದ್ಧ ವಿಧಾನದಿಂದ ಪಿಂಡಪ್ರದಾನವು ವಿಶ್ವೇದೇವ, ಆವಾಹನ, ಪುನರರ್ಘ್ಯ ಅಗ್ನೌಕರಣ ಪಿಂಡತ್ರಯವುಳ್ಳದ್ದು.

ಶ್ರಾದ್ಧಂ ಭುಕ್ತ್ವಾ ಯ ಉಚ್ಛಿಷ್ಟಂ ವೃಷಲಾಯ ಪ್ರಯಚ್ಛತಿ ।
ಸ ಮೂಢೋ ನರಕಂ ಯಾತಿ ಕಾಲಸೂತ್ರಮವಾಕ್ ಶಿರಾಃ ॥ ೨೪೯

ಶ್ರಾದ್ಧದ ಬಳಿಕ ಭೋಜನ ಪಾತ್ರದಲ್ಲಿ ಉಳಿದುದನ್ನು ಯಾರಿಗೂ ಕೊಡಬಾರದು. ಅದು ಮಹಾಪಾಪವು.

ಶ್ರಾದ್ಧಭುಗ್ವೃಷಲೀತಲ್ಪಂ ತದಹರ್ಯೋಽಧಿಗಚ್ಛತಿ ।
ತಸ್ಯಾಃ ಪುರೀಷೇ ತನ್ಮಾಸಂ ಪಿತರಸ್ತಸ್ಯ ಶೇರತೇ ॥ ೨೫೦

ಶ್ರಾದ್ಧ ಭೋಜನಮಾಡಿ ಕಾಮುಕೀ ಸಂಗವನ್ನು ಮಾಡಿದರೆ ಪಿತೃಗಳು ದುಃಖಿತರಾಗುವರು.

ಪೃಷ್ಟ್ವಾ ಸ್ವದಿತಮಿತ್ಯೇವಂ ತೃಪ್ತಾನಾಚಾಮಯೇತ್ತತಃ ।
ಆಚಾಂತಾಂಶ್ಚಾನುಜಾನೀಯಾದಭಿ ಭೋ ರಮ್ಯತಾಮಿತಿ ॥ ೨೫೧

ಸ್ವದಿತ ಪ್ರಶ್ನೆ (ತೃಪ್ತಿ) ಯನ್ನು ಬ್ರಾಹ್ಮಣರಿಗೆ ಮಾಡಿದ ಮೇಲೆ ಅವರು ಆಚಮನ ಮಾಡಿ ಸುಖಾಸನಕ್ಕೆ ನಿವೇದಿಸಬೇಕು.

ಸ್ವದಾಸ್ತ್ವಿತ್ಯೇವ ತಂ ಬ್ರೂಯುರ್ಬ್ರಾಹ್ಮಣಾಸ್ತದನಂತರಂ ।
ಸ್ವಧಾಕಾರಃ ಪರಾ ಹ್ಯಾಶೀಃ ಸರ್ವೇಷು ಪಿತೃಕರ್ಮಸು ॥ ೨೫೨

ಶ್ರಾದ್ಧಕರ್ತೃವು ಮಾಡಿದ ಸ್ವದಿತ ಪ್ರಶ್ನೆಗೆ ಸ್ವಧಾ ಉತ್ತರವನ್ನು ಬ್ರಾಹ್ಮಣರು ಹೇಳಬೇಕು. ಸ್ವಧಾಕಾರವು ಪಿತೃಕರ್ಮದಲ್ಲಿ ಉತ್ತಮ ಆಶೀರ್ವಾದವು.

ತತೋ ಭುಕ್ತವತಾಂ ತೇಷಾಮನ್ನಶೇಷಂ ನಿವೇದಯೇತ್ ।
ಯಥಾ ಬ್ರೂಯುಸ್ತಥಾ ಕುರ್ಯಾದನುಜ್ಞಾತಸ್ತತೋ ದ್ವಿಜೈಃ ॥ ೨೫೩

ಸ್ವಧಾವಚನದ ಬಳಿಕ ಉಂಡ ಬ್ರಾಹ್ಮಣರಲ್ಲಿ ಉಳಿದ ಅನ್ನವನ್ನು ನಿವೇದಿಸಿ ಅವರ ಅನುಜ್ಞೆಯಂತೆ ಆಚರಿಸಬೇಕು.

ಪಿತ್ರ್ಯೇ ಸ್ವದಿತಮಿತ್ಯೇವ ವಾಚ್ಯಂ ಗೋಷ್ಠೇ ತು ಸುಶ್ರುತಂ ।
ಸಂಪನ್ನಮಿತ್ಯಭ್ಯುದಯೇ ದೈವೇ ರುಚಿತಮಿತ್ಯಪಿ ॥ ೨೫೪

ಏಕೋದ್ದಿಷ್ಟ ಶ್ರಾದ್ಧದಲ್ಲಿ ಸ್ವದಿತವೆಂದು, ಗೋಷ್ಠೀ ಶ್ರಾದ್ಧದಲ್ಲಿ ಸುಶ್ರುತವೆಂದು, ಅಭ್ಯುದಯ ಶ್ರಾದ್ಧದಲ್ಲಿ ಸಂಪನ್ನವೆಂದು, ದೇವಶ್ರಾದ್ಧದಲ್ಲಿ ರುಚಿತವೆಂದು ಪ್ರಶ್ನಿಸಬೇಕು. ಹನ್ನೆರಡು ವಿಧದ ಶ್ರಾದ್ಧವೆಂದು ವಿಶ್ವಾಮಿತ್ರರ ಮತ.

ಅಪರಾಹ್ಣಸ್ತಥಾ ದರ್ಭಾ ವಾಸ್ತುಸಂಪಾದನಂ ತಿಲಾಃ ।
ಸೃಷ್ಟಿರ್ಮೃಷ್ಟಿರ್ದ್ವಿಜಾಶ್ಚಾಗ್ರ್ಯಾಃ ಶ್ರಾದ್ಧಕರ್ಮಸು ಸಂಪದಃ ॥ ೨೫೫

ಅಪರಾಹ್ಣಕಾಲ, ದರ್ಭೆ, ಸ್ಥಳ ರಚನೆ, ಎಳ್ಳು, ಉದಾರದಾನ, ತುಪ್ಪ, ಎಣ್ಣೆಗಳ ಸಮೃದ್ಧಿ, ದ್ವಿಜೋತ್ತಮರು—ಶ್ರಾದ್ಧದ ಸಂಪನ್ನ ದ್ರವ್ಯಗಳು.

ದರ್ಭಾಃ ಪವಿತ್ರಂ ಪೂರ್ವಾಹ್ಣೋ ಹವಿಷ್ಯಾಣಿ ಚ ಸರ್ವಶಃ ।
ಪವಿತ್ರಂ ಯಚ್ಚ ಪೂರ್ವೋಕ್ತಂ ವಿಜ್ಞೇಯಾ ಹವ್ಯಸಂಪದಃ ॥ ೨೫೬

ದೇವಕಾರ್ಯದಲ್ಲಿ ದರ್ಭೆ, ಮಂತ್ರ, ಪೂರ್ವಾಹ್ಣ, ಹವಿಸ್ಸು, ಪರಿಶುದ್ಧ ಪ್ರದೇಶ, ದಾನ, ಘೃತ, ಪೂಜ್ಯದ್ವಿಜರು, ದ್ರವ್ಯಸಂಪತ್ತು,

ಮುನ್ಯನ್ನಾನಿ ಪಯಃ ಸೋಮೋ ಮಾಂಸಂ ಯಚ್ಚಾನುಪಸ್ಕೃತಂ ।
ಅಕ್ಷಾರಲವಣಂ ಚೈವ ಪ್ರಕೃತ್ಯಾ ಹವಿರುಚ್ಯತೇ ॥ ೨೫೭

ನೀವಾರಾದಿಮುನ್ಯನ್ನಗಳು, ಹಾಲು, ಸೋಮರಸ, ಶುದ್ಧಮಾಂಸ ಸೈಂಧವಲವಣ—ಇವುಗಳು ಹವಿಸ್ಸುಗಳು.

ವಿಸೃಜ್ಯ ಬ್ರಾಹ್ಮಣಾಂಸ್ತಾಂಸ್ತು ನಿಯತೋ ವಾಗ್ಯತಃ ಶುಚಿಃ ।
ದಕ್ಷಿಣಾಂ ದಿಶಮಾಕಾಂಕ್ಷನ್ಯಾಚೇತೇಮಾನ್ವರಾನ್ಪಿತೃನ್ ॥ ೨೫೮

ಆ ಶ್ರಾದ್ಧ ಬ್ರಾಹ್ಮಣರನ್ನು ವಿಸರ್ಜಿಸಿ ದಕ್ಷಿಣಾಭಿಮುಖನಾಗಿ ಪಿತೃಗಳನ್ನುದ್ದೇಶಿಸಿ ಮುಂದೆ ಹೇಳುವಂತೆ ಪ್ರಾರ್ಥಿಸಬೇಕು.

ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ।
ಶ್ರದ್ಧಾ ಚ ನೋ ಮಾವ್ಯಗಮದ್ಬಹು ದೇಯಂ ಚ ನೋಽಸ್ತ್ವಿತಿ ॥ ೨೫೯

ನಮ್ಮ ಕುಲದಲ್ಲಿ ದಾನಶೂರರು ವರ್ಧಿಸಲಿ. ವೇದಗಳ ಅಧ್ಯಯನಾಧ್ಯಾಪನಾರ್ಥ ವಿಜ್ಞಾನಗಳು, ಪುತ್ರಪೌತ್ರಸಂಪತ್ತು, ಪ್ರವರ್ಧಿಸಲಿ. ವೇದ ಶಾಸ್ತ್ರ ಶ್ರದ್ಧೆಯು ತೊಲಗದಿರಲಿ. ದಾನ-ದ್ರವ್ಯ-ಧನಕನಕಾದಿ ಸಮೃದ್ಧಿಯಾಗಲಿ,

ಏತಂ ನಿರ್ವಪಣಂ ಕೃತ್ವಾ ಪಿಂಡಾಂಸ್ತಾಂಸ್ತದನಂತರಂ ।
ಗಾಂ ವಿಪ್ರಮಜಮಗ್ನಿಂ ವಾ ಪ್ರಾಶಯೇದಪ್ಸು ವಾ ಕ್ಷಿಪೇತ್ ॥ ೨೬೦

ಹಿಂದೆ ಹೇಳಿದಂತೆ ಪಿಂಡಪ್ರದಾನವನ್ನು ಮಾಡಿದ ಬಳಿಕ ಪಿಂಡವಿಸರ್ಜನೆ ಮಾಡುವಾಗ ಗೋವು ವಿಪ್ರ, ಆಡು ಅಗ್ನಿ, ನೀರುಗಳಲ್ಲಿ ಬಿಡಬಹುದು.

**ಪಿಂಡನಿರ್ವಪಣಂ ಕೇಚಿತ್ಪುರಸ್ತಾದೇವ ಕುರ್ವತೇ ।**
**ವಯೋಭಿಃ ಖಾದಯಂತ್ಯನ್ಯೇ ಪ್ರಕ್ಷಿಪಂತ್ಯನಲೇಽಪ್ಸು ವಾ ॥ ೨೬೧**

ಕೆಲವರು ಬ್ರಾಹ್ಮಣ ಭೋಜನದ ಬಳಿಕ ಪಿಂಡಪ್ರದಾನ ಮಾಡುವರು. ಕೆಲವರು ಪಿಂಡಗಳನ್ನು ಪಕ್ಷಿಗಳಿಗೆ ಕೊಡುವರು. ಬೆಂಕಿಯಲ್ಲಿ–ನೀರಿನಲ್ಲಿ ಎಸೆಯುವರು.

**ಪತಿವ್ರತಾ ಧರ್ಮಪತ್ನೀ ಪಿತೃಪೂಜನತತ್ಪರಾ ।**
**ಮಧ್ಯಮಂ ತು ತತಃ ಪಿಂಡಮದ್ಯಾತ್ಸಮ್ಯಕ್ಸುತಾರ್ಥಿನೀ ॥ ೨೬೨**

ಸವರ್ಣಸ್ತ್ರೀಯು ಪತಿವ್ರತೆಯೂ ಪಿತೃಭಕ್ತಳೂ ಆಗಿದ್ದರೆ ಮೂರು ಪಿಂಡಗಳಲ್ಲಿ ನಡುವಿನ ಪಿಂಡವನ್ನು ಪುತ್ರಾಪೇಕ್ಷೆಯಿಂದ ತಿನ್ನಬೇಕು.

**ಆಯುಷ್ಮಂತಂ ಸುತಂ ಸೂತೇ ಯಶೋಮೇಧಾಸಮನ್ವಿತಂ ।**
**ಧನವಂತಂ ಪ್ರಜಾವಂತಂ ಸಾತ್ವಿಕಂ ಧಾರ್ಮಿಕಂ ತಥಾ ॥ ೨೬೩**

ಆ ಪಿಂಡಭಕ್ಷಣದಿಂದ ಸ್ತ್ರೀಯು–ದೀರ್ಘ ಆಯುಸ್ಸು, ಯಶಸ್, ಮೇಧಾ, ಧನ, ಪ್ರಜಾ, ಸತ್ವಗುಣ, ಧರ್ಮಗುಣಸಮೃದ್ಧನಾದ ಮಗನನ್ನು ಪ್ರಸವಿಸುವಳು.

**ಪ್ರಕ್ಷಾಲ್ಯ ಹಸ್ತಾವಾಚಮ್ಯ ಜ್ಞಾತಿಪ್ರಾಯಂ ಪ್ರಕಲ್ಪಯೇತ್ ।**
**ಜ್ಞಾತಿಭ್ಯಃ ಸತ್ಕೃತಂ ದತ್ವಾ ಬಾಂಧವಾನಪಿ ಭೋಜಯೇತ್ ॥ ೨೬೪**

ಪಿಂಡವಿಸರ್ಜನ ಮಾಡಿ ಕೈತೊಳೆದು ಆಚಮನ ಮಾಡಿ ಉಳಿದ ಅನ್ನವನ್ನು ಪಿತೃಪಕ್ಷದ ಮತ್ತು ಮಾತೃಪಕ್ಷದ ಬಂಧುಗಳಿಗೆ ಬಡಿಸಬೇಕು.

**ಉಚ್ಛೇಷಣಂ ತು ತತ್ತಿಷ್ಠೇದ್ಯಾವದ್ವಿಪ್ರಾ ವಿಸರ್ಜಿತಾಃ ।**
**ತತೋ ಗೃಹಬಲಿಂ ಕುರ್ಯಾದಿತಿ ಧರ್ಮೋ ವ್ಯವಸ್ಥಿತಃ ॥ ೨೬೫**

ಬ್ರಾಹ್ಮಣ ವಿಸರ್ಜನಪರ್ಯಂತ ಬ್ರಾಹ್ಮಣರ ಭೋಜನಸ್ಥಾನದ ಪರಿಮಾರ್ಜನೆಯನ್ನು ಮಾಡುವುದು ಬೇಡ. ಆಮೇಲೆ ವೈಶ್ವದೇವ, ಗೃಹಬಲಿ, ನಿತ್ಯಶ್ರಾದ್ಧ, ಅತಿಥಿಭೋಜನಗಳನ್ನು ಮಾಡಬೇಕು.

ಹವಿರ್ಯಚ್ಚಿರರಾತ್ರಾಯ ಯಚ್ಚಾನಂತ್ಯಾಯ ಕಲ್ಪತೇ ।
ಪಿತೃಭ್ಯೋ ವಿಧಿವದ್ದತ್ತಂ ತತ್ಪ್ರವಕ್ಷ್ಯಾಮ್ಯಶೇಷತಃ ॥ ೨೬೬

ಬಹುಕಾಲ ಅನಂತ ಫಲವನ್ನು ಕೊಡುವ ಪಿತೃಪ್ರಿಯ ಹವಿಸ್ಸನ್ನು ಸಂಪೂರ್ಣ ಹೇಳುತ್ತೇನೆ.

ತಿಲೈರ್ವ್ರೀಹಿಯವೈರ್ಮಾಷೈರದ್ಭಿರ್ಮೂಲಫಲೇನ ವಾ ।
ದತ್ತೇನ ಮಾಸಂ ತೃಪ್ಯಂತಿ ವಿಧಿವತ್ಪಿತರೋ ನೃಣಾಂ ॥ ೨೬೭

ಎಳ್ಳು, ಭತ್ತ, ಯವ, ಉದ್ದು, ನೀರು, ಗೆಣಸು, ಹಣ್ಣುಗಳನ್ನು ಪಿತೃಗಳಿಗೆ ದಾನ ಮಾಡಿದರೆ ಮನುಷ್ಯಮಾನದ ಮಾಸಕಾಲದವರೆಗೆ ಅವರಿಗೆ ತೃಪ್ತಿಯಾಗುವುದು.

ದ್ವೌ ಮಾಸೌ ಮತ್ಸ್ಯಮಾಂಸೇನ ತ್ರೀನ್ ಮಾಸಾನ್ ಹಾರಿಣೇನ ತು ।
ಔರಭ್ರೇಣಾಥ ಚತುರಃ ಶಾಕುನೇನಾಥ ಪಂಚವೈ ॥ ೨೬೮

ಭಕ್ಷ್ಯಾಭಕ್ಷ್ಯವಿವರವು ಮುಂದೆ ಬರುವುದು. ಭಕ್ಷ್ಯಗಳಾದ ಮತ್ಸ್ಯಮಾಂಸದಿಂದ ಎರಡು ತಿಂಗಳು, ಹರಿಣಮಾಂಸದಿಂದ ಮೂರು ಮಾಸ, ಮೇಷಮಾಂಸದಿಂದ ನಾಲ್ಕು ಮಾಸ, ಪಕ್ಷಿಮಾಂಸದಿಂದ ಐದು ಮಾಸಪರ್ಯಂತ ಪಿತೃತೃಪ್ತಿಯು.

ಷಣ್ಮಾಸಾಂಶ್ಛಾಗಮಾಂಸೇನ ಪಾರ್ಷತೇನ ಚ ಸಪ್ತ ವೈ ।
ಅಷ್ಟಾವೇಣಸ್ಯ ಮಾಂಸೇನ ರೌರವೇಣ ನವೈವ ತು ॥ ೨೬೯

ಆಡು, ಪೃಷತ್, ಏಣ, ರುರು (ಮೃಗಭೇದ) ಮಾಂಸದಿಂದ ಕ್ರಮವಾಗಿ ಅಧಿಕ ತೃಪ್ತಿಯು.

ದಶ ಮಾಸಾಂಸ್ತು ತೃಪ್ಯಂತಿ ವರಾಹಮಹಿಷಾಮಿಷೈಃ ।
ಶಶಕೂರ್ಮಯೋಸ್ತು ಮಾಂಸೇನ ಮಾಸಾನೇಕಾದಶೈವ ತು ॥ ೨೭೦

ವರಾಹ, ಮಹಿಷ, ಶಶ, ಕೂರ್ಮಗಳಿಂದ ಅನುಕ್ರಮವಾಗಿ ಬಹು ತೃಪ್ತಿಯು.

ಸಂವತ್ಸರಂ ತು ಗವ್ಯೇನ ಪಯಸಾ ಪಾಯಸೇನ ಚ ।
ವಾರ್ಧ್ರೀಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ॥ ೨೭೧

ಗೋವಿನ ಹಾಲು ಅದರ ಪಾಯಸಗಳಿಂದ ಸಂವತ್ಸರಪರ್ಯಂತ ತೃಪ್ತಿಯು. ವಾರ್ಧ್ರೀಣಸ ಮಾಂಸವು ಬಹುಫಲವು.

ಕಾಲಶಾಕಂ ಮಹಾಶಲ್ಕಾಃ ಖಡ್ಗಲೋಹಾಮಿಷಂ ಮಧು ।
ಆನಂತ್ಯಾಯೈವ ಕಲ್ಪಂತೇ ಮುನ್ಯನ್ನಾನಿ ಚ ಸರ್ವಶಃ ॥ ೨೭೨

(ಕೆಲವು) ಕಾಲಶಾಕ ಮುಂತಾದುದು ಅಪ್ರಸಿದ್ಧ. ಜೇನು, ನೀವಾರಾದಿ ಮುನಿಗಳ ಆಹಾರಧಾನ್ಯಾನ್ನಗಳು ಪಿತೃದಾನದಿಂದ ಅನಂತ ಫಲದಾಯಕಗಳು.

ಯತ್ಕಿಂಚಿನ್ಮಧುನಾ ಮಿಶ್ರಂ ಪ್ರದದ್ಯಾತ್ತು ತ್ರಯೋದಶೀಂ ।
ತದಪ್ಯಕ್ಷಯಮೇವ ಸ್ಯಾತ್ ವರ್ಷಾಸು ಚ ಮಘಾಸು ಚ ॥ ೨೭೩

ವರ್ಷ ಋತುವಿನ ಕೃಷ್ಣಪಕ್ಷದ ತ್ರಯೋದಶೀ ದಿನ ಮಘಾ ನಕ್ಷತ್ರ ಕಾಲವು ಮಧುಯುಕ್ತಾಹಾರದಾನದಿಂದ ಪಿತೃಗಳಿಗೆ ಅಕ್ಷಯ ಫಲವು.

ಅಪಿ ನಃ ಸ ಕುಲೇ ಜಾಯಾದ್ಯೋ ನೋ ದದ್ಯಾತ್ತ್ರಯೋದಶೀಂ ।
ಪಾಯಸಂ ಮಧುಸರ್ಪಿರ್ಭ್ಯಾಂ ಪ್ರಾಕ್ ಛಾಯೇ ಕುಂಜರಸ್ಯ ಚ ॥ ೨೭೪

ಆನೆಯ ಎತ್ತರದಷ್ಟು ನೆರಳು ಪೂರ್ವಕ್ಕೆ ಬೀಳಲು ಆಕಾಶ ಮಧ್ಯದಿಂದ ಸ್ವಲ್ಪ ಪಶ್ಚಿಮಕ್ಕೆ ಸೂರ್ಯನು ತಿರುಗಬೇಕು. ಆ ಅಪರಾಹ್ಣಕಾಲವು ಪಿತೃಪ್ರಿಯವೆಂದು ಹೇಳಲಾಗಿದೆ. ಆಗ ಹಿಂದೆ ಹೇಳಿದ ವರ್ಷಾತ್ರಯೋದಶೀ ಮಘಾಕಾಲವೂ ಇದ್ದರೆ ಜೇನುತುಪ್ಪ ಬೆರಸಿದ ಪಾಯಸವನ್ನು ನಮಗೆ ಕೊಡುವ ಸಂತತಿಯು ನಮ್ಮ ಕುಲದಲ್ಲಿ ಒಬ್ಬನಾದರೂ ಜನಿಸಲಿ ಎಂದು ಎಲ್ಲ ಪಿತೃಗಳು ಆಶಿಸುವರು ಎಂದು ಧರ್ಮದರ್ಶಿಗಳ ಮತ.

ಯದ್ಯದ್ದದಾತಿ ವಿಧಿವತ್ಸಮ್ಯಕ್ ಶ್ರದ್ಧಾಸಮನ್ವಿತಃ ।
ತತ್ತತ್ಪಿತೄಣಾಂ ಭವತಿ ಪರತ್ರಾನಂತಮಕ್ಷಯಂ ॥ ೨೭೫

ಶಾಸ್ತ್ರನಿಷಿದ್ಧವಲ್ಲದ, ತನಗೆ ದೊರೆತ ಏನನ್ನಾದರೂ ಶ್ರದ್ಧೆಯಿಂದ ಪಿತೃಗಳಿಗೆ ಸಮರ್ಪಿಸಿದರೆ ಅದು ಅವರಿಗೆ ಅನಂತ—ಅಕ್ಷಯ ತೃಪ್ತಿಯ ಮೂಲಕ

ತನಗೂ ಬಹುಫಲದಾಯಕವಾಗುವುದು. ಆದುದರಿಂದ ಶ್ರಾದ್ಧಪದವು ಪ್ರಚಾರಕ್ಕೆ ಬಂದಿದೆ.

ಕೃಷ್ಣಪಕ್ಷೇ ದಶಮ್ಯಾದೌ ವರ್ಜಯಿತ್ವಾ ಚತುರ್ದಶೀಂ ।
ಶ್ರಾದ್ಧೇ ಪ್ರಶಸ್ತಾಸ್ತಿಥಯೋ ಯಥೈತಾ ನ ತಥೇತರಾಃ ॥ ೨೭೬

ಕೃಷ್ಣಪಕ್ಷದ ದಶಮಿ, ಏಕಾದಶೀ, ದ್ವಾದಶೀ, ತ್ರಯೋದಶೀ ತಿಥಿಗಳಷ್ಟು ಇತರ ತಿಥಿಗಳು ಪ್ರಶಸ್ತವಲ್ಲ.

ಯುಕ್ಷು ಕುರ್ವನ್ ದಿನರ್ಕ್ಷೇಷು ಸರ್ವಾನ್ಕಾಮಾನ್ಸಮಶ್ನುತೇ ।
ಅಯುಕ್ಷು ತು ಪಿತೄನ್ ಸರ್ವಾನ್ಪ್ರಜಾಂ ಪ್ರಾಪ್ನೋತಿ ಪುಷ್ಕಲಾಂ ॥ ೨೭೭

ತಿಥಿ–ನಕ್ಷತ್ರಗಳಲ್ಲಿ ಎರಡನೆ ನಾಲ್ಕನೆ ಮುಂತಾದ ಬಿದಿಗೆ, ಚೌತಿ, ತಿಥಿಗಳಲ್ಲಿ ಭರಣಿ ರೋಹಿಣಿಗಳಲ್ಲಿ ಶ್ರಾದ್ಧ ಮಾಡಿದರೆ ಸರ್ವಫಲವು. ಹಾಗೆಯೇ ವಿಷಮ ತಿಥಿ, ನಕ್ಷತ್ರಗಳಲ್ಲಿ ಪ್ರಜಾಸಂಪತ್ತಿಯಾಗುವುದು.

ಯಥಾ ಚೈವಾಪರಃ ಪಕ್ಷಃ ಪೂರ್ವಪಕ್ಷಾದ್ವಿಶಿಷ್ಯತೇ ।
ತಥಾ ಶ್ರಾದ್ಧಸ್ಯ ಪೂರ್ವಾಹ್ಣಾದಪರಾಹ್ಣೋ ವಿಶಿಷ್ಯತೇ ॥ ೨೭೮

ಕೃಷ್ಣಪಕ್ಷದಂತೆ ಅಪರಾಹ್ಣವು ಪ್ರಶಸ್ತವು.

ಪ್ರಾಚೀನಾವೀತಿನಾ ಸಮ್ಯಗಪಸವ್ಯಮತಂದ್ರಿಣಾ ।
ಪಿತ್ರ್ಯಮಾನಿಧನಾತ್ಕಾರ್ಯಂ ವಿಧಿವದ್ದರ್ಭಪಾಣಿನಾ ॥ ೨೭೯

ಸದಾ ಶ್ರಾದ್ಧವನ್ನು ಪ್ರಾಚೀನಾವೀತಿಯಾಗಿ ಪಿತೃತೀರ್ಥದಿಂದ ದರ್ಭಪವಿತ್ರಧಾರಿಯಾಗಿ ಮಾಡಬೇಕು. ತಪ್ಪಬಾರದು.

ರಾತ್ರೌ ಶ್ರಾದ್ಧಂ ನ ಕುರ್ವೀತ ರಾಕ್ಷಸೀ ಕೀರ್ತಿತಾ ಹಿ ಸಾ ।
ಸಂಧ್ಯಯೋರುಭಯೋಶ್ಚೈವ ಸೂರ್ಯೇ ಚೈವಾಚಿರೋದಿತೇ ॥ ೨೮೦

ರಾತ್ರಿ ಎರಡು ಸಂಧ್ಯಾಕಾಲ, ಆರುಗಳಿಗೆಯ ಪ್ರಾತಃಕಾಲ ಹೊರತು ಇತರ ಕಾಲಗಳಲ್ಲೇ ಶ್ರಾದ್ಧವನ್ನು ಮಾಡಬೇಕು.

ಅನೇನ ವಿಧಿನಾ ಶ್ರಾದ್ಧಂ ತ್ರಿರಬ್ದಸ್ಯೇಹ ನಿರ್ವಪೇತ್ ।
ಹೇಮಂತಗ್ರೀಷ್ಮವರ್ಷಾಸು ಪಾಂಚಯಜ್ಞಿಕಮನ್ವಹಂ ॥ ೨೮೧

ಈಗ ಹೇಳಿದ ವಿಧಿಯಿಂದ ಪ್ರತಿ ಅಮಾವಾಸ್ಯೆಯಲ್ಲಿ ಶ್ರಾದ್ಧ ಮಾಡಲು ಸಾಧ್ಯವಿಲ್ಲವಾದರೆ ವರ್ಷದಲ್ಲಿ ಮೂರು ಬಾರಿ ಮಾಡಬಹುದು. ಪಂಚ ಯಜ್ಞದಲ್ಲಿ ಒಂದಾದ ಪಿತೃಯಜ್ಞವು ಏಕೋದ್ದಿಷ್ಟ ವಿಧಾನದಿಂದ ಪ್ರತಿದಿನ ಆಚರಿಸಬೇಕು. ಹೇಮಂತ, ಗ್ರೀಷ್ಮ, ವರ್ಷಾ ಋತುಗಳ ಕುಂಭ, ವೃಷಭ, ಕನ್ಯಾಮಾಸದ ಅಮಾವಾಸ್ಯಾ ದಿನವು ಮೂರು ದಿನವು. ಇದು ಹಿಂದೆ ಹೇಳಿದ ಸಾರಾಂಶವು.

ನ ಪೈತೃಯಜ್ಞಿಯೋ ಹೋಮೋ ಲೌಕಿಕೇಽಗ್ನೌ ವಿಧೀಯತೇ ।
ನ ದರ್ಶೇನ ವಿನಾ ಶ್ರಾದ್ಧಮಾಹಿತಾಗ್ನೇರ್ದ್ವಿಜನ್ಮನಃ ॥ ೨೮೨

ಶ್ರಾದ್ಧದಲ್ಲಿ ಪಿತೃಯಜ್ಞಾಂಗವಾದ ಅಗ್ನೌಕರಣ ಹೋಮವನ್ನು ಲೌಕಿಕಾಗ್ನಿಯಲ್ಲಿ ಮಾಡಬಾರದು. ಶ್ರೌತಸ್ಮಾರ್ತ ಅಗ್ನಿಯಾಗಬೇಕು. ಅದಿಲ್ಲ ವಾದರೆ ಪಾಣಿ ಹೋಮವಾಗಬೇಕು. ಅಗ್ನ್ಯಾಧಾನಮಾಡಿದ ಶ್ರೌತಾಗ್ನಿ ಸಂಪನ್ನನು ದರ್ಶದಲ್ಲೇ ಪಾರ್ವಣ ಮಾಡಬೇಕು. ಇತರರು ಹಿಂದೆ ಹೇಳಿದ ಸಾಮಾನ್ಯ ತಿಥಿಗಳಲ್ಲಿ ಮಾಡಬಹುದು.

ಯದೇವ ತರ್ಪಯತ್ಯದ್ಭಿಃ ಪಿತೄನ್ ಸ್ನಾತ್ವಾ ದ್ವಿಜೋತ್ತಮಃ ।
ತೇನೈವ ಕೃತ್ಸ್ನಮಾಪ್ನೋತಿ ಪಿತೃಯಜ್ಞಕ್ರಿಯಾಫಲಂ ॥ ೨೮೩

ಏಕೋದ್ದಿಷ್ಟ ವಿಧಾನದ ನಿತ್ಯಶ್ರಾದ್ಧವನ್ನು ಪಂಚಯಜ್ಞದೊಡನೆ ಮಾಡಲು ಸಾಧ್ಯವಿಲ್ಲವಾದರೆ ಸ್ನಾನದಕೂಡಲೆ ಜಲತರ್ಪಣವನ್ನಾದರೂ ಮಾಡಿ ದರೆ ಶ್ರಾದ್ಧಫಲವು ಲಭಿಸುವುದು.

ವಸೂನ್ವದಂತಿ ತು ಪಿತೄನ್ ರುದ್ರಾಂಶ್ಚೈವ ಪಿತಾಮಹಾನ್ ।
ಪ್ರಪಿತಾಮಹಾಂಸ್ತಥಾದಿತ್ಯಾನ್ ಶ್ರುತಿರೇಷಾ ಸನಾತನೀ ॥ ೨೮೪

ವಸು, ರುದ್ರ, ಆದಿತ್ಯರೂಪದಿಂದ ಪಿತೃ-ಪಿತಾಮಹ-ಪ್ರಪಿತಾಮಹ ರನ್ನು ಧ್ಯಾನಿಸಿ ಶ್ರಾದ್ಧ ಮಾಡಬೇಕು.

ವಿಘಸಾಶೀ ಭವೇನ್ನಿತ್ಯಂ ನಿತ್ಯಂ ವಾಮೃತಭೋಜನಃ ।
ವಿಘಸೋ ಭುಕ್ತಶೇಷಂ ತು ಯಜ್ಞಶೇಷಂ ತಥಾಮೃತಂ ॥ ೨೮೫

ಧನ, ಆರೋಗ್ಯ ಇರುವಾಗ ಅತಿಥಿಸತ್ಕಾರ ಯಾಗಗಳಿಂದ ದೇವ ಸಂತರ್ಪಣೆಗೆ ತಪ್ಪಬಾರದು. ಅತಿಥಿಶೇಷಭೋಜನ, ಯಜ್ಞಶೇಷ ಪುರೋತಾಶಗಳು, ಪುಣ್ಯಗಳು.

ಏತದ್ವೋಽಭಿಹಿತಂ ಸರ್ವಂ ವಿಧಾನಂ ಪಾಂಚಯಜ್ಞಿಕಂ ।
ದ್ವಿಜಾತಿಮುಖ್ಯವೃತ್ತೀನಾಂ ವಿಧಾನಂ ಶ್ರೂಯತಾಮಿತಿ ॥ ೨೮೬

ಈವರೆಗೆ ದೇವ, ಪಿತೃ, ತಿರ್ಯಚ್, ಮನುಷ್ಯ, ಬ್ರಹ್ಮಯಜ್ಞಗಳು ವಿವರಿಸಲ್ಪಟ್ಟವು. ಇನ್ನು ಮನುಷ್ಯರ ಜೀವನೋಪಾಯಗಳನ್ನು ಹೇಳುತ್ತೇನೆ.

# ಅಧ್ಯಾಯ ೪.

ಚತುರ್ಥಮಾಯುಷೋ ಭಾಗಮುಷಿತ್ವಾದ್ಯಂ ಗುರೌ ದ್ವಿಜಃ ।
ದ್ವಿತೀಯಮಾಯುಷೋ ಭಾಗಂ ಕೃತದಾರೋ ಗೃಹೇ ವಸೇತ್ ॥ ೧

ಆಯುಸ್ಸು ಯಾರದೂ ಮೊದಲು ತಿಳಿಯದು. ಅವರವರ ಆಯುಸ್ಸು ಏರುಪೇರಾದರೆ ಅದರ ಭಾಗವೂ ಸಮವಾಗದು. ಆದುದರಿಂದ ಪುರುಷಾಯುಸ್ಸು ನೂರುವರ್ಷದಿಂದ ವ್ಯವಹರಿಸಬೇಕು. ಆದರೂ ಇಚ್ಛೆ, ಅನುಕೂಲಗಳಿಂದ ಬ್ರಹ್ಮಚರ್ಯಾ-ವಿವಾಹ ಕಾಲವು ಭಿನ್ನಭಿನ್ನವಾಗುವುದು. ಪ್ರತಿ ವ್ಯಕ್ತಿಗೂ ಸಮಾನವಲ್ಲ. ಕುಟುಂಬದ ಹಿರಿಯರು ಅಕಾಲಮೃತ್ಯುವಶರಾಗಿ ಗೃಹಭಾರವು ಬ್ರಹ್ಮಚಾರಿಯನ್ನು ಅವಲಂಬಿಸುವಾಗ ಗುರುಕುಲವಾಸವನ್ನು ಬಿಟ್ಟು, ತಾಯಿ, ಕಿರಿಯರ ಪೋಷಣೆಯ ಹೊರೆಯನ್ನು ಹೊರುವಾಗ ಅಧ್ಯಯನವು ಕುಂಠಿತವಾಗುವುದು. (ವಿವಾಹೇಚ್ಛೆಯು) ಪೂರ್ವ ಪುಣ್ಯದ ಬಲದಿಂದ ಪುಂಸ್ತ್ವವು ಕ್ಷೀಣರೂಪದಲ್ಲಿದ್ದಾಗ, ವೈರಾಗ್ಯವು ಪ್ರಬಲವಾಗಿ, ವಿವಾಹೇಚ್ಛೆಯು ದುರ್ಬಲವಾಗುವುದು. ಆದುದರಿಂದಲೂ ವಿವಾಹಕಾಲದ ನಿಯಮವು ವ್ಯಕ್ತಿಯ ಮನೋವೃತ್ತಿಯನ್ನು ಅವಲಂಬಿಸುವುದಲ್ಲದೆ ವಯದ ಸಂಖ್ಯೆಯನ್ನಲ್ಲ. ಸಾಮಾನ್ಯವಾಗಿ ಹೇಳುವುದಾದರೆ ಪುರುಷಾಯುಸ್ಸಿನ ನಾಲ್ಕನೆ ಭಾಗ-ಇಪ್ಪತ್ತೈದು ವಯಸ್ಸಿನ ಸಮಯವು ಮದುವೆಯ ಕಾಲವು. ಸಂಖ್ಯೆಯಲ್ಲಿ ಪ್ರಾಧಾನ್ಯವಿದ್ದರೆ ಬ್ರಹ್ಮಚರ್ಯ ಕಾಲವನ್ನು ಉಪನಯನದಿಂದ ಮೂವತ್ತಾರು ಎಂದು ಹಿಂದಿನ ಅಧ್ಯಾಯದ ಆರಂಭದಲ್ಲಿ ಮನು ವಿರುದ್ಧವಾಗಿ ಹೇಳಲಾರನು. ಉಚಿತಾನುಕೂಲವಿದ್ದವನು ಹೀಗೂ ಮಾಡಬಹುದೆಂದು ಸ್ವೇಚ್ಛೆಯ ನಿಯಮವನ್ನು ಬೋಧಿಸುವುದೇ ಉದ್ದೇಶವು. ಮನುಷ್ಯನು ಮನಸ್ಸಿನ ಅಧೀನನು. ಮದುವೆಯಾಗಿ ಹೆಂಡತಿಯೊಡನೆ ಮನೆಯಲ್ಲಿ ಹಿಂದೆ

ಹೇಳಿದ ವಿಧಿಗಳನ್ನು ಆಚರಿಸುತ್ತ ವಾಸವಾಗಿರಬೇಕು. ಧರ್ಮನಿಯಮವು ಆ ರೀತಿಯಾದರೆ ವೃತ್ತಿನಿಯಮದ ವಿವರವು ಉಪಕ್ರಾಂತವಾಗುವುದು.

ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣ ವಾ ಪುನಃ ।
ಯಾ ವೃತ್ತಿಸ್ತಾಂ ಸಮಾಸ್ಥಾಯ ವಿಪ್ರೋ ಜೀವೇದನಾಪದಿ ॥ ೨

ಯುದ್ಧ, ಅರಾಜಕತ್ವ, ಕ್ಷಾಮಡಾಮರ, ದುಷ್ಟನಾಯಕತ್ವಗಳಿಂದ ದೇಶವು ಅರ್ಥಧರ್ಮ ವ್ಯವಸ್ಥೆಗಳಿಂದ ಕೆಟ್ಟು ಹೋದಾಗ ಮನುವಿನ ನಿತ್ಯ ಧರ್ಮವು ಅಲ್ಲಿಗೆ ಸಂಬಂಧಿಸುವುದಿಲ್ಲ. ಮನುಮತದ ಧರ್ಮ, ಅರ್ಥ, ಕಾಮ ವ್ಯವಸ್ಥೆಯು ಸಮರ್ಥನಾಯಕತ್ವದಿಂದ ಶಾಸನವಾಗಿ ಸದಾಚಾರ ಪ್ರವೃತ್ತಿಯು ಪ್ರಜೆಗಳಲ್ಲಿ ನೆಲೆಯಿದ್ದಾಗ ಮನು ಧರ್ಮಗಳು ಕ್ಷೇಮದಾಯಕಗಳು. ಜಗತ್ತಿನ ಸಕಲ ಪ್ರಜೆಗಳೂ, ಶಾಸಕರೂ, ಶಾಸ್ಯರೂ ಮನುಧರ್ಮ ಪರಾಯಣರಾದರೆ ಮನುವರ್ಣನೆಯ ಸುಭಿಕ್ಷವು ನಿರಾತಂಕವಾಗಿ ನಿಃಸಂಶಯವಾಗಿ ಸಂಪೂರ್ಣ ಸ್ವರೂಪದಲ್ಲಿ ಪ್ರತ್ಯಕ್ಷವಾಗಿ ಸುಖಮಯವಾಗುವುದೆಂದು ಮನುಹೃದಯವು ಅಪವಾದವಿಲ್ಲದುದು. ಹೆಚ್ಚಿನ ವಿಷಯವನ್ನು ರಾಜಧರ್ಮದಲ್ಲಿ ಆಯಾ ಕಾಲದ ಸುವ್ಯವಸ್ಥೆಯ ತುಲನಾತ್ಮಕ ವಿಚಾರದೊಡನೆ ನಿರೂಪಿಸಲಾಗುವುದು. ಅದರ ಸಂಕ್ಷೇಪ ರೂಪವು ಇಲ್ಲಿ ಮನುವಿನಿಂದ ಬೀಜಪ್ರಾಯವಾಗಿ ಉಪ್ತವಾಗುವುದು. ಯಾವುದೇ ಪ್ರಾಣಿಗೆ ಪೀಡೆಯಿಲ್ಲದೆ ತಾನು ಜೀವಿಸಬೇಕು. ಅಥವಾ ಅಲ್ಪ ಪೀಡೆಯ ವಿಧಾನವನ್ನು ಆಶ್ರಯಿಸಬೇಕು. ಇದು ಉತ್ತಮ ಜೀವನವು. ಇಲ್ಲವಾದರೆ ವ್ಯಾಘ್ರಾದಿಗಳಂತೆ ಹಿಂಸಾ ಜೀವನವು.

ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ ।
ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಂ ॥ ೩

ಇದು ಜಗತ್ತಿನಲ್ಲಿ ಮಹೋನ್ನತ ಜೀವನವು. ಶರೀರವನ್ನು ಮಿತಿಮೀರಿ ದಂಡಿಸಬಾರದು. ಜೀವನವು ಧರ್ಮಕಾರ್ಯವು ಮಾತ್ರ ನಿಷ್ಪನ್ನವಾಗಬೇಕು. ಕುತ್ಸಿತವಲ್ಲದ ಕರ್ಮವು ಉಪಾಯವಾಗಿರಬೇಕು. ಹೀಗೆ ಧನಾರ್ಜನೆ ಮಾಡುವ ಉದ್ದೇಶವನ್ನು ತಾಳಬೇಕು. ಉಡದೆ, ಉಣ್ಣದೆ, ಕೊಡದೆ ಹಣ ಕೂಡಿಟ್ಟು ಕಣ್ಣುಮುಚ್ಚುವವರು, ಹಣದ ರಾಶಿಯ ಮೇಲೆ ಮಲಗಿ ನಿದ್ದೆ

ಮಾಡುವವರು, ಮರಣ, ಹಿಂಸೆ, ಮೋಸ, ಸುಳ್ಳುಗಳಿಂದಲಾದರೂ ಹಣ ಗಳಿಸುವವರು, ಕೂಡಿದ ಹಣದಿಂದ ಹಸಿದವರ, ರಾಜರ, ಕಳ್ಳರ, ತುಂಟರ, ಮನ ಕೆರಳಿಸುವವರು, ದುಡಿಯುವ ಕಾಯುವ ಸದ್ವಿನಿಯೋಗ ಮಾಡುವ ಅರಿವಿಲ್ಲದ ಉತ್ತರಾಧಿಕಾರಿಯ ಮದಮತ್ತತೆ—ಸ್ವೈರ ವೃತ್ತಿಗೆ ನೀರೆರೆಯುವವರು, ಈ ಪದ್ಯದ ವಿಷಯವನ್ನು ಮನದಣಿಯೆ ಆಲೋಚಿಸಬೇಕು. ಹೀಗೆ ಆದರೆ ಅವನು ಎಂದೂ ಯಾರಿಗೂ ಹೇಗೂ ಅಸಂತೋಷಪಾತ್ರನಾಗುವನೇ ? ಇಂತಹ ಬ್ರಾಹ್ಮಣನು ಆದರ್ಶಜೀವಿಯಲ್ಲವೊ ? ಇನ್ನಾರ ವರ್ತನೆಯು ಇದ ರಿಂದ ಮೇಲ್ಪಟ್ಟದ್ದಿದೆ ? ಅಂತಹರು ಉಸಿರೆತ್ತಲಿ. ಆಮೇಲೆ ಭಾರತ ಧರ್ಮವನ್ನು—ಬ್ರಾಹ್ಮಣನನ್ನು ಒರೆಹಚ್ಚಲು ಒರೆಗಲ್ಲು ತರಲಿ. ಅವನಾರು ಈ ಎದೆಗಾರನು. ಅರಣ್ಯರೋದನದಂತೆ ಕೆಲ ದುಷ್ಟರ ಕಂಡು ಬಾಯ್ಬಿರಿಯೆ ಒದರಿದರೆ ಅದು ಸಾರ್ಥಕವಲ್ಲ. ಎಲ್ಲೂ ಎಂದೂ ಎಲ್ಲವೂ ಚಿನ್ನ ಅಪರಂಜಿ ಯಲ್ಲ. ಗೃಧ್ರದೃಷ್ಟಿಯ ದೋಷಪಕ್ಷಪಾತವು ಘನತೆಯಲ್ಲ. ಗುಣದೃಷ್ಟಿಯು ತೆರೆಯಲಿ. ಪಿತ್ತ ಇಲ್ಲವೆ ಬಣ್ಣದ ಕನ್ನಡಿ ತೆಗೆಯಲಿ.

ಋತಾಮೃತಾಭ್ಯಾಂ ಜೀವೇತ್ತು ಮೃತೇನ ಪ್ರಮೃತೇನ ವಾ ।
ಸತ್ಯಾನೃತಾಭ್ಯಾಮಪಿ ವಾ ನ ಶ್ವವೃತ್ತ್ಯಾ ಕದಾಚನ ॥ ೪

ಋತಮುಂಛಶಿಲಂ ಜ್ಞೇಯಮಮೃತಂ ಸ್ಯಾದಯಾಚಿತಂ ।
ಮೃತಂ ತು ಯಾಚಿತಂ ಭೈಕ್ಷಂ ಪ್ರಮೃತಂ ಕರ್ಷಣಂ ಸ್ಮೃತಂ ॥ ೫

ಸತ್ಯಾನೃತಂ ತು ವಾಣಿಜ್ಯಂ ತೇನ ಚೈವಾಪಿ ಜೀವ್ಯತೇ ।
ಸೇವಾ ಶ್ವವೃತ್ತಿರಾಖ್ಯಾತಾ ತಸ್ಮಾತ್ತಾಂ ಪರಿವರ್ಜಯೇತ್ ॥ ೬

ಗದ್ದೆ ಬೆಳೆಕೊಯ್ದು ಯಾರೂ ಹೆಕ್ಕದೆ ಬಿಟ್ಟ ಧಾನ್ಯದ ಕಾಳನ್ನು ಅಥವಾ ತೆನೆಯನ್ನು ಹೆಕ್ಕಿ ಅದನ್ನು ತಿಂದು ಜೀವಿಸುವುದು ಉತ್ತಮ. ಇದರ ಮೇಲಿನವು ಕ್ರಮವಾಗಿ ಜ್ಞಾನೋಪಾಸನೆಗೆ ವಿಘ್ನಗಳಾದ್ದರಿಂದ ನಿಮ್ನ ವರ್ಗ ದವು. ಬೇಡದೆ ಇರುತ್ತ ಮಾಡುವ ಅದುಷ್ಟ ಜೀವನವನ್ನು ನೋಡಿ ಅಧ್ಯ ಯನ, ಉಪಾಸನೆಗಳಿಂದ ವೇದ ಅದರರ್ಥ ಬ್ರಹ್ಮಗಳ ಪ್ರಚಾರ ಕ್ಷಣಗಳನ್ನು ನಿರಂತರ ಕಾಯುವ ಸದುದ್ದೇಶದಿಂದ ದಯಾಳುಗಳು ಕೊಡುವುದನ್ನು ಸ್ವೀಕ ರಿಸಿ ಜೀವನ ಮಾಡುವುದು ಒಂದು ರೀತಿ. ಭಿಕ್ಷೆ ಬೇಡಿ ಕೊಟ್ಟದ್ದನ್ನು ತಂದು

ತಿಂದು ಸ್ವಕರ್ತವ್ಯ ನಿರ್ವಹಿಸುತ್ತಿರುವುದು ಬೇರೆ ರೀತಿ. ತಾನು ಉತ್ತು ಬಿತ್ತಿ ಬೆಳೆದು ತಂದು ತುಂಬಿ ಧರ್ಮ–ಕರ್ಮ ಮಾಡುತ್ತಿರುವುದು ಒಂದು ಪದ್ಧತಿ. ಹಣಕೊಟ್ಟು ತಂದು ಕುಳಿತು ಲಾಭಕೂಡಿಸಿ ಮಾರಾಟ ಮಾಡಿ ಬದುಕುವ ವಾಣಿಜ್ಯವು ಒಂದು ಜೀವನೋಪಾಯ; ತಾನು ಸ್ವಯಂ ಉತ್ಪಾದನೆಯ ವಿಧಿ ವಿಧಾನಗಳನ್ನು ತಿಳಿದು ಆಚರಿಸಿ ಉತ್ಪಾದಿಸಲು, ಹಿಂದೆ ಹೇಳಿದ ಒಂದು ಉಪಾಯವೂ ಮೆಚ್ಚದೆ ಮಾಡಲು ಆಗದೆ, ಪರಿಮಿತ ಲಾಭದ ಬುದ್ಧಿದಾಸ್ಯದ ವೇತನ ಪಡೆದು ಬಾಳುವ ಉದ್ದೇಶವು ಕೊನೆಯದು. ಬೇರೇನೂ ದಾರಿಯಿಲ್ಲದ ದುರ್ಭರ ಜೀವನದಲ್ಲಿ ಪ್ರಾಣರಕ್ಷಣೆ ಮಾಡಿ ಪುಣ್ಯಶೇಷದಿಂದ ಜ್ಞಾನೋದಯದ ಮಂದಪ್ರಕಾಶವನ್ನು ನಿರೀಕ್ಷಿಸುತ್ತ ಹೀಗಾದರೂ ಬದುಕಬಹುದು. ಜೀವಂ ಭದ್ರಾಣಿ ಪಶ್ಯತಿ. ಬುದ್ಧಿದಾಸ್ಯತೆಯೇ ವೇತನದ ಪರಕಾರ್ಯ ವ್ಯಾಪೃತ ಜೀವನಕ್ಕೆ ದೋಷವು. ಅನ್ಯಥಾ ಸೇವೆಗೆ ಸ್ವಯಂ ಅಪಾವಿತ್ರ್ಯವಿಲ್ಲ. ಸ್ವಕಾರ್ಯದಂತೆಯೇ ಇರುವುದು ಪರಕಾರ್ಯವು. ತನ್ನ ಬಟ್ಟೆ ಶುಚಿಗೊಳಿಸಿದಂತೆಯೆ ಇತರರ ಬಟ್ಟೆ ಶುಚಿಗೊಳಿಸುವುದು. ಬಟ್ಟೆ ಸಮಾನ. ತನ್ನದು ಅವನದು ಬೇರೆ. ತನ್ನ ಜ್ಞಾನಾಧೀನ ಸ್ವೇಚ್ಛೆಯ ಕರ್ಮದಿಂದ ತಾನು ಏನೂ ಮಾಡಲಾಗದ ಮಂದಮತಿಯಲ್ಲವಾದರೆ ಪರ ಸೇವೆಯ ವೇತನವು ಅವಶ್ಯವಿಲ್ಲ. ಬುದ್ಧಿದಾರಿದ್ರ್ಯವು ಅಲ್ಲಿ ದೊಡ್ಡ ಕೊರತೆ ಕರ್ಮವಲ್ಲ.

ಕುಸೂಲಧಾನ್ಯಕೋ ವಾ ಸ್ಯಾತ್ಕುಂಭೀಧಾನ್ಯಕ ಏವ ವಾ ।
ತ್ರ್ಯಹೈಹಿಕೋ ವಾಪಿ ಭವೇತ್ ಅಶ್ವಸ್ತನಿಕ ಏವ ವಾ ॥ ೭

ಮೂರು ವರ್ಷಪರ್ಯಂತ ಅಥವಾ ಹೆಚ್ಚು ಸಮಯ ಕುಟುಂಬ ಪೋಷಣೆಗೆ ಸಾಕಾಗುವ ಧನ-ಧಾನ್ಯ ಸಂಗ್ರಹ ಉಳ್ಳವನು, ಒಂದು ವರ್ಷ ಜೀವನ ಪರ್ಯಾಪ್ತ ಸಂಪನ್ನನು, ಮೂರು ದಿನಕ್ಕೆ ಉಳ್ಳವನು, ನಾಳೆಗಿಲ್ಲದವನು, ಹೀಗೆ ಸಂಪತ್ತಿ ಸಂಗ್ರಹದಲ್ಲಿ ಪ್ರಮಾಣ ಭೇದವು. ಇದರ ಗುಣವು ಮುಂದಿನ ಶ್ಲೋಕದಲ್ಲಿ ಹೇಳಲಾಗುವುದು.

ಚತುರ್ಣಾಮಪಿ ಚೈತೇಷಾಂ ದ್ವಿಜಾನಾಂ ಗೃಹಮೇಧಿನಾಂ ।
ಜ್ಯಾಯಾನ್ ಪರಃ ಪರೋ ಜ್ಞೇಯೋ ಧರ್ಮತೋ ಲೋಕಜಿತ್ತಮಃ ॥ ೮

ಅಧಿಕ ಸಂಗ್ರಹ ಬುದ್ಧಿಯು ಇತರ ಪ್ರಜೆಗೆ ಕೆಲವೊಮ್ಮೆ ಪೀಡಾಕರವು. ವಿತ್ತಪಾರವಶ್ಯದಿಂದ ಕರ್ತವ್ಯಪ್ರಜ್ಞೆಯು ಮಲಿನವಾಗುವುದು. ಆದುದರಿಂದ ರಾಜಾಗ್ರಹಾದಿಹೇತುವಲ್ಲದ ಅಲ್ಪ ಸಂಗ್ರಹವುಳ್ಳವನಾಗಿರುವುದು ಪ್ರಶಸ್ತ.

**ಷಟ್ಕರ್ಮೈಕೋ ಭವತ್ಯೇಷಾಂ ತ್ರಿಭಿರನ್ಯಃ ಪ್ರವರ್ತತೇ ।**
**ದ್ವಾಭ್ಯಾಮೇಕಶ್ಚತುರ್ಥಸ್ತು ಬ್ರಹ್ಮಸತ್ರೇಣ ಜೀವತಿ ॥ ೯**

ಮನುವು ದಾಯಭಾಗದಲ್ಲಿ ಅವಿಭಕ್ತ ಕುಟುಂಬ ಪದ್ಧತಿ-ಜ್ಯೇಷ್ಠಪುತ್ರನ ಆಧಿಪತ್ಯವನ್ನು ಉತ್ತಮ ಪಕ್ಷವೆನ್ನುತ್ತಾನೆ. ಎಂದರೆ ಒಬ್ಬ ತಂದೆಯ ಬಹು ಸಂತತಿಯು ವಿಕಲ, ದುರ್ಬಲ, ಮಂದ, ಅನಾಥ ಬಂಧು-ಬಾಂಧವರು ತನ್ನನ್ನು ಸಂತಾನ ಪಾರಂಪರ್ಯ ಆಶ್ರಯಿಸಿದ ಸೇವಕವರ್ಗ ಇವರನ್ನು ಪೋಷಿಸುವ ಹೊಣೆಯು ಗೃಹಪತಿಯಾದ ಜ್ಯೇಷ್ಠಪುತ್ರನದಾಗುವುದು. ತಂದೆಯ ಸಕಲ ದ್ರವ್ಯಾಧಿಕಾರಿಯು ಅವನು. ಅವನ ನಾಯಕತ್ವದಲ್ಲಿ ತಂದೆಯಲ್ಲಿ ಹೇಗೋ ಹಾಗೆ ಇತರರು ಬಾಳಬೇಕು. ಆಗ ಈ ಅನುಯಾಯಿ ಸೋದರ ವರ್ಗ, ಬಂಧು ವರ್ಗ (ಮಾತಾಪಿತೃ) ಸೇವಕವರ್ಗದ ಉತ್ಸಾಹ ಜೀವನ ಸ್ವಾಮಿನಿಷ್ಠೆ, ಅಕಪಟ ಆರ್ಜನೆಗೆ ತಕ್ಕುದಾದ ವಿಶಾಲವಾದ ಭೂಮಿ, ಗೋ, ಪಶು, ಅಶ್ವ, ಧನಕನಕ, ಕೃಷಿ, ವಾಣಿಜ್ಯವನ್ನು ಅವನು ನಿರ್ವಹಿಸಬಲ್ಲನು. ಉತ್ಪಾದನೆಯು ಮೇಲ್ಮಟ್ಟಕ್ಕೆ ಏರುವುದು. ಈ ಸಹಚರರಿಂದ ಕುಸೀದಾದಿಯಿಂದಲೂ ದ್ರವ್ಯಾರ್ಜನೆ ಮಾಡಿ ವಿಧಿವತ್ತಾಗಿ ಅದರ ಸದುಪಯೋಗಕ್ಕೆ ಸೋಮ, ಹವಿಸ್ಸುಗಳ ಯಾಗ ಬಹುವಿಧ ಶ್ರಾದ್ಧ, ಅಗ್ನಿಹೋತ್ರ, ವೈಶ್ವದೇವಾದಿ ಪಂಚಯಜ್ಞ. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳನ್ನು ಸಾಧಿಸುವನು. ಅನಾಯಾಸವಾದ ಈ ಸತ್ರವು ಬಹುಫಲವಾಗಿ ವಿಶಾಲ ಕುಟುಂಬವು ಶಾಂತವಾಗಿ ಕರ್ತವ್ಯ ಪರಾಯಣವಾಗಿ ಸರ್ವಾಂಗಸುಂದರ ಜೀವನ ನಡೆಸಿ ಸಂತುಷ್ಟಿಯ ಖನಿಯಾಗುವುದು. ಇಂತಹ ಕುಟುಂಬವು ಊರೆಲ್ಲ ತುಂಬಿದಾಗ ದೇಶವೇ ಸುಭಿಕ್ಷವಾಗುವುದು. ಇಂತಹ ಲೋಕಯಾತ್ರೆಯು ಮನುಸಮ್ಮತವಾದುದರಿಂದ್ದ ಮೂರು, ಒಂದು ವರ್ಷಗಳ ಕಡಿಮೆ ಸಮಯದ ಕುಟುಂಬ ಜೀವನ ವ್ಯಯದ ಸಂಪತ್ತು ಅನೇಕ ಗೃಹಸ್ಥರಿಗೆ ಇರಬಹುದು.

ಅದು ಅವರ ಬುದ್ಧಿ, ದಕ್ಷತೆ, ಯೋಗ್ಯತೆ, ಪುಣ್ಯಗಳನ್ನು;ಆಧರಿಸಿರುವುದು. ಅಂತಹ ಗೃಹಪತಿಯು ಹಿಂದೆ ಹೇಳಿದ ಯಾವುದೇ ರೀತಿಯ ಜೀವನೋಪಾಯವನ್ನು ಬೆಂಬಲಿಗಳ ಮೂಲಕ ಸಾಧಿಸಿ ಲೋಕಯಾತ್ರೆಯನ್ನು ಪ್ರವರ್ತಿಸಬಹುದು ಎಂದು ವೈವಿಧ್ಯದ ಜೀವನ ಚಿತ್ರವನ್ನು ಕೊಡುತ್ತಾನೆ.

ವರ್ತಯಂಶ್ಚ ಶಿಲೋಂಛಾಭ್ಯಾಮಗ್ನಿಹೋತ್ರಪರಾಯಣಃ |
ಇಷ್ಟೀಃ ಪಾರ್ವಾಯಣಾಂತೀಯಾಃ ಕೇವಲಾ ನಿರ್ವಪೇತ್ಸದಾ || ೧೦

ಅತ್ಯಂತ ಪ್ರಶಸ್ತವಾದ ಶಿಲೋಂಛವೃತ್ತಿಯವರು ಬಹುಧನಸಾಧ್ಯಗಳಲ್ಲದ ಅಗ್ನಿಹೋತ್ರ ದರ್ಶಪೂರ್ಣಮಾಸ ಆಗ್ರಯಣ ಇತ್ಯಾದೀಷ್ಟಗಳನ್ನು ಮಾತ್ರ ಆಚರಿಸುತ್ತಿರಬಹುದು.

ನ ಲೋಕವೃತ್ತಂ ವರ್ತೇತ ವೃತ್ತಿಹೇತೋಃ ಕಥಂಚನ|
ಅಜಿಹ್ಮಾಮಶಠಾಂ ಶುದ್ಧಾಂ ಜೀವೇದ್ಬ್ರಾಹ್ಮಣಜೀವಿಕಾಂ || ೧೧

ಜೀವನೋಪಯೋಗಿ ದ್ರವ್ಯಾರ್ಜನೆಗೆ ಕಪಟ ಆಕರ್ಷಕ ಉಪನ್ಯಾಸ, ಕಸರತ್ತು, ಕಣ್ಣುಕಟ್ಟು, ಸರ್ಕಸ್ಸು ಇವನ್ನು ಮಾಡಬಾರದು. ಪರಿಶುದ್ಧವಾದ ವಿಧಾನವನ್ನು ಹುಡುಕಿ ಮಾಡುತ್ತಿರಬೇಕು.

ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ |
ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ || ೧೨

ಸುಖಾಪೇಕ್ಷೆಯುಳ್ಳವನು ಅದರ ಪ್ರಾಪ್ತಿಗೆ ಇದ್ದುದರಲ್ಲೆ ಸಂತೋಷ ತಂದುಕೊಳ್ಳಬೇಕು. ಹಲವು ಹಂಬಲಿಸಿ ಮನಸ್ಸು ಅಶಾಂತವಾಗಬಾರದು. ಸಂತೋಷದಿಂದ ಸುಖವು ಉಂಟಾಗುವುದು. ಆದುದರಿಂದ ಜೀವನೋಪಾಯ ದ್ರವ್ಯಾರ್ಜನೆಗಳಲ್ಲಿ ಅಧಿಕಾಸಕ್ತಿಯು ಶ್ರೇಯಸ್ಕರವಲ್ಲ. ಅಧಿಕ ಪ್ರಸಂಗದಿಂದ ಅಕಸ್ಮಾತ್ ನಿರೀಕ್ಷಿಸಿದ ಲಾಭವಿಲ್ಲದೆ ನಷ್ಟವಾದರೆ ಪ್ರಬಲಾಘಾತವಾಗಿ ಮನಸ್ಸು ಕರ್ತವ್ಯಗಳಿಗೆ ವಿಘ್ನವಾಗುವುದು. ಅಶಾಂತಸ್ಯ ಕುತಃ ಸುಖಂ—ಗೀತಾ.

ಅತೋಽನ್ಯತಮಯಾ ವೃತ್ತ್ಯಾ ಜೀವಂಸ್ತು ಸ್ನಾತಕೋ ದ್ವಿಜಃ |
ಸ್ವರ್ಗಾಯುಷ್ಯಯಶಸ್ಯಾನಿ ವ್ರತಾನೀಮಾನಿ ಧಾರಯೇತ್ ‖ ೧೩

ಮೇಲೆ ಹೇಳಿದ ಯಾವುದೇ ರೀತಿಯ ಜೀವನೋಪಾಯದಿಂದ ಜೀವಿಸುತ್ತ ಸ್ನಾತಕನು ಆಯಸ್ಸು, ಯಶಸ್ಸು, ಪುಣ್ಯಕರಗಳಾದ ಈ ವ್ರತಗಳನ್ನು ಆಚರಿಸಬೇಕು.

ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ |
ತದ್ಧಿ ಕುರ್ವನ್ ಯಥಾಶಕ್ತಿ ಪ್ರಾಪ್ನೋತಿ ಪರಮಾಂ ಗತಿಂ ‖ ೧೪

ವೇದೋಕ್ತವಾದ ಸ್ವಕರ್ಮಗಳನ್ನು ಬೇಸರವಿಲ್ಲದೆ ಮಾಡಬೇಕು. ಆದರಿಂದ ಅವನಿಗೆ ಶ್ರೇಯಸ್ಸು ಇದೆ.

ನೇಹೇತಾರ್ಥಾನ್ ಪ್ರಸಂಗೇನ ನ ವಿರುದ್ಧೇನ ಕರ್ಮಣಾ |
ನ ವಿದ್ಯಮಾನೇಷ್ವರ್ಥೇಷು ನಾರ್ತ್ಯಾಮಪಿ ಯತಸ್ತತಃ ‖ ೧೫

ಗಾನ, ಸಂಗೀತ, ವಾದ್ಯ, ವಾದನಗಳು ಲಲಿತಕಲೆಗಳು ಇವು ಮಿಶ್ರ ಸಂತತಿಯವರಿಗೆ, ದುಃಖಕಾಲದಲ್ಲಿಯೂ ಅದನ್ನು ಪ್ರೀತಿಸಬಾರದು; ಅದರಿಂದ ಧನಾರ್ಜನೆ ಮಾಡಬಾರದು.

ಇಂದ್ರಿಯಾರ್ಥೇಷು ಸರ್ವೇಷು ನ ಪ್ರಸಜ್ಜೇತ ಕಾಮತಃ |
ಅತಿಪ್ರಸಕ್ತಿಂ ಚೈತೇಷಾಂ ಮನಸಾ ಸನ್ನಿವರ್ತಯೇತ್ ‖ ೧೬

ಪ್ರಿಯಗಂಧರಸಶಬ್ದಸ್ಪರ್ಶರೂಪಗಳಲ್ಲಿ ಅತಿಪ್ರಸಕ್ತಿಯನ್ನು ಮನಸ್ಸಿಗೆ ಉಂಟು ಮಾಡಬಾರದು.

ಸರ್ವಾನ್‌ಪರಿತ್ಯಜೇದರ್ಥಾನ್ ಸ್ವಾಧ್ಯಾಯಸ್ಯ ವಿರೋಧಿನಃ ‖
ಯಥಾತಥಾಧ್ಯಾಪಯಂಸ್ತು ಸಾ ಹ್ಯಸ್ಯ ಕೃತಕೃತ್ಯತಾ ‖ ೧೭

ವೇದಾಧ್ಯಯನ ತದರ್ಥ ವಿಚಾರಗಳಿಗೆ ವಿರೋಧಿಗಳಾದ ಸಕಲ ವ್ಯಾಪಾರಗಳನ್ನು ಬಿಡಬೇಕು. ಆಗಲೇ ಜೀವನಸಾಫಲ್ಯವು. ಇದು ಎಲ್ಲ ವಿಧಿ ನಿಷೇಧಗಳ ಮೂಲ ಸೂತ್ರವು.

ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ ।
ವೇಷವಾಗ್ಬುದ್ಧಿಸಾರೂಪ್ಯಮಾಚರನ್ ವಿಚರೇದಿಹ ॥ ೧೮

ಬಾಲ್ಯದ ಬ್ರಹ್ಮಚರ್ಯೆ, ವಿದ್ಯಾಭ್ಯಾಸ—ಯೌವನದ ಸಹಧರ್ಮಿಣೀ ಸಹಜೀವನ—ಅಪರ ವಯಸ್ಸಿನ ವಿರಾಗ ಜೀವನಗಳಿಗೂ ತನ್ನ ಧನ-ಶಾಸ್ತ್ರ-(ವಿದ್ಯೆ) ಕುಲಗಳಿಗೂ ಉಚಿತವಾದ ವೇಷ, ವಚನ, ಬುದ್ಧಿಗಳನ್ನು ಹೊಂದಿರಬೇಕು. ಸ್ತ್ರೀಮನಮೋಹಕವಾದ ಕಾಮೋತ್ತೇಜಕವಾದ ಗಂಧಮಾಲ್ಯ ಅಲಂಕಾರ ಮಾಷಘೃತಪಯೋರೂಪ ಆಹಾರಗಳು ಯೌವನದ ಹೊರತು ಇತರ ವಯಸ್ಸಿನಲ್ಲಿ ಶೋಭಿಸುವುದಿಲ್ಲ. ಆಗ ವಿಲಾಸವೇಷವು ತನ್ನ ಮತ್ತು ಪತ್ನಿಯ ಮನಃಶಾಂತಿಗೆ ಅವಶ್ಯವಿದೆ. ವಿಷಯಗಳ ಅತ್ಯಂತ ತ್ಯಾಗವು ದೇಹಕ್ಕೆ ಅಪಾಯಕರವು, ಮನಸ್ಸಿನ ಕ್ಷೋಭಕಾರಣವು. ಇದು ವೇಷವಾಕ್ ಬುದ್ಧಿಗಳ ರೀತಿ-ನೀತಿಯ ಸೂತ್ರವು.

ಬುದ್ಧಿವೃದ್ಧಿಕರಾಣ್ಯಾಶು ಧನ್ಯಾನಿ ಚ ಹಿತಾನಿ ಚ ।
ನಿತ್ಯಂ ಶಾಸ್ತ್ರಾಣ್ಯವೇಕ್ಷೇತ ನಿಗಮಾಂಶ್ಚೈವ ವೈದಿಕಾನ್ ॥ ೧೯

ನ್ಯಾಯ, ವ್ಯಾಕರಣ, ಮೀಮಾಂಸಾ, ಸ್ಮೃತಿಗಳು, ಅರ್ಥಶಾಸ್ತ್ರ, ನೀತಿಶಾಸ್ತ್ರಗಳು, ವೈದ್ಯ-ಜ್ಯೋತಿಷಿಗಳು, ವೈದಿಕ ವ್ಯಾಖ್ಯಾನಗಳು ಇವುಗಳನ್ನು ಪ್ರತಿದಿನವೂ ಅವಲೋಕಿಸುತ್ತ ನಿಶಿತಮತಿಯಾಗಬೇಕು.

ಯಥಾ ಯಥಾ ಹಿ ಪುರುಷಃ ಶಾಸ್ತ್ರಂ ಸಮಧಿಗಚ್ಛತಿ ।
ತಥಾ ತಥಾ ವಿಜಾನಾತಿ ವಿಜ್ಞಾನಂ ಚಾಸ್ಯ ರೋಚತೇ ॥ ೨೦

ಶಾಸ್ತ್ರವನ್ನು ಓದಿ ಮನನ ಮಾಡಿದಂತೆ ಆತ್ಮವಿಜ್ಞಾನವು ಉಂಟಾಗುವುದು. ಮತ್ತು ಅದರಲ್ಲಿ ರುಚಿಯುಂಟಾಗುವುದು.

ಋಷಿಯಜ್ಞಂ ದೇವಯಜ್ಞಂ ಭೂತಯಜ್ಞಂ ಚ ಸರ್ವದಾ ।
ನೃಯಜ್ಞಂ ಪಿತೃಯಜ್ಞಂ ಚ ಯಥಾಶಕ್ತಿ ನ ಹಾಪಯೇತ್ ॥ ೨೧

ಹಿಂದೆ ಹೇಳಿದ ಪಂಚಯಜ್ಞವು ಸ್ನಾತಕ ವ್ರತವೂ ಹೌದು.

ಏತಾನೇಕೇ ಮಹಾಯಜ್ಞಾನ್ಯಜ್ಞಶಾಸ್ತ್ರವಿದೋ ಜನಾಃ ।
ಅನೀಹಮಾನಾಃ ಸತತಮಿಂದ್ರಿಯೇಷ್ವೇವ ಜುಹ್ವತಿ ॥ ೨೨

ಯಜ್ಞಶಾಸ್ತ್ರ ಬಲ್ಲವರಾದ ಪ್ರಾಜ್ಞರು ಈ ಪಂಚಯಜ್ಞವನ್ನು ಇಚ್ಛಿಸದೆ ಪಂಚಜ್ಞಾನೇಂದ್ರಿಯ ಸಂಯಮರೂಪವಾಗಿ ಅವನ್ನು ಸಂಪಾದಿಸುತ್ತಾರೆ.

ವಾಚ್ಯೇಕೇ ಜುಹ್ವತಿ ಪ್ರಾಣಂ ಪ್ರಾಣೇ ವಾಚಂ ಚ ಸರ್ವದಾ ।
ವಾಚಿ ಪ್ರಾಣೇ ಚ ಪಶ್ಯಂತೋ ಯಜ್ಞನಿರ್ವೃತ್ತಿಮಕ್ಷಯಾಂ ॥ ೨೩

ಉಪನಿಷತ್ತಿನ ಉಪಾಸನಾಕಾಂಡದಲ್ಲಿ ಹೇಳುವಂತೆ ಪ್ರಾಣವನ್ನು ವಾಕ್ಕಿನಲ್ಲಿ, ವಾಕ್ಕನ್ನು ಪ್ರಾಣದಲ್ಲಿ ಸಂಪಾದಿಸಿ ಯಜ್ಞವು ನಿಷ್ಪನ್ನವಾಗುವುದು ಅಕ್ಷಯ ಫಲವು ಎಂದು ಕೆಲವರು.

ಜ್ಞಾನೇನೈವಾಪರೇ ವಿಪ್ರಾ ಯಜಂತ್ಯೇತೈರ್ಮಖೈಃ ಸದಾ ।
ಜ್ಞಾನಮೂಲಾಂ ಕ್ರಿಯಾಮೇಷಾಂ ಪಶ್ಯಂತೋ ಜ್ಞಾನಚಕ್ಷುಷಾ ॥ ೨೪

ಉಪನಿಷತ್ತಿನ ಜ್ಞಾನಕಾಂಡದಲ್ಲಿ ಉಪದಿಷ್ಟವಾದ ಬ್ರಹ್ಮಜ್ಞಾನವೇ ಪಂಚಯಜ್ಞಗಳ ಮೂಲವಾಗಿರುವುದರಿಂದ ಅವುಗಳು ಅಂತಹವರಿಗೆ ಬ್ರಹ್ಮಜ್ಞಾನ ರೂಪವಾಗಿರುವುದು. ಬಾಹ್ಯರೂಪವು ಪಂಚಯಜ್ಞಗಳಿಗೆ ಅಪ್ರಧಾನವಾಗುವುದು.

ಅಗ್ನಿಹೋತ್ರಂ ಚ ಜುಹುಯಾದಾದ್ಯಂತೇ ದ್ಯುನಿಶೋಃ ಸದಾ ।
ದರ್ಶೇನ ಚಾರ್ಧಮಾಸಾಂತೇ ಪೌರ್ಣಮಾಸೇನ ಚೈವ ಹಿ ॥ ೨೫

ಉಭಯ ಸಂಧ್ಯೆಗಳಲ್ಲಿ ಅಗ್ನಿಹೋತ್ರವು, ಉಭಯಪಕ್ಷಾಂತದಲ್ಲಿ ಎರಡು ಯಾಗವು ಕರ್ಮಾಭಿಲಾಷಿಗಳ ಕಾರ್ಯವು.

ಸಸ್ಯಾಂತೇ ನವಸಸ್ಯೇಷ್ಟ್ಯಾ ತಥರ್ತ್ವಂತೇ ದ್ವಿಜೋಧ್ವರೈಃ ।
ಪಶುನಾ ತ್ವಯನಸ್ಯಾದೌ ಸಮಾಂತೇ ಸೌಮಿಕೈರ್ಮಖೈಃ ॥ ೨೬

ಸಸ್ಯ, ಫಲ, ಧಾನ್ಯಗಳ ನಿಷ್ಪತ್ತಿ ಸಮನಂತರಕಾಲದಲ್ಲಿ ಆಗ್ರಯಣ ಸಸ್ಯೇಷ್ಟಿಯು, ಚಾತುರ್ಮಾಸೇಷ್ಟಿಯು, ಎರಡು ಅಯನಾರಂಭಗಳಲ್ಲಿ ಪಶು

ಯಾಗವು, ವರ್ಷಾಂತದಲ್ಲಿ ಸೋಮಸಾಧ್ಯಗಳಾದ ಅಗ್ನಿಷ್ಟೋಮ, ಮುಂತಾದುವನ್ನು ಮಾಡುತ್ತಿರಬೇಕು.

ನಾನಿಷ್ಟ್ವಾ ನವಸಸ್ಯೇಷ್ಟ್ಯಾ ಪಶುನಾ ಚಾಗ್ನಿ ಮಾನ್ದ್ವಿಜಃ ।
ನವಾನ್ನಮದ್ಯಾನ್ಮಾಂಸಂ ವಾ ದೀರ್ಘಮಾಯುರ್ಜಿಜೀವಿಷುಃ ॥ ೨೭
ನವೇನಾನರ್ಚಿತಾ ಹ್ಯಸ್ಯ ಪಶು ಹವ್ಯೇನಚಾಗ್ನಯಃ ।
ಪ್ರಾಣಾನೇವಾತ್ತುಮಿಚ್ಛಂತಿ ನವಾನ್ನಾಮಿಷಗರ್ಧಿನಃ ॥ ೨೮

ಹೊಸ ಅಕ್ಕಿ ಅನ್ನ, ಮಾಂಸ ಇವು ದೇವತೆಗಳಿಗೆ ಪ್ರಿಯ. ಅವರು ತೃಪ್ತರಾಗಲು ನವಸಸ್ಯೇಷ್ಟಿ ಪಶುಯಾಗಗಳನ್ನು ಮಾಡಬೇಕು. ಆಗ ದೀರ್ಘಾಯುಸ್ಸು ಲಭಿಸುವುದು. ಗೃಹಸ್ಥನು ಸ್ನಾತಕನೇ.

ಆಸನಾಶನಶಯ್ಯಾಭಿರದ್ಭಿರ್ಮೂಲಫಲೇನ ವಾ ।
ನಾಸ್ಯ ಕಶ್ಚಿದ್ವಸೇದ್ಗೇಹೇ ಶಕ್ತಿತೋಽನರ್ಚಿತೋಽತಿಥಿಃ ॥ ೨೯

ಚಾಪೆ, ಪೀಠ, ಅನ್ನ, ನೀರು, ಹಣ್ಣು-ಹಂಪಲು ಕೊಟ್ಟು ಸತ್ಕರಿಸದೆ ಮನೆಯಲ್ಲಿ ಬಂದವರನ್ನು ಸುಮ್ಮಗೆ ಬಿಡಬಾರದು.

ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾಂಛಠಾನ್ ।
ಹೈತುಕಾನ್ ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್ ॥ ೩೦

ವೇದಮತದವರಲ್ಲದ ಇತರರನ್ನು ಅಭ್ಯಾಗತರಾದರೆ ಗೌರವಾದರಗಳಿಂದ ಮಾತನಾಡಿಸುವ ಅವಶ್ಯವಿಲ್ಲ. ಆದರೂ ನಿಂದಾ—ತಿರಸ್ಕಾರ, ಅವಹೇಲನ, ತರ್ಜನ, ಭರ್ತ್ಸನ ಮಾಡದೆ ಅನ್ನದಾನ ಮಾಡಬೇಕು.

ವೇದವಿದ್ಯಾವ್ರತಸ್ನಾತಾನ್ ಶ್ರೋತ್ರಿಯಾನ್ ಗೃಹಮೇಧಿನಃ ।
ಪೂಜಯೇದ್ಧವ್ಯಕವ್ಯೇನ ವಿಪರೀತಾಂಶ್ಚ ವರ್ಜಯೇತ್ ॥ ೩೧

ವೇದವಿದ್ಯಾವ್ರತಸ್ಥರೂ ವೇದಪಾರಕರೂ ಗೃಹಸ್ಥರೂ ಆದ ಸಜ್ಜನರಿಗೆ ದೇವಪಿತೃಶೇಷಾನ್ನವನ್ನು ಬಡಿಸಬೇಕು. ಇತರರಿಗೆ ಬೇರೆ ಅನ್ನ ಮಾಡಿ ಬಡಿಸಬೇಕು.

ಶಕ್ತಿತೋಽಪಚಮಾನೇಭ್ಯೋ ದಾತವ್ಯಂ ಗೃಹಮೇಧಿನಾ ।
ಸಂವಿಭಾಗಶ್ಚ ಭೂತೇಭ್ಯಃ ಕರ್ತವ್ಯೋಽನುಪರೋಧತಃ ॥ ೩೨

ಅಡಿಗೆ ಮಾಡಿ ಉಣ್ಣದ ವಿಮತೀಯ ವಿರಾಗಿಗಳಿಗೆ ಅನ್ನದಾನವು ಗೃಹಸ್ಥನ ಕಾರ್ಯವಾದರೂ ತನ್ನ ಪೋಷ್ಯವರ್ಗಕ್ಕೆ ಕೊರತೆ ಮಾಡಿಕೊಳ್ಳ ಬಾರದು. ಅಂತಹ ಸಂದರ್ಭದಲ್ಲಿ ನಿರಾಕರಣೆಯು ಅಪರಾಧವಲ್ಲ.

ರಾಜತೋ ಧನಮನ್ವಿಚ್ಛೇತ್ಸಂಸೀದನ್ ಸ್ನಾತಕಃ ಕ್ಷುಧಾ ।
ಯಾಜ್ಯಾಂತೇವಾಸಿನೋರ್ವಾಪಿ ನ ತ್ವನ್ಯತ ಇತಿ ಸ್ಥಿತಿಃ ॥ ೩೩

ಜೀವನಕ್ಕೆ ಹಣವಿಲ್ಲವಾದರೆ ದೇಶದ ರಾಜನಿಂದ ತನ್ನಿಂದ ಯಾಗಮಾಡಿಸಿ ಕೊಳ್ಳುವವರಿಂದ ಶಿಷ್ಯನ ರಕ್ಷಕರರಿಂದ ಹಣ ಪಡೆಯಬಹುದು. ಅವರು ಕೊಡುವಂತಿರಬೇಕು. ಬೇರೆಯವರಿಂದ ಕೇಳಿ ತಕ್ಕೊಳ್ಳುವುದು ಭೂಷಣ ವಲ್ಲ. ಅಯಾಚಿತವಾಗಿ ಕೊಟ್ಟರೆ ತೆಕ್ಕೊಳ್ಳುವುದು ಅಪರಾಧವಲ್ಲ. ಅಂತೂ ಹಸಿವಿನಿಂದ ನರಳಬಾರದು.

ನ ಸೀದೇತ್ಸ್ನಾತಕೋ ವಿಪ್ರಃ ಕ್ಷುಧಾ ಶಕ್ತಃ ಕಥಂಚನ ।
ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ ॥ ೩೪

ಹಣವಿರುವಾಗ ಹಸಿದು ಬಳಲುತ್ತ ಹಣ ಕಟ್ಟಿಡಬಾರದು. ಹರುಕು ಕೊಳಕು ಬಟ್ಟೆ ಉಡಬಾರದು. ವಿರಾಗಿಗಳ ಅವಸ್ಥೆಯನ್ನು ಗೃಹಸ್ಥನು ಆಚರಿಸಬಾರದು. ವೈರಾಗ್ಯವಿದ್ದರೆ ಸನ್ಯಾಸಿಯಾಗುವುದಲ್ಲದೆ ಹೆಂಡತಿ ಮಕ್ಕಳನ್ನು ಸಾಕುವವನು ಅವರಿಗೆ ಉಚಿತವಾಗಿ ವರ್ತಿಸಲು ತಪ್ಪಬಾರದು. ಆರಂಭಿಸುವುದು ಒಂದು—ಮಾಡುತ್ತಿರುವುದು ಇನ್ನೊಂದು ಆಗಬಾರದು.

ಕ್ಲಪ್ತಕೇಶನಖಶ್ಮಶ್ರುರ್ದಾಂತಃ ಶುಕ್ಲಾಂಬರಃ ಶುಚಿಃ ।
ಸ್ವಾಧ್ಯಾಯೇ ಚೈವ ಯುಕ್ತಃ ಸ್ಯಾನ್ನಿತ್ಯಮಾತ್ಮಹಿತೇಷು ಚ ॥ ೩೫

ಆರೋಗ್ಯ ಭೇಷಜಸೇವನೆಗಳನ್ನು ಅಲಕ್ಷಿಸಬಾರದು. ವ್ರತ-ತಪಸ್ಸುಗಳು ದೇಹವಿರೋಧಿಯಾಗದಂತೆ ನೋಡುತ್ತಿರಬೇಕು. ಶರೀರಮಾದ್ಯಂ ಖಲು ಧರ್ಮಸಾಧನಂ । ಬಿಳಿ–ಒಳ್ಳೆ–ಶುಚಿ ಕೂದಲು, ಉಗುರು, ಗಡ್ಡ, ಮೀಸೆ

ಗಳನ್ನು ಇಚ್ಛಾನುಸಾರ ಅಲಂಕರಿಸಿರಬೇಕು. ಮತ್ತು ಕೈಕಾಲುಗಳ ಚಪಲತೆ ಯಿಂದ ಸದಾ ಹೆಂಡತಿ-ಮಕ್ಕಳು, ಸೇವಕರು, ಆಶ್ರಿತರಿಗೆ ಹೊಡೆಯುವ ಬಡಿ ಯುವ ಅಭ್ಯಾಸವಿದ್ದರೆ ಪ್ರಾಣಾಪಾಯ ಪ್ರಸಂಗವೂ ಬರುವುದುಂಟು. ಈ ಸಂಯಮದಿಂದಲೂ, ಸುಂದರಾಂಗನಾಗಿಯೂ ಪತ್ನೀಪುತ್ರರಿಗೆ ಆಕರ್ಷಕನಾಗಿರ ಬೇಕು. ಇಲ್ಲವಾದರೆ ಪತ್ನಿಯು ಚಂಚಲಚಿತ್ತಳಾಗಿ ಪರಪುರುಷನ ಮೋಹಕ್ಕೆ, ಸ್ತ್ರೀ ತಿರಸ್ಕಾರಕ್ಕೆ, ಸ್ತ್ರೀಪ್ರಾಣಾಪಾಯಕ್ಕೆ ಎಡೆಯಾಗಬಹುದು. ಕಾಮದ ಸೇವನೆಯನ್ನು ನಿರಾಕರಿಸುವ ಭರದಲ್ಲಿ ಇದನ್ನು ಮರೆತು ತನ್ನ ವಯೋಧರ್ಮ ಕರ್ತವ್ಯವೃಕ್ಷದ ಮೂಲಕ್ಕೆ ಕುಠಾರವಿಡಬಾರದು. ಈ ಕಾಲದ ಅನೇಕ ವೈದಿಕರು ಇದನ್ನು ಎಚ್ಚರದಿಂದ ಅವಧರಿಸಬೇಕು.

ವೈಣವೀಂ ಧಾರಯೇದ್ಯಷ್ಟಿಂ ಸೋದಕಂ ಚ ಕಮಂಡಲುಂ ।
ಯಜ್ಞೋಪವೀತಂ ವೇದಂ ಚ ಶುಭೇ ರೌಕ್ಮೇ ಚ ಕುಂಡಲೇ ॥ ೩೬

ಬಿದಿರಿನ ದೊಣ್ಣೆ, ಜಲಪಾತ್ರ, ಯಜೋಪವೀತ, ದರ್ಭಮುಷ್ಟಿ ಸ್ವರ್ಣ ಕುಂಡಲಗಳನ್ನು ಧರಿಸಬೇಕು.

ನೇಕ್ಷೇತೋದ್ಯಂತಮಾದಿತ್ಯಂ ನಾಸ್ತಂಯಂತಂ ಕದಾಚನ ।
ನೋಪಸೃಷ್ಟಂ ನ ವಾರಿಸ್ಥಂ ನ ಮಧ್ಯಂ ನಭಸೋ ಗತಂ ॥ ೩೭

ಸೂರ್ಯಬಿಂಬವನ್ನು ಎಂದೂ ನೋಡಿರುವುದು ಒಳ್ಳೇದು. ಪ್ರಖರ ಪ್ರಕಾಶವು ನೇತ್ರಹಿತವಲ್ಲ, ಆರೋಗ್ಯಕರವಲ್ಲ.

ನ ಲಂಘಯೇ ದ್ವತ್ಸತಂತ್ರೀಂ ನ ಪ್ರಧಾವೇಚ್ಚ ವರ್ಷತಿ ।
ನ ಚೋದಕೇ ನಿರೀಕ್ಷೇತ ಸ್ವಂ ರೂಪಮಿತಿ ಧಾರಣಾ ॥ ೩೮

ಕರುಗಳನ್ನು ಕಟ್ಟಿದ ಬಳ್ಳಿಯನ್ನು ದಾಟುವುದು, ಮಳೆಯಲ್ಲಿ ಕೊಡೆಯಿ ಲ್ಲದೆ ಓಡುವುದು, ನೀರಿನಲ್ಲಿ ತನ್ನ ಪ್ರತಿಬಿಂಬ ನೋಡುವುದು ಕೂಡದು. ದೃಷ್ಟಾದೃಷ್ಟಫಲಗಳನ್ನು ಊಹಿಸಬೇಕು. ಇದೆಲ್ಲ ಸದ್ವೃತ್ತವು.

ಮೃದಂ ಗಾಂ ದೈವತಂ ವಿಪ್ರಂ ಘೃತಂ ಮಧು ಚತುಷ್ಪಥಂ ।
ಪ್ರದಕ್ಷಿಣಾನಿ ಕುರ್ವೀತ ಪ್ರಜ್ಞಾತಾಂಶ್ಚ ವನಸ್ಪತೀನ್ ॥ ೩೯

ಎತ್ತಿದಮಣ್ಣು, ಗೋ, ದೇವವಿಗ್ರಹ, ವಿಪ್ರ, ತುಪ್ಪ, ಜೇನು, ನಾಲ್ಕು ದಿಕ್ಕಿಗೆ ಬಾಗಿಲಿರುವ ದೊಡ್ಡಮನೆ, ಪ್ರಸಿದ್ಧ ವನಸ್ಪತಿ ಇವುಗಳನ್ನು ಅಪ್ರದಕ್ಷಿಣವಾಗಿ ನಡೆಯಬಾರದು.

ನೋಪಗಚ್ಛೇತ್ಪ್ರಮತ್ತೋಽಪಿ ಸ್ತ್ರಿಯಮಾರ್ತವದರ್ಶನೇ ।
ಸಮಾನಶಯನೇ ಚೈವ ನ ಶಯೀತ ತಯಾ ಸಹ ॥ ೪೦

ತನ್ನ ಸ್ತ್ರೀಯು ರಜಸ್ವಲೆಯಾದಾಗ ಅವಳ ಎಲ್ಲ ತರದ ಸಂಬಂಧವನ್ನು ಬಿಡಬೇಕು.

ರಜಸಾಭಿಪ್ಲುತಾಂ ನಾರೀಂ ನರಸ್ಯ ಹ್ಯುಪಗಚ್ಛತಃ ।
ಪ್ರಜ್ಞಾ ತೇಜೋ ಬಲಂ ಚಕ್ಷುರಾಯುಶ್ಚೈವ ಪ್ರಹೀಯತೇ ॥ ೪೧
ತಾಂ ವಿವರ್ಜಯತಸ್ತಸ್ಯ ರಜಸಾ ಸಮಭಿಪ್ಲುತಾಂ ।
ಪ್ರಜ್ಞಾ ತೇಜೋ ಬಲಂ ಚಕ್ಷುರಾಯುಶ್ಚೈವ ಪ್ರವರ್ಧತೇ ॥ ೪೨

ರಜಸ್ವಲಾಸಂಗವನ್ನು ಬಿಟ್ಟರೆ ಬುದ್ಧಿ, ವರ್ಚಸ್ಸು, ಬಲನೇತ್ರಶಕ್ತಿ, ಆಯುಸ್ಸು ಕ್ಷೀಣವಾಗದೆ ವೃದ್ಧಿಯಾಗುವುದು.

ನಾಶ್ನೀಯಾದ್ಭಾರ್ಯಯಾ ಸಾರ್ಧಂ ನೈನಾಮೀಕ್ಷೇತ ಚಾಶ್ನತೀಂ ।
ಕ್ಷುವತೀಂ ಜೃಂಭಮಾಣಾಂ ವಾ ನ ಚಾಸೀನಾಂ ಯಥಾಸುಖಂ ॥ ೪೩

ಹೆಂಡತಿಯು ಉಣ್ಣುವಾಗ, ಆಕಳಿಸುವಾಗ, ಸೀನುವಾಗ, ಸುಖಾಸನದಲ್ಲಿರುವಾಗ ಗಂಡನು ನೋಡುತ್ತಿರಬಾರದು. (ಹೆಂಡತಿಯೊಡನೆ ಒಂದು ಪಾತ್ರೆಯಲ್ಲಿ ಉಣ್ಣಬಾರದು.) ಆಗ ನೋಡಿದರೆ ತನಗೆ ಜುಗುಪ್ಸೆಯೂ ಅವಳಿಗೆ ಲಜ್ಜೆಯೂ ವೇಗ ನಿರೋಧವೂ ಉಂಟಾಗುವುದರಿಂದ ಇಬ್ಬರಿಗೂ ಹಿತವಿಲ್ಲ. ಮುಂದೆಯೂ ಇಂತಹದನ್ನು ಹೇಳಲಾಗುವುದು.

ನಾಂಜಯಂತೀಂ ಸ್ವಕೇ ನೇತ್ರೇ ನ ಚಾಭ್ಯಕ್ತಾಮನಾವೃತಾಂ ।
ನ ಪಶ್ಯೇತ್ಪ್ರಸವಂತೀಂ ಚ ತೇಜಸ್ಕಾಮೋ ದ್ವಿಜೋತ್ತಮಃ ॥ ೪೪

ಹೆಂಡತಿಯು ಕಣ್ಣಿಗೆ ಕಾಡಿಗೆ ಸವರುವಾಗ ಮೈಗೆ ಎಣ್ಣೆಸವರುವಾಗ ಮೇಲು ಹೊದಿಕೆಯಿಲ್ಲದಿರುವಾಗ ಮಕ್ಕಳನ್ನು ಹೆರುವಾಗ ಅವಳನ್ನು ನೋಡ

ಬಾರದು. ಅವಳಿಂದ ತಾನು ಆಕರ್ಷಣೆಗೊಳ್ಳುವ ತನ್ನ ಮನಸ್ತೇಜಸ್ಸು ಕ್ಷೀಣವಾಗುವುದು.

ನಾನ್ನಮದ್ಯಾದೇಕವಾಸಾ ನ ನಗ್ನಃ ಸ್ನಾನಮಾಚರೇತ್ ।
ನ ಮೂತ್ರಂ ಪಥಿ ಕುರ್ವೀತ ನ ಭಸ್ಮನಿ ನ ಗೋವ್ರಜೇ ॥ ೪೫

ಒಂದೇ ಬಟ್ಟೆ ಉಟ್ಟುಕೊಂಡು ಉಣ್ಣಬಾರದು, ಬಟ್ಟೆಯಿಲ್ಲದೆ ಬರಿ ಮೈಯಿಂದ ಬತ್ತಲೆಯಾಗಿ ಮೀಯಬಾರದು. ದಾರಿಯಲ್ಲಿ, ಬೂದಿಯಲ್ಲಿ, ಹಟ್ಟಿಯಲ್ಲಿ ಮೂತ್ರ ಬಿಡಬಾರದು.

ನ ಫಾಲಕೃಷ್ಟೇ ನ ಜಲೇ ನ ಚಿತ್ಯಾಂ ನ ಚ ಪರ್ವತೇ ।
ನ ಜೀರ್ಣದೇವಾಯತನೇ ನ ವಲ್ಮೀಕೇ ಕದಾಚನ ॥ ೪೬
ನ ಸಸತ್ವೇಷು ಗರ್ತೇಷು ನ ಗಚ್ಛನ್ನಾಪಿ ಚ ಸ್ಥಿತಃ ।
ನ ನದೀತೀರಮಾಸಾದ್ಯ ನ ಚ ಪರ್ವತಮಸ್ತಕೇ ॥ ೪೭

ನೇಗಿಲಿನಿಂದ ಉತ್ತಹೊಲದಲ್ಲಿ, ನೀರಿನಲ್ಲಿ, ಅಗ್ನಿಕುಂಡದಲ್ಲಿ, ಹಾಳು ಬಿದ್ದ ದೇವಾಲಯದಲ್ಲಿ, ಹುತ್ತದಲ್ಲಿ, ಪ್ರಾಣಿಗಳಿರುವ ಬಿಲದಲ್ಲಿ, ನಿಲ್ಲುತ್ತ, ನಡೆಯುತ್ತ, ನದೀದಡದಲ್ಲಿ, ಗಿರಿಶಿಖರದಲ್ಲಿ ಮೂತ್ರ ವಿಸರ್ಜನೆ ಮಾಡಬಾರದು.

ವಾಯ್ವಗ್ನಿವಿಪ್ರಮಾದಿತ್ಯಮಪಃ ಪಶ್ಯಂಸ್ತಥೈವ ಗಾಃ ।
ನ ಕದಾಚನ ಕುರ್ವೀತ ವಿಣ್ಮೂತ್ರಸ್ಯ ವಿಸರ್ಜನಂ ॥ ೪೮

ವಾಯು, ಅಗ್ನಿ, ವಿಪ್ರ, ಆದಿತ್ಯ, ನೀರು, ಗೋವುಗಳನ್ನು ನೋಡುತ್ತ ಎದುರಾಗಿ ಮಲಮೂತ್ರ ವಿಸರ್ಜನ ಮಾಡಬಾರದು.

ತಿರಸ್ಕೃತ್ಯೋಚ್ಚರೇತ್ ಕಾಷ್ಠಲೋಷ್ಠಪತ್ರತೃಣಾದಿನಾ ।
ನಿಯಮ್ಯ ಪ್ರಯತೋ ವಾಚಂ ಸಂವೀತಾಂಗೋಽವಗುಂಠಿತಃ ।

ಮಲಮೂತ್ರ ವಿಸರ್ಜನೆ ಮಾಡುವ ಮೊದಲು ಆ ಸ್ಥಳಕ್ಕೆ ಕಡ್ಡಿ-ಕಸ, ತರಗೆಲೆ-ಹುಲ್ಲುಗಳಿಂದ ಹಾಸಬೇಕು. ತಲೆ-ಮೈ ಹೊದೆದು ಮುಚ್ಚಿಕೊಂಡು ಮೌನವಾಗಿ ವಿಸರ್ಜನೆ ಮಾಡಬೇಕು.

ಮೂತ್ರೋಚ್ಚಾರಸಮುತ್ಸರ್ಗಂ ದಿವಾ ಕುರ್ಯಾದುದಙ್ಮುಖಃ ।
ದಕ್ಷಿಣಾಭಿಮುಖೋ ರಾತ್ರೌ ಸಂಧ್ಯಯೋಶ್ಚ ತಥಾ ದಿವಾ ॥ ೫೦

ಹಗಲು, ಸಂಧ್ಯಾಕಾಲದಲ್ಲಿಯೂ, ಉತ್ತರಮುಖನಾಗಿಯೂ ರಾತ್ರಿ ದಕ್ಷಿಣಮುಖನಾಗಿಯೂ ಮಲಮೂತ್ರ ವಿಸರ್ಜನೆಯನ್ನು ಮಾಡಬೇಕು.

ಛಾಯಾಯಾಮಂಧಕಾರೇ ವಾ ರಾತ್ರಾವಹನಿ ವಾ ದ್ವಿಜಃ ।
ಯಥಾಸುಖಮುಖಃ ಕುರ್ಯಾತ್ಪ್ರಾಣಬಾಧಾಭಯೇಷು ಚ ॥ ೫೧

ನೆರಳಲ್ಲಿ ಕತ್ತಲಲ್ಲಿ ಹಗಲು-ರಾತ್ರಿಯಾವಾಗಲೂ ಇತರ ಭಯ–ಪ್ರಾಣ ಭಯಗಳಿದ್ದಾಗ ದಿಙ್ನಿಯಮವಿಲ್ಲ.

ಪ್ರತ್ಯಗ್ನಿಂ ಪ್ರತಿಸೂರ್ಯಂ ಚ ಪ್ರತಿಸೋಮೋದಕದ್ವಿಜಾನ್ ।
ಪ್ರತಿಗಾಂ ಪ್ರತಿವಾತಂ ಚ ಪ್ರಜ್ಞಾ ನಶ್ಯತಿ ಮೇಹತಃ ॥ ೫೨

ಕಣ್ಣಿಗೆ ಕಾಣದಿದ್ದರೂ ಅಗ್ನಿ, ಸೂರ್ಯ, ಚಂದ್ರ, ನೀರು, ದ್ವಿಜ, ಗೋ, ವಾಯುಗಳು ಇರುವ ಕಡೆಗೆ ಎದುರಾಗಿ ಮಲಮೂತ್ರ ವಿಸರ್ಜನೆ ಮಾಡಿದರೆ ಪ್ರಜ್ಞಾನಾಶವಾಗುವುದು.

ನಾಗ್ನಿಂ ಮುಖೇನೋಪಧಮೇನ್ನಗ್ನಾಂ ನೇಕ್ಷೇತ ಚ ಸ್ತ್ರಿಯಂ ।
ನಾಮೇಧ್ಯಂ ಪ್ರಕ್ಷಿಪೇದಗ್ನೌ ನ ಚ ಪಾದೌ ಪ್ರತಾಪಯೇತ್ ॥ ೫೩

ಬಾಯಿಂದ ಅಗ್ನಿಯನ್ನು ಊದಬಾರದು, ಬತ್ತಲೆಯಾಗಿ ಸ್ತ್ರೀ ದೇಹವನ್ನು ನೋಡಬಾರದು (ಮೈಥುನಕಾಲ ಹೊರತು), ಮಲವನ್ನು ಬೆಂಕಿಯ ಮೇಲೆ ಎಸೆಯಬಾರದು. ಕಾಲನ್ನು ಬೆಂಕಿಯಿಂದ ಕಾಯಿಸಬಾರದು.

ಅಧಸ್ತಾನ್ನೋಪದಧ್ಯಾಚ್ಚ ನ ಚೈನಮಭಿಲಂಘಯೇತ್ ।
ನ ಚೈನಂ ಪಾದತಃ ಕುರ್ಯಾನ್ನ ಪ್ರಾಣಾಬಾಧಮಾಚರೇತ್ ॥ ೫೪

ಬೆಂಕಿಯನ್ನು ಮಂಚದಡಿಯಲ್ಲಿ, ಕಾಲಕೆಳಗೆ, ಇಟ್ಟುಮಲಗಬಾರದು. ಅಡ್ಡಹಾರಬಾರದು. ಪ್ರಾಣಾಪಾಯದ ಕೆಲಸ ಮಾಡಬಾರದು.

ನಾಶ್ನೀಯಾತ್ಸಂಧಿವೇಲಾಯಾಂ ನ ಗಚ್ಛೇನ್ನಾಪಿ ಸಂವಿಶೇತ್ ।
ನ ಚೈವ ಪ್ರಲಿಖೇದ್ಭೂಮಿಂ ನಾತ್ಮನೋಪಹರೇತ್ಸ್ರಜಂ ॥ ೫೫

ಸಂಧ್ಯಾಕಾಲದಲ್ಲಿ ಉಣ್ಣಬಾರದು, ನಡೆಯಬಾರದು, ಮಲಗಿರಬಾರದು, ನೆಲದಮೇಲೆ ರೇಖೆಯೆಳೆಯಬಾರದು, ತನ್ನ ಕಂಠಮಾಲೆಯನ್ನು ತಾನೇ ತೆಗೆಯಬಾರದು.

ನಾಪ್ಸು ಮೂತ್ರಂ ಪುರೀಷಂ ವಾ ಷ್ಠೀವನಂ ವಾ ಸಮುತ್ಸೃಜೇತ್ ।
ಅಮೇಧ್ಯಲಿಪ್ತಮನ್ಯದ್ವಾ ಲೋಹಿತಂ ವಾ ವಿಷಾಣಿ ವಾ ॥ ೫೬

ನೀರಿನಲ್ಲಿ (ಜಲಾಶಯದಲ್ಲಿ) ಮಲಮೂತ್ರ, ಉಗುಳು, ಮಲಸಹಿತವಾದ ಚಾಪೆ-ಬಟ್ಟೆ ಮುಂತಾದುದು, ರಕ್ತ, ವಿಷಗಳನ್ನು ಹಾಕಬಾರದು.

ನೈಕಃ ಸುಪ್ಯಾಚ್ಛೂನ್ಯಗೇಹೇ ಶ್ರೇಯಾಂಸಂ ನ ಪ್ರಬೋಧಯೇತ್ ।
ನೋದಕ್ಯಯಾಭಿಭಾಷೇತ ಯಜ್ಞಂ ಗಚ್ಛೇನ್ನ ಚಾವೃತಃ ॥ ೫೭

ಜನಶೂನ್ಯಗೃಹದಲ್ಲಿ ತಾನೊಬ್ಬನು ನಿದ್ರಿಸಬಾರದು. ತನಗಿಂತ ಮಹಾತ್ಮನು ನಿದ್ರಿಸುತ್ತಿರುವಾಗ ಎಚ್ಚರಗೊಳಿಸಬಾರದು. ರಜಸ್ವಲಾಸ್ತ್ರೀಯೊಡನೆ ಮಾತಾಡಬಾರದು. (ಆಮಂತ್ರಣ) ವರಣ ಮಾಡದೆ ಯಜ್ಞಕ್ಕೆ ಹೋಗಬಾರದು.

ಅಗ್ನ್ಯಗಾರೇ ಗವಾಂ ಗೋಷ್ಠೇ ಬ್ರಾಹ್ಮಣಾನಾಂ ಚ ಸನ್ನಿಧೌ ।
ಸ್ವಾಧ್ಯಾಯೇ ಭೋಜನೇ ಚೈವ ದಕ್ಷಿಣಂ ಪಾಣಿಮುದ್ಧರೇತ್ ॥ ೫೮

ಅಗ್ನಿಗೃಹ, ಹಟ್ಟಿ, ಬ್ರಾಹ್ಮಣಸಮ್ಮುಖ, ಅಧ್ಯಯನ, ಭೋಜನಗಳ ಸಂದರ್ಭದಲ್ಲಿ ಉತ್ತರೀಯವನ್ನು ಯಜ್ಞೋಪವೀತದಂತೆ ಹೊದೆದು ಬಲಗೈ ಮೇಲಿರುವಂತೆ ಬ್ರಹ್ಮವಸ್ತ್ರವುಳ್ಳವನಾಗಬೇಕು.

ನವಾರಯೇದ್ಗಾಂ ಧಯಂತೀಂ ನ ಚಾಚಕ್ಷೀತ ಕಸ್ಯಚಿತ್ ।
ನ ದಿವೀಂದ್ರಾಯುಧಂ ದೃಷ್ಟ್ವಾ ಕಸ್ಯಚಿದ್ದರ್ಶಯೇದ್ಬುಧಃ ॥ ೫೯

ಗೋವು ತಾನು ನೀರು ಕುಡಿಯುತ್ತಿದ್ದರೂ, ಕರುವಿಗೆ ಹಾಲು ಕುಡಿಸುತ್ತಿದ್ದರೂ ತಡೆಯಬಾರದು, ಹೇಳಲೂಬಾರದು. ಆಕಾಶದಲ್ಲಿ (ಕಾಮನ ಬಿಲ್ಲು) ಇಂದ್ರ ಧನಸ್ಸನ್ನು ಕಂಡು ಯಾರಿಗೂ ತೋರಿಸಬಾರದು.

ನಾಧಾರ್ಮಿಕೇ ವಸೇದ್ಗ್ರಾಮೇ ನ ವ್ಯಾಧಿಬಹುಲೇ ಭೃಶಂ ।
ನೈಕಃ ಪ್ರಪದ್ಯೇತಾಧ್ವಾನಂ ನ ಚಿರಂ ಪರ್ವತೇ ವಸೇತ್ ॥ ೬೦

ಧರ್ಮಿಷ್ಠ ಜನರು ಇಲ್ಲದಿರುವ ಊರಲ್ಲಿ ವಾಸಿಸಬಾರದು, ರೋಗ ವ್ಯಾಪಿಸಿರುವ ದೇಶವನ್ನು ಬಿಡಬೇಕು. ಒಬ್ಬನೇ ದಾರಿ ನಡೆಯಬಾರದು. ಪರ್ವತದಲ್ಲಿ ಬಹುಸಮಯ ನಿಲ್ಲಬಾರದು.

ನ ಶೂದ್ರರಾಜ್ಯೇ ನಿವಸೇನ್ನಾಧಾರ್ಮಿಕಜನಾವೃತೇ ।
ನ ಪಾಷಂಡಿಗಣಾಕ್ರಾಂತೇ ನೋಪಸೃಷ್ಟೇಽಂತ್ಯಜೈರ್ನೃಭಿಃ ॥ ೬೧

ಅಧಾರ್ಮಿಕರಾಜನ ರಾಜ್ಯದ ಊರಸುತ್ತಲೂ-ಹೊರಗೆ ಅಧರ್ಮಿಷ್ಠರು ಇದ್ದರೂ ಆ ಊರು ಒಳ್ಳೆದಲ್ಲ. ವೇದ–ಮತವಿರೋಧಿಗಳಿರುವ ಊರನ್ನು ಬಿಡಬೇಕು.

ನ ಭುಂಜೀತೋದ್ಧೃತಸ್ನೇಹಂ ನಾತಿಸೌಹಿತ್ಯಮಾಚರೇತ್ ।
ನಾತಿಪ್ರಗೇ ನಾತಿ ಸಾಯಂ ನ ಸಾಯಂ ಪ್ರಾತರಾಶಿತಃ ॥ ೬೨

ತೈಲ ಶೂನ್ಯ ರುಕ್ಷ ಆಹಾರ ಸೇವಿಸಬಾರದು, ಅದು ತಾಮಸವು. ಹೊಟ್ಟೆತುಂಬ ಬೇಡ ಎನ್ನುವಷ್ಟು ಉಣ್ಣಬಾರದು. ಬಹಳ ಬೆಳಿಗ್ಗೆ ಬಹಳ ರಾತ್ರೆ ಉಣ್ಣಬಾರದು. ಬೆಳಿಗ್ಗೆ ಹೊಟ್ಟೆ ಬಿರಿಯುವಂತೆ ಉಂಡರೆ ರಾತ್ರೆ ಮತ್ತೆ ಉಣ್ಣಬಾರದು.

ನ ಕುರ್ವೀತ ವೃಥಾಚೇಷ್ಟಾಂ ನ ವಾರ್ಯಂಜಲಿನಾ ಪಿಬೇತ್ ।
ನೋತ್ಸಂಗೇ ಭಕ್ಷಯೇದ್ಭಕ್ಷ್ಯಾನ್ನ ಜಾತು ಸ್ಯಾತ್ಕುತೂಹಲೀ ॥ ೬೩

ಪ್ರಯೋಜನವಿಲ್ಲದ ಕೆಲಸ ಮಾಡಬಾರದು. ಕೈಯಲ್ಲಿ ನೀರು ಕುಡಿಯಬಾರದು. ಮಡಿಲಲ್ಲಿಟ್ಟು ತಿಂಡಿ ತಿನ್ನಬಾರದು. ಯಾವುದಕ್ಕೂ ಅತ್ಯುತ್ಕಂಠೆ ತಾಳಬಾರದು.

ನ ನೃತ್ಯೇದಥವಾ ಗಾಯೇನ್ನ ವಾದಿತ್ರಾಣಿ ವಾದಯೇತ್ ।
ನಾಸ್ಫೋಟಯೇನ್ನ ಚ ಕ್ಷ್ವೇಡೇನ್ನ ಚ ರಕ್ತೋ ವಿರಾವಯೇತ್ ॥ ೬೪

ನರ್ತನ, ಗಾನ, ಚರ್ಮತಂತ್ರೀವಾದ್ಯ, ಹಲ್ಲು ಕಡಿಯುವುದು, ಹೆಗಲು ತಟ್ಟುವುದು, ಮೃಗಪಕ್ಷಿಗಳ ಧ್ವನ್ಯನುಕರಣೆಗಳನ್ನು ಮಾಡಬಾರದು.

ನ ಪಾದೌ ಧಾವಯೇತ್ಕಾಂಸ್ಯೇ ಕದಾಚಿದಪಿ ಭಾಜನೇ |
ನ ಭಿನ್ನಭಾಂಡೇ ಭುಂಜೀತ ನ ಭಾವಪ್ರತಿದೂಷಿತೇ || ೬೫

ಎಂದೂ ಕಂಚಿನ ಪಾತ್ರೆಯಲ್ಲಿ ಕಾಲು ತೊಳೆಯಬಾರದು. ಬಿರುಕು ಬಿಟ್ಟ ಮರ-ಮಣ್ಣು ಪಾತ್ರದಲ್ಲಿ ಉಣ್ಣಬಾರದು. ಮನಸ್ಸಿಗೆ ಒಗ್ಗದ ಪಾತ್ರೆಯಲ್ಲಿ ಉಣ್ಣಬಾರದು.

ಉಪಾನಹೌ ಚ ವಾಸಶ್ಚ ಧೃತಮನ್ಯೈರ್ನ ಧಾರಯೇತ್ |
ಉಪವೀತಮಲಂಕಾರಂ ಸ್ರಜಂ ಕರಕಮೇವ ಚ || ೬೬

ಪಾದರಕ್ಷೆ, ಬಟ್ಟೆ, ಉಪವೀತ, ಅಲಂಕಾರ, ಪುಷ್ಪಮಾಲೆ, ಜಲಪಾತ್ರಗಳು ತನ್ನದು ಬೇರೆಯೇ ಇರಬೇಕು. ಅನ್ಯರು ಉಪಯೋಗಿಸಿದ್ದನ್ನು ತಾನು ಸ್ವೀಕರಿಸಬಾರದು.

ನಾವಿನೀತೈರ್ವ್ರಜೇದ್ಧುರ್ಯೈರ್ನ ಚ ಕ್ಷುದ್ವ್ಯಾಧಿಪೀಡಿತೈಃ |
ನ ಭಿನ್ನಶೃಂಗಾಕ್ಷಿಖುರೈರ್ನ ವಾಲಧಿವಿರೂಪಿತೈಃ || ೬೭

ಎತ್ತು, ಕತ್ತೆ, ಕುದುರೆ, ಆನೆ ಮುಂತಾದ ವಾಹನಗಳು ಪಳಗದೆ ಇದ್ದರೆ, ಹಸಿದಿದ್ದರೆ, ರೋಗಿಗಳಾಗಿದ್ದರೆ, ಗೊರಸು, ಕೋಡು, ಕಣ್ಣು ನೋಯುತ್ತಿದ್ದರೆ, ಬಾಲ ಮೋಟಕಾಗಿದ್ದರೆ ಅವುಗಳಲ್ಲಿ ಸಂಚರಿಸಬಾರದು.

ವಿನೀತೈಸ್ತು ವ್ರಜೇನ್ನಿತ್ಯಮಾಶುಗೈರ್ಲಕ್ಷಣಾನ್ವಿತೈಃ |
ವರ್ಣರೂಪೋಪಸಂಪನ್ನೈಃ ಪ್ರತೋದೇನಾತುದನ್ ಭೃಶಂ || ೬೮

ಚೆನ್ನಾಗಿದ್ದವುಗಳು, ತೀವ್ರಗಾಮಿಗಳು, ಸಲ್ಲಕ್ಷಣಯುಕ್ತಗಳು, ಒಳ್ಳೆ ಬಣ್ಣ–ಆಕಾರಯುಕ್ತಗಳಾದ ಪ್ರಾಣಿಗಳನ್ನು ವಾಹನವಾಗಿ ಮಾಡಬೇಕು. ಅವುಗಳನ್ನು ದೊಣ್ಣೆಯಿಂದ ಬಹುವಾಗಿ ನೋಯಿಸಬಾರದು.

ಬಾಲಾತಪಃ ಪ್ರೇತಧೂಮೋ ವರ್ಜ್ಯಂ ಭಿನ್ನಂ ತಥಾಸನಂ |
ನ ಛಿಂದ್ಯಾನ್ನಖಲೋಮಾನಿ ದಂತೈರ್ನೋತ್ಪಾಟಯೇನ್ನಖಾನ್ || ೬೯

ಎಳೆಬಿಸಿಲು, ಹೆಣದಹೊಗೆ, ಒಡಕು ಪೀಠ ಇವನ್ನು ಉಪಯೋಗಿಸಬಾರದು. ರೋಮ, ಉಗುರುಗಳನ್ನು ಸಿಗುಳಬಾರದು. ಹಲ್ಲಿನಿಂದ ಉಗುರು ಕಚ್ಚಬಾರದು.

ನ ಮೃಲ್ಲೋಷ್ಟಂ ಚ ಮೃದ್ನೀಯಾತ್ ನಛಿಂದ್ಯಾತ್ ಕರಜೈಸ್ತೃಣಂ।
ನ ಕರ್ಮ ನಿಷ್ಫಲಂ ಕುರ್ಯಾನ್ನಾಯತ್ಯಾಮಸುಖೋದಯಂ ॥ ೭೦

ಮಣ್ಣಿನ (ಗಿಡ್ಡ) ಹೆಂಟೆಯನ್ನು ಒಡೆಯಬಾರದು. ಉಗುರಿನಿಂದ ಹುಲ್ಲು ಕುಯ್ಯಬಾರದು. ಪ್ರಯೋಜನವಿಲ್ಲದ ಕೆಲಸಮಾಡಬಾರದು. ದೀರ್ಘ ಕಾಲದಲ್ಲಿ ದುಃಖದಾಯಕ ಕಾರ್ಯವನ್ನು ಬಿಡಬೇಕು. ಮದ್ಯದ್ಯೂತ ಮಾದಕ, ಧೂಮಪಾನಗಳು, ಮಾದಕ, ಕಾಫಿ, ಚಾ-ಪಾನೀಯಗಳು ಸುಖಕರ ವಾದರೂ ಪರಿಣಾಮ ದುಃಖಿಗಳಾದುದರಿಂದ ವರ್ಜ್ಯಗಳು.

ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ಚ ಯೋ ನರಃ ।
ಸ ವಿನಾಶಂ ವ್ರಜತ್ಯಾಶು ಸೂಚಕೋಽಶುಚಿರೇವ ಚ ॥ ೭೧

ಹಿಂದೆ ನಿಷೇಧಿಸಿದವುಗಳನ್ನು ಮಾಡುವುದರಿಂದ ತನ್ನ ಧನ-ದೇಹಗಳಿಗೆ ಕ್ಷೇಮವಿಲ್ಲ. ಪರದೋಷಗಳನ್ನು ಹೇಳುತ್ತಿರುವುದು ಶುಭವಲ್ಲ.

ನ ವಿಗರ್ಹ್ಯ ಕಥಾಂ ಕುರ್ಯಾತ್ ಬಹಿರ್ಮಾಲ್ಯಂ ನ ಧಾರಯೇತ್ ।
ಗವಾಂ ಚ ಯಾನಂ ಪೃಷ್ಠೇನ ಸರ್ವಥೈವ ವಿಗರ್ಹಿತಂ ॥ ೭೨

ವಿಚಾರ, ಚರ್ಚೆಗಳು ಬೆಳೆದು ಜಗಳವಾಗಬಾರದು. ಜುಟ್ಟಿನಿಂದ ಹೊರಗೆ ನೇಲುವಂತೆ ಹೂಮುಡಿಯಬಾರದು. ಗೋವಿನ ಬೆನ್ನಿನ ಮೇಲೆ ಕುಳಿತು ಪ್ರಯಾಣಿಸಬಾರದು.

ಅದ್ವಾರೇಣ ಚ ನಾತೀಯಾದ್ಗ್ರಾಮಂ ವಾ ವೇಶ್ಮ ವಾವೃತಂ ।
ರಾತ್ರೌ ಚ ವೃಕ್ಷಮೂಲಾನಿ ದೂರತಃ ಪರಿವರ್ಜಯೇತ್ ॥ ೭೩

ಸರಿಯಾದ ದಾರಿಯಲ್ಲದ, ಮತ್ತೆ ಹೋಗಲು ಕಷ್ಟದಿಂದ ಸಾಧ್ಯವಿದ್ದ ರೀತಿಯಿಂದ ಮನೆಯ ಆವರಣವನ್ನು ಪ್ರವೇಶಿಸಬಾರದು. ರಾತ್ರಿ ಮರದಡಿ ವಿಶ್ರಮಿಸಬಾರದು.

ನಾಕ್ಷೈಃ ಕ್ರೀಡೇತ್ಕದಾಚಿತ್ತು ಸ್ವಯಂ ನೋಪಾನಹೌ ಹರೇತ್ ।
ಶಯನಸ್ಥೋ ನ ಭುಂಜೀತ ನ ಪಾಣಿಸ್ಥಂ ನ ಚಾಸನೇ ॥ ೭೪

ಪಗಡೆ ಆಡಬಾರದು, ಪಾದರಕ್ಷೆಯನ್ನು ಕೈಯಲ್ಲಿ ತೆಗೆದುಕೊಂಡು

ಹೋಗಬಾರದು, ಹಾಸಿಗೆಯಲ್ಲಿ ಕುಳಿತು, ಆಸನದಲ್ಲಿ ಕುಳಿತು, ಕೈಯಲ್ಲಿ ಪಾತ್ರೆ ಹಿಡಿದುಕೊಂಡು ಉಣ್ಣಬಾರದು.

ಸರ್ವಂ ಚ ತಿಲಸಂಬದ್ಧಂ ನಾದ್ಯಾದಸ್ತಮಿತೇ ರವೌ |
ನ ಚ ನಗ್ನಃ ಶಯೀತೇಹ ನ ಚೋಚ್ಛಿಷ್ಟಃ ಕ್ವಚಿದ್ವ್ರಜೇತ್ || ೭೫

ಎಳ್ಳು ಬೆರೆಸಿದ ಯಾವ ಆಹಾರವನ್ನು ರಾತ್ರಿ ತಿನ್ನಬಾರದು. ಬತ್ತಲೆ ನಿದ್ರಿಸಬಾರದು. ಎಂಜಲು ತೊಳೆಯದೆ ಎಲ್ಲಿಯೂ ಹೋಗಬಾರದು.

ಆರ್ದ್ರಪಾದಸ್ತು ಭುಂಜೀತ ನಾರ್ದ್ರಪಾದಸ್ತು ಸಂವಿಶೇತ್ |
ಆರ್ದ್ರಪಾದಸ್ತು ಭುಂಜಾನೋ ದೀರ್ಘಮಾಯುರವಾಪ್ನುಯಾತ್ || ೭೬

ಕಾಲು ತೊಳೆದು ಒದ್ದೆಯಿರುವಾಗ ಉಣ್ಣಬೇಕು. ಅದು ಆರೋಗ್ಯಕ್ಕೆ ಹಿತವು. ಕಾಲು ತೊಳೆದುಕೊಂಡು ಮಲಗುವುದು ಬೇಡ.

ಅಚಕ್ಷುರ್ವಿಷಯಂ ದುರ್ಗಂ ನ ಪ್ರಪದ್ಯೇತ ಕರ್ಹಿಚಿತ್ |
ನ ವಿಣ್ಮೂತ್ರಮುದೀಕ್ಷೇತ ನ ಬಾಹುಭ್ಯಾಂ ನದೀಂ ತರೇತ್ || ೭೭

ಕಣ್ಣಿಗೆ ಕಾಣದಂತೆ ಅಡಗಿ ಅವಿತಿರಬಹುದಾದ ಕ್ರೂರಪ್ರಾಣಿಗಳಿರುವ ದುರ್ಗಮ ಪ್ರದೇಶದಲ್ಲಿ ಸಂಚರಿಸಬಾರದು. ಮಲಮೂತ್ರಗಳನ್ನು ನೋಡಬಾರದು. ಈಜಿ ನದಿಯನ್ನು ದಾಟಬಾರದು.

ಅಧಿತಿಷ್ಠೇನ್ನ ಕೇಶಾಂಸ್ತು ನ ಭಸ್ಮಾಸ್ಥಿಕಪಾಲಿಕಾಃ |
ನ ಕಾರ್ಪಾಸಾಸ್ಥಿ ನ ತುಷಾನ್ದೀರ್ಘಮಾಯುರ್ಜಿಜೀವಿಷುಃ || ೭೮

ದೀರ್ಘಾಯುಸ್ಸನ್ನು ನಿರೀಕ್ಷಿಸುವವನು ಕೂದಲು, ಬೂದಿ, ಎಲುಬು, ಮಡಿಕೆಚೂರು, ಹತ್ತಿಕಾಯಿಯ ತಿರುಳು, ಧಾನ್ಯದ ಹೊಟ್ಟು, ಇವುಗಳ ಮೇಲೆ ನಿಲ್ಲಬಾರದು.

ನ ಸಂವಸೇಚ್ಚ ಪತಿತೈರ್ನ ಚಂಡಾಲೈರ್ನ ಪುಲ್ಕಸೈಃ |
ನ ಮೂರ್ಖೈರ್ನಾವಲಿಪ್ತೈಶ್ಚ ನಾಂತ್ಯೈರ್ನಾಂತ್ಯಾವಸಾಯಿಭಿಃ || ೭೯

ಎಲ್ಲ ವಿಧದ ಸಂಬಂಧವನ್ನು ಈಗ ಹೇಳುವವರೊಡನೆ ಕಡಿಮೆ ಮಾಡ

ಬೇಕು. ಅಸವರ್ಣ ಸ್ತ್ರೀ-ಪುರುಷರ ವಿವಾಹದಿಂದ ಜನಿಸಿದ ಮಿಶ್ರ ಸಂತತಿ ಯವರು, ಪಾಪ-ಕರ್ಮಿಗಳು, ಹೆಡ್ಡರು, ಧನಬಲ–ದೇಹಬಲಗರ್ವಿತರು, ಅತ್ಯಂತ ಮಹತ್ವಾಕಾಂಕ್ಷೆ, ನೈಚಾಕಾಂಕ್ಷೆ ಇರುವವರು, ಇತರರ ಶುಭವನ್ನು ಸಹಿಸದ ಅಮರ್ಷ ಸ್ವಭಾದವರು, ಅಪಾಯಕಾರಿಗಳು.

ನ ಶೂದ್ರಾಯ ಮತಿಂ ದದ್ಯಾನ್ನೋಚ್ಛಿಷ್ಟಂ ನ ಹವಿಷ್ಕೃತಂ ।
ನ ಚಾಸ್ಯೋಪದಿಶೇದ್ಧರ್ಮಂ ನ ಚಾಸ್ಯ ವ್ರತಮಾದಿಶೇತ್ ॥ ೮೦

ಶೂದ್ರನ ಮೇಲೆ ಮತ್ಸರವಲ್ಲ. ಅವನ ಅಭಿವೃದ್ಧಿಯ ಅಸಹನೆಯಲ್ಲ. ಶೂದ್ರನಿಗೆ ಬುದ್ಧಿ, ಎಂಜಲು, ಹವಿಸ್ಸು, ಧರ್ಮ, ವ್ರತ ಇವುಗಳನ್ನು ಉಪ ದೇಶಿಸಬಾರದು. ಕೊಡಬಾರದು. ಶ್ರದ್ಧಾ-ಭಕ್ತಿ ಅಕಾಪಟ್ಯವಿದ್ದರೆ ಅವನ ಹಿತ ಅವನಿಗೆ ಬೋಧಿಸಬೇಕು. ಪರಪೀಡೆಯನ್ನು, ಹಿಂಸೆಯನ್ನು, ವಂಚನೆ– ಕಪಟವನ್ನು ಈ ಮೊದಲು ಸ್ನಾತಕನಿಗೆ ನಿಷೇಧಿಸಲಾಗಿದೆ. ಆದುದರಿಂದ ಇದು ಸ್ವಪ್ರತಿಷ್ಠೆ ಸಾಧನೆಯ ಮಾರ್ಗವಲ್ಲ. ಕುಬುದ್ಧಿ ವಾದವಲ್ಲ. ಹೆಡ್ಡ ಮಂದಮತಿ, ಪರಲೋಕ–ಧರ್ಮಶ್ರದ್ಧೆಗಳಿಲ್ಲದ ಅದೂರದೃಷ್ಟಿಯ ಜನ, ಉಪದೇಶವನ್ನು–ಉಪದೇಶಕನನ್ನು ಅಪಹಾಸಮಾಡುವ ಸಂಭವವಿದೆ. ಹೀಗೆ ನಗೆಗಡಲಾಗುವ ಸಂಭವವನ್ನು ಸದಾಚಾರದ ವಿನೀತನಿಗೆ ಎಚ್ಚರಿಕೆಯಾಗಿ ಹಿತ ವಾದವನ್ನು ಮಾಡಿ ತಪ್ಪಿಸಲು ಅಪೇಕ್ಷಿಸುವುದಾಗಿದೆ. ಈ ವರೆಗೆ ಬಂದ ಎಲ್ಲ ಬೇಕು-ಬೇಡಗಳು ಅನ್ಯರ ಹಿಂಸಾವಿಧಾನದಿಂದ ತನ್ನ ಜಯಸಾಧನೆಯ ರೂಪ ದಲ್ಲಿರುವುದಿಲ್ಲ. ಅದನ್ನು ಮನವಿಟ್ಟು ಗಮನಿಸಬೇಕು. ಅಪವಾದದ ಮರ್ಮ ವನ್ನು ವಿಚಾರಿಸಬೇಕು. ಪಾಮರನಿಗೆ ಹಿತವಾದವೂ ಸಂಶಯಾಸ್ಪದವಾಗು ವುದು. ಆದುದರಿಂದ ಅದನ್ನು ಬಿಡಬೇಕು. ಶುದ್ಧಹೃದಯದ ಪ್ರತಿ ಕರ್ಮವೂ ಎಲ್ಲರಿಗೂ ಕ್ಷೇಮಸಾಧಕವಾಗಿರುವುದರಿಂದ ಕ್ಷೇಮನಿರಾಕರಣೆಯನ್ನು ಈ ರೀತಿಯಿಂದ ಮನುವು ಮಾಡಲು ಉದ್ದೇಶಿಸಿರುವನೆಂದು ನಂಬುವುದು ತನ್ನ ವಿಚಾರಹೀನತೆ. ಲೋಕದ ಎಲ್ಲ ಜನರ ಹಣಕಾಸು ಧರ್ಮ-ಕರ್ಮಗಳ ಮರ್ಮಗಳನ್ನು ತಿಳಿದವನಾದ ಮನು ಇಂತಹ ಅಲ್ಪ ಉಪಾಯದಿಂದ ಶೂದ್ರರ ದ್ವೇಷ ಸಾಧನೆಯ ಹೊಂಚು ಹಾಕುವನೆಂದು ಹೇಳುವುದು ಪ್ರತ್ಯಕ್ಷ ವಿರುದ್ಧ.

ಯೋ ಹ್ಯಸ್ಯ ಧರ್ಮಮಾಚಷ್ಟೇ ಯಶ್ಚೈವಾದಿಶತಿ ವ್ರತಂ ।
ಸೋಽಸಂವೃತಂ ನಾಮ ತಮಃ ಸಹ ತೇನೈವ ಮಜ್ಜತಿ ॥ ೮೧

ಹೆಡ್ಡನಿಗೆ ಧರ್ಮೋಪದೇಶ ಮಾಡಿದರೆ ಹೆಡ್ಡನ ಪರಿಹಾಸದಿಂದ, ಪರಿಹಾಸ ಮಾಡಿದವನು–ಉಪದೇಶ ಮಾಡಿದವನು ಇಬ್ಬರೂ ಸ್ಪಷ್ಟವಾದ ಅಜ್ಞಾನ ಉಳ್ಳವರೆಂದು ಸ್ಫುಟವು. ಹೆಡ್ಡರು ಯಾವಾಗಲೂ ವಿಚಾರವಂತರ ಒಂದನ್ನು ಸಮ್ಮತಿಸಲು ಇಷ್ಟಪಡದಿರುವಾಗ ಹಾಸ್ಯಾಸ್ಪದವಾಗುವುದು ಕಷ್ಟವಲ್ಲ.

ನ ಸಂಹತಾಭ್ಯಾಂ ಪಾಣಿಭ್ಯಾಂ ಕಂಡೂಯೇದಾತ್ಮನಃ ಶಿರಃ |
ನ ಸ್ಪೃಶೇಚ್ಚೈತದುಚ್ಛಿಷ್ಟೋ ನ ಚ ಸ್ನಾಯಾದ್ವಿನಾತತಃ || ೮೨

ಎರಡೂ ಕೈಗಳಿಂದ ತನ್ನ ತಲೆ ತುರಿಸಿಕೊಳ್ಳಬಾರದು. ಎಂಜಲು ಕೈಯಿಂದ ತಲೆ ಮುಟ್ಟಬಾರದು. ತಲೆಯಿಂದ ಕೆಳಗೆ ಸ್ನಾನಮಾಡಬಾರದು. (ತಲೆಯ ಮೇಲಿಂದಲೇ ಸ್ನಾನ ಮಾಡುವುದು ಪ್ರಶಸ್ತ).

ಕೇಶಗ್ರಹಾನ್ಪ್ರಹಾರಾಂಶ್ಚ ಶಿರಸ್ಯೇತಾನ್ವಿವರ್ಜಯೇತ್ |
ಶಿರಃಸ್ನಾತಶ್ಚ ತೈಲೇನ ನಾಂಗಂ ಕಿಂಚಿದಪಿ ಸ್ಪೃಶೇತ್ || ೮೩

ತಲೆಕೂದಲು ಹಿಡಿದೆಳೆಯುವುದು, ತಲೆಗೆ ಹೊಡೆಯುವುದು–ಕೂಡದು. ಎಣ್ಣೆ ಹಾಕಿ ಮಿಂದು ಪುನಃ ಎಣ್ಣೆ ಸವರಬಾರದು.

ನ ರಾಜ್ಞಃ ಪ್ರತಿಗೃಹ್ಣೀಯಾದರಾಜನ್ಯಪ್ರಸೂತಿತಃ |
ಸೂನಾಚಕ್ರಧ್ವಜವತಾಂ ವೇಶೇನೈವ ಚ ಜೀವತಾಂ || ೮೪

ಅಧರ್ಮಿಷ್ಠ ರಾಜನಿಂದಲೂ, ಪಶುಮಾಂಸ ವಿಕ್ರಯ, ತೈಲವಿಕಯ, ಮದ್ಯವಿಕ್ರಯ ವೇಶ್ಯಾಧನಗಳಿಂದ ಜೀವಿಸುವವರಿಂದಲೂ ಧನವನ್ನು ಸ್ವೀಕರಿಸಬಾರದು.

ದಶಸೂನಾಸಮಂ ಚಕ್ರಂ ದಶಚಕ್ರಸಮೋ ಧ್ವಜಃ |
ದಶಧ್ವಜಸಮೋ ವೇಶೋ ದಶವೇಶಸಮೋ ನೃಪಃ || ೮೫

ಪ್ರಾಣಿಹತ್ಯೆ ಮಾಡಿ ಮಾಂಸ ವಿಕ್ರಯ ಮಾಡುವವನು, ತೈಲವಿಕ್ರಯ ಮಾಡುವವನು, ಮದ್ಯವಿಕ್ರಯ ಮಾಡುವವನು, ವೇಶ್ಯಾಧನಜೀವಿಯು ಅಧರ್ಮಿಷ್ಠ ರಾಜನು ಈ ನಾಲ್ವರಲ್ಲಿ ಮೇಲುಮೇಲಿನವರು ತುಂಬ ಕೆಟ್ಟವರು. ಆದುದರಿಂದ ಅವರು ಕೊಡುವವರು ಆದಾಗ ತಾನು ತಕ್ಕೊಳ್ಳುವುದಾದರೆ ಬೇರೆ ಒಳ್ಳೆ ದಾತೃಗಳು ಇಲ್ಲದಾಗ ಮೊದಲು ಮೊದಲಿನವರಿಂದ ಸ್ವೀಕರಿಸಬಹುದು.

ದಶ ಸೂನಾಸಹಸ್ರಾಣಿ ಯೋ ವಾಹಯತಿ ಸೌನಿಕಃ ।
ತೇನ ತುಲ್ಯಃ ಸ್ಮೃತೋ ರಾಜಾ ಘೋರಸ್ತಸ್ಯ ಪ್ರತಿಗ್ರಹಃ ॥ ೮೬

ಹತ್ತುಸಾವಿರ ಪ್ರಾಣಿಗಳನ್ನು ಒಂದು ದಿನದಲ್ಲಿ ಕೊಂದು ಮಾಂಸ ಮಾರುವ ಮನುಷ್ಯನಷ್ಟು, ರಾಜನು ಹಿಂಸಾಜೀವನ ಉಳ್ಳವನಾದರೆ ಕಟುಕನು. ಅವನು ಕೊಡುವುದನ್ನು ಸ್ವೀಕರಿಸುವಾಗ ಅವನ ಪಾಪವು ತನಗೂ ಬಾರದಿರದು.

ಯೋ ರಾಜ್ಞಃ ಪ್ರತಿಗೃಹ್ಣಾತಿ ಲುಬ್ಧಸ್ಯೋಚ್ಛಾಸ್ತ್ರವರ್ತಿನಃ ।
ಸ ಪರ್ಯಾಯೇಣ ಯಾತೀಮಾನ್ ನರಕಾನೇಕವಿಂಶತಿಂ ॥ ೮೭

ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವೌ ।
ನರಕಂ ಕಾಲಸೂತ್ರಂ ಚ ಮಹಾನರಕಮೇವ ಚ ॥ ೮೮

ಸಂಜೀವನಂ ಮಹಾವೀಚಿಂ ತಪನಂ ಸಂಪ್ರತಾಪನಂ ।
ಸಂಘಾತಂ ಚ ಸಕಾಕೋಲಂ ಕುಡ್ಮಲಂ ಪ್ರತಿಮೂರ್ತಿಕಂ ॥ ೮೯

ಲೋಹಶಂಕುಮೃಜೀಷಂ ಚ ಪಂಥಾನಂ ಶಾಲ್ಮಲೀಂ ನದೀಂ ।
ಅಸಿಪತ್ರವನಂ ಚೈವ ಲೋಹದಾರಕಮೇವ ಚ ॥ ೯೦

ಏತದ್ವಿದಂತೋ ವಿದ್ವಾಂಸೋ ಬ್ರಾಹ್ಮಣಾ ಬ್ರಹ್ಮವಾದಿನಃ ।
ನ ರಾಜ್ಞಃ ಪ್ರತಿಗೃಹ್ಣಂತಿ ಪ್ರೇತ್ಯ ಶ್ರೇಯೋಽಭಿಕಾಂಕ್ಷಿಣಃ ॥ ೯೧

ಕುಮಾರ್ಗದಿಂದ ಶಾಸ್ತ್ರವಿರುದ್ಧವಾಗಿ ಪ್ರವರ್ತಿಸುವ ರಾಜಧನವನ್ನು ಯಾರೂ ಬುದ್ಧಿವಂತರು ತಿನ್ನಲು ಆಶೆಪಡಬಾರದು. ರಾಜನ ಹಣ, ಬಡಪ್ರಜೆಗಳ ಹಣ, ಬಲಾತ್ಕಾರದಿಂದ ಎಳೆದ ಹಣ ಈ ಮರುಕದಹಣವನ್ನು ತಿಂದರೆ ಅದು ಮರುಕವನ್ನೇ ಕೊಡುವುದು. ಕಹಿಸೋರೆ ಬಳ್ಳಿಯು ಕಾಯಿ ಕಹಿಯೆ. ಇದನ್ನು ಈ ಕಾಲದ ರಾಜಕಾರಣಿಗಳು ನೌಕರರು ತಿಳಿದರೆ ಈ ಭ್ರಷ್ಟಾಚಾರವು ಹೀಗೆ ತಾಂಡವವಾಡಲಾರದು. ಹೀಗೆ ಬಹುಮಾರ್ಗದಿಂದ ಸರಕಾರದ ಹಣವನ್ನು ಅಪಹರಿಸುವ ಇಚ್ಛೆಯು ಹುಟ್ಟಲಾರದು. ಧನಿಕರಾದ ನೌಕರರು ರಾಜನಿಯುಕ್ತರು. ಕೆಲ ಸಮಯದ ಮೇಲೆ ವಿಚಾರಣೆ, ಕಾರಾಗೃಹವಾಸ, ಮರಣ, ಹತ್ಯೆಗಳಿಗೆ ಗುರಿಯಾಗುವುದು ಪ್ರಚುರ ವಿಷಯ. ಅಂತಹ ರಾಜಕಾರಣಿಗಳು ತಮ್ಮ ಕಾರ್ಯಕಾಲದಲ್ಲಿ ತಮ್ಮ ಅಭಿಪ್ರಾಯವನ್ನು ಆ ಆಚರಣೆಯ ಫಲವನ್ನು

ಸ್ವರ್ಗದಂತೆ ಸರ್ವಸಂಪತ್ಸಾಧನವಾಗಿ ಆಲಂಕಾರಿಕ ವಚನವಿನ್ಯಾಸಗಳಿಂದ ವರ್ಣಿಸುವುದು ಪರೋಕ್ಷವಲ್ಲ. ಆದರಂತೆ ವಿರುದ್ಧಾಭಿಪ್ರಾಯವನ್ನು ನರಕ, ಪಾಪ, ಕ್ಷಾಮ, ದಾರಿದ್ರ್ಯ ಭಯಗಳಿಗೆ ಕಾರಣವೆಂದು ಪ್ರಜೆಗಳನ್ನು ಬೋಧಿಸುವುದು ಸರ್ವಕಾಲ–ದೇಶಗಳಿಗೆ ಸಾಮಾನ್ಯ ವಿಷಯ. ಯೋಗದೃಷ್ಟಿಯಲ್ಲಿ ವಿಶ್ವಾಸವಿರುವವರಿಗೆ ಮನುವಚನದಲ್ಲಿ ಅವಿಶ್ವಾಸವು ಬರಲಾರದು. ನಾಸ್ತಿಕವಾದಿಗಳು ಸಮಕಾಲದ ಪ್ರಭಾವಿಗಳ ದೂರಕಾಲದ ಚರಿತವನ್ನು ವೀಕ್ಷಿಸಿ ಇದಕ್ಕೆ ಯೋಚಿಸಿಕೊಳ್ಳಲಿ. ಬ್ರಹ್ಮಜ್ಞಾನಿಗಳು ಮನಃ ಸಂತೋಷಗೊಳ್ಳುವ ವೃತ್ತವು ನಮಗೆ ಆದರ್ಶವು.

ಬ್ರಾಹ್ಮೇ ಮುಹೂರ್ತೇ ಬುಧ್ಯೇತ ಧರ್ಮಾರ್ಥೌ ಚಾನುಚಿಂತಯೇತ್ ।
ಕಾಯಕ್ಲೇಶಾಂಶ್ಚ ತನ್ಮೂಲಾನ್ವೇದತತ್ತ್ವಾರ್ಥಮೇವ ಚ ॥ ೯೨

ಅರುಣೋದಯದಲ್ಲಿ ಎಚ್ಚತ್ತು ತಾನು ಆಚರಿಸುತ್ತಿರುವ, ಆಚರಿಸಬೇಕಾದ ಅರ್ಥ ಧರ್ಮಗಳನ್ನು ಚಿಂತಿಸಬೇಕು. ಧರ್ಮಾರ್ಥ ಸಾಧಕವಾದ ಶರೀರ ಶ್ರಮಗಳ ಸಾಧ್ಯಾಸಾಧ್ಯತೆ ಅನುಕೂಲ ಉಪಾಯ ಅಲ್ಪಶ್ರಮದಿಂದ ಬಹುಲಾಭ ವಿಧಾನಗಳನ್ನು ವೇದ ತತ್ತ್ವಾರ್ಥವನ್ನು ಪರಿಶೀಲಿಸಬೇಕು. ಚಾಪೆಯಲ್ಲಿ ಕುಳಿತೇ ಮಾಡುವ ವಿಚಾರವಿದು.

ಉತ್ಥಾಯಾವಶ್ಯಕಂ ಕೃತ್ವಾ ಕೃತಶೌಚಃ ಸಮಾಹಿತಃ ।
ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ ಸ್ವಕಾಲೇ ಚಾಪರಾಂ ಚಿರಂ ॥ ೯೩

ಪೂರ್ವೋಕ್ತ ಚಿಂತನದ ಬಳಿಕ ಚಾಪೆಯಿಂದೆದ್ದು ಜಲಮಲಬಾಧೆಗಳನ್ನು ತೀರಿಸಿ ಪ್ರಕ್ಷಲನ ಮಾಡಿ ಶುದ್ಧನಾಗಿ ಏಕಾಗ್ರಚಿತ್ತದಿಂದ ಸಂಧ್ಯಾದೇವಿಯನ್ನು ವಿಹಿತ ರೀತಿಯಿಂದ ಧ್ಯಾನಿಸುತ್ತ ಜಪಿಸುತ್ತಿರಬೇಕು. ಸಾಯಂ ಸಂಧ್ಯೆಯಲ್ಲ ಹೀಗೆಯೇ ಮಾಡಬೇಕು.

ಋಷಯೋ ದೀರ್ಘಸಂಧ್ಯತ್ವಾತ್ ದೀರ್ಘಮಾಯುರವಾಪ್ನುಯುಃ ।
ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ ॥ ೯೪

ದೀರ್ಘಾಯುಸ್ಸು, ಪ್ರಜ್ಞಾ, ಯಶಸ್ಸು, ಬ್ರಹ್ಮವರ್ಚಸ್ಸನ್ನು ಅಪೇಕ್ಷಿಸುವವರು ಬಹುಕಾಲ ಗಾಯತ್ರೀ ಜಪಮಾಡುತ್ತಿರಬೇಕು. ಜೀವನಕಾಲದ ಪ್ರಸಿದ್ಧಿ, ಯಶಸ್ಸು, ಉತ್ತರ ಕಾಲದಲ್ಲಿ ಅದು ಕೀರ್ತಿಯು.

ಶ್ರಾವಣ್ಯಾಂ ಪ್ರೌಷ್ಠಪದ್ಯಾಂ ವಾಪ್ಯುಪಾಕೃತ್ಯ ಯಥಾವಿಧಿ ।
ಯುಕ್ತಶ್ಛಂದಾಂಸ್ಯಧೀಯೀತ ಮಾಸಾನ್ವಿಪ್ರೋರ್ಧಪಂಚಮಾನ್ ॥ ೯೫

ಶ್ರಾವಣ ಮಾಸದ ಅಥವಾ ಭಾದ್ರಪದಮಾಸದ ಪೌರ್ಣಮಿಯಲ್ಲಿ ಉಪಾಕರ್ಮ ಹೋಮವನ್ನು ಮಾಡಿ ಐದುವರೆ ತಿಂಗಳು ಪ್ರಯತ್ನ ಪೂರ್ವಕ ವೇದಗಳನ್ನು ಪಾರಾಯಣ ಮಾಡಬೇಕು.

ಪುಷ್ಯೇ ತು ಛಂದಸಾಂ ಕುರ್ಯಾದ್ಬಹಿರುತ್ಸರ್ಜನಂ ದ್ವಿಜಃ ।
ಮಾಘಶುಕ್ಲಸ್ಯ ವಾ ಪ್ರಾಪ್ತೇ ಪೂರ್ವಾಹ್ಣೇ ಪ್ರಥಮೇಹನಿ ॥ ೯೬

ಊರಹೊರಗೆ ಹೋಗಿ ಪುಷ್ಯಮಾಸದ ಅಥವಾ ಮಾಘಮಾಸದ ಪ್ರಥಮಾ ತಿಥಿಯಲ್ಲಿ ಪೂರ್ವಾಹ್ಣ ಉತ್ಸರ್ಜನ ಹೋಮವನ್ನು ಮಾಡಬೇಕು.

ಯಥಾಶಾಸ್ತ್ರಂ ತು ಕೃತ್ವೈವಮುತ್ಸರ್ಗಂ ಛಂದಸಾಂ ಬಹಿಃ ।
ವಿರಮೇತ್ಪಕ್ಷಿಣೀಂ ರಾತ್ರಿಂ ತದೇವೈಕಮಹರ್ನಿಶಂ ॥ ೯೭

ಹೀಗೆ ಊರಹೊರಗೆ ಗೃಹ್ಯಸೂತ್ರದಲ್ಲಿ ಹೇಳಿದ ಪ್ರಕಾರ ಉತ್ಸರ್ಜನ ಹೋಮವನ್ನು ಮಾಡಿದ ಮೇಲೆ ಎರಡು ಹಗಲು ಒಂದು ರಾತ್ರಿ ಅಥವಾ ಒಂದೊಂದು ಹಗಲು ರಾತ್ರಿ ಅನಧ್ಯಾಯವು.

ಅತ ಊರ್ಧ್ವಂ ತು ಛಂದಾಂಸಿ ಶುಕ್ಲೇಷು ನಿಯತಃ ಪಠೇತ್ ।
ವೇದಾಂಗಾನಿ ಚ ಸರ್ವಾಣಿ ಕೃಷ್ಣಪಕ್ಷೇಷು ಸಂಪಠೇತ್ ॥ ೯೮

ಅನಧ್ಯಾಯ ಕಾಲದ ಬಳಿಕ ಶುಕ್ಲಪಕ್ಷದಲ್ಲಿ ಛಂದೋ ರೂಪದಲ್ಲಿರುವ ಸಂಹಿತೆಯನ್ನು ಓದಬೇಕು. ಕೃಷ್ಣಪಕ್ಷದಲ್ಲಿ ಶಿಕ್ಷಾದಿ ವೇದಾಂಗಗಳನ್ನು ಓದಬೇಕು.

ನಾವಿಸ್ಪಷ್ಟಮಧೀಯೀತ ನ ಶೂದ್ರಜನಸನ್ನಿಧೌ ।
ನ ನಿಶಾಂತೇ ಪರಿಶ್ರಾಂತೋ ಬ್ರಹ್ಮಾಧೀತ್ಯ ಪುನಃ ಸ್ವಪೇತ್ ॥ ೯೯

ಅಸ್ಪಷ್ಟವಾಗಿ ಓದಬಾರದು, ಇತರರು ಯಾರೂ ಇಲ್ಲದಲ್ಲಿ ಓದಬೇಕು. ಮುಂಜಾನೆ ಓದಿ ದಣಿದು ಪುನಃ ನಿದ್ರಿಸಬಾರದು. ಆರೋಗ್ಯಕ್ಕೆ ನಿದ್ರೆಯು ಬೇಕಾದಷ್ಟು ಆಗಿ ಸುಖಪ್ರಬೋಧವಾದ ಮೇಲೆ ಮಲಗದೆ ಎದ್ದು ಓದಿದರೆ ಶ್ರಮವಾಗಲಾರದು.

ಯಥೋದಿತೇನ ವಿಧಿನಾ ನಿತ್ಯಂ ಛಂದಸ್ಕೃತಂ ಪಠೇತ್ ।
ಬ್ರಹ್ಮ ಛಂದಸ್ಕೃತಂ ಚೈವ ದ್ವಿಜೋ ಯುಕ್ತೋ ಹ್ಯನಾಪದಿ ॥ ೧೦೦

ವ್ಯಾಖ್ಯಾರೂಪವಾದ ಬ್ರಾಹ್ಮಣ ಭಾಗವನ್ನು ಅನುಕೂಲವಿದ್ದಾಗ ಓದುವುದು.

ಇಮಾನ್ನಿತ್ಯಮನಧ್ಯಾಯಾನಧೀಯಾನೋ ವಿವರ್ಜಯೇತ್ ।
ಅಧ್ಯಾಪನಂ ಚ ಕುರ್ವಾಣಃ ಶಿಷ್ಯಾಣಾಂ ವಿಧಿಪೂರ್ವಕಂ ॥ ೧೦೧

ತನ್ನ ಅಧ್ಯಯನ, ಶಿಷ್ಯನ ಅಧ್ಯಾಪನ, ಅಧ್ಯಯನಗಳಿಗೂ ವಿರಾಮ ದಿನಗಳನ್ನು ಹೇಳುತ್ತೇನೆ. ಅದನ್ನು ತಪ್ಪದೆ ಪಾಲಿಸಬೇಕು.

ಕರ್ಣಶ್ರವೇಽನಿಲೇ ರಾತ್ರೌ ದಿವಾ ಪಾಂಸುಸಮೂಹನೇ ।
ಏತೌ ವರ್ಷಾಸ್ವನಧ್ಯಾಯಾ ವಧ್ಯಾಯಜ್ಞಾಃ ಪ್ರಚಕ್ಷತೇ ॥ ೧೦೨

ರಾತ್ರಿ ಮಲಗುವ ಮೊದಲು, ಗಾಳಿ ಬೀಸುವ ವೇಗದಿಂದ ಅದರ ಶಬ್ದವು ಕಿವಿಗೆ ಕೇಳಿಸುವಷ್ಟು ಸಮಯ, ಹಗಲು ನೆಲದ ದೂಳಿಯು ಹಾರುವಷ್ಟು ವೇಗದ ಗಾಳಿಯು ಬೀಸುತ್ತಿದ್ದರೆ, ಅಷ್ಟು ಸಮಯ ಓದಬಾರದು, ಎಂದು ಓದು ಬಲ್ಲವರು ಹೇಳುತ್ತಾರೆ.

ವಿದ್ಯುತ್ಸ್ತನಿತವರ್ಷೇಷು ಮಹೋಲ್ಕಾನಾಂ ಚ ಸಂಪ್ಲವೇ ।
ಆಕಾಲಿಕಮನಧ್ಯಾಯಮೇತೇಷು ಮನುರಬ್ರವೀತ್ ॥ ೧೦೩

ಕೋಲ್ಮಿಂಚು, ಗುಡುಗು, ಮಳೆ ಒಟ್ಟಿಗೆ ಬಂದರೆ, ತುಂಬ ಉಲ್ಕೆಗಳು ಅಲ್ಲಲ್ಲಿ ಬೀಳುತ್ತಿದ್ದರೆ ಆ ಸಮಯದಿಂದ ಮರುದಿನ ಅದೇ ಸಮಯದ ವರೆಗೆ (ಅರುವತ್ತುಗಳಿಗೆ) ಮೂವತ್ತು ಮುಹೂರ್ತಕಾಲ ಅನಧ್ಯಾಯವು. ಇದು ಮನುಮತವು.

ಏತಾಂಸ್ತ್ವಭ್ಯುದಿತಾನ್ವಿದ್ಯಾದ್ಯದಾ ಪ್ರಾದುಷ್ಕೃತಾಗ್ನಿಷು ।
ತದಾ ವಿದ್ಯಾದನಧ್ಯಾಯಮನೃತೌ ಚಾಭ್ರದರ್ಶನೇ ॥ ೧೦೪

ಗುಡುಗು, ಮಿಂಚು, ಮಳೆಗಳು, ಮಳೆಗಾಲ, ಅಗ್ನಿಹೋತ್ರಕಾಲವಾದ

ಸಂಧ್ಯೆಯಲ್ಲಿ ಬಂದರೆ ಆಗಲೂ ಅನಧ್ಯಾಯ. ಮಳೆಗಾಲ ಹೊರತು ಬೇರೆ ಋತುಗಳಲ್ಲಿ ಬಿಳಿ ಮೋಡ ಕಂಡರೆ ಓದಬಾರದು, ಮಳೆಗಾಲ ಬರಿಯ ಕಾರ್ಮೋಡವಿದ್ದರೆ ಓದಬಹುದು.

ನಿರ್ಘಾತೇ ಭೂಮಿಚಲನೇ ಜ್ಯೋತಿಷಾಂ ಚೋಪಸರ್ಜನೇ ।
ಏತಾನಾಕಾಲಿಕಾನ್ವಿದ್ಯಾದನಧ್ಯಾಯಾನೃತಾವಪಿ ॥ ೧೦೫

ಆಕಾಶದಲ್ಲಿ ದೊಡ್ಡ ಶಬ್ದವಾದರೆ, ಭೂಕಂಪವಾದರೆ, ಗ್ರಹಣವಾದರೆ ಮೂವತ್ತು ಮುಹೂರ್ತಕಾಲ ಅನಧ್ಯಾಯವು.

ಪ್ರಾದುಷ್ಕೃತೇಷ್ವಗ್ನಿಷು ತು ವಿದ್ಯುತ್ಸ್ತನಿತನಿಸ್ವನೇ ।
ಸಜ್ಯೋತಿಃ ಸ್ಯಾದನಧ್ಯಾಯಃ ಶೇಷೇ ರಾತ್ರೌ ಯಥಾ ದಿವಾ ॥ ೧೦೬

ಅಗ್ನಿಹೋತ್ರ ಹೋಮಕ್ಕೆ ಅಗ್ನಿ ಪ್ರಜ್ವಲನ ಮಾಡಿದಾಗ, ಮಿಂಚು, ಗುಡುಗು ಮಾತ್ರ ಬಂದರೆ ಅನಧ್ಯಾಯ. ಎಂದರೆ ಬೆಳಿಗ್ಗೆ ಈ ನಿಮಿತ್ತವಾದರೆ, ಹಗಲು ಸೂರ್ಯಾಸ್ತಪರ್ಯಂತ, ಸಾಯಂಕಾಲವಾದರೆ ನಕ್ಷತ್ರಾಸ್ತದವರೆಗೆ ಅನಧ್ಯಾಯವು. ಮಿಂಚು, ಗುಡುಗು, ಮಳೆಗಳು ಮೂರೂ ಬಂದರೆ, ಮಳೆಗಾಲ ಹಗಲು-ರಾತ್ರಿ ಅನಧ್ಯಾಯವೆಂದು ಹಿಂದೆ ಹೇಳಿದೆ.

ನಿತ್ಯಾನಧ್ಯಾಯ ಏವ ಸ್ಯಾದ್ಗ್ರಾಮೇಷು ನಗರೇಷು ಚ ।
ಧರ್ಮನೈಪುಣ್ಯಕಾಮಾನಾಂ ಪೂತಿಗಂಧೇ ಚ ಸರ್ವದಾ ॥ ೧೦೭

ಕಲಿತ ವೇದವನ್ನು ಪುಣ್ಯದ ಉದ್ದೇಶದಿಂದ ಪಾರಾಯಣ ಮಾಡುವವರು ಧರ್ಮಕಾಮಶಿಷ್ಯರು. ವೇದವನ್ನು ಪ್ರಥಮತಃ ಸ್ವಾಧೀನ (ಕಂಠಪಾಠ) ಮಾಡುವವರು ನೈಪುಣ್ಯಕಾಮಶಿಷ್ಯರು. ಇಂತಹರಿಬ್ಬರೂ ಗ್ರಾಮ-ನಗರಗಳಲ್ಲಿ ಓದಬಾರದು. ಗ್ರಾಮವೆಂದರೆ ಪೂರ್ವಕಾಲದಲ್ಲಿ ಒಂದು ಬೀದಿ. ಅದರ ಇಕ್ಕಡೆಗಳಲ್ಲಿ ಕಿಕ್ಕಿರಿದ ಮನೆಗಳು. ಈ ಅಗ್ರಹಾರವೇ ಗ್ರಾಮ. ನಗರವು ತಿಳಿದಿರುವುದೇ. ಇಂತಹ ಜನಸಂದಣಿಯನ್ನು ಬಿಟ್ಟು ನದೀತೀರ ಅರಣ್ಯ ದೇಶಗಳ ಶಾಂತವಾತಾವರಣವನ್ನು ಆಶ್ರಯಿಸಬೇಕೆಂದು ತಾತ್ಪರ್ಯ. ಯಾವುದೇ ದುರ್ಗಂಧ ಪ್ರಸಾರವಾದಾಗಲೂ ವೇದ ಓದಬಾರದು.

ಅಂತರ್ಗತಶವೇ ಗ್ರಾಮೇ ವೃಷಲಸ್ಯ ಚ ಸನ್ನಿಧೌ ।
ಅನಧ್ಯಾಯೋ ರುದ್ಯಮಾನೇ ಸಮವಾಯೇ ಜನಸ್ಯ ಚ । ೧೦೮

ಗ್ರಾಮವೆಂದರೆ ಈಗಿನಂತೆ ಆಡಳಿತ ಸೌಕರ್ಯಕ್ಕೆ ಕಲ್ಪಿಸಿದ ಭೂಪ್ರದೇಶವಲ್ಲ. ಅಗ್ರಹಾರವೆನ್ನಲಾಗಿದೆ. ಅಲ್ಲಿ ಶವವು ಸಂಸ್ಕಾರವಿಲ್ಲದೆ ಇರುವಾಗ, ಅಳುತ್ತಿರುವಾಗ, ಜನಸಂದಣಿಯಲ್ಲಿ, ಅನಧ್ಯಾಯವು. ಧರ್ಮಾಭಿಮಾನಿಯಲ್ಲದ ಜನರೆದುರು ಓದುವುದು ಬೇಡ. ಅವನಿಗದು ಪ್ರಿಯವಲ್ಲ.

ಉದಕೇ ಮಧ್ಯರಾತ್ರೇ ಚ ವಿಣ್ಮೂತ್ರಸ್ಯ ವಿಸರ್ಜನೇ ।
ಉಚ್ಛಿಷ್ಟಃ ಶ್ರಾದ್ಧಭುಕ್ ಚೈವ ಮನಸಾಪಿ ನ ಚಿಂತಯೇತ್ ॥ ೧೦೯

ನೀರಿನಲ್ಲಿ, ಮಧ್ಯರಾತ್ರದಲ್ಲಿ, ಮಲಮೂತ್ರವಿಸರ್ಜನಕಾಲದಲ್ಲಿ, ಎಂಜಲಾಗಿರುವಾಗ, ಶ್ರಾದ್ಧಾನ್ನ ಉಂಡವನು, ವೇದವನ್ನು ಮನಸ್ಸಿನಿಂದಲೂ ಚಿಂತಿಸಬಾರದು. ಪ್ರಾಯಶ್ಚಿತ್ತವಾಗಿ ವಿಧಿಸಿದಾಗ ಆ ಮಂತ್ರಭಾಗವನ್ನು ಜಪಿಸಬಹುದು.

ಪ್ರತಿಗೃಹ್ಯ ದ್ವಿಜೋ ವಿದ್ವಾನ್ ಏಕೋದ್ದಿಷ್ಟಸ್ಯ ಕೇತನಂ ।
ತ್ರ್ಯಹಂ ನ ಕೀರ್ತಯೇದ್ಬ್ರಹ್ಮ ರಾಜ್ಞೋ ರಾಹೋಶ್ಚ ಸೂತಕೇ ॥ ೧೧೦

ಏಕೋದ್ದಿಷ್ಟ ಶ್ರಾದ್ಧ ಭೋಜನ ಮಾಡಿದವನು, ನಿಮಂತ್ರಣ ದಿನದಿಂದ ಮತ್ತು ದೇಶದ ರಾಜನ ಆ ಶೌಚದಲ್ಲಿ, ಗ್ರಹಣದಲ್ಲಿ ಮೂರು ದಿನ ಅನಧ್ಯಾಯವು.

ಯಾವದೇಕಾನುದಿಷ್ಟಸ್ಯ ಗಂಧೋ ಲೇಪಶ್ಚ ತಿಷ್ಠತಿ ।
ವಿಪ್ರಸ್ಯ ವಿದುಷೋ ದೇಹೇ ತಾವದ್ಬ್ರಹ್ಮ ನ ಕೀರ್ತಯೇತ್ ॥ ೧೧೧

ಏಕೋದ್ದಿಷ್ಟ ಶ್ರಾದ್ಧದ ಕ್ಷಣದವನಿಗೆ ಧನಿಕರ ಮನೆಯಲ್ಲಿ ಕಸ್ತೂರಿ ಕುಂಕುಮಾದಿ ಗಂಧಲೇಪನ ಮಾಡಿದ ಪಕ್ಷಕ್ಕೆ ಅಂತಹ ಸಂದರ್ಭದಲ್ಲಿ ತ್ರಿರಾತ್ರಾನಧ್ಯಾಯ ಸಾಲದು. ದೇಹಗಂಧವೂ, ಅಲಕ್ತಕಾದಿಲೇಪವೂ ಹೋಗುವವರೆಗೆ ಓದಬಾರದು.

ಶಯಾನಃ ಪ್ರೌಢಪಾದಶ್ಚ ಕೃತ್ವಾ ಚೈವಾವಸಕ್ಥಿಕಾಂ ।
ನಾಧೀಯೀತಾಮಿಷಂ ಜಗ್ಧ್ವಾ ಸೂತಕಾನ್ನಾದ್ಯಮೇವ ಚ ॥ ೧೧೨

ಮಲಗಿಕೊಂಡು, ಆಸನದ ಮೇಲೆ ಕಾಲಿಟ್ಟು, ತೊಡೆ ಜೋಡಿಸಿ ಕುಳಿತು, (ಮಲವಿಸರ್ಜನೆ ಮಾಡುವಂತೆ) ಮಾಂಸ ತಿಂದು, ಸೂತಕಾನ್ನವನ್ನುಂಡು, ಅಧ್ಯಯನ ಮಾಡಬಾರದು.

ನೀಹಾರೇ ಬಾಣಶಬ್ದೇ ಚ ಸಂಧ್ಯಯೋರೇವ ಚೋಭಯೋಃ |
ಅಮಾವಾಸ್ಯಾಚತುರ್ದಶ್ಯೋಃ ಪೌರ್ಣಮಾಸ್ಯಷ್ಟಕಾಸು ಚ || ೧೧೩

ಹಿಮ, ಯುದ್ಧಗಳಲ್ಲಿ, ಬಾಣವೇಧ ಶಬ್ದ, ಸಂಧ್ಯಾದ್ವಯಗಳಲ್ಲಿ, ಅಮಾವಾಸ್ಯೆ, ಚತುರ್ದಶೀ, ಅಷ್ಟಮಿ, ಪೌರ್ಣಮಾಸ್ಯಗಳಲ್ಲಿ ಅನಧ್ಯಾಯವು.

ಅಮಾವಾಸ್ಯಾ ಗುರುಂ ಹಂತಿ ಶಿಷ್ಯಂ ಹಂತಿ ಚತುರ್ದಶೀ |
ಬ್ರಹ್ಮಾಷ್ಟಕಾಪೌರ್ಣಮಾಸ್ಯೌ ತಸ್ಮಾತ್ತಾಃ ಪರಿವರ್ಜಯೇತ್ || ೧೧೪

ಅಮಾವಾಸ್ಯಾದಿನ ಅಧ್ಯಯನವು ಗುರುವಿಗೆ, ಚತುರ್ದಶೀದಿನ ಶಿಷ್ಯನಿಗೆ, ಅಷ್ಟಮಿ, ಪೌರ್ಣಮಿ ದಿನ ವೇದಕ್ಕೆ ದೋಷವು, ಆದುದರಿಂದ ಆ ದಿನಗಳಲ್ಲಿ ಓದಬಾರದು.

ಪಾಂಶುವರ್ಷೇ ದಿಶಾಂ ದಾಹೇ ಗೋಮಾಯುವಿರುತೇ ತಥಾ |
ಶ್ವಖರೋಷ್ಟ್ರೇ ಚ ರುವತಿ ಪಂಕ್ತೌ ಚ ನ ಪಠೇದ್ದ್ವಿಜಃ || ೧೧೫

ದೂಳು ಹಾರುವಾಗ, ಸರ್ವತ್ರ ಬೆಂಕಿ ಉರಿಯುವಾಗ, ನರಿ, ನಾಯಿ, ಕತ್ತೆ, ಒಂಟೆಗಳು ಕೂಗುತ್ತಿರುವಾಗ, ಮತ್ತು ಆ ಮೃಗಗಳ ಒಟ್ಟಿಗೆ ಕುಳಿತು ಅಧ್ಯಯನ ಮಾಡಬಾರದು.

ನಾಧೀಯೀತ ಶ್ಮಶಾನಾಂತೇ ಗ್ರಾಮಾಂತೇ ಗೋವ್ರಜೇಪಿ ವಾ |
ವಸಿತ್ವಾ ಮೈಥುನಂ ವಾಸಃ ಶ್ರಾದ್ಧಿಕಂ ಪ್ರತಿಗೃಹ್ಯ ಚ || ೧೧೬

ಶ್ಮಶಾನದ ಬಳಿಯಲ್ಲಿ, ಊರಬಳಿಯಲ್ಲಿ, ಹಟ್ಟಿಯಲ್ಲಿ, ಮೈಥುನಕಾಲದ ಉಪಯೋಗದ ಬಟ್ಟೆಯಲ್ಲಿ, ಶ್ರಾದ್ಧಾನ್ನವನ್ನು ಉಂಡು, ಅಧ್ಯಯನ ಮಾಡಬಾರದು.

ಪ್ರಾಣಿ ವಾ ಯದಿ ವಾಽಪ್ರಾಣಿ ಯತ್ಕಿಂಚಿಚ್ಛ್ರಾದ್ಧಿಕಂ ಭವೇತ್ |
ತದಾಲಭ್ಯಾಪ್ಯನಧ್ಯಾಯಃ ಪಾಣ್ಯಾಸ್ಯೋ ಹಿ ದ್ವಿಜಃ ಸ್ಮೃತಃ || ೧೧೭

ಬ್ರಾಹ್ಮಣನು ತನ್ನ ಕೈಯೇ ಮುಖವಾಗಿ ಉಳ್ಳವನು. ಮುಖಕ್ಕೂ ಕೈಗೂ ಸ್ವೀಕಾರಕಾರ್ಯಗಳು ಸಮಾನವು. ಆದುದರಿಂದ ಶ್ರಾದ್ಧದಲ್ಲಿ ಗೋ ಅಶ್ವಾದಿ ಪ್ರಾಣಿಗಳನ್ನು, ವಸ್ತ್ರಮೂಲ್ಯಾದಿ ಇತರ ವಸ್ತುಗಳನ್ನು ಸ್ವೀಕರಿಸಿದರೆ ಅದರಿಂದಲೂ ಅನಧ್ಯಾಯವು ಆಚರಣೀಯವಾಗುವುದು.

ಚೋರೈರುಪಪ್ಲುತೇ ಗ್ರಾಮೇ ಸಂಭ್ರಮೇ ಚಾಗ್ನಿಕಾರಿಕೇ |
ಆಕಾಲಿಕಮನಧ್ಯಾಯಂ ವಿದ್ಯಾತ್ಸರ್ವಾದ್ಭುತೇಷು ಚ || ೧೧೮

ಗ್ರಾಮದಲ್ಲಿ ಕಳ್ಳರ ಹಾವಳಿಯಿರುವಾಗ, ಅಗ್ನಿಭಯದಿಂದ ಜನರಿಗೆ ನಂದಿಸುವ–ರಕ್ಷಿಸುವ ಸಂಭ್ರಮ ಇರುವಾಗ ಮತ್ತು ಇಂತಹ ಇನ್ನಾವುದೇ ಅದ್ಭುತವಿರುವಾಗ ಆ ಕಾಲದಿಂದ ಮರುದಿನ ಅದೇ ಸಮಯದವರೆಗೆ ಅನಧ್ಯಾಯವು.

ಉಪಾಕರ್ಮಣಿ ಚೋತ್ಸರ್ಗೇ ತ್ರಿರಾತ್ರಂ ಕ್ಷೇಪಣಂ ಸ್ಮೃತಂ |
ಅಷ್ಟಕಾಸು ತ್ವಹೋರಾತ್ರಂ ಋತ್ವಂತಾಸು ಚ ರಾತ್ರಿಷು || ೧೧೯

ಧರ್ಮನೈಪುಣ್ಯಕಾಮರು, ಉಪಾಕರ್ಮೋತ್ಸರ್ಜನಗಳಲ್ಲಿ ಮೂರು ದಿನವೂ ಅಷ್ಟಮೀ ತಿಥಿಸ್ಪರ್ಶ ಇರುವ ಇಡೀ ದಿನವೂ ಅನಧ್ಯಾಯವು ಹಿಂದೆ ಅಷ್ಟಮಿ ತಿಥಿಕಾಲದಲ್ಲಿ ಮಾತ್ರ ಅನಧ್ಯಾಯವನ್ನು ಹೇಳಿರುವುದು.

ನಾಧೀಯೀತಾಶ್ವಮಾರೂಢೋ ನ ವೃಕ್ಷಂ ನ ಚ ಹಸ್ತಿನಂ |
ನ ನಾವಂ ನ ಖರಂ ನೋಷ್ಟ್ರಂ ನೇರಿಣಸ್ಥೋ ನ ಯಾನಗಃ || ೧೨೦

(ತುರಗ) ಕುದುರೆ, ಮರ, ಆನೆ, ದೋಣಿ, ಕತ್ತೆ, ಒಂಟೆ, ಮರಭೂಮಿ, ವಾಹನಗಳಲ್ಲಿ ಕುಳಿತು ಅಧ್ಯಯನ ಮಾಡಬಾರದು.

ನ ವಿವಾದೇ ನ ಕಲಹೇ ನ ಸೇನಾಯಾಂ ನ ಸಂಗರೇ |
ನ ಭುಕ್ತಮಾತ್ರೇ ನಾಜೀರ್ಣೇ ನ ವಮಿತ್ವಾ ನ ಶುಕ್ತಕೇ || ೧೨೧

ಮಾತಿನ—ಆಯುಧದ ಜಗಳ, ಸೇನಾಪ್ರಯಾಣ, ಯುದ್ಧ, ಊಟ ಮಾಡಿ ಕೈಯೊಣಗುವ ಮೊದಲು, ಜೀರ್ಣ ಆಗುವ ಹೊತ್ತಿಗೆ, ಜೀರ್ಣವಾಗದೆ ರೋಗದ ಹೆಸರು ಹೊಂದಿದರೆ, ಅದು ಹುಳಿಯಾಗಿ ತೇಗು ಬರುತ್ತಿದ್ದರೆ ಮತ್ತು ವಾಂತಿಯ ಬಳಿಕವೂ ಅಧ್ಯಯನ ಮಾಡಬಾರದು.

ಅತಿಥಿಂ ಚಾನನುಜ್ಞಾಪ್ಯ ಮಾರುತೇ ವಾತಿ ವಾ ಭೃಶಂ ।
ರುಧಿರೇ ಚ ಸ್ರುತೇ ಗಾತ್ರಾಚ್ಛಸ್ತ್ರೇಣ ಚ ಪರಿಕ್ಷತೇ ॥ ೧೨೨

ಅತಿಥಿಯ ಸಮ್ಮತಿ ಪಡೆಯದೆ, ಚೆನ್ನಾಗಿ ಗಾಳಿ ಬೀಸುತ್ತಿದ್ದರೆ, ಮೈಯಿಂದ ರಕ್ತ ಸೋರುತ್ತದಾದರೆ, ಮೈಗೆ ಗಾಯವಾದರೆ, ಓದಬಾರದು.

ಸಾಮಧ್ವನಾವೃಗ್ಯಜುಷೀ ನಾಧೀಯೀತ ಕದಾಚನ ।
ವೇದಸ್ಯಾಧೀತ್ಯ ವಾಪ್ಯಂತಮಾರಣ್ಯಕಮಧೀತ್ಯ ಚ ॥ ೧೨೩

ಸಾಮಗಾನ ಶ್ರವಣ ಮಾಡಿದರೆ, ಆರಣ್ಯಕ ಓದಿದರೆ ಋಗ್ಯಜುರ್ವೇದಗಳನ್ನು ಓದಬಾರದು.

ಋಗ್ವೇದೋ ದೇವದೈವತ್ಯೋ ಯಜುರ್ವೇದಸ್ತು ಮಾನುಷಃ ।
ಸಾಮವೇದಃ ಸ್ಮೃತಃ ಪಿತ್ರ್ಯಸ್ತಸ್ಮಾತ್ತಸ್ಯಾಶುಚಿರ್ಧ್ವನಿಃ ॥ ೧೨೪

ಋಗ್ವೇದಕ್ಕೆ ದೇವರು, ಯಜುರ್ವೇದಕ್ಕೆ ಮನುಷ್ಯ, ಸಾಮವೇದಕ್ಕೆ ಪಿತೃಗಳು, ದೇವತೆಗಳು. ಆದುದರಿಂದ ಸಾಮಧ್ವನಿಯು ಅಶುಚಿಯು.

ಏತದ್ವಿದಂತೋ ವಿದ್ವಾಂಸಸ್ತ್ರಯೀನಿಷ್ಕರ್ಷಮನ್ವಹಂ ।
ಕ್ರಮತಃ ಪೂರ್ವಮಭ್ಯಸ್ಯ ಪಶ್ಚಾದ್ವೇದಮಧೀಯತೇ ॥ ೧೨೫

ಋಗ್ವೇದದ ಮೊದಲು ಪ್ರಣವವನ್ನು, ಯಜುರ್ವೇದದ ಮೊದಲು ವ್ಯಾಹೃತಿಯನ್ನು, ಸಾಮವೇದದ ಮೊದಲು ಸಾವಿತ್ರಿಯನ್ನು ಪಠಿಸದೆ ಅಧ್ಯಯನ ಮಾಡಬಾರದು. ಶಿಷ್ಯೋಪದೇಶಕ್ಕಾಗಿ ಪುನಃ ಸ್ಮರಿಸಲಾಗಿದೆ.

ಪಶುಮಂಡೂಕಮಾರ್ಜಾರಶ್ವಸರ್ಪನಕುಲಾಖುಭಿಃ ।
ಅಂತರಾಗಮನೇ ವಿದ್ಯಾದನಧ್ಯಾಯಮಹರ್ನಿಶಂ ॥ ೧೨೬

ಗುರು-ಶಿಷ್ಯರ ನಡುವಿನಲ್ಲಿ ಅಧ್ಯಯನ ಕಾಲದಲ್ಲಿ ಗೋ ಮುಂತಾದ ಪಶುಗಳು, ಕಪ್ಪೆ, ಬೆಕ್ಕು, ನಾಯಿ, ಹಾವು, ಮುಂಗುಸಿ, ಇಲಿ–ಪ್ರಾಣಿಗಳು ಬಂದರೆ ಆ ಹಗಲು-ರಾತ್ರಿ ಅನಧ್ಯಾಯವು.

ದ್ವಾವೇವ ವರ್ಜಯೇನ್ನಿತ್ಯಮನಧ್ಯಾಯೌ ಪ್ರಯತ್ನತಃ ।
ಸ್ವಾಧ್ಯಾಯಭೂಮಿಂ ಚಾಶುದ್ಧಾಮಾತ್ಮಾನಂ ಚಾಶುಚಿಂ ದ್ವಿಜಃ ॥ ೧೨೭

ಈ ವರೆಗೆ ಹೇಳಿದುದು ಮುಖ್ಯವಾಗಿ ಸ್ನಾತಕನಿಗೆ. ಪ್ರಥಮಾಭ್ಯಾಸ ಮಾಡುವ ಶಿಷ್ಯನು ಬಹು ಅನಧ್ಯಾಯಗಳನ್ನು ಮಾಡಿದರೆ ಕಂಠಪಾಠಕ್ಕೆ ಸಮಯ ಸಾಲದು. ಆದುದರಿಂದ ತಾನು ಮತ್ತು ತನ್ನ ಪಾಠಭೂಮಿಯು ಅಶುದ್ಧವಾದರೆ ಮಾತ್ರ ಅನಧ್ಯಾಯ ಮಾಡಬೇಕು. ಅನ್ಯದಾ ಪೂರ್ವ ನಿಮಿತ್ತಗಳಿದ್ದರೂ ಅಧ್ಯಯನ ಮಾಡಬಹುದು ಇಲ್ಲಿಗೆ ಅನಧ್ಯಾಯ ಪ್ರಕರಣವು ಮುಗಿಯಿತು.

ಅಮಾವಾಸ್ಯಾಮಷ್ಟಮೀಂ ಚ ಪೌರ್ಣಮಾಸೀಂ ಚತುರ್ದಶೀಂ ।
ಬ್ರಹ್ಮಚಾರೀ ಭವೇನ್ನಿತ್ಯಮಪ್ಯೃತೌ ಸ್ನಾತಕೋ ದ್ವಿಜಃ ॥ ೧೨೮

ಅಮಾವಾಸ್ಯಾ, ಅಷ್ಟಮೀ, ಪೌರ್ಣಿಮಾ, ಚತುರ್ದಶೀ ದಿನಗಳಲ್ಲಿ ಸ್ನಾತಕನು ಸ್ತ್ರೀಸಂಗ ಮಾಡದೆ ಬ್ರಹ್ಮಚಾರಿಯಾಗಿರಬೇಕು.

ನ ಸ್ನಾನಮಾಚರೇದ್ಭುಕ್ತ್ವಾ ನಾತುರೋ ನ ಮಹಾನಿಶಿ ।
ನ ವಾಸೋಭಿಃ ಸಹಾಜಸ್ರಂ ನಾವಿಜ್ಞಾತೇ ಜಲಾಶಯೇ ॥ ೧೨೯

ಉಂಡಕೂಡಲೇ, ರೋಗಿಯು, ಮಧ್ಯರಾತ್ರಿ, ಬಹುಬಟ್ಟೆಸಹಿತವಾಗಿ, ಅಪರಿಚಿತ ಜಲಾಶಯ, ಈ ಸಂದರ್ಭಗಳಲ್ಲಿ ಸ್ನಾನಮಾಡಬಾರದು. ಕೆಲವು ಪುನರುಕ್ತಿಯಲ್ಲಿ ಮೊದಲು ಬ್ರಹ್ಮಚಾರಿ, ವಾನಪ್ರಸ್ಥರ ಸಾಮಾನ್ಯ ನಿಯಮ ಈ ಪ್ರಕರಣ. ಸ್ನಾತಕವ್ರತ ಲೋಪಕ್ಕೆ ಪ್ರಾಯಶ್ಚಿತ್ತವು.

ದೇವತಾನಾಂ ಗುರೋ ರಾಜ್ಞಃ ಸ್ನಾತಕಾಚಾರ್ಯಯೋಸ್ತಥಾ ।
ನಾಕ್ರಾಮೇತ್ಕಾಮತಶ್ಛಾಯಾಂ ಬಭ್ರುಣೋ ದೀಕ್ಷಿತಸ್ಯ ಚ ॥ ೧೩೦

ದೇವತಾ ಪ್ರತಿಮೆಗಳ, ಗುರುವಿನ, ರಾಜನ, ಸ್ನಾತಕನ, ಆಚಾರ್ಯನ, ಯಜ್ಞದೀಕ್ಷಿತನ ನೆರಳನ್ನು ತಿಳಿದೂ ದಾಟಬಾರದು.

ಮಧ್ಯಂದಿನೇಽರ್ಧರಾತ್ರೇ ಚ ಶ್ರಾದ್ಧಂ ಭುಕ್ತ್ವಾ ಚ ಸಾಮಿಷಂ ।
ಸಂಧ್ಯಯೋರುಭಯೋಶ್ಚೈವ ನ ಸೇವೇತ ಚತುಷ್ಪದಮ ॥ ೧೩೧

ನಡುಹಗಲು, ಮಧ್ಯರಾತ್ರಿ, ಶ್ರಾದ್ಧ ಭೋಜನಮಾಡಿ, ಎರಡು ಸಂಧ್ಯೆಗಳಲ್ಲಿ, ನಾಲ್ಕು ದಾರಿ ಕೂಡುವ ಸ್ಥಳದಲ್ಲಿರಬಾರದು.

ಉದ್ವರ್ತನಮುಪಸ್ನಾನಂ ವಿಣ್ಮೂತ್ರೇ ರಕ್ತಮೇವ ಚ ।
ಶ್ಲೇಷ್ಮನಿಷ್ಠ್ಯೂತವಾಂತಾನಿ ನಾಧಿತಿಷ್ಠೇತ್ತು ಕಾಮತಃ ॥ ೧೩೨

ಮೈತಿಕ್ಕುವ ಸೀಗೆಪುಡಿ ಮುಂತಾದುದು, ಸ್ನಾನಮಾಡಿದ ನೀರು, ಮಲ ಮೂತ್ರ, ರಕ್ತ, ಕಫ, ಉಗುಳು, ವಾಂತಿ—ಇವುಗಳ ಮೇಲೆ ನಿಲ್ಲಬಾರದು.

ವೈರಿಣಂ ನೋಪಸೇವೇತ ಸಹಾಯಂ ಚೈವ ವೈರಿಣಃ ।
ಅಧಾರ್ಮಿಕಂ ತಸ್ಕರಂ ಚ ಪರಸ್ಯೈವ ಚ ಯೋಷಿತಂ ॥ ೧೩೩

ವೈರಿಯನ್ನು, ವೈರಿಸಹಾಯಕನನ್ನು, ಅಧರ್ಮಿಷ್ಠನನ್ನು, ಕಳ್ಳನನ್ನು, ಪರಸ್ತ್ರೀಯನ್ನು ತನ್ನ ಸಂಬಂಧದಿಂದ ದೂರವಿಡಬೇಕು.

ನ ಹೀದೃಶಮನಾಯುಷ್ಯಂ ಲೋಕೇ ಕಿಂಚನ ವಿದ್ಯತೇ ।
ಯಾದೃಶಂ ಪುರುಷಸ್ಯೇಹ ಪರದಾರೋಪಸೇವನಂ ॥ ೧೩೪

ಪರಸ್ತ್ರೀ ಪ್ರೀತಿಯು ತನ್ನ ಆಯುಸ್ಸನ್ನು ಅಪಹರಿಸುವುದು. ಅವಳ ಪತಿಯು ಸಿಟ್ಟಾಗಿ ಕೊಲ್ಲುವ ಸಂಭವವಿದೆ. ಅವಳೂ ಸಿಟ್ಟಾಗಿ ಕಡಿಯ ಬಹುದು. ಹೀಗೆ ಪ್ರಾಣಾಪಾಯಕಾರವೂ ಆಗಿದೆ. ಪಾಪಮೂಲಕ ಆಯುಃಕ್ಷಯವು ಇದ್ದೇ ಇದೆ.

ಕ್ಷತ್ರಿಯಂ ಚೈವ ಸರ್ಪಂ ಚ ಬ್ರಾಹ್ಮಣಂ ಚ ಬಹುಶ್ರುತಂ ।
ನಾವಮನ್ಯೇತ ವೈ ಭೂಷ್ಣುಃ ಕೃಶಾನಪಿ ಕದಾಚನ ॥ ೧೩೫

ಕ್ಷತ್ರಿಯ, ಹಾವು, ಶಾಸ್ತ್ರಸಂಪನ್ನ ಬ್ರಾಹ್ಮಣ, ಬೆಂಕಿ ಇವು ಚಿಕ್ಕದೆಂದು ಅವಮಾನಿಸಬಾರದು, ಪೀಡಿಸಬಾರದು. ಅದರಿಂದ ತನ್ನ ಅಭಿವೃದ್ಧಿಗೆ ಹಾನಿಯಾಗುವುದು.

ಏತತ್ತ್ರಯಂ ಹಿ ಪುರುಷಂ ನಿರ್ದಹೇದವಮಾನಿತಂ ।
ತಸ್ಮಾದೇತತ್ತ್ರಯಂ ನಿತ್ಯಂ ನಾವಮನ್ಯೇತ ಬುದ್ಧಿಮಾನ್ ॥ ೧೩೬

ಬುದ್ಧಿವಂತನು ಮೇಲೆ ಹೇಳಿದವರ ತಂಟೆಗೆ ಹೋಗಬಾರದು. ಅದರಿಂದ ತನಗೆ ಜಯವಿಲ್ಲ.

ನಾತ್ಮಾನಮವಮನ್ಯೇತ ಪೂರ್ವಾಭಿರಸಮೃದ್ಧಿಭಿಃ ।
ಆಮೃತ್ಯೋಃ ಶ್ರಿಯಮನ್ವಿಚ್ಛೇತ್ ನೈನಾಂ ಮನ್ಯೇತ ದುರ್ಲಭಾಂ ॥ ೧೩೭

ತನ್ನ ಬಡತನವನ್ನು ನೋಡಿ ತನ್ನನ್ನು ಅಪಮಾನಿಸಿಕೊಳ್ಳುವುದು ಬೇಡ. ದುಃಖಪಟ್ಟು ನಿರಾಶೆಯಿಂದ ಆತ್ಮಹತ್ಯೆಗೆ ಪ್ರೀತಿಪಡುವ ದುರವಸ್ಥೆ ತಂದುಕೊಳ್ಳಬಾರದು. ಮರಣದ ಮೊದಲು ಎಂದಾದರೂ ಐಶ್ವರ್ಯವು ಬರುವುದೆಂದು ಆಶಾವಾದಿಯಾಗಿರಬೇಕು. ಅದು ದುರ್ಲಭವೆಂದು ತಿಳಿಯಬಾರದು. 'ಜೀವನ್ ಭದ್ರಾಣಿ ಪಶ್ಯತೀ' ಪ್ರಯತ್ನಿಸಬೇಕು.

ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಮ್ ।
ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನಃ ॥ ೧೩೮

ಸತ್ಯವನ್ನೇ ಹೇಳಬೇಕು. ಪ್ರಿಯವಾದುದನ್ನೇ (ಕೇಳುವವನಿಗೆ) ಹೇಳಬೇಕು. ಸತ್ಯವಾದರೂ ಅಪ್ರಿಯವನ್ನು ಹೇಳಲು ಮುಂದಾಗಬಾರದು. ಕೇಳುವವನಿಗೆ ರಮ್ಯವೆಂದು ಸುಳ್ಳು ಹೇಳಬಾರದು. ಇದು ಸನಾತನ ಧರ್ಮವು, ವೇದಗಮ್ಯವು. ಪರಿವರ್ತನ ಶೀಲವಲ್ಲ.

ಭದ್ರಂ ಭದ್ರಮಿತಿ ಬ್ರೂಯಾತ್ಭದ್ರಮಿತ್ಯೇವ ವಾ ವದೇತ್ ।
ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ಕೇನಚಿತ್ ಸಹ ॥ ೧೩೯

ಅಮಂಗಲವನ್ನು ಮಂಗಲವೆಂದೇ ಹೇಳಬೇಕು. 'ವೈರಬೆಳೆಯುವಂತೆ ಯಾವ ವಿಷಯದಲ್ಲಿಯೂ ಯಾರೊಡನೆಯೂ ಮಾತಾಡಬಾರದು.

ನಾತಿಕಲ್ಯಂ ನಾತಿಸಾಯಂ ನಾತಿಮಧ್ಯಂದಿನೇ ಸ್ಥಿತೇ ।
ನಾಜ್ಞಾತೇನ ಸಮಂ ಗಚ್ಛೇನ್ನೈಕೋ ನ ವೃಷಲೈಃ ಸಹ ॥ ೧೪೦

ಬಲು ಬೆಳಗ್ಗೆ, ಸಾಯಂ, ನಡುಹಗಲು, ಪರಿಚಯವಿಲ್ಲದವನೊಡನೆ ಒಂಟಿಯಾಗಿ ದಾರಿನಡೆಯಬಾರದು.

ಹೀನಾಂಗಾನತಿರಿಕ್ತಾಂಗಾನ್ ವಿದ್ಯಾಹೀನಾನ್ ವಯೋಽಧಿಕಾನ್ ।
ರೂಪದ್ರವ್ಯವಿಹೀನಾಂಶ್ಚ ಜಾತಿಹೀನಾಂಶ್ಚ ನಾಕ್ಷಿಪೇತ್ ॥ ೧೪೧

ಊನಾಂಗ, ಅಧಿಕಾಂಗ, ವಿದ್ಯಾಹೀನ, ಅಧಿಕವಯಸ್ಕ, ಕುರೂಪಿ, ಬಡವ, ಕೀಳುಮಟ್ಟದವ ಇವರನ್ನು ನಿಂದಿಸಬಾರದು.

ನ ಸ್ಪೃಶೇತ್ಪಾಣಿನೋಚ್ಛಿಷ್ಟೋ ವಿಪ್ರೋ ಗೋಬ್ರಾಹ್ಮಣಾನಲಾನ್ ।
ನ ಚಾಪಿ ಪಶ್ಯೇದಶುಚಿಃ ಸುಸ್ಥೋ ಜ್ಯೋತಿರ್ಗಣಾನ್ದಿವಿ ॥ ೧೪೨

ತಾನು ಅಶುಚಿಯಾಗಿ ಗೋವು, ಬ್ರಾಹ್ಮಣ, ಬೆಂಕಿ ಇವುಗಳನ್ನು ಮುಟ್ಟಬಾರದು. ಆರೋಗ್ಯ ಇರುವಾಗ ಅಶುಚಿಯಾಗಿ ಗಗನದ ಜ್ಯೋತಿಗಳನ್ನು ನೋಡಬಾರದು.

ಸ್ಪೃಷ್ಟ್ವೈತಾನಶುಚಿರ್ನಿತ್ಯಮದ್ಭಿಃ ಪ್ರಾಣಾನ್ಸ್ಪೃಶೇತ್ ।
ಗಾತ್ರಾಣಿ ಚೈವ ಸರ್ವಾಣಿ ನಾಭಿಂ ಪಾಣಿತಲೇನ ತು ॥ ೧೪೩

ಅಶುಚಿಯಾಗಿ ಆಕಳು ಮುಂತಾದವನ್ನು ಮುಟ್ಟಿದರೆ ಆಚಮನ ಮಾಡಿ ಜ್ಞಾನೇಂದ್ರಿಯಗಳನ್ನು ತಲೆ, ಹೆಗಲು, ಮೊಳಕಾಲು, ಹೊಕ್ಕಳುಗಳನ್ನು ಕೂಡ ಮುಟ್ಟಬೇಕು.

ಅನಾತುರಃ ಸ್ವಾನಿ ಖಾನಿ ನ ಸ್ಪೃಶೇದನಿಮಿತ್ತತಃ ।
ರೋಮಾಣಿ ಚ ರಹಸ್ಯಾನಿ ಸರ್ವಾಣ್ಯೇವ ವಿವರ್ಜಯೇತ್ ॥ ೧೪೪

ರೋಗಿಯಲ್ಲದಿರುವಾಗ ತನ್ನ ಇಂದ್ರಿಯಗಳನ್ನು, ರೋಮಗಳನ್ನು, ಮರ್ಮಾಂಗಗಳನ್ನು ಒಂದನ್ನೂ ಕಾರಣವಿಲ್ಲದೆ ಮುಟ್ಟುತ್ತಿರಬಾರದು.

ಮಂಗಲಾಚಾರಯುಕ್ತಃ ಸ್ಯಾತ್ಪ್ರಯತಾತ್ಮಾ ಜಿತೇಂದ್ರಿಯಃ ।
ಜಪೇಚ್ಚ ಜುಹುಯಾಚ್ಚೈವ ನಿತ್ಯಮಗ್ನಿಮತಂದ್ರಿತಃ ॥ ೧೪೫
ಮಂಗಲಾಚಾರಯುಕ್ತಾನಾಂ ನಿತ್ಯಂ ಚ ಪ್ರಯತಾತ್ಮನಾಂ ।
ಜಪತಾಂ ಜುಹ್ವತಾಂ ಚೈವ ವಿನಿಪಾತೋ ನ ವಿದ್ಯತೇ ।

ಮಂಗಲಕರವಾದ ಆಚರಣೆ ಉಳ್ಳವನಾಗಬೇಕು. ಶುಚಿಯೂ, ಜಿತೇಂದ್ರಿಯನೂ, ಗಾಯತ್ರೀ ಜಪಿಸುವವನೂ, ಅಗ್ನಿಕಾರ್ಯ ಮಾಡುತ್ತಿರುವವನೂ ಆಗಿರಬೇಕು. ಆಲಸ್ಯಪಡಬಾರದು. ಹೀಗೆ ಆದರೆ ದೈವಮಾನುಷ ಉಪದ್ರವಗಳು ಬರಲಾರವು.

ವೇದಮೇವಾಭ್ಯಸೇನ್ನಿತ್ಯಂ ಯಥಾಕಾಲಮತಂದ್ರಿತಃ ।
ತಂ ಹ್ಯಸ್ಯಾಹುಃ ಪರಂ ಧರ್ಮಮುಪಧರ್ಮೋಽನ್ಯ ಉಚ್ಯತೇ ॥ ೧೪೭

ಬೇಸರಪಡದೆ ವಿಹಿತಕಾಲದಲ್ಲಿ ವೇದಾಭ್ಯಾಸವನ್ನು ಮಾಡುತ್ತಿರಬೇಕು. ಅದು ಮುಖ್ಯ ಧರ್ಮವು; ಉಳಿದುದು ಉಪಧರ್ಮವು.

ವೇದಾಭ್ಯಾಸೇನ ಸತತಂ ಶೌಚೇನ ತಪಸೈವ ಚ ।
ಅದ್ರೋಹೇಣ ಚ ಭೂತಾನಾಂ ಜಾತಿಂ ಸ್ಮರತಿ ಪೌರ್ವಿಕೀಂ ॥ ೧೪೮

ಸದಾಕಾಲ ಶುಚಿ, ತಪಸ್ಸು, ಅದ್ರೋಹಬುದ್ಧಿಯಿದ್ದು ವೇದಾಧ್ಯಯನ ಮಾಡುತ್ತಿದ್ದರೆ ಪೂರ್ವಜನ್ಮದ ಸರ್ವವೃತ್ತಾಂತಗಳ ಸ್ಮರಣೆಯುಂಟಾಗುವುದು.

ಪೌರ್ವಿಕೀಂ ಸಂಸ್ಮರನ್ಜಾತಿಂ ಬ್ರಹ್ಮೈವಾಭ್ಯಸತೇ ಪುನಃ ।
ಬ್ರಹ್ಮಾಭ್ಯಾಸೇನ ಚಾಜಸ್ರಮನಂತಂ ಸುಖಮಶ್ನುತೇ ॥ ೧೪೯

ಪೂರ್ವಜನ್ಮಗಳ ಸ್ಮರಣೆಯನ್ನು ಹೊಂದುವುದರಿಂದ ಅಲ್ಲಿನ ಸುಖದುಃಖಗಳ ಯಥಾರ್ಥ ಜ್ಞಾನದಿಂದ ಆತ್ಮಜ್ಞಾನದಲ್ಲಿ ಶ್ರದ್ಧೆಯುಂಟಾಗುವುದು. ವೇದಾಂತ ವಾಕ್ಯಾರ್ಥಗಳ ಶ್ರವಣ, ಮನನ, ನಿದಿಧ್ಯಾಸನಗಳಿಂದ ಪರಮಾನಂದ ಸಂಪ್ರಾಪ್ತಿ ರೂಪ ಮೋಕ್ಷಲಾಭವಾಗುವುದು.

ಸಾವಿತ್ರಾಂಛಾಂತಿಹೋಮಾಂಶ್ಚ ಕುರ್ಯಾತ್ಪರ್ವಸು ನಿತ್ಯಶಃ ।
ಪಿತೄಂಶ್ಚೈವಾಷ್ಟಕಾಸ್ವರ್ಚೇನ್ನಿತ್ಯಮನ್ವಷ್ಟಕಾಸು ಚ ॥ ೧೫೦

ಪರ್ವಕಾಲಗಳಲ್ಲಿ ಸವಿತೃದೇವತೆಗೆ ಶಾಂತಿಹೋಮಗಳನ್ನು ಮಾಡಬೇಕು. ಅಷ್ಟಮೀ, ನವಮೀಗಳಲ್ಲಿ ಪಿತೃಶ್ರಾದ್ಧವನ್ನು ಮಾಡಬೇಕು. ಅಗ್ರಹಾಯನೀಯ ಬಳಿಕ ಮೂರು ಕೃಷ್ಣಪಕ್ಷಗಳಲ್ಲಿ ಈ ಎರಡು ವಿಧದ ಶ್ರಾದ್ಧಗಳು ಕರ್ತವ್ಯಗಳಾಗಿವೆ.

ದೂರಾದಾವಸಥಾನ್ಮೂತ್ರಂ ದೂರಾತ್ಪಾದಾವಸೇಚನಂ ।
ಉಚ್ಛಿಷ್ಟಾನ್ನಂ ನಿಷೇಕಂ ಚ ದೂರಾದೇವ ಸಮಾಚರೇತ್ ॥ ೧೫೧

ಮನೆಯಿಂದ ಬಹಳ ದೂರ ಈ ಕೆಲಸಗಳನ್ನು ಮಾಡಬೇಕು. ಕಾಲು ತೊಳೆಯುವುದು, ಎಂಜಲು ಎಲೆ ಎಸೆಯುವುದು, ಮಲಮೂತ್ರ-ವಿಸರ್ಜನ ಮಾಡುವುದು ಇವುಗಳನ್ನು ಮನೆ ಬಳಿ ಮಾಡಬಾರದು.

ಮೈತ್ರಂ ಪ್ರಸಾಧನಂ ಸ್ನಾನಂ ದಂತಧಾವನಮಂಜನಂ ।
ಪೂರ್ವಾಹ್ಣ ಏವ ಕುರ್ವೀತ ದೇವತಾನಾಂ ಚ ಪೂಜನಂ ॥ ೧೫೨

ಮಲವಿಸರ್ಜನ, ದೇಹಾಲಂಕಾರ, ಸ್ನಾನ, ಹಲ್ಲು ತೊಳೆಯುವುದು, ಕಣ್ಣಿಗೆ ಅಂಜನ ಹಾಕುವುದು, ದೇವರ ಪೂಜೆ ಇವುಗಳನ್ನು ಅಪರಾಹ್ಣದಲ್ಲಿ ಮಾಡಬಾರದು. ಆಯಾ ಕರ್ಮಗಳ ವಿಶೇಷ ಕಾಲವು ಅಲ್ಲಲ್ಲಿ ಹೇಳಲ್ಪಡುವುದು.

ದೈವತಾನ್ಯಭಿಗಚ್ಛೇತ್ತು ಧಾರ್ಮಿಕಾಂಶ್ಚ ದ್ವಿಜೋತ್ತಮಾನ್ ।
ಈಶ್ವರಂ ಚೈವ ರಕ್ಷಾರ್ಥಂ ಗುರೂನೇವ ಚ ಪರ್ವಸು ॥ ೧೫೩

ಪರ್ವ (ಹಬ್ಬ) ಕಾಲಗಳಲ್ಲಿ ದೇವತಾ ಪ್ರತಿಮೆಗಳನ್ನು, ಧರ್ಮಿಷ್ಠ ಬ್ರಾಹ್ಮಣನನ್ನು, ರಾಜನನ್ನು, ಗುರುವನ್ನು ಸಂದರ್ಶಿಸಬೇಕು. ಅದರಿಂದ ಸಕಲ ವಿಧದ ಅನುಭವ, (ಜೀವನಾವಶ್ಯಕ) ಭಯನಿವಾರಣೆ, ರಕ್ಷಣೆಗಳು ಒದಗುವುವು.

ಅಭಿವಾದಯೇದ್ವೃದ್ಧಾಂಶ್ಚ ದದ್ಯಾಚ್ಚೈವಾಸನಂ ಸ್ವಕಂ ।
ಕೃತಾಂಜಲಿರುಪಾಸೀತ ಗಚ್ಛತಃ ಪೃಷ್ಠತೋಽನ್ವಿಯಾತ್ ॥ ೧೫೪

ಹಿರಿಯರು-ಗುರುಗಳು ಮನೆಗೆ ಬಂದಾಗ ಉಚಿತಾಸನ ಕೊಟ್ಟು, ವಿಧೇಯನಾಗಿ ಹಿಂಬಾಲಿಸಬೇಕು. ಅದು ಬಿಟ್ಟು ತನ್ನ ಕಾರ್ಯದಲ್ಲಿದ್ದು ಅನಾದರಿಸಬಾರದು.

ಶ್ರುತಿಸ್ಮೃತ್ಯುದಿತಂ ಸಮ್ಯಕ್‌ನಿಬದ್ಧಂ ಸ್ವೇಷು ಕರ್ಮಸು ।
ಧರ್ಮಮೂಲಂ ನಿಷೇವೇತ ಸದಾಚಾರಮತಂದ್ರಿತಃ ॥ ೧೫೫

ಶ್ರುತಿಸ್ಮೃತಿಗಳಲ್ಲಿ ಬರೆದಿರುವ ಸ್ವಕರ್ಮಬೋಧಕವಾದ ಧರ್ಮಕಾರಣವಾದ ಸದಾಚಾರವನ್ನು ಬೇಸರಿಸದೆ ಆಚರಿಸಬೇಕು.

ಆಚಾರಾಲ್ಲಭತೇ ಹ್ಯಾಯುರಾಚಾರಾದೀಪ್ಸಿತಾಃ ಪ್ರಜಾಃ ।
ಆಚಾರಾದ್ಧನಮಕ್ಷಯ್ಯಮಾಚಾರೋ ಹಂತ್ಯಲಕ್ಷಣಂ ॥ ೧೫೬

ಆಯುಸ್ಸು, ಇಷ್ಟಸಂತತಿ, ಧನಗಳು ಸದಾಚಾರದಿಂದ ವೃದ್ಧಿಹೊಂದುವುವು. ದುರ್ಲಕ್ಷಣಗಳು ನಿವಾರಣೆ ಹೊಂದುವುವು.

ದುರಾಚಾರೋ ಹಿ ಪುರುಷೋ ಲೋಕೇ ಭವತಿ ನಿಂದಿತಃ ॥
ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ॥ ೧೫೭

ದುರಾಚಾರದಿಂದ ನಿಂದೆ, ದುಃಖಗಳು ಪ್ರಾಪ್ತವಾಗುವುವು. ವ್ಯಾಧಿಯು (ರೋಗ)ಂಟಾಗುವುದು. ಅಲ್ಪಾಯುಸ್ಸು ಆಗುವುದು.

ಸರ್ವಲಕ್ಷಣಹೀನೋಽಪಿ ಯಃ ಸದಾಚಾರವಾನ್ನರಃ ।
ಶ್ರದ್ದಧಾನೋಽನಸೂಯಶ್ಚ ಶತಂ ವರ್ಷಾಣಿ ಜೀವತಿ ॥ ೧೫೮

ಅಸೂಯೆಪಡದೆ ಶ್ರದ್ಧೆಯಿದ್ದು ಸದಾಚಾರವುಳ್ಳವನಾದರೆ ದೀರ್ಘಾಯುಸ್ಸು ಉಂಟಾಗುವುದು. ಸೌಭಾಗ್ಯಲಕ್ಷಣಗಳಿಲ್ಲವಾದರೂ ತೊಂದರೆಯಿಲ್ಲ.

ಯದ್ಯತ್ಪರವಶಂ ಕರ್ಮ ತತ್ತದ್ಯತ್ನೇನ ವರ್ಜಯೇತ್ ।
ಯದ್ಯದಾತ್ಮವಶಂ ತು ಸ್ಯಾತ್ತತ್ತತ್ಸೇವೇತ ಯತ್ನತಃ ॥ ೧೫೯

ಪರಸಹಾಯ ಲಭ್ಯವಾದುದು (ಯಶ) ಯಾವುದೋ ಅದನ್ನು ಬಿಡಬೇಕು. ಸ್ವಪ್ರಯತ್ನ ಲಭ್ಯವಾದುದನ್ನು ಮಾತ್ರ ಬಿಡದೆಮಾಡಬೇಕು.

ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ ।
ಏತದ್ವಿದ್ಯಾತ್ಸಮಾಸೇನ ಲಕ್ಷಣಂ ಸುಖದುಃಖಯೋಃ ॥ ೧೬೦

ಪರಜನರ ಸಹಾಯದಿಂದ ಸಾಧ್ಯವಾದುದು ದುಃಖಕಾರಣವು. ತನ್ನ ಪ್ರಯತ್ನದಿಂದ ಲಭ್ಯವಾದುದು ಸುಖಕಾರಣವು. ಸುಖ–ದುಃಖಗಳು ಈ ರೀತಿ ಆತ್ಮನಲ್ಲಿ ಬಾಹ್ಯವಸ್ತುಗಳಿಂದ ಉತ್ಪನ್ನವಾಗುವುವು. ಇದು ಸಂಕ್ಷೇಪವಾಗಿ ಸುಖ–ದುಃಖಗಳ ಲಕ್ಷಣವು.

ಯತ್ಕರ್ಮ ಕುರ್ವತೋಽಸ್ಯ ಸ್ಯಾತ್ಪರಿತೋಷೋಽಂತರಾತ್ಮನಃ ।
ತತ್ಪ್ರಯತ್ನೇನ ಕುರ್ವೀತ ವಿಪರೀತಂ ತು ವರ್ಜಯೇತ್ ॥ ೧೬೧

ಇಂತಹ ಶಾಸ್ತ್ರಗಳಲ್ಲಿ ಹೇಳದಿರುವ ಮತ್ತು ನಿಷೇಧ ಮಾಡದಿರುವ ಯಾವುದಾದರೂ ವಿಷಯಗಳು ತನಗೆ ಸಂತೋಷಕರವಾಗಿದ್ದರೆ ಅವನ್ನು ಮಾಡಬಹುದು. ದುಃಖಕರವಾದರೆ ಬಿಡುವುದು.

ಆಚಾರ್ಯಂ ಚ ಪ್ರವಕ್ತಾರಂ ಪಿತರಂ ಮಾತರಂ ಗುರುಂ ।
ನ ಹಿಂಸ್ಯಾದ್ಬ್ರಾಹ್ಮಣಾನ್ ಗಾಶ್ಚ ಸರ್ವಾಂಶ್ಚೈವ ತಪಸ್ವಿನಃ ॥ ೧೬೨

ವೇದ ಅದರ ಅರ್ಥಗಳನ್ನು ಬೋಧಿಸುವ ಆಚಾರ್ಯ, ತಂದೆ, ತಾಯಿ, ಗುರು, ಬ್ರಾಹ್ಮಣ, ಗೋವು, ತಪಸ್ವಿಗಳು ಇವರ ಇಚ್ಛೆಗೆ ವಿರುದ್ಧವಾದುದನ್ನು ತಾನು ಮಾಡಿ ಅವರ ಮನಸ್ಸನ್ನು ನೋಯಿಸಬಾರದು. ಹೊಡೆಯುವುದಂತು ಸರ್ವಥಾ ತ್ಯಾಜ್ಯವು.

ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಂ ।
ದ್ವೇಷಂ ದಂಭಂ ಚ ಮಾನಂ ಚ ಕ್ರೋಧಂ ತೈಕ್ಷ್ಣ್ಯಂ ಚ ವರ್ಜಯೇತ್ ॥ ೧೬೩

ಪರಲೋಕ, ಪುಣ್ಯ, ಪಾಪ, ಪುನರ್ಜನ್ಮ, ದೇವರು ಇಲ್ಲವೆಂದು ತಿಳಿಯುವುದು, ವೇದದ ನಿಂದೆ, ದೇವರ ನಿಂದೆ, ದ್ವೇಷ, ಆಡಂಬರ, ದುರಭಿಮಾನ, ಸಿಟ್ಟು, ಕ್ರೂರತೆ—ಇವುಗಳನ್ನು ಬಿಡಬೇಕು.

ಪರಸ್ಯ ದಂಡಂ ನೋದ್ಯಚ್ಛೇತ್ಕ್ರುದ್ಧೋ ನೈವ ನಿಪಾತಯೇತ್ ।
ಅನ್ಯತ್ರ ಪುತ್ರಾಚ್ಛಿಷ್ಯಾದ್ವಾ ಶಿಷ್ಟ್ಯರ್ಥಂ ತಾಡಯೇತ್ತು ತೌ ॥ ೧೬೪

ಯಾರಿಗೂ ಹೊಡೆಯಲು ದೊಣ್ಣೆ ಎತ್ತಬಾರದು, ಹೊಡೆಯಲೂ ಬಾರದು, ತನ್ನ ಆಶ್ರಿತರಿಗೆ ಬುದ್ಧಿವಾದಕ್ಕೆ ಭಯಪ್ರದರ್ಶನ ಮಾಡಬಹುದು. ತಪ್ಪುಗಳನ್ನು ವಿವರಿಸಿ ಅಪಾಯ, ನಷ್ಟ, ದೋಷಗಳನ್ನು ಪ್ರೀತಿಯಿಂದ ತಿಳಿಸಿ ವರ್ತನೆಯ ನಿಷ್ಫಲತ್ವ-ವಿರೋಧಗಳನ್ನು ತೋರಿಸಿ ದೀರ್ಘಕಾಲದ ತಾಳ್ಮೆಯಿಂದ ಹೆಚ್ಚಿನವರನ್ನು ಸರಿದಾರಿಗೆ ತರಬಹುದು, ತನ್ನ ಅಭಿಪ್ರಾಯವನ್ನು ಅವರು ಒಪ್ಪಿ ಆಚರಿಸುವಂತೆ, ಮನಸ್ಸನ್ನು ಪರಿವರ್ತಿಸಬಹುದು. ಆದರಿಂದ ಪೂರ್ಣ ಫಲವಿದೆ. ಭಯದಿಂದ ಮಾಡಿದರೆ ಅದು ಮನಃಪೂರ್ವಕವಲ್ಲದು-

ದರಿಂದ ಸಫಲಕ್ರಿಯೆಯಾಗಲಾರದು. ಅಲ್ಲದೆ ಹೊಡೆತವು ಮಿತಿಮೀರಿ, ಸ್ಥಾನತಪ್ಪಿ ಮರಣಾದಿಗಳನ್ನು ಉಂಟುಮಾಡಬಹುದು. ಕೋಪವನ್ನು ಕೈ ಯಿಂದ ತೋರಿಸದೆ, ಮೌನ-ಅಸಹಕಾರಗಳಿಂದ ಪ್ರತಿಕರಿಸುವುದು ಮೇಲು.

ಬ್ರಾಹ್ಮಣಾಯಾವಗುರ್ಯೈವ ದ್ವಿಜಾತಿರ್ವಧಕಾಮ್ಯಯಾ ।
ಶತಂ ವರ್ಷಾಣಿ ತಾಮಿಸ್ರೇ ನರಕೇ ಪರಿವರ್ತತೇ ॥ ೧೬೫

ಹೊಡೆಯಲು ದೊಣ್ಣೆ ಎತ್ತಿದರೆ ನೂರಾರು ವರ್ಷ ನರಕದಲ್ಲಿ ನರಳ ಬೇಕಾಗುವುದು. ದುಷ್ಟರು ಈ ದಯೆ, ಧರ್ಮ, ಸದಾಚಾರರೂಪವಾದ— ಈ ಸದ್ವರ್ತನೆಯ ರೂಪವಾದ ತಮ್ಮ ರಕ್ಷಣೆಯಿಂದ ಸ್ವಯಂಲಜ್ಜಾಹೀನರೂ, ದುರಾಚಾರಿಗಳೂ ಆಗಿ ಕಳ್ಳತನ, ನಿಂದೆ, ತರ್ಜನ, ಭರ್ತ್ಸನವನ್ನು ಅತ್ಯಲ್ಪ ಕಾರಣಕ್ಕೆ ಸಜ್ಜನರಿಗೆ ಮಾಡುವುದುಂಟು. ಮರಣ ಭಯವನ್ನು ತೋರುತ್ತಾರೆ. ಇದು ಅವರ ಸ್ವಾರ್ಥಸಾಧನೆಯ ಬಗೆ. ಸತ್ಪುರುಷರ ಸದ್ಗುಣಗಳನ್ನು ಬಹು ವಾಗಿ ದುರುಪಯೋಗಪಡಿಸಿ ನಷ್ಟ-ಕಷ್ಟ ಉಂಟುಮಾಡುವ ಉಪಾಯ. ಅಂತಹ ಕಡೆ ಸಾಧುವು ತನ್ನ ರಕ್ಷಣೆಯೊಂದಿಗೆ ರಾಜಶಾಸನಗಳಿಗೆ ಸಿಗದಂತೆ ಅಪ ರಾಧಿಯಾಗದಂತೆ ಹೊಡೆಯಬೇಕಾಗುವುದು. ಅದಕ್ಕೆ ಭಯಪಡಬಾರದು. ಇಂತಹ ಸಂದರ್ಭ ಇತರ ಸಜ್ಜನರಿಂದಲೂ ರಾಜಶಾಸನದಿಂದಲೂ ಸಾಧುವಿಗೆ ರಕ್ಷಣೆ ಸಿಗುವುದಿಲ್ಲ. 'ಶಠೇ ಶಠ್ಯಂ ಸಮಾಚರೇತ್' ಎಂದಿರುವುದರಿಂದ ತಾನು ನಿಷ್ಕಾರಣವಾಗಿ ಶಠನಾಗದೆ ತನಗೆ ಶಠನಾದವನನ್ನು ಉಪಾಯದಿಂದ ತನ್ನ ಬಲ ಪ್ರದರ್ಶನ ಮಾಡಿ ಅವನಿಗೆ ದಂಡ ಭಯ ಉಂಟುಮಾಡುವುದು ಅಪರಾಧ ವಲ್ಲ. ಪಾಮರರು ದಂಡಕ್ಕಲ್ಲದೆ ಬೇರೆಯಾವುದಕ್ಕೂ ಬೆದರುವವರಲ್ಲ. ನೀತಿಯು ನಪುಂಸಕತನವೆಂದು ಅವರ ಸಿದ್ಧಾಂತವು. ಆದರೂ ತಾನು ಪಾಪ ಭೀರುವಾಗಿದ್ದು ಸಾಧ್ಯವಾದರೆ ಅನವಶ್ಯವಾಗಿ ಪರಪೀಡಕನಾಗಬಾರದೆಂದು ಧರ್ಮಸೂಕ್ಷ್ಮವು. ಅದಕ್ಕಾಗಿ ಸಜ್ಜನನಿಗೆ ಪಾಪಭಯವನ್ನು ಉದಾಹರಿಸು ತ್ತಾರೆ.

ತಾಡಯಿತ್ವಾ ತೃಣೇನಾಪಿ ಸಂರಂಭಾನ್ಮತಿಪೂರ್ವಕಂ ।
ಏಕವಿಂಶತಿಮಾಜಾತೀಃ ಪಾಪಯೋನಿಷು ಜಾಯತೇ ॥ ೧೬೬

ಅಯುಧ್ಯಮಾನಸ್ಯೋತ್ಪಾದ್ಯ ಬ್ರಾಹ್ಮಣಸ್ಯಾಸೃಗಂಗತಃ ।
ದುಃಖಂ ಸುಮಹದಾಪ್ನೋತಿ ಪ್ರೇತ್ಯಾಪ್ರಾಜ್ಞತಯಾ ನರಃ ॥ ೧೬೭

ಶೋಣಿತಂ ಯಾವತಃ ಪಾಂಸೂನ್ ಸಂಗೃಹ್ಣಾತಿ ಮಹೀತಲಾತ್ ।
ತಾವತೋಽಬ್ದಾನಮುತ್ರಾನ್ಯೈಃ ಶೋಣಿತೋತ್ಪಾದಕೋಽದ್ಯತೇ ॥ ೧೬೮

ನ ಕದಾಚಿದ್ದ್ವಿಜೇ ತಸ್ಮಾದ್ದ್ವಿದ್ವಾನವಗುರೇದಪಿ ।
ನ ತಾಡಯೇತ್ತೃಣೇನಾಪಿ ನ ಗಾತ್ರಾತ್ಸ್ರಾವಯೇದಸೃಕ್ ॥ ೧೬೯

ಸಿಟ್ಟು ಬಂದು ಹುಲ್ಲಿನಿಂದ ಹೊಡೆದರೂ ಇಪ್ಪತ್ತೊಂದು ಪಾಪಜನ್ಮಗಳು ಉಂಟಾಗುವುದು. ಸಚ್ಚರಿತ್ರನಾದ ಬ್ರಾಹ್ಮಣನು ಅಪರಾಧಿಯಾಗಲಾರನು. ಅವನು ಯುದ್ಧಕ್ಕೆ ಬಾರದೆ ಅವನಿಗೆ ರಕ್ತಸೋರುವಂತೆ ಹೊಡೆದರೆ ತುಂಬ ದುಃಖ ಉಂಟಾಗುವುದು. ರಕ್ತದ ಹನಿಯು ಎಷ್ಟು ದೂಳನ್ನು ತೊಯ್ಸಿತೋ ಅಷ್ಟು ವರ್ಷ, ಮಾಂಸಾಹಾರಿಗಳು ಕಚ್ಚಿ ತಿನ್ನುವ ಚಿತ್ರಹಿಂಸೆಗೆ ಗುರಿಯಾಗುವನು. ಆದುದರಿಂದ ಬುದ್ಧಿವಂತನು ದೊಣ್ಣೆ ಎತ್ತಬಾರದು. ಹುಲ್ಲಿನಿಂದಲೂ ಹೊಡೆಯಬಾರದು. ರಕ್ತ ಬೀಳಿಸಬಾರದು.

ಅಧಾರ್ಮಿಕೋ ನರೋ ಯೋ ಹಿ ಯಸ್ಯ ಚಾಪ್ಯನೃತಂ ಧನಂ ।
ಹಿಂಸಾರತಶ್ಚ ಯೋ ನಿತ್ಯಂ ನೇಹಾಸೌ ಸುಖಮೇಧತೇ ॥ ೧೭೦

ಶಾಸ್ತ್ರ ನಿಷಿದ್ಧಕರ್ಮಾಚರಣೆ, ಲಂಚ ತಕ್ಕೊಂಡು, ಸುಳ್ಳು ಹೇಳಿ ಧನಾರ್ಜನೆ ಮಾಡುವುದು, ಯಾವುದೇ ಉಪಾಯಗಳಿಂದ ಪರಹಿಂಸೆ ಮಾಡುವುದು ಇಂತಹನು, ಈ ಲೋಕದಲ್ಲಿ ಸುಖವಾಗಿ ಬಾಳುವುದಿಲ್ಲ.

ನ ಸೀದನ್ನಪಿ ಧರ್ಮೇಣ ಮನೋಽಧರ್ಮೇ ನಿವೇಶಯೇತ್ ।
ಅಧಾರ್ಮಿಕಾಣಾಂ ಪಾಪಾನಾಮಾಶು ಪಶ್ಯನ್ವಿಪರ್ಯಯಂ ॥ ೧೭೧

ಧರ್ಮವಿರುದ್ಧ ಪಾಪಕಾರ್ಯಗಳಿಂದ ಆಗುವ ಅನಿಷ್ಟವನ್ನು ಚಿಂತಿಸಿ ಅಧರ್ಮದಲ್ಲಿ ಪ್ರೀತಿಯನ್ನು ತಾಳಬಾರದು. ಧರ್ಮದಿಂದ ದುಃಖವಾದಂತೆ ತೋರಿದರೂ ಅದು ಪರಿಣಾಮದಲ್ಲಿ ದುಃಖ ಜನಕವಲ್ಲ.

ನಾಧರ್ಮಶ್ಚರಿತೋ ಲೋಕೇ ಸದ್ಯಃ ಫಲತಿ ಗೌರಿವ ।
ಶನೈರಾವರ್ತಮಾನಸ್ತು ಕರ್ತುರ್ಮೂಲಾನಿ ಕೃಂತತಿ ॥ ೧೭೨

ನೆಲದಲ್ಲಿ ಬೀಜ ಬಿತ್ತಿದರೆ ನಾಳೆಗೆ ಯಾವ ಸಸ್ಯವೂ ಹುಲುಸಾಗಿ ಬೆಳೆದು ಫಲಭಾರಪೂರ್ಣವಾಗುವುದಿಲ್ಲ. ಕೆಲದಿನ ಬೇಕು. ದನ-ಕರು ಬಲುಬೇಗನೆ ಉಳಲು, ಕರೆಯಲು ಬರುವಂತೆ ಎಲ್ಲ ಕರ್ಮಗಳಿಗೂ ಫಲವು ಶೀಘ್ರಕಾಲದಲ್ಲಿ ದೊರೆಯುವುದಿಲ್ಲ. ಅದರಂತೆ ಅಧರ್ಮ ಕರ್ಮವು ಆಚರಣೆ ಕಾಲದಲ್ಲಿ ದುಃಖದಾಯಕವಲ್ಲದಿದ್ದರೂ ಕಾಲಾಂತರದಲ್ಲಿ ಅವನ ಮೂಲವನ್ನು ಅದು ಕತ್ತರಿಸದಿರುವುದಿಲ್ಲ. ಅದನ್ನೆ ಇನ್ನು ವಿವರಿಸುತ್ತಾರೆ.

ಯದಿ ನಾತ್ಮನಿ ಪುತ್ರೇಷು ನ ಚೇತ್ಪುತ್ರೇಷು ನಪ್ತೃಷು ।
ನ ತ್ವೇವ ತು ಕೃತೋಽಧರ್ಮಃ ಕರ್ತುರ್ಭವತಿ ನಿಷ್ಫಲಃ ॥ ೧೭೩

ತಾನು ಈಗ ಮಾಡಿದ ಅಧರ್ಮಕರ್ಮದ ಫಲವು ಕೂಡಲೆ ಕಂಡು ಬಾರದಿದ್ದರೂ, ತನ್ನ ಮಕ್ಕಳು-ಮರಿಮಕ್ಕಳು ಯಾರಲ್ಲಾದರೂ ಗೋಚರಿಸದಿರುವುದಿಲ್ಲ. ಕರ್ತೃವಿನ ಕರ್ಮವು ನಿಷ್ಫಲವಾಗುವುದಿಲ್ಲ.

ಅಧರ್ಮೇಣೈಧತೇ ತಾವತ್ತತೋ ಭದ್ರಾಣಿ ಪಶ್ಯತಿ ।
ತತಃ ಸಪತ್ನಾಂಜಯತಿ ಸಮೂಲಸ್ತು ವಿನಶ್ಯತಿ ॥ ೧೭೪

ಅಧರ್ಮದಿಂದ ಮೊದಲು ವೃದ್ಧಿಹೊಂದಬಹುದು. ಭೂಮಿ, ಧನ, ಧಾನ್ಯ, ದನಕರು, ಆಳುಕಾಳು ಆಗಬಹುದು. ತನಗಿಂತ ಕೆಳಮಟ್ಟದವರಿಗಿಂತ ತಾನು ರಾಜನಂತೆ ಮೆರೆದರೂ ಕೆಲಸಮಯದಲ್ಲಿ ಸಪರಿವಾರವಾಗಿ ಅಧೋಗತಿಯು ತಪ್ಪದು.

ಸತ್ಯಧರ್ಮಾರ್ಯವೃತ್ತೇಷು ಶೌಚೇ ಚೈವಾರಮೇತ್ಸದಾ ।
ಶಿಷ್ಯಾಂಶ್ಚ ಶಿಷ್ಯಾದ್ಧರ್ಮೇಣ ವಾಗ್ಬಾಹೂದರಸಂಯತಃ ॥ ೧೭೫

ಸತ್ಯವಚನ, ಪರನಿಂದಾವರ್ಜನ ರೂಪದಿಂದ ವಾಗಿಂದ್ರಿಯ ಸಂಯಮ, ಪರರಿಗೆ ಹೊಡೆಯುವುದು, ಬಡಿಯುವುದು ಮಾಡದೆ ಇರುವದರಿಂದ ಬಾಹು ಸಂಯಮ, ಮಿತಭೋಜನ ಮಾಡುತ್ತಿರುವುದು, ಪರಾನ್ನಲೋಭವಿಲ್ಲದಿರುವುದು, ಉದರ ಸಂಯಮ ಇವೆಲ್ಲ ಇರಬೇಕು. ಸತ್ಯ, ಧರ್ಮ, ಆರ್ಯವರ್ತನೆಗಳಲ್ಲಿ ಸದಾ ಆಸಕ್ತಿಯುಳ್ಳವನಾಗಬೇಕು. ಹೀಗೆ ತಾನು ಆಚರಿಸಿ ಶಿಷ್ಯರಿಗೂ ತಿಳಿಸಬೇಕು.

ಪರಿತ್ಯಜೇದರ್ಥಕಾಮೌ ಯೌ ಸ್ಯಾತಾಂ ಧರ್ಮವರ್ಜಿತೌ ।
ಧರ್ಮಂ ಚಾಪ್ಯಸುಖೋದರ್ಕಂ ಲೋಕವಿಕ್ರುಷ್ಟಮೇವ ಚ ॥ ೧೭೬

ಧರ್ಮ ವಿರೋಧ ರೀತಿಯಿಂದ ಹಣವನ್ನು, ಕಾಮವನ್ನು ಹೊಂದ ಬಾರದು. ಸ್ನಾನಾದಿಗಳು ಧರ್ಮವಾದರೂ ರೋಗವೃದ್ಧಿಯಾಗಿ ದುಃಖ ಕರವಾದರೆ, ದಾನವು ಪ್ರಶಸ್ತವಾದರೂ ಕುಟುಂಬ ಪೋಷಣೆಗೆ ಕೊರತೆಯಾಗಿ ದುಃಖವಾಗುವುದಾದರೆ ಅಂತಹದೆಲ್ಲ ವ್ಯರ್ಜ್ಯವು. ಶಾಸ್ತ್ರಗಳಲ್ಲಿ ವಿಧಿನಿಷೇಧ ಗಳು ಕಾಣದ ಒಂದು ವಿಷಯವನ್ನು ಲೋಕದಲ್ಲಿ ಬಹುಜನರು ವಿರೋಧಿಸು ವುದಾದರೆ ಅದನ್ನು ಮಾಡಬಾರದು. ಲಾಭಕರವಲ್ಲದುದನ್ನು ಮಾಡುವ ಅವಶ್ಯವೇನು ?

ನ ಪಾಣಿಪಾದಚಪಲೋ ನ ನೇತ್ರಚಪಲೋಽನೃಜುಃ ।
ನ ಸ್ಯಾದ್ವಾಕ್ಚಪಲಶ್ಚೈವ ನ ಪರದ್ರೋಹಕರ್ಮಧೀಃ ॥ ೧೭೭

ಕೈ, ಕಾಲು, ಕಣ್ಣು, ನಾಲಿಗೆಗಳನ್ನು ಕುಣಿಸುತ್ತ ದುರುಪಯೋಗಪಡಿಸ ಬಾರದು. ಕಪಟಿ, ದ್ರೋಹಿ ಆಗಬಾರದು. ಅಂತಹ ಉದ್ದೇಶ ಉಳ್ಳವನೂ ಆಗಬಾರದು.

ಯೇನಾಸ್ಯ ಪಿತರೋ ಯಾತಾ ಯೇನ ಯಾತಾಃ ಪಿತಾಮಹಾಃ ।
ತೇನ ಯಾಯಾತ್ಸತಾಂ ಮಾರ್ಗಂ ತೇನ ಗಚ್ಛನ್ನ ರಿಷ್ಯತೇ ॥ ೧೭೮

ಸಾಮಾನ್ಯವಾಗಿ ತನ್ನ ಹಿರಿಯರು ಮಾಡುತ್ತಿದ್ದಂತೆ ಮಾಡಿದರೆ ಅದು ಅಪರಾಧವಾಗಲಾರದು. ಅವರು ಕಾರಣಾಂತರದಿಂದ ಶಾಸ್ತ್ರಾಧ್ಯಯನ ವಿಲ್ಲದೆ ಶ್ರದ್ಧಾಲುಗಳಾಗಿದ್ದರೆ, ತಾನು ಶಾಸ್ತ್ರಬಲ್ಲವನಾಗಿ ಅವರ ಅಂಧಾ ಚಾರಗಳನ್ನು ಪಾಲಿಸುವುದು ಬೇಡ. ಶಾಸ್ತ್ರದೃಷ್ಟಿಯಿಂದ ಕಾರ್ಯಾಕಾರ್ಯ ವನ್ನು ನಿಶ್ಚಯಿಸಬೇಕು.

ಋತ್ವಿಕ್‌ಪುರೋಹಿತಾಚಾರ್ಯೈರ್ಮಾತುಲಾತಿಥಿಸಂಶ್ರಿತೈಃ ।
ಬಾಲವೃದ್ಧಾತುರೈರ್ವೈದ್ಯೈರ್ಜ್ಞಾತಿಸಂಬಂಧಿಬಾಂಧವೈಃ ॥ ೧೭೯
ಮಾತಾಪಿತೃಭ್ಯಾಂ ಜಾಮಿಭಿರ್ಭ್ರಾತ್ರಾ ಪುತ್ರೇಣ ಭಾರ್ಯಯಾ ।
ದುಹಿತ್ರಾ ದಾಸವರ್ಗೇಣ ವಿವಾದಂ ನ ಸಮಾಚರೇತ್ ॥ ೧೮೦

ಯಾಗವೃತನು, ಪುರೋಹಿತನು, ಆಚಾರ್ಯನು, ತಾಯಿಸೋದರನು,

ಅತಿಥಿ, ಆಶ್ರಿತ, ಅನಾಥರು, ಹುಡುಗರು, ಮುದುಕರು, ರೋಗಿಗಳು, ವೈದ್ಯನು. ತನ್ನ ತಂದೆಯ ಕುಲದವರು, ತಾಯಿಯ ಕುಲದವರು, ಹೆಂಡತಿಯ ಕುಲದವರು, ತಾಯ್ತಂದೆ, ಸೊಸೆ, ಅಕ್ಕತಂಗಿಯರು, ಸೋದರರು, ತನ್ನ ಮಕ್ಕಳು, ಕೊಟ್ಟಮಗಳು, ಸೇವಕರು ಇವರೊಡನೆ ಕಾರ್ಯವಿಘ್ನವಾಗುವಂತೆ ಜಗಳಾಡಬಾರದು. ವಿರುದ್ಧಾಭಿಪ್ರಾಯವನ್ನು ಅವಶ್ಯವಿಲ್ಲದಿದ್ದರೆ ಅಡಗಿಸಿಡ ಬೇಕು.

ಏತೈರ್ವಿವಾದಾನ್ ಸಂತ್ಯಜ್ಯ ಸರ್ವಪಾಪೈಃ ಪ್ರಮುಚ್ಯತೇ ।
ಏಭಿರ್ಜಿತೈಶ್ಚ ಜಯತಿ ಸರ್ವಾಂಲ್ಲೋಕಾನಿಮಾನ್ ಗೃಹೀ ॥ ೧೮೧

ಗೃಹಪತಿಯು ಹಿಂದೆ ಹೇಳಿದವರೊಡನೆ ಜಗಳಾಡದೆ ಅವರನ್ನು ತನ್ನ ಕಾರ್ಯಕ್ಕೆ ಅನುಕೂಲರನ್ನಾಗಿ ಮಾಡಿಕೊಂಡರೆ ಅವನಿಗೆ ಈ ಲೋಕವೂ ಪರ ಲೋಕವೂ ಸ್ವಾಧೀನವಾಗುವುದು. ಅವನ ಎಲ್ಲ ಕಾರ್ಯವು ಸಾಂಗವಾಗಿ ನೆರವೇರಿ ಅವನ ಇಷ್ಟದ ಲಾಭವಾಗುವುದು.

ಆಚಾರ್ಯೋ ಬ್ರಹ್ಮಲೋಕೇಶಃ ಪ್ರಾಜಾಪತ್ಯೇ ಪಿತಾ ಪ್ರಭುಃ ।
ಅತಿಥಿಸ್ತ್ವಿಂದ್ರಲೋಕೇಶೋ ದೇವಲೋಕಸ್ಯ ಚರ್ತ್ವಿಜಃ ॥ ೧೮೨

ಆಚಾರ್ಯಸಂತೋಷದಿಂದ ಬ್ರಹ್ಮ, ತಂದೆಯಸಂತೋಷದಿಂದ ಪ್ರಜಾಪತಿ, ಅತಿಥಿಸಂತೋಷದಿಂದ ಇಂದ್ರ, ಯಾಜಕನ ಸಂತೋಷದಿಂದ ದೇವತೆಗಳು—ಇವರು ಸಂತುಷ್ಟರಾದರೆ ತನಗೆ ಶುಭವಾಗುವುದು.

ಜಾಮಯೋಽಪ್ಸರಸಾಂ ಲೋಕೇ ವೈಶ್ವದೇವಸ್ಯ ಬಾಂಧವಾಃ ।
ಸಂಬಂಧಿನೋ ಹ್ಯಪಾಂ ಲೋಕೇ ಪೃಥಿವ್ಯಾಂ ಮಾತೃಮಾತುಲೌ ॥ ೧೮೩

ಸೊಸೆ–ಅಕ್ಕತಂಗಿಯರು ಅಪ್ಸರಸೆಯರಿಗೆ, ತಾಯಿಯ ಕುಲದವರು ವಿಶ್ವೇದೇವರಿಗೆ, ಹೆಂಡತಿಯ ಕುಲದವರು ನೀರಿಗೆ, ತಾಯಿ–ಸೋದರ ಮಾವಂದಿರು ಭೂಮಿಗೆ ಸಮಾನರು.

ಆಕಾಶೇಶಾಸ್ತು ವಿಜ್ಞೇಯಾ ಬಾಲವೃದ್ಧಕೃಶಾತುರಾಃ ।
ಭ್ರಾತಾ ಜ್ಯೇಷ್ಠಃ ಸಮಃ ಪಿತ್ರಾ ಭಾರ್ಯಾ ಪುತ್ರಃ ಸ್ವಕಾ ತನುಃ ॥ ೧೮೪
ಛಾಯಾ ಸ್ವೋ ದಾಸವರ್ಗಶ್ಚ ದುಹಿತಾ ಕೃಪಣಂ ಪರಂ ।
ತಸ್ಮಾದೇತೈರಧಿಕ್ಷಿಪ್ತಃ ಸಹೇತಾಸಂಜ್ವರಃ ಸದಾ ॥ ೧೮೫

ಬಾಲವೃದ್ಧಾಕೃಶರೋಗಿಗಳು ಆಕಾಶಕ್ಕೆ, ಹಿರಿಯಣ್ಣನು ತಂದೆಗೆ,ಹೆಂಡತಿ ಮಕ್ಕಳು ತನ್ನ ದೇಹಕ್ಕೆ, ಸೇವಕರು ತನ್ನ ನೆರಳಿಗೆ, ಮಗಳು ದಯಾಭಾವಕ್ಕೆ ಸಮಾನರು. ಆದುದರಿಂದ ಇವರು ತನ್ನ ವಿಷಯದಲ್ಲಿ ಅಸಮಾಧಾನಪಟ್ಟರೆ ಸಹಿಸಬೇಕು. ಪ್ರತಿಕ್ರಿಯೆ ಮಾಡಬಾರದು.

ಪ್ರತಿಗ್ರಹಸಮರ್ಥೋಽಪಿ ಪ್ರಸಂಗಂ ತತ್ರ ವರ್ಜಯೇತ್ ।
ಪ್ರತಿಗ್ರಹೇಣ ಹ್ಯಸ್ಯಾಶು ಬ್ರಾಹ್ಮಂ ತೇಜಃ ಪ್ರಶಾಮ್ಯತಿ ॥ ೧೮೬

ದಾನಸ್ವೀಕಾರಕ್ಕೆ ತಾನು ತಕ್ಕವನಾದರೂ ಆಶೆಯಿಂದ ಅದಕ್ಕೆ ಮುಂದೋಡಬಾರದು. ಹಾಗೆ ತುಂಬ ಸ್ವೀಕರಿಸಿದರೆ ವೇದಾಧ್ಯಯನದ ಮುಖ್ಯಫಲವಾದ ಬ್ರಹ್ಮಪ್ರಾಪ್ತಿಯು ದೂರವಾಗುವುದು. ದಾತೃಗಳ ಪಾಪವು ಇವನನ್ನು ಸೇರುವುದು. ಬ್ರಹ್ಮಾಭಿಲಾಷೆಗಿಂತ ಧನಾಶೆಯು ಪ್ರಬಲವಾದುದರ ಸೂಚನೆಯು.

ನ ದ್ರವ್ಯಾಣಾಮವಿಜ್ಞಾಯ ವಿಧಿಂ ಧರ್ಮ್ಯಂ ಪ್ರತಿಗ್ರಹೇ ।
ಪ್ರಾಜ್ಞಃ ಪ್ರತಿಗ್ರಹಂ ಕುರ್ಯಾದವಸೀದನ್ನಪಿ ಕ್ಷುಧಾ ॥ ೧೮೭

ಹಸಿವಿನಿಂದ ತಿನ್ನಲಿಲ್ಲದೆ ನರಳುತ್ತಿದ್ದರೂ ವಿಚಾರವಂತನು ದಾನ ಸ್ವೀಕಾರ ಮಾಡಬಾರದು. ದಾನದ ಪರಿಹಾರ ವಿಧಿಯನ್ನು ಮೊದಲು ತಿಳಿಯಬೇಕು. ಆಚರಿಸಬೇಕು. ಹಾಗಿದ್ದರೆ ದಾನಪ್ರತಿಗ್ರಹ ಮಾಡಬಹುದು.

ಹಿರಣ್ಯಂ ಭೂಮಿಮಶ್ವಂ ಗಾಮನ್ನಂ ವಾಸಸ್ತಿಲಾನ್ ಘೃತಂ ।
ಪ್ರತಿಗೃಹ್ಣನ್ನವಿದ್ವಾಂಸ್ತು ಭಸ್ಮೀಭವತಿ ದಾರುವತ್ ॥ ೧೮೮

ಚಿನ್ನ, ಭೂಮಿ, ಕುದುರೆ, ಗೋ, ಅನ್ನ, ಬಟ್ಟೆ, ಎಳ್ಳು, ತುಪ್ಪ ಇವುಗಳ ದಾನ ಸ್ವೀಕಾರ ಮಾಡಿದರೆ ಮರವು ಬೆಂಕಿಯಲ್ಲಿ ಉರಿದಂತೆ ತಾನು ಕ್ಷೀಣಿಸುವನು.

ಹಿರಣ್ಯಮಾಯುರನ್ನಂ ಚ ಭೂರ್ಗೌಶ್ಚಾಪ್ಯೋಷತಸ್ತನುಂ ।
ಅಶ್ವಶ್ಚಕ್ಷುಸ್ತ್ವಚಂ ವಾಸೋ ಘೃತಂ ತೇಜಸ್ತಿಲಾಃ ಪ್ರಜಾಃ ॥ ೧೮೯

ಅನ್ನಾಹಿರಣ್ಯಗಳು ಆಯುಸ್ಸನ್ನು, ಭೂಮಿ-ಗೋವು ದೇಹವನ್ನು,

ಕುದುರೆ ಕಣ್ಣನ್ನು, ಬಟ್ಟೆ ಚರ್ಮವನ್ನು, ತುಪ್ಪ ತೇಜಸ್ಸನ್ನು, ಎಳ್ಳು ಪ್ರಜೆಯನ್ನುಕೆಡಿಸುತ್ತದೆ. ಇದು ಹಿಂದಿನ ಶ್ಲೋಕದ ವಿವರ, ದಾನ ಸ್ವೀಕೃತ ಈಯೊ ಸಾಮಗ್ರಿಗಳು ಒಂದೊಂದು ಅಂಗವನ್ನು ಕೆಡಿಸುವ ಮೂಲಕ ತನ್ನ ಸಮಗ್ರ ಅವನತಿಯನ್ನು ಸಾಧಿಸುವುವು.

ಅತಸಾಸ್ತ್ವನಧೀಯಾನಃ ಪ್ರತಿಗ್ರಹರ-ಚಿರ್ದ್ವಿಜಃ ।
ಅಂಭಸ್ಯಶ್ಮಪ್ಲವೇನೇವ ಸಹ ತೇನೈವ ಮಜ್ಜತಿ ॥ ೧೯೦

ತಪಸ್ಸು, ಅಧ್ಯಯನ ಒಂದೂ ಇಲ್ಲದೆ ದಾನಾಶೆಯುಳ್ಳವನಾದರೆ ಕೆಡುವನು. ಕಲ್ಲಿನ ದೋಣಿಯಲ್ಲಿ ನೀರಲ್ಲಿ ತೇಲಲು ಪ್ರಯತ್ನಿಸಿ ಮುಳುಗುವಂತೆ ಜಯವಿಲ್ಲ.

ತಸ್ಮಾದವಿದ್ವಾನ್ ಬಿಭಿಯಾತ್ ಯಸ್ಮಾತ್ತಸ್ಮಾತ್ಪ್ರತಿಗ್ರಹಾತ್ ।
ಸ್ವಲ್ಪಕೇನಾಪ್ಯವಿದ್ವಾನ್ ಹಿ ಪಂಕೇ ಗೌರಿವ ಸೀದತಿ । ೧೯೧

ಆದುದರಿಂದ ಬುದ್ಧಿವಂತನು ದಾನಕ್ಕೂ, ಪರದ್ರವ್ಯಕ್ಕೂ ಹೆದರಬೇಕು. ಸೀಸ ಮುಂತಾದ ಕಡಿಮೆ ಬೆಲೆಯ ದ್ರವ್ಯದಾನವು ಕೆಸರು ಗೋವನ್ನು ಮುಳುಗಿಸುವಂತೆ ಮುಳುಗಿಸುವುದು.

ನ ವಾರ್ಯಪಿ ಪ್ರಯಚ್ಛೇತ್ತು ಬೈಡಾಲವ್ರತಿಕೇ ದ್ವಿಜೇ ।
ನ ಬಕವ್ರತಿಕೇ ವಿಪ್ರೇ ನಾವೇದವಿದಿ ಧರ್ಮವಿತ್ ॥ ೧೯೨

ಬೈಡಾಲವ್ರತಿಕ, ಬಕವ್ರತಿಕರನ್ನು ಮುಂದೆ ವಿವರಿಸಲಾಗುವುದು, ವೇದಜ್ಞರಲ್ಲದ ಡಾಂಭಿಕರಿಗೆ ದಾನಮಾಡಬಾರದು.

ತ್ರಿಷ್ವಪ್ಯೇತೇಷು ದತ್ತಂ ಹಿ ವಿಧಿನಾಪ್ಯರ್ಜಿತಂ ಧನಂ ।
ದಾತುರ್ಭವತ್ಯನರ್ಥಾಯ ಪರತ್ರಾದಾತುರೇವ ಚ ॥ ೧೯೩

ನ್ಯಾಯವಾಗಿ ಸಂಪಾದಿಸಿದ ಹಣವನ್ನಾದರೂ ಇಂತಹ ಕೆಟ್ಟವರಿಗೆ ದಾನಮಾಡಬಾರದು. ಅದರಿಂದ ಫಲವಿಲ್ಲ.

ಯಥಾ ಪ್ಲವೇನೌಪಲೇನ ನಿಮಜ್ಜತ್ಯುದಕೇ ತರನ್ ।
ತಥಾ ನಿಮಜ್ಜತೋಽಧಸ್ತಾದಜ್ಞೌ ದಾತೃಪ್ರತೀಚ್ಛಕೌ ॥ ೧೯೪

ನೀರಕಲ್ಲನ್ನು ಅವಲಂಬಿಸಿದರೆ ಮುಳುಗುವಂತೆ ವಿದ್ಯಾಹೀನರು ತಕ್ಕೊಂಡರೂ, ಕೊಟ್ಟರೂ ಕೆಡುತ್ತಾರೆ.

ಧರ್ಮಧ್ವಜೀ ಸದಾ ಲುಬ್ಧಶ್ಛಾದ್ಮಿಕೋ ಲೋಕದಂಭಕಃ ।
ಬೈಡಾಲವ್ರತಿಕೋ ಜ್ಞೇಯೋ ಹಿಂಸ್ರಃ ಸರ್ವಾಭಿಸಂಧಕಃ ॥ ೧೯೫

ಬೆಕ್ಕು, ಇಲಿ ಮುಂತಾದುದರ ಬೇಟೆಗೆ ಸದ್ದಿಲ್ಲದೆ ಮುದುಡಿ ಕಾದು ಕುಳಿತು ಹಿಡಿದು ಕೊಲ್ಲುವಂತೆ ಆಸೆಯಿಂದ ಧರ್ಮದ ಆಚರಣೆಯನ್ನು ಹೊರಗೆ ತೋರಿಸಿಕೊಂಡು ಇತರರನ್ನು ಸಾಧ್ಯವಾದಂತೆ ಮೋಸಗೊಳಿಸಿ ಕಪಟವೇಶದ ಆಡಂಬರಪ್ರಿಯನು ಬೈಡಾಲವ್ರತಿಕನು.

ಅಧೋದೃಷ್ಟಿರ್ನೈಷ್ಕೃತಿಕಃ ಸ್ವಾರ್ಥಸಾಧನತತ್ಪರಃ ।
ಶಠೋ ಮಿಥ್ಯಾವಿನೀತಶ್ಚ ಬಕವ್ರತಚರೋ ದ್ವಿಜಃ ॥ ೧೯೬

ಮೀನು, ಕಪ್ಪೆ ತಿನ್ನಲು ಕಾದಿರುವ ಕೊಕ್ಕರೆಯಂತೆ ಕೆಳಗೆ ಬಗ್ಗಿ ನೋಡುತ್ತ ವಿನಯವಂತನಂತೆ ನಟಿಸಿ ಮೋಸಗಾರನಾದವನು ಬಕವ್ರತಿಕನು.

ಯೇ ಬಕವ್ರತಿನೋ ವಿಪ್ರಾ ಯೇ ಚ ಮಾರ್ಜಾರಲಿಂಗಿನಃ ।
ತೇ ಪತಂತ್ಯಂಧತಾಮಿಸ್ರೇ ತೇನ ಪಾಪೇನ ಕರ್ಮಣಾ ॥ ೧೯೭

ಬಕದಂತೆ, ಮಾರ್ಜಾರದಂತೆ ಕಪಟಿಗಳು ಅವರ ಕುಕರ್ಮದಿಂದ ಅವರು ಒಳ್ಳೆದನ್ನು ಪಡೆಯುವುದಿಲ್ಲ.

ನ ಧರ್ಮಸ್ಯಾಪದೇಶೇನ ಪಾಪಂ ಕೃತ್ವಾ ವ್ರತಂ ಚರೇತ್ ।
ವ್ರತೇನ ಪಾಪಂ ಪ್ರಚ್ಛಾದ್ಯ ಕುರ್ವನ್‌ಸ್ತ್ರೀಶೂದ್ರದಂಭನಂ ॥ ೧೯೮

ಹೆಡ್ಡರನ್ನು ಮೋಸಗೊಳಿಸುವಂತೆ ಪಾಪಕರ್ಮವನ್ನು ಉದ್ದೇಶ ಪೂರ್ವಕ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ಸರಿಯಲ್ಲ. ಅಧರ್ಮವನ್ನು ಆಚರಿಸಲೇ ಬಾರದು.

ಪ್ರೇತ್ಯೇಹ ಚೇದೃಶಾ ವಿಪ್ರಾ ಗರ್ಹ್ಯಂತೇ ಬ್ರಹ್ಮವಾದಿಭಿಃ ।
ಛದ್ಮನಾಚರಿತಂ ಯಚ್ಚ ವ್ರತಂ ರಕ್ಷಾಂಸಿ ಗಚ್ಛತಿ ॥ ೧೯೯

ಅಲಿಂಗೀ ಲಿಂಗಿವೇಷೇಣ ಯೋ ವೃತ್ತಿಮುಪಜೀವತಿ ।
ಸ ಲಿಂಗಿನಾಂ ಹರತ್ಯೇನಸ್ತಿರ್ಯಗ್ಯೋನೌ ಚ ಜಾಯತೇ ॥ ೨೦೦

ಇಂತಹ ಕಪಟಿಗಳನ್ನು ಬ್ರಹ್ಮಜ್ಞಾನಿಗಳು ಹೊಗಳುವುದಿಲ್ಲ. ಹೊಟ್ಟೆ ಪಾಡಿಗಾಗಿ ಭಿಕ್ಷುಕರ ವೇಶ ಹಾಕಿ ಸನ್ಯಾಸಿ, ಬ್ರಹ್ಮಚಾರಿಗಳಂತೆ ಬೇಡಿ ತಿಂದು ಬದುಕುವುದು ಅನ್ಯಾಯವು. ಅದು ಕಳ್ಳತನಕ್ಕೆ ಬೇರೆಯಲ್ಲ.

ಪರಕೀಯನಿಪಾನೇಷು ನ ಸ್ನಾಯಾಚ್ಚ ಕದಾಚನ ।
ನಿಪಾನಕರ್ತುಃ ಸ್ನಾತ್ವಾ ತು ದುಷ್ಕೃತಾಂಶೇನ ಲಿಪ್ಯತೇ ॥ ೨೦೧

ಬೇರೆಯವರು ಮಾಡಿಸಿದ ಜಲಾಶಯದಲ್ಲಿ ತಾನು ಸ್ನಾನ ಮಾಡಬಾರದು. ಪ್ರಾಕೃತಿಕವಾದ ನದಿಯಲ್ಲಿ ಮೀಯಬಹುದು. ಜಲಾಶಯವನ್ನು ಅವರು ಸ್ವಂತ ಉಪಯೋಗಕ್ಕೆ ಮಾಡಿರಬಹುದು. ಅಥವಾ ಪಾಪ (ಪರಿಹಾರ) ವಿಮೋಚನೆಗೆ ಮಾಡಿಸಿರಬಹುದು. ಈ ಎರಡು ಸಂದರ್ಭದಲ್ಲಿಯೂ ದೋಷವು. ನಿರುಪಾಯನಾಗಿ ಆ ಜಲಾಶಯದಲ್ಲಿ ಮೀಯಬೇಕಾಗಿ ಬಂದರೆ ಕೂಡಲೇ ಅದೇ ನೀರಿನಿಂದ ದೇವ, ಋಷಿ, ಪಿತೃಗಳಿಗೆ ತರ್ಪಣ ಬಿಡಬೇಕು.

ಯಾನಶಯ್ಯಾಸನಾನ್ಯಸ್ಯ ಕೂಪೋದ್ಯಾನಗೃಹಾಣಿ ಚ ।
ಅದತ್ತಾನ್ಯುಪಭುಂಜಾನ ಏನಸಃ ಸ್ಯಾತ್ತುರೀಯಭಾಕ್ ॥ ೨೦೨

ವಾಹನ, ಮಂಚ, ಪೀಠ, ಬಾವಿ, ಉದ್ಯಾನ, ಮನೆಗಳನ್ನು ಸ್ವಾಮಿಯ ಅನುಮತಿಯಿಲ್ಲದೆ ತಾನು ಉಪಯೋಗಿಸಿದರೆ ಆ ಸ್ವಾಮಿಯ ಪಾಪದ ನಾಲ್ಕನೆ ಒಂದು ಪಾಲನ್ನು ತಾನು ಕಟ್ಟಿಕೊಳ್ಳುವನು.

ನದೀಷು ದೇವಖಾತೇಷು ತಡಾಗೇಷು ಸರಃಸು ಚ ।
ಸ್ನಾನಂ ಸಮಾಚರೇನ್ನಿತ್ಯಂ ಗರ್ತಪ್ರಸ್ರವಣೇಷು ಚ ॥ ೨೦೩

ಆತನು, ಹೊಳೆ, ಹೊಂಡ, ದೇವಖಾತ (ಸ್ವಾಭಾವಿಕವಾಗಿ ನಿರ್ಮಿತವಾದ ಕೆರೆ), ಸರೋವರ, ಹಳ್ಳ, ಕೊಳ್ಳಗಳಲ್ಲಿ ಸ್ನಾನ ಮಾಡಬೇಕು.

ಯಮಾನ್ ಸೇವೇತ ಸತತಂ ನ ನಿತ್ಯಂ ನಿಯಮಾನ್ ಬುಧಃ ।
ಯಮಾನ್ಪತತ್ಯಕುರ್ವಾಣೋ ನಿಯಮಾನ್ ಕೇವಲಾನ್ ಭಜನ್ ॥ ೨೦೪

ಸ್ನಾನ, ಮೌನ, ಉಪವಾಸ, ಅಧ್ಯಯನ, ಜನನೇಂದ್ರಿಯ ವಶತೆ, ಗುರುಶುಶ್ರೂಷಾಗಳು ನಿಯಮ. ದಯೆ, ಸಹನೆ, ಸತ್ಯ, ಅಹಿಂಸೆ, ಅಸ್ತೇಯ, ಮೃದುತ್ವ, ದೇವತಾಧ್ಯಾನಗಳು ಯಮ. ಬಾಹ್ಯಗಳಾದ ಸ್ನಾನಾದಿನಿಯಮಗಳನ್ನು ಆಚರಿಸಿ ದಯೆ ಮೊದಲಾದ ಜ್ಞಾನೇಂದ್ರಿಯವಶತೆಯು ಇಲ್ಲದಿರ

ಬಾರದು. ಇದು ಮುಖ್ಯವು. ಮನಃಶುದ್ಧಿಯಿಲ್ಲದೆ ಬರಿಯ ಅಭಿನಯವು ಫಲದಾಯಕವಲ್ಲ. ಆಂತರಜ್ಞಾನೇಂದ್ರಿಯಗಳು ಪರಿಣಾಮದಲ್ಲಿ ಪ್ರಬಲಗಳು. ನಿಯಮದ ವೇಶವು ಹಣ್ಣಿನ ಸಿಪ್ಪೆಯಂತೆ. ತಿರಳು ಯಮವು—ಎಂದು ಸಾರವು.

ನಾಶ್ರೋತ್ರಿಯತತೇ ಯಜ್ಞೇ ಗ್ರಾಮಯಾಜಿಕೃತೇ ತಥಾ ।
ಸ್ತ್ರಿಯಾ ಕ್ಲೀಬೇನ ಚ ಹುತೇ ಭುಂಜೀತ ಬ್ರಾಹ್ಮಣಃ ಕ್ವಚಿತ್ ॥ ೨೦೫

ವೇದಹೀನ, ಧನಲೋಭಿಯಾಜಕ, ಸ್ತ್ರೀ, ನಪುಂಸಕ ಕರ್ತೃಕವಾದ ಯಾಗ ದಲ್ಲಿ ಬ್ರಾಹ್ಮಣನು ಉಣ್ಣಬಾರದು ಕಾರಣ—

ಅಶ್ಲೀಕಮೇತತ್ಸಾಧೂನಾಂ ಯತ್ರ ಜುಹ್ವತ್ಯಮೀ ಹವಿಃ ।
ಪ್ರತೀಪಮೇತದ್ದೇವಾನಾಂ ತಸ್ಮಾತ್ತತ್ಪರಿವರ್ಜಯೇತ್ ॥ ೨೦೬

ಹಿಂದೆ ಹೇಳಿದ ವಿಧಿಹೀನ ಹವಿಸ್ಸು ದೇವರಿಗೆ ಪ್ರಿಯವಲ್ಲ. ಶ್ರೇಯಃ ಕರವಲ್ಲ. ಆದುದರಿಂದ ಅದು ತ್ಯಾಜ್ಯವು.

ಮತ್ತಕ್ರುದ್ಧಾತುರಾಣಾಂ ಚ ನ ಭುಂಜೀತ ಕದಾಚನ ।
ಕೇಶಕೀಟಾವಪನ್ನಂ ಚ ಪದಾ ಸ್ಪೃಷ್ಟಂ ಚ ಕಾಮತಃ ॥ ೨೦೭

ಮದಿಸಿದವರ, ಸಿಟ್ಟುಗೊಂಡವರ, ರೋಗಿಗಳ, ಅನ್ನ, ಮತ್ತು ಕೂದಲು, ಕ್ರಿಮಿಸೇರಿದ ಅನ್ನ, ಕಾಲಿನಿಂದ ಒದೆದ ಅನ್ನ ಸೇವಿಸಬಾರದು.

ಭ್ರೂಣಘ್ನಾವೇಕ್ಷಿತಂ ಚೈವ ಸಂಸ್ಪೃಷ್ಟಂ ಚಾಪ್ಯುದಕ್ಯಯಾ ।
ಪತತ್ರಿಣಾವಲೀಢಂ ಚ ಶುನಾ ಸಂಸ್ಪೃಷ್ಟಮೇವ ಚ ॥ ೨೦೮

ಗರ್ಭಹತ್ಯೆ ಮಾಡಿದವನು ನೋಡಿದ, ರಜಸ್ವಲೆಯು ಮುಟ್ಟಿದ, ಪಕ್ಷಿ ತಿಂದ, ನಾಯಿ ಮುಟ್ಟಿದ ಅನ್ನ ಸ್ವೀಕಾರಾರ್ಹವಲ್ಲ.

ಗವಾ ಚಾನ್ನಮುಪಾಘ್ರಾತಂ ಘುಷ್ಟಾನ್ನಂ ಚ ವಿಶೇಷತಃ ।
ಗಣಾನ್ನಂ ಗಣಿಕಾನ್ನಂ ಚ ವಿದುಷಾಂ ಚ ಜುಗುಪ್ಸಿತಂ ॥ ೨೦೯

ಗೋವು ಮೂಸಿದ, ಕರೆದುಕೊಡುವ, ಸಾವಿರಾರು ಜನರಿಗೆ ತಯಾರಿಸಿದ, ಸೂಳೆಯ, ವಿದ್ವಜ್ಜನರು ಮೆಚ್ಚದ ಅನ್ನವನ್ನು ಬಿಡಬೇಕು.

ಸ್ತೇನಗಾಯನಯೋಶ್ಚಾನ್ನಂ ತಕ್ಷ್ಣೋ ವಾರ್ಧುಷಿಕಸ್ಯ ಚ ।
ದೀಕ್ಷಿತಸ್ಯ ಕದರ್ಯಸ್ಯ ಬದ್ಧಸ್ಯ ನಿಗಡಸ್ಯ ಚ ॥ ೨೧೦

ಕಳ್ಳನ, ಸಂಗೀತಗಾರನ, ಬಡಗಿಯ ಕೆಲಸದವನ, ಬಡ್ಡಿಯಿಂದಲೇ ಬದುಕುವವನ, ಅಗ್ನೀಷೋಮೀಯಯಾಗ ಮಾಡದವನ, ದೀಕ್ಷಿತನ, ಬಂದಿಯ ಅನ್ನವೂ ಪ್ರಶಸ್ತವಲ್ಲ.

ಅಭಿಶಸ್ತಸ್ಯ ಷಂಢಸ್ಯ ಪುಂಶ್ಚಲ್ಯಾ ದಾಂಭಿಕಸ್ಯ ಚ ।
ಶುಕ್ತಂ ಪರ್ಯುಷಿತಂ ಚೈವ ಶೂದ್ರಸ್ಯೋಚ್ಛಿಷ್ಟಮೇವ ಚ ॥ ೨೧೧

ಮಹಾಪಾತಕಿಯ, ನಪುಂಸಕನ, ಜಾರೆಯ, ದಾಂಭಿಕನ, ಹುಳಿಯಾದ, ತಂಗುಳಾದ, ಶೂದ್ರಾನ್ನ, ಯಾರದೇ ಎಂಜಲುಅನ್ನ ಇವು ಪರಿತ್ಯಾಜ್ಯಗಳು.

ಚಿಕಿತ್ಸಕಸ್ಯ ಮೃಗಯೋಃ ಕ್ರೂರಸ್ಯೋಚ್ಛಿಷ್ಟಭೋಜಿನಃ ।
ಉಗ್ರಾನ್ನಂ ಸೂತಿಕಾನ್ನಂ ಚ ಪರ್ಯಾಚಾಂತಮನಿರ್ದಶಂ ॥ ೨೧೨

ವೈದ್ಯನ, ಬೇಟೆಗಾರನ, ಕ್ರೂರಿಯ, ಎಂಜಲು ತಿನ್ನುವವನ, ಪ್ರತಿಲೋಮ ಮಿಶ್ರಸಂತತಿಯ, ಬಾಣಂತಿಗೆ ತಯಾರು ಮಾಡಿದ, ಒಂದು ಪಂಕ್ತಿಯಲ್ಲಿ ಒಬ್ಬನು ಊಟಬಿಟ್ಟರೆ, ಹತ್ತು ದಿನಕಳೆಯದ ಮನೆಯ ಅನ್ನ ನಿಂದ್ಯವು.

ಅನರ್ಚಿತಂ ವೃಥಾಮಾಂಸಂ ಅವೀರಾಯಾಶ್ಚ ಯೋಷಿತಃ ।
ದ್ವಿಷದನ್ನಂ ನಗರ್ಯನ್ನಂ ಪತಿತಾನ್ನಮವಕ್ಷುತಂ ॥ ೨೧೩

ಅಗೌರವದಿಂದ ಕೊಟ್ಟ ಅನ್ನ, ದೇವರಿಗಾಗಿ ಅಲ್ಲದೆ ತನಗೆ ತಯಾರಿಸಿದ ಮಾಂಸ, ಪತಿಪುತ್ರರಿಲ್ಲದ ಸ್ತ್ರೀಯ ಅನ್ನ, ಶತ್ರು, ಪಟ್ಟಣ, ಪತಿತರು—ಇವರ ಅನ್ನ, ಕಂಠನಾಳದಿಂದ ಮೇಲೆ ಬಂದ ಅನ್ನ ವರ್ಜ್ಯವು.

ಪಿಶುನಾನೃತಿನೋಶ್ಚಾನ್ನಂ ಕ್ರತುವಿಕ್ರಯಿಣಸ್ತಥಾ ।
ಶೈಲೂಷತುನ್ನವಾಯಾನ್ನಂ ಕೃತಘ್ನಸ್ಯಾನ್ನಮೇವ ಚ ॥ ೨೧೪

ತರಳೆಕೋರ, ಸುಳ್ಳ, ಯಜ್ಞಫಲವಿಕ್ರಯಿ, ನಟನರ್ತಕ, ಹೊಲಿಗೆಯವ, ಕೃತಘ್ನ ಇವರ ಅನ್ನವು ನಿಂದಿತವು.

ಕರ್ಮಾರಸ್ಯ ನಿಷಾದಸ್ಯ ರಂಗಾವತಾರಕಸ್ಯ ಚ ।
ಸುವರ್ಣಕರ್ತುರ್ವೇಣಸ್ಯ ಶಸ್ತ್ರವಿಕ್ರಯಿಣಸ್ತಥಾ ॥ ೨೧೫

ಕಮ್ಮಾರ, ಸೊನೆಗಾರ, ಬಿದಿರು ಕಸುಬುಗಾರ, ಲೋಹವಿಕ್ರಯಿ ಇವರ ಅನ್ನವು ಪ್ರಶಸ್ತವಲ್ಲ.

ಶ್ವವತಾಂ ಶೌಂಡಿಕಾನಾಂ ಚ ಚೈಲನಿರ್ಣೇಜಕಸ್ಯ ಚ ।
ರಂಜಕಸ್ಯ ನೃಶಂಸಸ್ಯ ಯಸ್ಯ ಚೋಪಪತಿರ್ಗೃಹೇ ॥ ೨೧೬

ಬೇಟೆಗಾಗಿ ನಾಯಿ ಸಾಕುವವರ, ಕಳ್ಳು ಮಾರುವವರ, ಅಗಸರ, ಬಟ್ಟೆಗೆ ಬಣ್ಣ ಹಾಕುವವರ, ಕಟುಕನ, ಮಿಂಡರಿರುವ ಹೆಂಡತೀ ಗಂಡನ–ಅನ್ನವು ವರ್ಜ್ಯವು.

ಮೃಷ್ಯಂತಿ ಯೇ ಚೋಪಪತಿಂ ಸ್ತ್ರೀಜಿತಾನಾಂ ಚ ಸರ್ವಶಃ ।
ಅನಿರ್ದಶಂ ಚ ಪ್ರೇತಾನ್ನಮತುಷ್ಟಿಕರಮೇವ ಚ ॥ ೨೧೭

ಹೆಂಡತಿಯ ಮಿಂಡನನ್ನು ತಿಳಿದು ಇರುವವರು, ಹೆಂಡತಿಯ ಅಧೀನರು, ಸತ್ತು ಹತ್ತುದಿನ ಕಳೆಯದ ಮನೆಯ, ಅಸಂತೋಷಕರವಾದ ಅನ್ನವು ನಿಂದಿತವು.

ರಾಜಾನ್ನಂ ತೇಜ ಆದತ್ತೇ ಶೂದ್ರಾನ್ನಂ ಬ್ರಹ್ಮವರ್ಚಸಂ ।
ಆಯುಃ ಸುವರ್ಣಕಾರಾನ್ನಂ ಯಶಶ್ಚರ್ಮಾವಕರ್ತಿನಃ ॥ ೨೧೮

ರಾಜಾನ್ನವು ತೇಜಸ್ಸನ್ನು, ಶೂದ್ರಾನ್ನವು ಬ್ರಹ್ಮವರ್ಚಸ್ಸನ್ನು, ಸೊನೆಗಾರನ ಅನ್ನವು ಆಯುಸ್ಸನ್ನು, ಚರ್ಮಕಾರನ ಅನ್ನ ಕೀರ್ತಿಯನ್ನು ಕೆಡಿಸುತ್ತದೆ.

ಕಾರುಕಾನ್ನಂ ಪ್ರಜಾಂ ಹಂತಿ ಬಲಂ ನಿರ್ಣೇಜಕಸ್ಯ ಚ ।
ಗಣಾನ್ನಂ ಗಣಿಕಾನ್ನಂ ಚ ಲೋಕೇಭ್ಯಃ ಪರಿಕೃಂತತಿ ॥ ೨೧೯

ಅಡಿಗೆಯುವನ ಅನ್ನ ಸಂತತಿಯನ್ನು, ಅಗಸನ ಅನ್ನ ಬಲವನ್ನು, ಸೂಳೆಯ ಅನ್ನ–ಭೂರಿಭೋಜನಗಳು ಇತರ ಪುಣ್ಯಗಳನ್ನು ಕೆಡಿಸುತ್ತವೆ.

ಪೂಯಂ ಚಿಕಿತ್ಸಕಸ್ಯಾನ್ನಂ ಪುಂಶ್ಚಲ್ಯಾಸ್ತ್ವನ್ನಮಿಂದ್ರಿಯಂ ।
ವಿಷ್ಠಾ ವಾರ್ಧುಷಿಕಸ್ಯಾನ್ನಂ ಶಸ್ತ್ರವಿಕ್ರಯಿಣೋ ಮಲಂ ॥ ೨೨೦

ವೈದ್ಯನ ಅನ್ನವು ಕೀವಿಗೆ, ಜಾರಿಣಿಯ ಅನ್ನವು ವೀರ್ಯಕ್ಕೂ, ಬಡ್ಡಿಯಿಂದ ಬದುಕುವವನ ಅನ್ನ ಹಕ್ಕಿಮಲಕ್ಕೂ, ಶಸ್ತ್ರವಿಕ್ರಯಿಯ ಅನ್ನ ಮನುಷ್ಯ ಮಲಕ್ಕೂ ಸಮಾನವಾದುದರಿಂದ ಅವುಗಳಂತೆ ತ್ಯಾಜ್ಯವು.

ಯ ಏತೇಽನ್ಯೇ ತ್ವಭೋಜ್ಯಾನ್ನಾಃ ಕ್ರಮಶಃ ಪರಿಕೀರ್ತಿತಾಃ ।
ತೇಷಾಂ ತ್ವಗಸ್ಥಿರೋಮಾಣಿ ವದಂತ್ಯನ್ನಂ ಮನೀಷಿಣಃ ॥ ೨೨೧

ಹಿಂದೆ ತಿನ್ನಬಾರದೆಂದು ಹೇಳಿದ ಇತರಾನ್ನಗಳು ಚರ್ಮ, ಎಲುಬು, ರೋಮಗಳಿಗೆ ಸಮಾನಗಳೆಂದು ತಿಳಿಯಬಹುದು.

ಭುಕ್ತ್ವಾತೋಽನ್ಯತಮಸ್ಯಾನ್ನಮಮತ್ಯಾ ಕ್ಷಪಣಂ ತ್ರ್ಯಹಂ ।
ಮತ್ಯಾ ಭುಕ್ತ್ವಾಚರೇತ್ ಕೃಚ್ಛ್ರಂ ರೇತೋವಿಣ್ಮೂತ್ರಮೇವ ಚ ॥ ೨೨೨

ಹಿಂದೆ ತಿನ್ನಬಾರದೆಂದು ಹೇಳಿದ ಅನ್ನಗಳನ್ನು ತಿಳಿಯದೆ ತಿಂದ ಮೇಲೆ ತಿಳಿದರೆ ಮೂರು ದಿನ ಉಪವಾಸ ಮಾಡಬೇಕು. ತಿಳಿದು ತಿಂದರೆ ಕೃಚ್ಛ್ರ ಪ್ರಾಯಶ್ಚಿತ್ತವು. ಕೀಟಾದಿ ಸಂಸರ್ಗದುಷ್ಟಾನ್ನ ಉಂಡರೆ ಪ್ರಾಯಶ್ಚಿತ್ತವಿಲ್ಲ.

ನಾದ್ಯಾಚ್ಛೂದ್ರಸ್ಯ ಪಕ್ವಾನ್ನಂ ವಿದ್ವಾನಶ್ರಾದ್ಧಿನೋ ದ್ವಿಜಃ ।
ಆದದೀತಾಮಮೇವಾಸ್ಮಾದವೃತ್ತಾವೇಕರಾತ್ರಿಕಂ ॥ ೨೨೩

ಶ್ರಾದ್ಧವನ್ನು ಮಾಡದಿರುವವನಾದುದರಿಂದ ಶೂದ್ರಾನ್ನವು ವಿದ್ವಾಂಸನಿಗೆ ತ್ಯಾಜ್ಯವೆನ್ನಲಾಗಿದೆ. ಜೀವನಕ್ಕೆ ಅವಶ್ಯವಾಗಿ ಸ್ವೀಕರಿಸಬೇಕಾದಾಗ ಒಂದು ದಿನಕ್ಕೆ ಸಾಕಾಗುವಷ್ಟು ಬೇಯದ ಪದಾರ್ಥವನ್ನು ಶೂದ್ರನಿಂದ ತಕ್ಕೊಳ್ಳಬಹುದು.

ಶ್ರೋತ್ರಿಯಸ್ಯ ಕದರ್ಯಸ್ಯ ವದಾನ್ಯಸ್ಯ ಚ ವಾರ್ಧುಷೇಃ ।
ಮೀಮಾಂಸಿತ್ವೋಭಯಂ ದೇವಾಃ ಸಮಮನ್ನಮಕಲ್ಪಯನ್ ॥ ೨೨೪

ಶ್ರೋತ್ರಿಯನಾದ ಲೋಭಿಯು ಒಬ್ಬ, ದಾನಪ್ರಿಯನಾದ ಬಡ್ಡಿಗೆ ಹಣ ಕೊಡುವವನು ಇನ್ನೊಬ್ಬ, ಇವರಿಬ್ಬರಲ್ಲಿ ಗುಣಾವಗುಣ ವಿಚಾರಿಸಿದರೆ ಇಬ್ಬರೂ ಸಮರೆಂದು ದೇವತೆಗಳ ಅಂಬೋಣ.

ತಾನ್ಪ್ರಜಾಪತಿರಾಹೈತ್ಯ ಮಾ ಕೃಧ್ವಂ ವಿಷಮಂ ಸಮಂ ।
ಶ್ರದ್ಧಾಪೂತಂ ವದಾನ್ಯಸ್ಯ ಹತಮಶ್ರದ್ಧಯೇತರತ್ ॥ ೨೨೫

ಆಗ ಬ್ರಹ್ಮನು ಬಂದು ದೇವತೆಗಳಿಗೆ ಹೇಳುತ್ತಾನೆ: ಅವರಿಬ್ಬರಲ್ಲಿ ವಾರ್ಧುಷಿಯ ಅನ್ನವು ಶ್ರದ್ಧಾಸಹಿತವಾದುದರಿಂದ ಶ್ರೇಷ್ಠವು. ಕೃಷ್ಣನು ವೇದಜ್ಞನಾದರೂ ಅಶ್ರದ್ಧೆಯುಳ್ಳವನಾದುದರಿಂದ ನಿಕೃಷ್ಟವು ಎಂದು ಸಾರಾಸಾರ ವಿವೇಕವು.

ಶ್ರದ್ಧಯೇಷ್ಟಂ ಚ ಪೂರ್ತಂ ಚ ನಿತ್ಯಂ ಕುರ್ಯಾದತಂದ್ರಿತಃ ।
ಶ್ರದ್ಧಾಕೃತೇ ಹ್ಯಕ್ಷಯೇ ತೇ ಭವತಃ ಸ್ವಾಗತೈರ್ಧನೈಃ ॥ ೨೨೬

ಯಾಗ, ಕೆರೆ, ಬಾವಿ, ತೋಟ, ಅರವಟ್ಟಿಗೆ ಇವುಗಳನ್ನು ನ್ಯಾಯ (ಮೂಲಕ) ಮಾರ್ಗದಿಂದ ಹಣ ಸಂಪಾದಿಸಿ ಶ್ರದ್ಧೆಯಿಂದ ಮಾಡಿದರೆ ಅದು ಅಕ್ಷಯ ಫಲವುಳ್ಳದ್ದು. ನಿಷ್ಕಾಮನಾಗಿ ಕರ್ಮಮಾಡಬೇಕು.

ದಾನಧರ್ಮಂ ನಿಷೇವೇತ ನಿತ್ಯಮೈಷ್ಟಿಕಪೌರ್ತಿಕಂ ।
ಪರಿತುಷ್ಟೇನ ಭಾವೇನ ಪಾತ್ರಮಾಸಾದ್ಯ ಶಕ್ತಿತಃ ॥ ೨೨೭

ಹಿಂದೆ ಹೇಳಿದ ಎಲ್ಲ ಧರ್ಮಕಾರ್ಯಗಳನ್ನು ಸಂತುಷ್ಟ ಭಾವದಿಂದ ಮಾಡಿದರೆ ತುಂಬ ಫಲವಿದೆ.

ಯತ್ಕಿಂಚಿದಪಿ ದಾತವ್ಯಂ ಯಾಚಿತೇನಾನಸೂಯಯಾ ।
ಉತ್ಪತ್ಸ್ಯತೇ ಹಿ ತತ್ಪಾತ್ರಂ ಯತ್ತಾರಯತಿ ಸರ್ವತಃ ॥ ೨೨೮

ಬೇಡಿದವನಿಗೆ ಮತ್ಸರವಿಲ್ಲದೆ ಇದ್ದದ್ದು ಕೊಡಬೇಕು. ಅದರಿಂದ ಎಂದಾದರೂ ಸತ್ಪಾತ್ರದಾನವಾಗಿ ತನ್ನ ದುರಿತ ನಿವೃತ್ತಿಯಾಗುವುದು.

ವಾರಿದಸ್ತೃಪ್ತಿಮಾಪ್ನೋತಿ ಸುಖಮಕ್ಷಯ್ಯಮನ್ನದಃ ।
ತಿಲಪ್ರದಃ ಪ್ರಜಾಮಿಷ್ಟಾಂ ದೀಪದಶ್ಚಕ್ಷುರುತ್ತಮಂ ॥ ೨೨೯

ಜಲದಾನದಿಂದ ತೃಪ್ತಿಯು, ಅನ್ನದಾನದಿಂದ ಅಕ್ಷಯ ಸುಖವು; ತಿಲದಾನದಿಂದ ಸತ್ಪ್ರಜೆಯು, ದೀಪದಾನದಿಂದ ಉತ್ತಮ ದೃಷ್ಟಿಯು ದಾತೃವಿಗೆ ಲಭಿಸುವುದು.

ಭೂಮಿದೋ ಭೂಮಿಮಾಪ್ನೋತಿ ದೀರ್ಘಮಾಯುರ್ಹಿರಣ್ಯದಃ |
ಗೃಹದೋಽಗ್ರ್ಯಾಣಿ ವೇಶ್ಮಾನಿ ರೂಪ್ಯದೋ ರೂಪಮುತ್ತಮಂ || ೨೩೦

ಭೂದಾನದಿಂದ ಭೂಮಿಯು, ಹಿರಣ್ಯದಾನದಿಂದ ದೀರ್ಘಾಯುಸ್ಸು, ಗೃಹದಾನದಿಂದ ಒಳ್ಳೆಮನೆಯು, ಬೆಳ್ಳಿದಾನದಿಂದ ಸೌಂದರ್ಯವು, ಕಾಲಾಂತರದಲ್ಲಿ ಪ್ರಾಪ್ತವಾಗುವುದು.

ವಾಸೋದಶ್ಚಂದ್ರಸಾಲೋಕ್ಯಮಶ್ವಿಸಾಲೋಕ್ಯಮಶ್ವದಃ |
ಅನಡುಹ್ದಃ ಶ್ರಿಯಂ ಪುಷ್ಟಿಂ ಗೋದೋ ಬ್ರಧ್ನಸ್ಯ ವಿಷ್ಟಪಂ || ೨೩೧

ವಸ್ತ್ರದಾನದಿಂದ ಚಂದ್ರನ, ಅಶ್ವದಾನದಿಂದ ಅಶ್ವಿನೀದೇವತೆಗಳ, ವೃಷಭದಾನದಿಂದ ಐಶ್ವರ್ಯವನ್ನು ಕರೆಯುವ, ಗೋದಾನದಿಂದ ಸೂರ್ಯನ, ತೃಪ್ತಿಯನ್ನು ಹೊಂದುತ್ತಾನೆ.

ಯಾನಶಯ್ಯಾಪ್ರದೋ ಭಾರ್ಯಾಮೈಶ್ವರ್ಯಮಭಯಪ್ರದಃ |
ಧಾನ್ಯದಃ ಶಾಶ್ವತಂ ಸೌಖ್ಯಂ ಬ್ರಹ್ಮದೋ ಬ್ರಹ್ಮಸಾಷ್ಟಿತಾಂ|| ೨೩೨

ವಾಹನ, ಮಂಚಗಳ ದಾನದಿಂದ ಒಳ್ಳೆ ಹೆಂಡತಿ, ಅಭಯ ದಾನದಿಂದ ಐಶ್ವರ್ಯ, ಧಾನ್ಯದಾನದಿಂದ ಸುಖ, ವೇದಾರ್ಥ ದಾನದಿಂದ ಬ್ರಹ್ಮಪ್ರೀತಿ, ಇವುಗಳೆನ್ನು ಸಂಪಾದಿಸುವನು.

ಸರ್ವೇಷಾಮೇವ ದಾನಾನಾಂ ಬ್ರಹ್ಮದಾನಂ ವಿಶಿಷ್ಯತೇ |
ವಾರ್ಯನ್ನಗೋಮಹೀವಾಸಸ್ತಿಲಕಾಂಚನಸರ್ಪಿಷಾಂ || ೨೩೩

ನೀರು, ಅನ್ನ, ಗೋವು, ಎಮ್ಮೆ, ಬಟ್ಟೆ, ಎಳ್ಳು, ಚಿನ್ನ, ತುಪ್ಪಗಳ ದಾನಕ್ಕಿಂತ ಬ್ರಹ್ಮಜ್ಞಾನ ದಾನವು ಪ್ರಧಾನವು, ಬಹುಫಲವು.

ಯೇನ ಯೇನ ತು ಭಾವೇನ ಯದ್ಯದ್ದಾನಂ ಪ್ರಯಚ್ಛತಿ |
ತತ್ತತ್ತೇನೈವ ಭಾವೇನ ಪ್ರಾಪ್ನೋತಿ ಪ್ರತಿಪೂಜಿತಃ || ೨೩೪

ಯಾವ ಉದ್ದೇಶದಿಂದ ದಾನಮಾಡುತ್ತಾನೊ ಅದು ಅವನಿಗೆ ಕಾಲಾಂತರದಲ್ಲಿ ದೊರೆಯುವುದು. ಅಸತ್ಯಫಲವಾದರೆ ಅದು, ನಿತ್ಯಸುಖವಾದರೆ ಅದು ಸಿಗುವುದು.

ಯೋಽರ್ಚಿತಂ ಪ್ರತಿಗೃಹ್ಣಾತಿ ದದಾತ್ಯರ್ಚಿತಮೇವ ಚ ।
ತಾವುಭೌ ಗಚ್ಛತಃ ಸ್ವರ್ಗಂ ನರಕಂ ತು ವಿಪರ್ಯಯೇ ॥ ೨೩೫

ಕೊಡುವಾಗ ಆದರವಿದ್ದರೆ ಅದರಿಂದ ಇಬ್ಬರಿಗೂ ಒಳ್ಳೇದು. ಅನಾದರದಿಂದ ವಿಪರೀತವು.

ನ ವಿಸ್ಮಯೇತ ತಪಸಾ ವದೇದಿಷ್ಟ್ವಾ ಚ ನಾನೃತಂ ।
ನಾರ್ತೋಽಪ್ಯಪವದೇದ್ವಿಪ್ರಾನ್ನ ದತ್ವಾ ಪರಿಕೀರ್ತಯೇತ್ ॥ ೨೩೬

ಚಾಂದ್ರಾಯಣಾದಿ ಕಷ್ಟ ತಪಸ್ಸನ್ನು ಆಚರಿಸಿ ಹೇಗೆ ಮಾಡಿದೆನೆಂದು ಆಶ್ಚರ್ಯಪಡಬಾರದು. ಯಾಗ ಮಾಡಿ ಸುಳ್ಳಾಡಬಾರದು. ಬ್ರಾಹ್ಮಣರಿಂದ ಪೀಡಿತನಾದರೂ ಅವರನ್ನು ನಿಂದಿಸಬಾರದು. ದಾನಮಾಡಿ ಅದನ್ನು ಹೇಳುತ್ತ ಪ್ರಶಂಸಿಸಬಾರದು.

ಯಜ್ಞೋಽನೃತೇನ ಕ್ಷರತಿ ತಪಃ ಕ್ಷರತಿ ವಿಸ್ಮಯಾತ್ ।
ಆಯುರ್ವಿಪ್ರಾಪವಾದೇನ ದಾನಂ ಚ ಪರಿಕೀರ್ತನಾತ್ ॥ ೨೩೭

ಯಜ್ಞವು ಸುಳ್ಳಾಡುವುದರಿಂದ, ತಪಸ್ಸು ಆಶ್ಚರ್ಯದಿಂದ, ವಿಪ್ರನಿಂದೆಯಿಂದ ಆಯುಸ್ಸು, ದಾನವು ಆಡುವುದರಿಂದ, ನಿಷ್ಫಲವಾಗುವುದು.

ಧರ್ಮಂ ಶನೈಃ ಸಂಚಿನುಯಾತ್ ವಲ್ಮೀಕಮಿವ ಪುತ್ತಿಕಾಃ ।
ಪರಲೋಕಸಹಾಯಾರ್ಥಂ ಸರ್ವಭೂತಾನ್ಯಪೀಡಯನ್ ॥ ೨೩೮

ಗೆದಲೆಹುಳ, ಮಣ್ಣಿನಿಂದ ಸ್ವಲ್ಪ ಸ್ವಲ್ಪವೇ ಹುತ್ತ ಕಟ್ಟುವಂತೆ ಮರಣದ ನಂತರ ಸದ್ಗತಿಗಾಗಿ ಪರಪೀಡೆಯಾಗದೆ ಧರ್ಮವನ್ನು ಆಚರಿಸಬೇಕು.

ನಾಮುತ್ರ ಹಿ ಸಹಾಯಾರ್ಥಂ ಪಿತಾ ಮಾತಾ ಚ ತಿಷ್ಠತಃ ।
ನ ಪುತ್ರದಾರಾ ನ ಜ್ಞಾತಿರ್ಧರ್ಮಸ್ತಿಷ್ಠತಿ ಕೇವಲಃ ॥ ೨೩೯

ಮರಣದ ನಂತರ ಸಹಾಯಕ್ಕೆ ತಂದೆ-ತಾಯಿ ಹೆಂಡತಿ-ಮಕ್ಕಳು ಯಾರೂ ಇಲ್ಲ. ಧರ್ಮವೇ ಆಗಿನ ಆಧಾರವು.

ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೇ ।
ಏಕೋಽನುಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಂ ॥ ೨೪೦

ಒಬ್ಬನೆ ಹುಟ್ಟುವುದು, ಸಾಯುವುದು ಒಬ್ಬನೆ, ಪುಣ್ಯವನ್ನು ಪಾಪವನ್ನು ತಿನ್ನುವಾಗಲೂ ತಾನೊಬ್ಬನೇ.

ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಟಸಮಂ ಕ್ಷಿತೌ ।
ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥ ೨೪೧

ಜೀವಿಯು ಸತ್ತು ಶವವಾದೊಡನೆ ಕಲ್ಲು-ಮಣ್ಣುಗಳಂತೆ ಬಿಟ್ಟು ಹೋಗುತ್ತಾರೆ. ಧರ್ಮವೊಂದೇ ಮೃತನನ್ನು ಹಿಂಬಾಲಿಸುತ್ತದೆ.

ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾಚ್ಛನೈಃ ।
ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಂ ॥ ೨೪೨

ಧರ್ಮ ಸಂಪಾದನೆ ಮಾಡಿದರೆ ಅದು ಕತ್ತಲೆಯಲ್ಲಿ ದೀಪದಂತೆ ಸಹಾಯವಾಗುವುದು.

ಧರ್ಮಪ್ರಧಾನಂ ಪುರುಷಂ ತಪಸಾ ಹತಕಿಲ್ಬಿಷಂ ।
ಪರಲೋಕಂ ನಯತ್ಯಾಶು ಭಾಸ್ವಂತಂ ಖಶರೀರಿಣಂ ॥ ೨೪೩

ಧರ್ಮ ಆಚರಿಸಿ ತಪಸ್ಸಿನಿಂದ ಶುದ್ಧನಾದರೆ ಪ್ರಕಾಶಮಾನ ಬ್ರಹ್ಮಸ್ವರೂಪನಾಗಿ ಸುಖಮಯನಾಗುವನು.

ಉತ್ತಮೈರುತ್ತಮೈರ್ನಿತ್ಯಂ ಸಂಬಂಧಾನಾಚರೇತ್ಸಹ ।
ನಿನೀಷುಃ ಕುಲಮುತ್ಕರ್ಷಮಧಮಾನಧಮಾಂಸ್ತ್ಯಜೇತ್ ॥ ೨೪೪

ತನಗಿಂತ ಉತ್ತಮರ ಸಹವಾಸದಲ್ಲಿದ್ದರೆ ತನ್ನ ಕುಲವು ಉತ್ತಮವಾಗುವುದು. ಅಧಮರನ್ನು ದೂರದಲ್ಲಿಡಬೇಕು.

ಉತ್ತಮಾನುತ್ತಮಾನ್ಗಚ್ಛನ್ ಹೀನಾನ್ಹೀನಾಂಶ್ಚ ವರ್ಜಯನ್ ।
ಬ್ರಾಹ್ಮಣಃ ಶ್ರೇಷ್ಠತಾಮೇತಿ ಪ್ರತ್ಯವಾಯೇನ ಶೂದ್ರತಾಂ ॥ ೨೪೫

ಹೀನರನ್ನು ಬಿಟ್ಟು ಉತ್ತಮರ ಸಂಗದಿಂದ ಎಲ್ಲರೂ ಶ್ರೇಷ್ಠರಾಗುವರು.

ದೃಢಕಾರೀ ಮೃದುರ್ದಾಂತಃ ಕ್ರೂರಾಚಾರೈರಸಂವಸನ್ ।
ಅಹಿಂಸ್ರೋ ದಮದಾನಾಭ್ಯಾಂ ಜಯೇತ್ಸ್ವರ್ಗಂ ತಥಾವ್ರತಃ ॥ ೨೪೬

ಹಿಡಿದ ಕೆಲಸವನ್ನು ಅರ್ಧದಲ್ಲಿ ಬಿಡದೆ ಫಲಸಾಧಿಸಿದರೆ, ಕ್ರೂರನಲ್ಲದೆ ಮೃದುವಾಗಿದ್ದರೆ, ಸುಖವು ಅವನ ವಶವಾದಂತೆ.

ಏಧೋದಕಂ ಮೂಲಫಲಮನ್ನಮಭ್ಯುದ್ಯತಂ ಚ ಯತ್ ।
ಸರ್ವತಃ ಪ್ರತಿಗೃಹ್ಣೀಯಾನ್ಮಧ್ವಥಾಭಯದಕ್ಷಿಣಾಂ ॥ ೨೪೭

ಕಟ್ಟಿಗೆ, ನೀರು, ಗೆಣಸು, ಹಣ್ಣು, ಆಹಾರ, ಅಭಯ, ಜೇನು ಇವುಗಳನ್ನು ಎಲ್ಲರಿಂದಲೂ ಸ್ವೀಕರಿಸಬಹುದು.

ಆಹೃತಾಭ್ಯುದ್ಯತಾಂ ಭಿಕ್ಷಾಂ ಪುರಸ್ತಾದಪ್ರಚೋದಿತಾಂ ।
ಮೇನೇ ಪ್ರಜಾಪತಿರ್ಗ್ರಾಹ್ಯಾಮಪಿ ದುಷ್ಕೃತಕರ್ಮಣಃ ॥ ೨೪೮

ಕೊಡಲೆಂದು ತಂದಿರಿಸಿದ, ಸಂಕಲ್ಪಿಸಿದ, ಕೇಳದೆ ಕೊಡುವ ಎಲ್ಲ ದಾನಗಳನ್ನು ಸ್ವೀಕರಿಸಬಹುದೆಂದು ಬ್ರಹ್ಮನು ತಿಳಿಯುತ್ತಾನೆ.

ನಾಶ್ನಂತಿ ಪಿತರಸ್ತಸ್ಯ ದಶ ವರ್ಷಾಣಿ ಪಂಚ ಚ ।
ನ ಚ ಹವ್ಯಂ ವಹತ್ಯಗ್ನಿರ್ಯಸ್ತಾಮಭ್ಯವಮನ್ಯತೇ ॥ ೨೪೯

ಹಿಂದೆ ಹೇಳಿದಂತೆ ಕೊಡುವುದನ್ನು ನಿರಾಕರಿಸಿದರೆ ದೇವತೆಗಳು ಪಿತೃಗಳು ಅವನು ಕೊಡುವ ಹವ್ಯಕವ್ಯಗಳನ್ನು ಹದಿನೈದು ವರ್ಷಗಳಲ್ಲಿ ಸ್ವೀಕರಿಸುವುದಿಲ್ಲ.

ಶಯ್ಯಾಂ ಗೃಹಾನ್ ಕುಶಾನ್ ಗಂಧಾನಪಃ ಪುಷ್ಪಂ ಮಣೀನ್ದಧಿ ।
ಧಾನಾ ಮತ್ಸ್ಯಾನ್ಪಯೋ ಮಾಂಸಂ ಶಾಕಂ ಚೈವ ನ ನಿರ್ಣುದೇತ್ ॥ ೨೫೦

ಚಾಪೆ ವಗೈರೆ ಮನೆ, ದರ್ಭೆ, ಗಂಧದ್ರವ್ಯ, ನೀರು, ಹೂ, ಮಣಿ, ಮೊಸರು, ಹುರಿದ ಧಾನ್ಯ, ಮೀನು, ಹಾಲು, ಮಾಂಸ, ತರಕಾರಿಗಳನ್ನು ಬೇಡದೆ ಕೊಟ್ಟರೆ ತಕ್ಕೊಳ್ಳಲೇ ಬೇಕು.

ಗುರೂನ್‌ಭೃತ್ಯಾಂಶ್ಚೋಜ್ಜಿಹೀರ್ಷನ್ನರ್ಚಿಷ್ಯನ್ದೇವತಾತಿಥೀನ್ ।
ಸರ್ವತಃ ಪ್ರತಿಗೃಹ್ಣೀಯಾನ್ನ ತು ತೃಪ್ಯೇತ್ಸ್ವಯಂ ತತಃ ॥ ೨೫೧

ಗುರು-ಹಿರಿಯರು, ಸೇವಕರು ಇವರ ಹೊಟ್ಟೆ ತುಂಬಲು, ದೇವರು ಅತಿಥಿಗಳ ಪೂಜೆಗೆ, ಎಲ್ಲರಿಂದಲೂ ತಕ್ಕೊಳ್ಳಬಹುದು. ಆದರೆ ತಾನುಂಡು ಸುಖಪಡಬಾರದು.

ಗುರುಷು ತ್ವಭ್ಯತೀತೇಷು ವಿನಾ ವಾ ತೈರ್ಗೃಹೇ ವಸನ್ ।
ಆತ್ಮನೋ ವೃತ್ತಿಮನ್ವಿಚ್ಛನ್ ಗೃಹ್ಣೀಯಾತ್ಸಾಧುತಃ ಸದಾ ॥ ೨೫೨

ಮಾತಾಪಿತೃ ತೀರಿಹೋಗಿದ್ದರೆ, ಅಥವಾ ಅವರಿಂದ ಬೇರೆಯಾಗಿ ಪ್ರತ್ಯೇಕವಾಗಿ, ವಾಸಿಸುತ್ತಿದ್ದರೆ, ಉದರಂಭರಣಕ್ಕಾಗಿ, ಸಾಧು ಜನರಿಂದಲೇ ಯಾಚನೆ ಮಾಡಬೇಕು.

ಆರ್ಧಿಕಃ ಕುಲಮಿತ್ರಂ ಚ ಗೋಪಾಲೋ ದಾಸನಾಪಿತೌ ।
ಏತೇ ಶೂದ್ರೇಷು ಭೋಜ್ಯಾನ್ನಾ ಯಶ್ಚಾತ್ಮಾನಂ ನಿವೇದಯೇತ್ ॥ ೨೫೩

ಉಳುವವ, ಕುಲಮಿತ್ರ, ದನಕಾಯುವವ, ಪರಿಚಾರಕ, ಕ್ಷೌರಿಕ, ಶರಣಾಗತ ಇವರು ಸ್ವಾಮಿಯ ಅನ್ನ ಉಣ್ಣುವವರು.

ಯಾದೃಶೋಽಸ್ಯ ಭವೇದಾತ್ಮಾ ಯಾದೃಶಂ ಚ ಚಿಕೀರ್ಷಿತಂ ।
ಯಥಾ ಚೋಪಚರೇದೇನಂ ತಥಾತ್ಮಾನಂ ನಿವೇದಯೇತ ॥ ೨೫೪

ತನಗೆ ಮಾಡಲು ಸಾಧ್ಯವಾದ, ಇಷ್ಟವಾದ, ತಯಾರಿರುವ ಆಯಾ ಕೆಲಸಗಳನ್ನು ತಾನು ಮಾಡುವೆನೆಂದು ಸೇವಕನು ಮೊದಲು ಹೇಳಿ ಕಪಟವಿಲ್ಲದೆ ಆಚರಿಸಬೇಕು. ನಿಯಮಬದ್ಧನಾಗಬೇಕು.

ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಸತ್ಸು ಭಾಷತೇ ।
ಸ ಪಾಪಕೃತ್ತಮೋ ಲೋಕೇ ಸ್ತೇನ ಆತ್ಮಾಪಹಾರಕಃ ॥ ೨೫೫

ಅಂತವ ಇಂತವ ಎಂದು ತನ್ನ ಬಗೆಗೆ ಸುಳ್ಳಾಡಿ ಅವನಿಂದ ಲಾಭ ಹೊಂದುತ್ತಾನೋ ಆವನು ಆತ್ಮಾಪಹಾರಿಯು, ಕಳ್ಳನು.

ವಾಚ್ಯರ್ಥಾ ನಿಯತಾಃ ಸರ್ವೇ ವಾಙ್ಮೂಲಾ ವಾಗ್ವಿನಿಸ್ಸೃತಾಃ ।
ತಾಂ ತು ಯಃ ಸ್ತೇನಯೇದ್ವಾಚಂ ಸ ಸರ್ವಸ್ತೇಯಕೃನ್ನರಃ ॥ ೨೫೬

ವಾಕ್ಯಕ್ಕೆ ಇಂತಹ ಅರ್ಥವೆಂದು ನಿಯಮವಿದೆ. ಅರ್ಥವು ಶಬ್ದಶ್ರವಣದಿಂದ ಸ್ಮರಿಸಲ್ಪಡುವುದು. ಈ ರೀತಿ ಶಬ್ದಾರ್ಥ ಸಂಬಂಧವು ಸಿದ್ಧವಿರುವಾಗ ಅದನ್ನು ತಪ್ಪಿ ವ್ಯವಹರಿಸಿದರೆ ಮಾತಿನ ಕಳ್ಳನಾಗುವನು. ಒಂದು ಹೇಳಿ ಒಂದು ಮಾಡಬಾರದು.

ಮಹರ್ಷಿಪಿತೃದೇವಾನಾಂ ಗತ್ವಾನೃಣ್ಯಂ ಯಥಾವಿಧಿ ।
ಪುತ್ರೇ ಸರ್ವಂ ಸಮಾಸಜ್ಯ ವಸೇನ್ಮಾಧ್ಯಸ್ಥ್ಯಮಾಶ್ರಿತಃ ॥ ೨೫೭

ಅಧ್ಯಯನ, ಸಂತತಿ, ಯಜ್ಞಗಳಿಂದ ಋಷಿ-ಪಿತೃಗಳ ದೇವತೆಗಳ ಋಣವನ್ನು ತೀರಿಸಿ ತನ್ನ ಪುತ್ರನಿಗೆ ಗೃಹಭಾರವನ್ನು ವಹಿಸಿ ಅಸಂಗನಾಗಿ ಬ್ರಹ್ಮದರ್ಶನವುಳ್ಳವನಾಗಬಹುದು.

ಏಕಾಕೀ ಚಿಂತಯೇನ್ನಿತ್ಯಂ ವಿವಿಕ್ತೇ ಹಿತಮಾತ್ಮನಃ ।
ಏಕಾಕೀ ಚಿಂತಯಾನೋ ಹಿ ಪರಂ ಶ್ರೇಯೋಧಿಗಚ್ಛತಿ ॥ ೨೫೮

ಒಂಟಿಯಾಗಿ ಪರಿಶುದ್ಧ ಸ್ಥಳದಲ್ಲಿ ಆತ್ಮಹಿತವನ್ನು ಚಿಂತಿಸುತ್ತಿದ್ದರೆ ಮೋಕ್ಷಲಾಭವಾಗುವುದು.

ಏಷೋದಿತಾ ಗೃಹಸ್ಥಸ್ಯ ವೃತ್ತಿರ್ವಿಪ್ರಸ್ಯ ಶಾಶ್ವತೀ ।
ಸ್ನಾತಕವ್ರತಕಲ್ಪಶ್ಚ ಸತ್ವವೃದ್ಧಿಕರಃ ಶುಭಃ ॥ ೨೫೯

ಸ್ನಾತಕಗೃಹಸ್ಥನ ಜೀವನ ವಿಧಾನವನ್ನು ವ್ರತಗಳನ್ನು ಈ ವರೆಗೆ ಹೇಳಿಯಾಯಿತು. ಇದರಿಂದ ಸತ್ವಗುಣ ವೃದ್ಧಿಯಾಗಿ ಮನೋನೈರ್ಮಲ್ಯ ಜಯಗಳು ಉಂಟಾಗುವುವು. ಅದು ಈ ಜನ್ಮದ ಮತ್ತು ಅನಂತರದ ಶ್ರೇಯಸ್ಸಿಗೂ ಮೂಲಾಧಾರವು.

ಅನೇನ ವಿಪ್ರೋ ವೃತ್ತೇನ ವರ್ತಯನ್ವೇದಶಾಸ್ತ್ರವಿತ್ ।
ವ್ಯಪೇತಕಲ್ಮಷೋ ನಿತ್ಯಂ ಬ್ರಹ್ಮಲೋಕೇ ಮಹೀಯತೇ ॥ ೨೬೦

ಈ ಅಧ್ಯಾಯದಲ್ಲಿ ಹೇಳಿದಂತೆ ಜೀವಿಸುತ್ತ ಇರುವ ವೇದ ಶಾಸ್ತ್ರಜ್ಞನು ವಿಘ್ನನಿವೃತ್ತಿಯಾಗಿ ಬ್ರಹ್ಮಪ್ರಾಪ್ತಿಯು ಸುಗಮವಾಗುವುದು.

# ಅಧ ಯಂ ೫.

ಅಹಂಕಾರ ಮದಮತ್ಸರ ಶ ನ್ಯರು ಆತ್ಮತತ್ವ ಬಲ್ಲವರಾದರೆ ತನ್ನ ಈ ಜನ್ಮದ ಶರೀರ ನಿಮಿತ್ತದಿಂದ ಇತರರಂತೆ ತಾವೂ ವ್ಯವಹರಿಸುತ್ತಾರೆ. ಅಂತಹ ವಿವೇಕಕ್ಕೆ ತನ್ನ ದೇಹವು ಎಲ್ಲದರಂತೆ ಒಂದು ವ್ಯವಹಾರ ವಸ್ತುವಾಗುವುದು. ತನ್ನ ಸ್ವಯಂ ಪ್ರೇರಣೆಗೆ ತಾನೂ ವಿಮರ್ಶಕನಾಗಬಹುದಾದುದರಿಂದ ತನ್ನ ಸ್ಫೂರ್ತಿಯ ವಿಚಾರವನ್ನು ತಾನು ನಿಷ್ಪಕ್ಷಪಾತವಾಗಿ ವಿವರಿಸಬಹುದು. ಈ ಸಂಪ್ರದಾಯದಿಂದ ಮುಂದಿನ ಪದ್ಯದಲ್ಲಿ ಭೃಗು ತನ್ನನ್ನೇ ಕೇಳಿದರು. ತಾನು ಆದಿತ್ಯಸೋದರರೇತೋಜಾತನೆಂದು ಹೇಳುತ್ತಾರೆ.

ಶ್ರುತ್ವೈತಾನೃಷಯೋ ಧರ್ಮಾನ್ ಸ್ನಾತಕಸ್ಯ ಯಥೋದಿತಾನ್ ।
ಇದಮೂಚುರ್ಮಹಾತ್ಮಾನಮನಲಪ್ರಭವಂ ಭೃಗುಂ ॥ ೧

ಈ ಮೊದಲು ಹೇಳಿದ ಸ್ನಾತಕ ಧರ್ಮವನ್ನು ಮಹರ್ಷಿಗಳು ಕೇಳಿ ಈಗ ಇನ್ನೊಂದು ಪ್ರಶ್ನೆಯನ್ನು ಮಾಡುತ್ತಾರೆ. ಮನುವಿನ ರೇತಸ್ಸಿನಿಂದ ಆದಿತ್ಯನು ಭೃಗುವು ಹುಟ್ಟಿದರೆಂದು ವೇದವಾಕ್ಯವಿದೆ. ಅನೇಕ ಕಲ್ಪಗಳು ಆದರದರಲ್ಲಿ ವಿವಿಧ ಸೃಷ್ಟಿಯೂ. ಆದುದರಿಂದ ಸೃಷ್ಟಿಕ್ರಮದಲ್ಲಿ ವ್ಯತ್ಯಾಸ ಕಂಡರೆ ಸಂಶಯ ಅಪ್ರಾಮಾಣ್ಯಗಳು ಸುಳಿಯುವುದಿಲ್ಲ.

ಏವಂ ಯಥೋಕ್ತಂ ವಿಪ್ರಾಣಾಂ ಸ್ವಧರ್ಮಮನುತಿಷ್ಠತಾಂ ।
ಕಥಂ ಮೃತ್ಯುಃ ಪ್ರಭವತಿ ವೇದಶಾಸ್ತ್ರವಿದಾಂ ಪ್ರಭೋ ॥ ೨

ಈ ವರೆಗೆ ವಿವರಿಸಿದ ಧರ್ಮವನ್ನು ಶ್ರದ್ಧಾಲುಗಳು ಆಚರಿಸುತ್ತಾರೆ. ವೇದಶಾಸ್ತ್ರಗಳ ಮರ್ಮವನ್ನು ತಿಳಿದು ಸದಾಚಾರನಿರತರಾದರೂ ಅವರಿಗೆ ಮರಣ ಬರುವುದು ಹೇಗೆ ಎಂಬ ಪ್ರಶ್ನೆ. ನೀನು ಪ್ರಭುವಾದುದರಿಂದ ಈ ಸಂಶಯ ನಿವಾರಿಸಬಲ್ಲವನು. ಆದುದರಿಂದ ದಯಮಾಡಿ ತಿಳಿಸಬೇಕು.

ಸ ತಾನುವಾಚ ಧರ್ಮಾತ್ಮಾ ಮಹರ್ಷೀನ್ಮಾನವೋ ಭೃಗುಃ ।
ಶ್ರೂಯತಾಂ ಯೇನ ದೋಷೇಣ ಮೃತ್ಯುರ್ವಿಪ್ರಾನ್ಜಿಘಾಂಸತಿ ॥ ೩

ಆ ಪ್ರಶ್ನೆಗೆ ಮನುಸಂಭೂತನಾದ ಭೃಗುವು ಉತ್ತರಿಸುತ್ತಾನೆ. ಮರಣವು ಉಂಟಾಗುವ ಕಾರಣಗಳನ್ನು ಕೊಡುತ್ತೇನೆ.

ಅನಭ್ಯಾಸೇನ ವೇದಾನಾಂ ಆಚಾರಸ್ಯ ಚ ವರ್ಜನಾತ್ ।
ಆಲಸ್ಯಾದನ್ನದೋಷಾಚ್ಚ ಮೃತ್ಯುರ್ವಿಪ್ರಾಂಜಿಘಾಂಸತಿ ॥ ೪

ವೇದದ ಅನಧ್ಯಯನ, ಅನಾಚಾರ, ಆಲಸ್ಯ, ಅನ್ನದೋಷ ಈ ನಾಲ್ಕು ಮರಣ ಕಾರಣಗಳು. ದೇಹ ಬೇರೆ, ಆತ್ಮ ಬೇರೆ, ಆತ್ಮನು ನಿತ್ಯ, ದೇಹವು ಅನಿತ್ಯ. ಅನಿತ್ಯ ದೇಹಕ್ಕೆ ಆತ್ಮನ ಸಂಬಂಧವು ಆಯುಸ್ಸು, ಜೀವನ. ದೇಹವು ಅನಿತ್ಯವಾದರೂ ಅದರ ಸ್ಥಿತಿಯು ಆತ್ಮನ ಕಾರಣವಾಗಿಯೇ ಇರುವುದು; ಆತ್ಮನಿಗೆ ಪೂರ್ವಪುಣ್ಯದ ಸುಖ-ದುಃಖ ಅನುಭವಗಳಿಗಾಗಿ ಅವನು ದೇಹ ಸಂಬಂಧವನ್ನು ಪಡೆಯುವುದು. ಪುಣ್ಯವು ಕರ್ಮಗಳಿಂದ ಜನಿಸುವುದು, ಆದುದರಿಂದ ಇಂತಹ ಕರ್ಮಕ್ಕೆ ಈ ಫಲವೆಂದು ನಿಯಮವು ಇತರ ಸೃಷ್ಟಿಯಂತೆ ಅದೂ ದೇವಕಲ್ಪಿತವು. ಅಥವಾ ಕರ್ಮದ ಸ್ವರೂಪವು. ಆದುದರಿಂದ ಪೂರ್ವಪುಣ್ಯವಿದ್ದಂತೆ ಪ್ರಕೃತ ಕರ್ಮದಿಂದ ಪುಣ್ಯ-ಪಾಪಗಳು, ಧರ್ಮ-ಅಧರ್ಮಗಳು, ಸುಕೃತ-ದುಷ್ಕೃತಗಳು ಹುಟ್ಟುವುವು. ಆದುದರಿಂದ ಆತ್ಮನ ಮತ್ತು ಶರೀರದ ಚಿರಕಾಲ ಸಂಬಂಧಕ್ಕೆ ಹೇತುವಾಗುವ ಕರ್ಮಗಳನ್ನು ತಿಳಿಯುವ ಅವಶ್ಯವಿದೆ. ದೇಹವು ಬಹುಫಲವುಳ್ಳದ್ದು. ಈ ದೇಹದಲ್ಲಿ ಆತ್ಮನು ಕರ್ಮಮಾಡಿದರೆ ಮಾತ್ರ ಸುಖ, ಜ್ಞಾನ, ಮೋಕ್ಷ, ದೈವಾನುಗ್ರಹ, ಗುರುದಯೆ ಎಲ್ಲ ಕ್ಷೇಮಸಾಧನಗಳು ಒಂದೊಂದು ಉಂಟಾಗಬಲ್ಲುವು. ದೇಹವಿಲ್ಲದೆ ಏನೂ ಇಲ್ಲ. ಆದುದರಿಂದ ಆಯುರ್ವೇದವು ದೇಹ-ಮನಸ್ಸುಗಳ ಆರೋಗ್ಯಸಾಧನೆಯ ಉಪಾಯ ಬೋಧನೆಗೆ ಮಹರ್ಷಿಗಳಿಂದ ಆವಿರ್ಭವಿಸಿದೆ. ಶ್ರೀಶಂಕರ ಭಗವತ್ಪಾದರೂ ಈ ಕಾಯವು ಬಹು ಪುಣ್ಯದ ಬೆಲೆಯ ದೋಣಿ. ಅದರಿಂದ ಸಂಸಾರ ಸಾಗರವನ್ನು ಬೇಗನೆ ದಾಟಿಕೊ ಎನ್ನುತ್ತಾರೆ. ಪ್ರಬಲದುರಿತವಿಲ್ಲದಾಗ ಪ್ರಯತ್ನದಿಂದ ಮುಂದೆ ಹೇಳುವ ಸತ್ಕರ್ಮಗಳನ್ನು ಆಚರಿಸಿದರೆ ಆಯುಸ್ಸು ಅಧಿಕವಾಗುವುದು. ಇಲ್ಲವಾದರೆ ಕ್ಷೀಣವಾಗುವುದು.

ಉಪಾಸನೆ, ಧ್ಯಾನ, ಜಪ, ಚಿಂತನ, ವೇದಾಧ್ಯಯನ, ಜ್ಞಾನ, ಕರ್ತವ್ಯಪ್ರಜ್ಞೆ ಈ ದೇಹ ಆರೋಗ್ಯವಂತವಾದಾಗ ಮಾತ್ರ ಇರುವ್ವವು. ಆದುದರಿಂದ ವೇದಾಧ್ಯಯನ, ಸದಾಚಾರಗಳನ್ನು ಬೋಧಿಸಿದ ಮೇಲೆ ಅನ್ನದೋಷದ ವ್ಯಾಖ್ಯಾನದ ಆರಂಭವಾಗುವುದು.

ಲಶುನಂ ಗೃಂಜನಂ ಚೈವ ಪಲಾಂಡುಂ ಕವಕಾನಿ ಚ ।
ಅಭಕ್ಷ್ಯಾಣಿ ದ್ವಿಜಾತೀನಾಂಅಮೇಧ್ಯಪ್ರಭವಾಣಿ ಚ ॥ ೫

ಮೇಧಾನಾಶಕವನ್ನು ನಿತ್ಯ ಸೇವಿಸಬಾರದು. ರೋಗಕ್ಕೆ ಮದ್ದಿನಂತೆ ಕೆಲಸಮಯ ಉಪಯೋಗಿಸಬಹುದು. ಮನುಷ್ಯನ ಮಲಮೂತ್ರಗಳಿಂದ ಬೆಳೆದ ಆಹಾರ ಸಾಮಗ್ರಿಗಳು ತಿನ್ನಬಾರದವುಗಳು. ಬೆಳ್ಳುಳ್ಳಿ, ಕೆಂಪುನೀರುಳ್ಳಿ, ಬಿಳಿ ನೀರುಳ್ಳಿ ಇಂತಹವುಗಳು ಉತ್ತಮ ಆಹಾರಗಳಲ್ಲ. ಮನಸ್ಸಿಗೆ ತಮೋ ಗುಣವನ್ನು ಬೆಳೆಸಿ ಆ ಮೂಲಕ ಅಜ್ಞಾನ, ವಿಸ್ಮರಣೆ, ಚಾಂಚಲ್ಯ, ಅವಿಶ್ವಾಸ, ಆಲಸ್ಯಗಳನ್ನು ಉಂಟು ಮಾಡುವುವೆಂದು ಊಹಿಸಬೇಕು. ಕೇವಲ ದೇಹಕ್ಕೆ ದೋಷಕರವಲ್ಲವೆಂದು ತಿಳಿಯಬಹುದು.

ಲೋಹಿತಾನ್ ವೃಕ್ಷನಿರ್ಯಾಸಾನ್ ವೃಶ್ಚನಪ್ರಭವಾಂಸ್ತಥಾ ।
ಶೇಲುಂ ಗವ್ಯಂ ಚ ಪೇಯೂಷಂ ಪ್ರಯತ್ನೇನ ವಿವರ್ಜಯೇತ್ ॥ ೬

ಮರದ ತೊಗಟೆ, ಕೆಂಪುರಸಗಳು, ತೊಗಟೆ ಕೆತ್ತಿಹರಿಯುವ ಇತರ ರಸಗಳು, ಅಭಕ್ಷ್ಯಗಳು. ಇಂಗು ಮರದ ರಸವೆನ್ನುತ್ತಾರೆ. ಇಂತಹ ಆಹಾರ ಈ ದೇಶ ಈ ಕಾಲಗಳಲ್ಲಿ ಅಪ್ರಸಿದ್ಧವು. ಅಂದು ಪ್ರಚಾರದಲ್ಲಿರಬಹುದು. ಕರುವಿಳಿಸಿ ಹೆಚ್ಚು ಸಮಯ ಕಳೆಯದ ಆಕಳ ಹಾಲು, ಶೇಲು, ಇವು ಪ್ರಶಸ್ತ ವಲ್ಲ.

ವೃಥಾ ಕೃಸರಸಂಯಾವಂ ಪಾಯಸಾಪೂಪಮೇವ ಚ ।
ಅನುಪಾಕೃತಮಾಂಸಾನಿ ದೇವಾನ್ನಾನಿ ಹವೀಂಷಿ ಚ ॥ ೭

ಎಳ್ಳು, ಅಕ್ಕಿ ಒಟ್ಟಿಗೆ ಬೇಯಿಸಿ ಮಾಡಿದ ಅನ್ನ, ಅದಕ್ಕೆ ಹಾಲು, ತುಪ್ಪ, ಬೆಲ್ಲ, ಸಕ್ಕರೆ, ಗೋಧಿಹುಡಿ ಬೆರೆಸಿದ ಪಕ್ವಾನ್ನ, ಅಕ್ಕಿ, ಹಾಲು, ಸಿಹಿ ಹಾಕಿ ಮಾಡಿದ ಪಾಯಸ, ಹಿಟ್ಟು ತಟ್ಟಿಮಾಡಿದ ಅಪ್ಪ, ಇವುಗಳು ದೇವ

ನಿವೇದಕ್ಕಲ್ಲದೆ ತಮಗಾಗಿ ತಯಾರುಮಾಡಿದ್ದು, ಯಜ್ಞದಲ್ಲಿ ಮಂತ್ರಪೂರ್ವಕ ಸ್ವೀಕರಿಸದ ಪಶುವಿನ ಮಾಂಸ, ದೇವರಿಗಾಗಿ ತಯಾರು ಮಾಡಿ ನಿವೇದಿಸುವ ಮೊದಲು ಅಂತಹ ಹವಿಷ್ಯಾನ್ನಗಳು ಭಕ್ಷಣೀಯಗಳಲ್ಲ. ಇವುಗಳ ಭಕ್ಷಣ ದಿಂದ ಧರ್ಮವಿಲ್ಲ.

ಅನಿರ್ದಶಾಯಾ ಗೋಃ ಕ್ಷೀರಮೌಷ್ಟ್ರಮೈಕಶಫಂ ತಥಾ ।
ಆವಿಕಂ ಸಂಧಿನೀಕ್ಷೀರಂ ವಿವತ್ಸಾಯಾಶ್ಚ ಗೋಃ ಪಯಃ ॥ ೮

ಗೋವು, ಒಂಟೆ, ಒಂದುಗೊರಸಿನ ಕುದುರೆ ಮುಂತಾದುದರ, ಕರುವನ್ನು ಈಯ್ದು ಹತ್ತುದಿನ ಕಳೆಯುವ ಮೊದಲಿನ ಹಾಲು, ಕುರಿಹಾಲು, ಗಂಡುಮೃಗ ವನ್ನು ಬಯಸುವ (ಋತುಕಾಲದ) ಎಲ್ಲ ಹೆಣ್ಣುಪ್ರಾಣಿಗಳ ಹಾಲು, ಕರು ವಿಲ್ಲದ ಗೋವಿನ ಹಾಲು ಇವು ಅಭಕ್ಷ್ಯ.

ಆರಣ್ಯಾನಾಂ ಚ ಸರ್ವೇಷಾಂ ಮೃಗಾಣಾಂ ಮಾಹಿಷಂ ವಿನಾ ।
ಸ್ತ್ರೀಕ್ಷೀರಂ ಚೈವ ವರ್ಜ್ಯಾನಿ ಸರ್ವಶುಕ್ತಾನಿ ಚೈವ ಹಿ ॥ ೯

ಎಮ್ಮೆಯ ಹೊರತಾಗಿ ಆನೆ ಮುಂತಾದ ಕಾಡುಪ್ರಾಣಿಗಳ ಹಾಲು, ಮನುಷ್ಯ–ಸ್ತ್ರೀಹಾಲು, ಮೊಸರೊಂದನ್ನು ಬಿಟ್ಟು ಹುಳಿಗಾದ ವಸ್ತುಗಳು ಸೇವ್ಯಗಳಲ್ಲ.

ದಧಿ ಭಕ್ಷ್ಯಂ ಚ ಶುಕ್ತೇಷು ಸರ್ವಂ ಚ ದಧಿಸಂಭವಂ ।
ಯಾನಿ ಚೈವಾಭಿಷೂಯಂತೇ ಪುಷ್ಪಮೂಲಫಲೈಃ ಶುಭೈಃ ॥ ೧೦

ಹುಳಿಯಾದುದರಲ್ಲಿ ಮೊಸರು, ಮಜ್ಜಿಗೆ ಮತ್ತು ಅವು ಬೆರೆದವು, ಮತ್ತು ಹೂ, ಹಣ್ಣು, ಗೆಣಸುಗಳ ಸಾರಗಳು ಭಕ್ಷ್ಯಗಳು. ಅವು ಮದದಿಂದ ಚಿತ್ತವಿಕಾರ ಮಾಡುತ್ತಿದ್ದರೆ ಅಭಕ್ಷ್ಯಗಳು.

ಕ್ರವ್ಯಾದಾನ್ ಶಕುನಾನ್ ಸರ್ವಾನ್ ತಥಾ ಗ್ರಾಮನಿವಾಸಿನಃ ।
ಅನಿರ್ದಿಷ್ಟಾಂಶ್ಚೈಕಶಫಾನ್ ಟಿಟ್ಟಿಭಂ ಚ ವಿವರ್ಜಯೇತ್ ॥ ೧೧

ಹಸಿಮಾಂಸ ತಿನ್ನುವ ಪಕ್ಷಿಗಳು, ಹದ್ದು ಮುಂತಾದವು, ಗ್ರಾಮವಾಸಿ ಳಾದ ಪಾರಿವಾಳ ಮುಂತಾದುವು, ಮತ್ತು ಕತ್ತೆ ಮುಂತಾದ ಒಂದು ಗೊರಸಿನ ಮೃಗ–ಟಿಟ್ಟಿಭವೂ ಕೂಡ ವರ್ಜ್ಯಗಳು.

ಕಲವಿಂಕಂ ಪ್ಲವಂ ಹಂ ಂ ಚಕ್ರಾಹ್ವಂ ಗ್ರಾಮಕುಕ್ಕುಟಂ ।
ಸಾರಸಂ ರಜ್ಜುವಾಲಂ ಚ ದಾತ್ಯೂಹಂ ಶುಕಸಾರಿಕೇ ॥ ೧೨

ಗುಬ್ಬಚ್ಚಿ, ಪ್ಲವ, ಹಂಸ, ಚಕ್ರವಾಕ, ಮನೆಕೋಳಿ, ಬಾತುಕೋಳಿ, ದಾತ್ಯೂಹ, ಗಿಳಿಗಳು ವರ್ಜ್ಯಗಳು.

ಪ್ರತುದಾನ್ ಜಾಲಪಾದಾಂಶ್ಚ ಕೋಯಷ್ಟಿನಖವಿಷ್ಕಿರಾನ್ ।
ನಿಮಜ್ಜತಶ್ಚ ಮತ್ಸ್ಯಾದಾನ್ ಶೌನಂ ವಲ್ಲೂರಮೇವ ಚ ॥ ೧೩

ಕಾಲು ಕೆದರಿ ತಿನ್ನುವವು, ಕಪ್ಪೆಯಂತೆ ಜಾಲಪಾದ ಇರುವ ಪಕ್ಷಿಗಳು, ನೀರಲ್ಲಿ ಮುಳುಗಿ ಮೀನು ತಿನ್ನುವವು, ಮಾರಾಟದ ಅಂಗಡಿ ಮಾಂಸ, ಒಣಗಿದ ಮಾಂಸ ಇವು ವರ್ಜ್ಯಗಳು.

ಬಕಂ ಚೈವ ಬಲಾಕಾಂ ಚ ಕಾಕೋಲಂ ಖಂಜರೀಟಕಂ ।
ಮತ್ಸ್ಯಾದಾನ್ ವಿಡ್ವರಾಹಾಂಶ್ಚ ಮತ್ಸ್ಯಾನೇವ ಚ ಸರ್ವಶಃ ॥ ೧೪

ಕೊಕ್ಕರೆ, ಬಕಪಕ್ಷಿ, ಕಾಗೆ, ಕುಪ್ಪುಳು, ಮೊಸಳೆ, ಹೇಲುಹಂದಿ, ಎಲ್ಲ ಮೀನು ವರ್ಜ್ಯಗಳು.

ಯೋ ಯಸ್ಯ ಮಾಂಸಮಶ್ನಾತಿ ಸ ತನ್ಮಾಂಸಾದ ಉಚ್ಯತೇ ।
ಮತ್ಸ್ಯಾದಃ ಸರ್ವಮಾಂಸಾದಸ್ತಸ್ಮಾನ್ಮತ್ಸ್ಯಾನ್ವಿವರ್ಜಯೇತ್ ॥ ೧೫

ಮೀನು ಮೀನನ್ನು ನುಂಗುವುದರಿಂದ ಅತ್ಯಂತ ತುಚ್ಛವು. ಈ ಕಾರಣದಿಂದ ಮತ್ಸ್ಯ ಭಕ್ಷ್ಯವಲ್ಲ.

ಪಾಠೀನರೋಹಿತಾವದ್ಯೌ ನಿಯುಕ್ತೌ ಹವ್ಯಕವ್ಯಯೋಃ ।
ರಾಜೀವಾನ್ ಸಿಂಹತುಂಡಾಂಶ್ಚ ಸಶಲ್ಕಾಂಶ್ಚೈವ ಸರ್ವಶಃ ॥ ೧೬

ರಾಜೀವ, ರೋಹಿತ, ಪಾಠೀನಗಳೆಂಬ ಮತ್ಸ್ಯಗಳು ದೇವಪಿತೃಕಾರ್ಯ ವಿಹಿತಗಳು. ಭಕ್ಷ್ಯಗಳು.

ನ ಭಕ್ಷಯೇ-ದೇಕಚರಾನನುಜ್ಞಾತಾಂಶ್ಚ ಮೃಗದ್ವಿಜಾನ್ ।
ಭಕ್ಷ್ಯೇಷ್ವಪಿ ಸಮುದ್ದಿಷ್ಟಾನ್ ಸರ್ವಾನ್ ಪಂಚನಖಾಂಸ್ತಥಾ ॥ ೧೭

ಒಂಟಿಯಾಗಿ ಸಂಚರಿಸುವವು, ಗುಣಧರ್ಮ ತಿಳಿಯದ ಇತರಪ್ರಾಣಿಗಳು, ಐದು ಉಗುರಿನ ಮಂಗ ಮುಂತಾದುವು ಭಕ್ಷ್ಯಗಳಲ್ಲ.

ಶ್ವಾವಿಧಂ ಶಲ್ಯಕಂ ಗೋಧಾಂ ಖಡ್ಗಕೂರ್ಮಶಶಾಂಸ್ತಥಾ ।
ಭಕ್ಷ್ಯಾನ್ ಪಂಚನಖೇಷ್ವಾಹುರನುಷ್ಟ್ರಾಂಶ್ಚೈಕತೋದತಃ ॥ ೧೮

ಐದು ಉಗುರಿರುವವುಗಳಲ್ಲಿ ಶ್ವಾವಿಧ ಮುಂತಾದ ಐದು ಪ್ರಾಣಿ ಮತ್ತು ಬಾಯಲ್ಲಿ ಕೆಳಗೆ ಮಾತ್ರ ಹಲ್ಲು ಇರುವ ಎಮ್ಮೆ ಮುಂತಾದುವು–ಒಂಟೆಯ ಹೊರತು ಭಕ್ಷ್ಯಗಳು.

ಛತ್ರಾಕಂ ವಿಡ್ವರಾಹಂ ಚ ಲಶುನಂ ಗ್ರಾಮಕುಕ್ಕುಟಂ ।
ಪಲಾಂಡುಂ ಗೃಂಜನಂ ಚೈವ ಮತ್ಯಾ ಜಗ್ಧ್ವಾ ಪತೇದ್ದ್ವಿಜಃ ॥ ೧೯

ಛತ್ರಾಕ ಎಂಬ ತರಕಾರಿ, ಹೇಲುಹಂದಿ, (ಊರು) ಊರುಕೋಳಿ, ನೀರುಳ್ಳಿ, ಬೆಳ್ಳುಳ್ಳಿ ಇವುಗಳನ್ನು ಹೆಚ್ಚು ಸಮಯ ತಿಂದರೆ ತುಂಬ ಪಾಪವು.

ಅಮತ್ಯೈತಾನಿ ಷಟ್ ಜಗ್ಧ್ವಾ ಕೃಚ್ಛ್ರಂ ಸಾಂತಪನಂ ಚರೇತ್ ।
ಯತಿಚಾಂದ್ರಾಯಣಂ ವಾಪಿ ಶೇಷೇಷೂಪವಸೇದಹಃ ॥ ೨೦

ಹಿಂದೆ ಹೇಳಿದವುಗಳನ್ನು ತಿಂದರೆ ಸಾಂತಪನ ಕೃಚ್ಛ್ರ ಆಚರಿಸಬೇಕು. ಯತಿಚಾಂದ್ರಾಯಣವು ಆಗಬಹುದು. ಉಳಿದ ಹಿಂದಿನ ಅಭಕ್ಷ್ಯಭಕ್ಷಣ ಮಾಡಿದರೆ ಒಂದು ದಿನ ನಿರಾಹಾರವಿರಬೇಕು. ಇಲ್ಲಿ ಸಾಂತಪನ ಕೃಚ್ಛ್ರವೆಂದು ಹೇಳಿದೆ. ಅದರ ವಿವರ: ಆಕಳ ಮೂತ್ರ, ಸಗಣಿ, ಹಾಲು, ಮೊಸರು, ದರ್ಭೆನೀರುಗಳನ್ನು ಬೆರಸಿ ಆರುದಿನ ಸೇವಿಸುತ್ತ ಇತರ ಅನ್ನಾಹಾರ ಬಿಡುವುದು. ಏಳನೆ ದಿನ ಇದನ್ನು ಸೇವಿಸದೆ ಇರುವುದು ಇದು ಸಾಂತಪನಕೃಚ್ಛ್ರವು. ಮೂವತ್ತು ದಿನ ಮಧ್ಯಾಹ್ನ ಒಮ್ಮೆ ಮಾತ್ರ ಎಂಟು ತುತ್ತು ಅನ್ನ ಸೇವಿಸುತ್ತ ಇರುವುದು ಯತಿಚಾಂದ್ರಾಯಣವು.

ಸಂವತ್ಸರಸ್ಯೈಕಮಪಿ ಚರೇತ್ಕೃಚ್ಛ್ರಂ ದ್ವಿಜೋತ್ತಮಃ ।
ಅಜ್ಞಾತಭುಕ್ತಶುದ್ಧ್ಯರ್ಥಂ ಜ್ಞಾತಸ್ಯ ತು ವಿಶೇಷತಃ ॥ ೨೧

ತಿಳಿಯದೆ ಮಾಡಿದ ಅಭಕ್ಷ್ಯಭಕ್ಷಣ ದೋಷನಿವೃತ್ತಿಗೆ ವರ್ಷಕ್ಕೊಮ್ಮೆ ಕೃಚ್ಛ್ರ ಆಚರಿಸುವುದು ಒಳ್ಳೆದು. ಉತ್ತಮನು ಆಚರಿಸಲೇಬೇಕು. ತಿಳಿದ ಅಪರಾಧಕ್ಕೆ ಪ್ರಾಯಶ್ಚಿತ್ತವು ಬೇಕೇಬೇಕು. ಪ್ರಜಾಪತ್ಯ ಕೃಚ್ಛ್ರವು ಇದು— ಮೂರು ದಿನ ಬೆಳಿಗ್ಗೆ, ಮೂರು ದಿನ ಸಾಯಂ ಮಾತ್ರ ಆಹಾರ ಸೇವಿಸುವುದು. ಮತ್ತೆ ಮೂರು ದಿನ ಬೇಡದೆ ಸಿಕ್ಕಿದ್ದನ್ನು ತಿನ್ನುವುದು. ಮತ್ತೆ ಮೂರುದಿನ ಉಪವಾಸ. ಇದು ಸಾಮಾನ್ಯ ಪ್ರಾಯಶ್ಚಿತ್ತವು.

ಯಜ್ಞಾರ್ಥಂ ಬ್ರಾಹ್ಮಣೈರ್ವಧ್ಯಾಃ ಪ್ರಶಸ್ತಾ ಮೃಗಪಕ್ಷಿಣಃ ।
ಭೃತ್ಯಾನಾಂ ಚೈವ ವೃತ್ಯರ್ಥಮಗಸ್ತ್ಯೋ ಹ್ಯಾಚರತ್ಪುರಾ ॥ ೨೨
ಬಭೂವುರ್ಹಿ ಪುರೋಡಾಶಾ ಭಕ್ಷ್ಯಾಣಾಂ ಮೃಗಪಕ್ಷಿಣಾಂ ।
ಪುರಾಣೇಷ್ವಪಿ ಯಜ್ಞೇಷು ಬ್ರಹ್ಮಕ್ಷತ್ರಸವೇಷು ಚ ॥ ೨೩

ಯಜ್ಞಕ್ಕೆ ಪಶುಪಕ್ಷಿ ಹಿಂಸೆಯು ಅಧರ್ಮವಲ್ಲ. ತನ್ನ ಪೋಷ್ಯರ ಪೋಷಣೆಗೂ ಮಾಂಸವನ್ನು ಆಪತ್ತಿನಲ್ಲಿ ಉಪಯೋಗಿಸಬಹುದು. ಹಿಂದೆ ಅಗಸ್ತ್ಯನು ಹೀಗೆ ಮಾಡಿದ್ದಾನೆ. ಪೂರ್ವಕಾಲದಲ್ಲಿ ಬ್ರಾಹ್ಮಣ ಕ್ಷತ್ರಿಯರು ಯಜ್ಞಗಳಲ್ಲಿ ಪುರೋಡಾಶವನ್ನು ಮಾಡಿದ್ದಾರೆ.

ಯತ್ಕಿಂಚಿತ್ಸ್ನೇಹಸಂಯುಕ್ತಂ ಭೋಜ್ಯಮಗರ್ಹಿತಂ ।
ತತ್ಪರ್ಯುಷಿತಮಪ್ಯಾದ್ಯಂ ಹವಿಃಶೇಷಂ ಚ ಯದ್ಭವೇತ್ ॥ ೨೪

ಎಣ್ಣೆ, ತುಪ್ಪದಲ್ಲಿ ಹುರಿದ ಬೆರಸಿದ ತಿಂಡಿ-ತಿನಸುಗಳು ದಿನಕಳೆದರೂ ತಿನ್ನಬಹುದು. ಚರುಪುರೋಡಾಶಾದಿಯೂ ಪರ್ಯುಷಿತವಾದರೆ ಅಭಕ್ಷ್ಯವಲ್ಲ.

ಚಿರಸ್ಥಿತಮಪಿ ತ್ವಾದ್ಯಮಸ್ನೇಹಾಕ್ತಂ ದ್ವಿಜಾತಿಭಿಃ ।
ಯವಗೋಧೂಮಜಂ ಸರ್ವಂ ಪಯಸಶ್ಚೈವ ವಿಕ್ರಿಯಾ ॥ ೨೫

ಯವ, ಗೋಧೂಮಧಾನ್ಯಗಳ ತಿಂಡಿಯು ಬಹುದಿನ ಕಳೆದೂ ವರ್ಜ್ಯವಲ್ಲ. ಹಾಲಿನ ಬೆಣ್ಣೆ–ತುಪ್ಪಗಳು ಹಳತಾದರೂ ದೋಷವಲ್ಲ.

ಏತದುಕ್ತಂ ದ್ವಿಜಾತೀನಾಂ ಭಕ್ಷ್ಯಾಭಕ್ಷ್ಯಮಶೇಷತಃ ।
ಮಾಂಸಸ್ಯಾತಃ ಪ್ರವಕ್ಷ್ಯಾಮಿ ವಿಧಿಂ ಭಕ್ಷಣವರ್ಜನೇ ॥ ೨೬

ಪ್ರೋಕ್ಷಿತಂ ಭಕ್ಷಯೇನ್ಮಾಂಸಂ ಬ್ರಾಹ್ಮಣಾನಾಂ ಚ ಕಾಮ್ಯಯಾ ।
ಯಥಾವಿಧಿ ನಿಯುಕ್ತಸ್ತು ಪ್ರಾಣಾನಾಮೇವ ಚಾತ್ಯಯೇ ॥ ೨೭

ಮಾಂಸವನ್ನು ಹಿಂದೆ ಹೇಳಿದಂತೆ ಪ್ರೋಕ್ಷಿಸಿ ಸೇವಿಸಬೇಕು. ಬ್ರಾಹ್ಮಣ ವಚನದಿಂದ, ಶಾಸ್ತ್ರವಿಧಿಯಿಂದ, ಶ್ರಾದ್ಧಮಧುಪರ್ಕಾದಿಗಳಿಗೆ, ಆಹಾರವಿಲ್ಲದೆ ಇರುವಾಗ, ರೋಗದಿಂದ ಮರಣವಾಗುವುದಾದರೆ, ಮಾಂಸವು ವರ್ಜನೀಯ ವಲ್ಲ.

ಪ್ರಾಣಸ್ಯಾನ್ನಮಿದಂ ಸರ್ವಂ ಪ್ರಜಾಪತಿರಕಲ್ಪಯತ್ ।
ಸ್ಥಾವರಂ ಜಂಗಮಂ ಚೈವ ಸರ್ವಂ ಪ್ರಾಣಸ್ಯ ಭೋಜನಂ ॥ ೨೮

ಬ್ರಹ್ಮನು ಜೀವಾತ್ಮನ ಹಸಿವೆಗೆ ಅನ್ನ–ಆಹಾರವಾಗಿ ಪಶುಪಕ್ಷಿ ಧಾನ್ಯ ಗಳನ್ನು ಸೃಜಿಸಿದನು. ಸಫಲವಾದ ಜೀವದ ರಕ್ಷಣೆಗೆ ಮಾಂಸಾದಿ ಆಹಾರವು ನಿಂದ್ಯವಲ್ಲ. ಚಲಿಸುವ ಮೃಗಪಕ್ಷಿಗಳಿಗೆ ಹುಲ್ಲು, ಸಪ್ಪು, ಹಣ್ಣು ಆಹಾರ. ಹಲ್ಲು ಇರುವವುಗಳಾದ ಹುಲಿ ಮುಂತಾದವುಗಳಿಗೆ ಕೋರೆಹಲ್ಲಿಲ್ಲದ ಜಿಂಕೆ ಮುಂತಾದುವು ಆಹಾರವು. ಕೈಯಿಲ್ಲದವುಗಳಾದ ಮೀನು ವಗೈರೆಯು. ಕೈಯಿರುವ ಮನುಷ್ಯನ ಆಹಾರವು. ಶೂರಸಿಂಹಕ್ಕೆ ಹೆದರುವ ಆನೆ ಆಹಾರ. ಆತ್ಮನು ಅವಿನಾಶಿಯು ಪಂಚಭೂತ ರೂಪವಾದ ದೇಹವು ಮರ, ಹುಲ್ಲು, ಹಣ್ಣು, ಹಂಪಲು, ಗಡ್ಡೆಗೆಣಸು ಇತ್ಯಾದಿ ಪಂಚಭೂತಗಳ ರಾಶಿಯಾಗಿ ಬೆಳೆಯಬಹುದು. ಯಾರಿಗೆ ಯಾವುದು ಲಭ್ಯವಾಯಿತೊ ಆಗ ಅದಕ್ಕೆ ಆಯುಸ್ಸು ತೀರಿರುವುದು. ಈ ದೃಷ್ಟಿಯಿಂದ ಮರಣ, ಹಿಂಸೆಗಳು ದೋಷ ಕರವಲ್ಲ. ಇದನ್ನೆ ರೂಪಾಂತರದಿಂದ—

ಚರಾಣಾಮನ್ನಮಚರಾ ದಂಷ್ಟ್ರಿಣಾಮಪ್ಯದಂಷ್ಟ್ರಿಣಃ ।
ಅಹಸ್ತಾಶ್ಚ ಸಹಸ್ತಾನಾಂ ಶೂರಾಣಾಂ ಚೈವ ಭೀರವಃ ॥ ೨೯

ತಿನ್ನುವವರನ್ನು, ತಿನ್ನಬಹುದಾದವರನ್ನು ಒಬ್ಬನೆ ಒಂದೇ ರೀತಿಯಿಂದ ಮಾಡಿರುವನು. ಆದುದರಿಂದ ತಿನ್ನುವುದು ಅಪರಾಧವಲ್ಲ. ನಿಯಮವು ಧಾನ್ಯಕ್ಕೂ ಕೆಲವಿದೆ. ಮಾಂಸಕ್ಕೂ ಇದೆ. ಜಲಸೇವನೆಗೂ ಇದೆ. ಆದುದ ರಿಂದ ನಿಯಮಕ್ಕೆ ಒಳಪಟ್ಟು, ಮಾಂಸ, ಪ್ರಾಣಿಹಿಂಸೆಗಳು ಅಧರ್ಮವಲ್ಲ.

ನಾತ್ತಾ ದುಷ್ಯತ್ಯದನ್ನಾದ್ಯಾನ್ಪ್ರಾಣಿನೋಽಹನ್ಯಹನ್ಯಪಿ ।
ಧಾತ್ರೈವ ಸೃಷ್ಟಾ ಹ್ಯಾದ್ಯಾಶ್ಚ ಪ್ರಾಣಿನೋಽತ್ತಾರ ಏವ ಚ ॥ ೩೦

ವೇದದಲ್ಲಿ ಹೇಳಿದಂತೆ ಪಶುಹಿಂಸೆ ದೇವ ನಿವೇದನೆ ಭಕ್ಷಣಾದಿಗಳು ರಾಕ್ಷಸ ಕಾರ್ಯಗಳಾಗಲಾರವು. ಆದುದರಿಂದ,

ಯಜ್ಞಾಯ ಜಗ್ಧಿರ್ಮಾಂಸಸ್ಯೇತ್ಯೇಷ ದೈವೋ ವಿಧಿಃ ಸ್ಮೃತಃ ।
ಅತೋಽನ್ಯಥಾ ಪ್ರವೃತ್ತಿಸ್ತು ರಾಕ್ಷಸೋ ವಿಧಿರುಚ್ಯತೇ ॥ ೩೧

ತಾನು ಸಂಪಾದಿಸಿ, ಕ್ರಯಕ್ಕೆ ಪಡೆದು, ಇತರರು ದಾನಮಾಡಿದ ಮಾಂಸದಿಂದ ದೇವಪಿತೃಗಳನ್ನು ಪೂಜಿಸಿ ಮಾಂಸ ಭಕ್ಷಣ ಮಾಡಬೇಕು.

ಕ್ರೀತ್ವಾ ಸ್ವಯಂ ವಾಪ್ಯುತ್ಪಾದ್ಯ ಪರೋಪಕೃತಮೇವ ವಾ ।
ದೇವಾನ್ ಪಿತೄಂಶ್ಚಾರ್ಚಯಿತ್ವಾ ಖಾದನ್ ಮಾಂಸಂ ನ ದುಷ್ಯತಿ ॥ ೩೨

ನಾದ್ಯಾದವಿಧಿನಾ ಮಾಂಸಂ ವಿಧಿಜ್ಞೋಽನಾಪದಿ ದ್ವಿಜಃ ।
ಜಗ್ಧ್ವಾ ಹ್ಯವಿಧಿನಾ ಮಾಂಸಂ ಪ್ರೇತ್ಯ ತೈರದ್ಯತೇಽವಶಃ ॥ ೩೩

ನ ತಾದೃಶಂ ಭವತ್ಯೇನೋ ಮೃಗಹಂತುರ್ಧನಾರ್ಥಿನಃ ।
ಯಾದೃಶಂ ಭವತಿ ಪ್ರೇತ್ಯ ವೃಥಾಮಾಂಸಾನಿ ಖಾದತಃ ॥ ೩೪

ನಿಯುಕ್ತಸ್ತು ಯಥಾನ್ಯಾಯಂ ಯೋ ಮಾಂಸಂ ನಾತ್ತಿ ಮಾನವಃ ।
ಸ ಪ್ರೇತ್ಯ ಪಶುತಾಂ ಯಾತಿ ಸಂಭವಾನೇಕವಿಂಶತಿಂ ॥ ೩೫

ಅಸಂಸ್ಕೃತಾನ್ಪಶೂನ್ಮಂತ್ರೈರ್ನಾದ್ಯಾದ್ವಿಪ್ರಃ ಕದಾಚನ ।
ಮಂತ್ರೈಸ್ತು ಸಂಸ್ಕೃತಾನದ್ಯಾಚ್ಛಾಶ್ವತಂ ವಿಧಿಮಾಸ್ಥಿತಃ ॥ ೩೬

ಕುರ್ಯಾದ್ಘೃತಪಶುಂ ಸಂಗೇ ಕುರ್ಯಾತ್ಪಿಷ್ಟಪಶುಂ ತಥಾ ।
ನ ತ್ವೇವ ತು ವೃಥಾ ಹಂತುಂ ಪಶುಮಿಚ್ಛೇತ್ಕದಾಚನ ॥ ೩೭

ಯಾವಂತಿ ಪಶುರೋಮಾಣಿ ತಾವತ್ಕೃತ್ವೋ ಹ ಮಾರಣಂ ।
ವೃಥಾಪಶುಘ್ನಃ ಪ್ರಾಪ್ನೋತಿ ಪ್ರೇತ್ಯ ಜನ್ಮನಿ ಜನ್ಮನಿ ॥ ೩೮

ಮೈಗಳ್ಳನಾಗಿ ದುಡಿಯಲಾರದೆ (ಧಾನ್ಯ) ಹೊಟ್ಟೆ ಹೊರೆಯಲು ಪಶುಹಿಂಸೆ, ರುಚಿಗಾಗಿ ಮಾಂಸತಿನ್ನಲು ಉಂಟಾಗುವ ದುರ್ಬುದ್ಧಿಯ ಕೋಪದಿಂದ ತುಂಬ ರೀತಿಯಿಂದ ಒಂದೇ ಪಶುಹಿಂಸೆಯನ್ನು ನಿಂದಿಸುವರು. ಈಗ ಮಾಂಸ

ತಿಂದರೆ ಅದೇ ಪ್ರಾಣಿ ಇನ್ನೊಮ್ಮೆ ತನ್ನನ್ನು ತಿನ್ನುವುದು. ಪ್ರಾಣಿಯ ರೋಮದ ಸಂಖ್ಯೆಯ ಜನ್ಮಗಳಲ್ಲಿ ದುರ್ಮರಣವನ್ನು ಅನುಭವಿಸುವುದು ಅಂತಹ ದುರಾಶೆಯ ಮಾಂಸಾಹಾರಿಗೆ ನ್ಯಾಯವು.

**ಯಜ್ಞಾರ್ಥಂ ಪಶವಃ ಸೃಷ್ಟಾಃ ಸ್ವಯಮೇವ ಸ್ವಯಂಭುವಾ ।**
**ಯಜ್ಞಸ್ಯ ಭೂತ್ಯೈ ಸರ್ವಸ್ಯ ತಸ್ಮಾದ್ಯಜ್ಞೇ ವಧೋಽವಧಃ ॥ ೩೯**

ಜಗತ್ತಿನ ಪ್ರಾಣಿಕೋಟಿಯ ಜೀವನಯಾತ್ರೆಯು ಆಹಾರದಿಂದ ಬೀಜ ವೃಕ್ಷಗಳಂತೆ ಪ್ರಾಣಿಆಹಾರಗಳನ್ನು ಅನ್ಯೋನ್ಯವೆಂದು ತಿಳಿಯಬೇಕು. ರಾಸಾಯನಿಕವಾಗಿ ಯಜ್ಞದಹನದಿಂದ ಪರಿಣಾಮವಾಗುವುದು. ಅಂತಹ ಯಜ್ಞಕ್ಕೆ ಪ್ರಾಣಿವಧವು ಹಿಂಸೆಯಲ್ಲ.

**ಓಷಧ್ಯಃ ಪಶವೋ ವೃಕ್ಷಾಸ್ತಿರ್ಯಂಚಃ ಪಕ್ಷಿಣಸ್ತಥಾ ।**
**ಯಜ್ಞಾರ್ಥಂ ನಿಧನಂ ಪ್ರಾಪ್ತಾಃ ಪ್ರಾಪ್ನುವಂತ್ಯುತ್ಸ್ರತೀಃ ಪುನಃ ॥ ೪೦**

ಯಜ್ಞಕ್ಕಾಗಿ ಉಪಯೋಗಿಸಲ್ಪಟ್ಟಂಥ ಮೂಲಿಕೆಗಳು, ಗಿಡಗಳು, ದನಗಳು, ಪಕ್ಷಿಗಳು ಮತ್ತು ಪ್ರಾಣಿಗಳು ಹೆಚ್ಚಿನ ದರ್ಜೆಯಲ್ಲಿ ಪುನರ್ಜನ್ಮವನ್ನು ತಾಳುತ್ತವೆ.

**ಮಧುಪರ್ಕೇ ಚ ಯಜ್ಞೇ ಚ ಪಿತೃದೈವತಕರ್ಮಣಿ ।**
**ಅತ್ರೈವ ಪಶವೋ ಹಿಂಸ್ಯಾ ನಾನ್ಯತ್ರೇತ್ಯಬ್ರವೀನ್ಮನುಃ ॥ ೪೧**

ಅತಿಥಿಸತ್ಕಾರ, ಯಜ್ಞ, ದೇವಪಿತೃಕಾರ್ಯ ಈ ನಾಲ್ಕು ಸಂದರ್ಭದಲ್ಲಿ ಮಾತ್ರ ಪಶುಹಿಂಸೆಯು ಧರ್ಮವೆಂದು ಮನುಮತವು.

**ಏಷ್ವರ್ಥೇಷು ಪಶೂನ್ ಹಿಂಸನ್ ವೇದತತ್ತ್ವಾರ್ಥವಿದ್ದ್ವಿಜಃ ।**
**ಆತ್ಮಾನಂ ಚ ಪಶುಂ ಚೈವ ಗಮಯತ್ಯುತ್ತಮಾಂ ಗತಿಂ ॥ ೪೨**

ಹಿಂದೆ ಹೇಳಿದ ನಾಲ್ಕು ಪ್ರಕರಣಗಳಲ್ಲಿ ಮಾತ್ರ ಪ್ರಾಣಿವಧೆಯಿಂದ ತಾನೂ ಪ್ರಾಣಿಯೂ ಸದ್ಗತಿಯನ್ನು ಹೊಂದುವರು. ಸೇನಾಜಯವು ರಾಜನ ಜಯವಾಗುವುದು. ಪಕ್ಷದ ಜಯವು ನಾಯನಿಗೆ ಸಲ್ಲುವುದು. ಉದ್ದೇಶದ ಪಾವಿತ್ರ್ಯದಿಂದ ಹಿಂಸೆಯು ಅಹಿಂಸೆಯು ಕ್ಷೇಮಕರವು.

ಗೃಹೇ ಗುರಾವರಣ್ಯೇ ವಾ ನಿವಸನ್ನಾತ್ಮವಾನ್ ದ್ವಿಜಃ ।
ನಾವೇದವಿಹಿತಾಂ ಹಿಂಸಾಮಾಪದ್ಯಪಿ ಸಮಾಚರೇತ್ ॥ ೪೩

ಮನೆಯಲ್ಲಿ, ಗುರುಕುಲದಲ್ಲಿ, ವನದಲ್ಲಿ ಎಲ್ಲಿರಲಿ ಆತ್ಮಬಲ ಇರುವವನು ವೇದನಿಷಿದ್ಧ ಹಿಂಸಾಪರನಾಗಬಾರದು.

ಯಾ ವೇದವಿಹಿತಾ ಹಿಂಸಾ ನಿಯತಾಸ್ಮಿಂಶ್ಚರಾಚರೇ ।
ಅಹಿಂಸಾಮೇವ ತಾಂ ವಿದ್ಯಾದ್ವೇದಾದ್ಧರ್ಮೋ ಹಿ ನಿರ್ಬಭೌ ॥ ೪೪

ವೇದವು ಧರ್ಮಬೋಧೆಗಾಗಿ ಪ್ರಕಟವಾಗಿದೆ. ಅದು ಅಧರ್ಮವನ್ನು ಹೇಳುವುದಿಲ್ಲ. ಆದುದರಿಂದ ವೈದಿಕ ಹಿಂಸೆಯಲ್ಲಿ ಸಂಶಯವು ಬೇಡ. ವೇದದ ಧರ್ಮಕ್ಕಿಂತಲೂ ಮೇಲುಮಟ್ಟದ ಧರ್ಮನಿಷ್ಠರು (ಜೈನಬೌದ್ಧರು) ಸದೇಹ ಸ್ವರ್ಗಕೈವಲ್ಯ ಪಡೆದದ್ದಿಲ್ಲ. ಈ ಲೋಕವನ್ನು ತನ್ನ ಅಧೀನವಾಗಿ ಮಾಡಿಲ್ಲ. ವೇದ ಧರ್ಮದ ಅಣುಗಳೇ ಜಗತ್ತಿನ ಸರ್ವತ್ರ ಆಚರಣೆಯಲ್ಲಿವೆ.

ಯೋಽಹಿಂಸಕಾನಿ ಭೂತಾನಿ ಹಿನಸ್ತ್ಯಾತ್ಮಸುಖೇಚ್ಛಯಾ ।
ಸ ಜೀವಂಶ್ಚ ಮೃತಶ್ಚೈವ ನ ಕ್ವಚಿತ್ಸುಖಮೇಧತೇ ॥ ೪೫

ಮೃದುಗಳಾದ ಜಿಂಕೆ ಮೊದಲಾದ ಸಾಧುಗಳನ್ನು ಹಿಂಸಿಸಿದರೆ ಇಂದು ಮುಂದು ಸುಖ ದೊರೆಯುವುದು ಹೇಗೆ.

ಯೋ ಬಂಧನವಧಕ್ಲೇಶಾನ್ ಪ್ರಾಣಿನಾಂ ನ ಚಿಕೀರ್ಷತಿ ।
ಸ ಸರ್ವಸ್ಯ ಹಿತಪ್ರೇಪ್ಸುಃ ಸುಖಮತ್ಯಂತಮಶ್ನುತೇ ॥ ೪೬

ತನಗೆ ಪೀಡೆಕೊಡದ ಸಾಧುಗಳನ್ನು ಕಟ್ಟಿ, ಕೊಂದು ಪೀಡಿಸದಿದ್ದರೆ ಇತರರ ಹಿತೇಚ್ಛೆಯ ಪುಣ್ಯದಿಂದ ತನಗೆ ಸುಖಪ್ರಾಪ್ತಿಯಾಗದಿರದು.

ಯದ್ಧ್ಯಾಯತಿ ಯತ್ಕುರುತೇ ಧೃತಿಂ ಬಧ್ನಾತಿ ಯತ್ರ ಚ ।
ತದವಾಪ್ನೋತ್ಯಯತ್ನೇನ ಯೋ ಹಿನಸ್ತಿ ನ ಕಿಂಚನ ॥ ೪೭

ಧರ್ಮದ ಸತತನಿರಂತರ ಧ್ಯಾನ ಅಭಿಸಂಧಾನ ಧೃತಿಗಳಿಂದ ಅನಾಯಾಸವಾಗಿ ಪರಮಾರ್ಥ ಫಲವು ಲಭಿಸುವುದು.

ನಾಕೃತ್ವಾ ಪ್ರಾಣಿನಾಂ ಹಿಂಸಾಂ ಮಾಂಸಮುತ್ಪದ್ಯತೇ ಕ್ವಚಿತ್ ।
ನ ಚ ಪ್ರಾಣಿವಧಃ ಸ್ವರ್ಗ್ಯಸ್ತಸ್ಮಾನ್ಮಾಂಸಂ ವಿವರ್ಜಯೇತ್ ॥ ೪೮

ಪ್ರಾಣಿಹಿಂಸೆಯಿಲ್ಲದೆ ಮಾಂಸವಿಲ್ಲ. ಹೊಟ್ಟೆಬಾಕನ ಪ್ರಾಣಿವಧವು ಸ್ವರ್ಗದಾಯಕವಲ್ಲ. ಮಾಂಸಾಶೆಯನ್ನು ಬಿಡಬೇಕು.

ಸಮುತ್ಪತ್ತಿಂ ಚ ಮಾಂಸಸ್ಯ ವಧಬಂಧೌ ಚ ದೇಹಿನಾಂ ।
ಪ್ರಸಮೀಕ್ಷ್ಯ ನಿವರ್ತೇತ ಸರ್ವಮಾಂಸಸ್ಯ ಭಕ್ಷಣಾತ್ ॥ ೪೯

ಕಟ್ಟಿ, ಕೊಂದು ಮಾಂಸದೊರೆಯುವುದರಿಂದ ಶುಚಿಮನಸ್ಸಿಗೆ ಮಾಂಸಾಶೆ ಹುಟ್ಟಲಾರದು.

ನ ಭಕ್ಷಯತಿ ಯೋ ಮಾಂಸಂ ವಿಧಿಂ ಹಿತ್ವಾ ಪಿಶಾಚವತ್ ।
ಸ ಲೋಕೇ ಪ್ರಿಯತಾಂ ಯಾತಿ ವ್ಯಾಧಿಭಿಶ್ಚ ನ ಪೀಡ್ಯತೇ ॥ ೫೦

ಮಾಂಸವರ್ಜನದಿಂದ ಜನಪ್ರಿಯನಾಗುವನು. ರೋಗಪೀಡೆಯೂ ಸಂಭವಿಸದು.

ಅನುಮಂತಾ ವಿಶಸಿತಾ ನಿಹಂತಾ ಕ್ರಯವಿಕ್ರಯೀ ।
ಸಂಸ್ಕರ್ತಾ ಚೋಪಹರ್ತಾ ಚ ಖಾದಕಶ್ಚೇತಿ ಘಾತಕಾಃ ॥ ೫೧

ಪ್ರಾಣಿವಧೆಗೆ ಯಾರ ಸಮ್ಮತಿಯು ಇದ್ದೇ ನೆರವೇರುವುದೋ ಅವನು, ಕೊರೆಯುವವನು, ಕೊಲ್ಲುವವನು, ಕ್ರಯಕ್ಕೆ ಕೊಡುವವನು, ಕೊಳ್ಳುವವನು, ಅಡಿಗೆ ಮಾಡುವವನು, ಬಡಿಸುವವನು, ತಿನ್ನುವವನು ಎಲ್ಲರೂ ಪಾಪದೃಷ್ಟಿಯಿಂದ ಪಶುಘಾತಕರು.

ಸ್ವಮಾಂಸಂ ಪರಮಾಂಸೇನ ಯೋ ವರ್ಧಯಿತುಮಿಚ್ಛತಿ ।
ಅನಭ್ಯರ್ಚ್ಯ ಪಿತೃನ್ದೇವಾಂಸ್ತತೋಽನ್ಯೋ ನಾಸ್ತ್ಯಪುಣ್ಯಕೃತ್ ॥ ೫೨

ತನ್ನ ದೇಹಮಾಂಸವನ್ನು ಇತರ ಪಶುಮಾಂಸದಿಂದ ಬೆಳೆಸುವ ಉದ್ದೇಶವು ಬಹುಪಾಪಿಷ್ಠವು.

ವರ್ಷೇ ವರ್ಷೇಽಶ್ವಮೇಧೇನ ಯೋ ಯಜೇತ ಶತಂ ಸಮಾಃ ।
ಮಾಂಸಾನಿ ಚ ನ ಖಾದೇದ್ಯಸ್ತಯೋಃ ಪುಣ್ಯಫಲಂ ಸಮಂ ॥ ೫೩

ಮಾಂಸವರ್ಜನವನ್ನು ಮರಣಪರ್ಯಂತ ಸಾಧಿಸುವುದು, ನೂರು ಅಶ್ವಮೇಧವು, ಇವೆರಡೂ ಫಲದಲ್ಲಿ ಸಮಾನವು.

ಫಲಮೂಲಾಶನೈರ್ಮೇಧ್ಯೈರ್ಮುನ್ಯನ್ನಾನಾಂ ಚ ಭೋಜನೈಃ ।
ನ ತತ್ಫಲಮವಾಪ್ನೋತಿ ಯನ್ಮಾಂಸಪರಿವರ್ಜನಾತ್ ॥ ೫೪

ಹಣ್ಣು, ಹಂಪಲು, ಗಡ್ಡೆ, ಗೆಣಸು, ಮುನಿಗಳ ತೃಣಧಾನ್ಯಗಳು ಮೇಧಾಜನಕಗಳಾಗಿ ಕೊಡುವ ಸತ್ಫಲಕ್ಕೆ ಮಾಂಸವರ್ಜನ ಫಲವು ಕಡಿಮೆಯದಲ್ಲ.

ಮಾಂ ಸ ಭಕ್ಷಯಿತಾಽಮುತ್ರ ಯಸ್ಯ ಮಾಂಸಮಿಹಾದ್ಮ್ಯಹಂ ।
ಏತನ್ಮಾಂಸಸ್ಯ ಮಾಂಸತ್ವಂ ಪ್ರವದಂತಿ ಮನೀಷಿಣಃ ॥ ೫೫

ಮಾಂಸ ಪದದ ಎರಡು ವರ್ಣಗಳು ಬೇರೆಯಾದಾಗ ಈ ಪದಗಳಾಗಿ ಅರ್ಥವನ್ನು ಕೊಡುವುವು. ಈಗ ನನ್ನನ್ನು ತಿಂದವನನ್ನು ಮತ್ತೆ ನಾನು ತಿನ್ನುವೆನು. ಈಗ ನಾನು ಯಾರ ಮಾಂಸವನ್ನು ತಿನ್ನುವೆನೋ ನನ್ನನ್ನು ಅವನು ತಿನ್ನುವನು. ( ಮಾಂ= ನನ್ನನ್ನು; ಸಃ= ಅವನು ತಿನ್ನುವನು. ) ಮಾಂಸವು ಈ ರೀತಿ ಸೇಡು ತೀರಿಸುವುದರಿಂದ ಅದರ ವರ್ಜನವು ಶ್ಲಾಘ್ಯ.

ನ ಮಾಂಸಭಕ್ಷಣೇ ದೋಷೋ ನ ಮದ್ಯೇ ನ ಚ ಮೈಥುನೇ ।
ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ ॥ ೫೬

ಮದ್ಯಮಾಂಸ ಮೈಥುನಗಳಲ್ಲಿ ಪ್ರವೃತ್ತಿಯು ಪ್ರಾಣಿಗೆ ಸ್ವಾಭಾವಿಕವಾದರೂ ಅದರ ನಿವೃತ್ತಿಯಿಂದ ಅಧಿಕ ಫಲವು. ನಿಷಿದ್ಧವನ್ನು ವರ್ಜಿಸಬೇಕು. ಸಾಧುವಿಧಾನವನ್ನು ಬೋಧಿಸಿದಂತೆ ಆಚರಿಸಬೇಕು. ಇಲ್ಲಿಯವರೆಗೆ ಆಹಾರಶುದ್ಧಿಯನ್ನು ಹೇಳಿ ಇನ್ನು ಪ್ರೇತಶುದ್ಧಿಯನ್ನು ಹೇಳುತ್ತಾರೆ.

ಪ್ರೇತಶುದ್ಧಿಂ ಪ್ರವಕ್ಷ್ಯಾಮಿ ದ್ರವ್ಯಶುದ್ಧಿಂ ತಥೈವ ಚ ।
ಚತುರ್ಣಾಮಪಿ ವರ್ಣಾನಾಂ ಯಥಾವದನುಪೂರ್ವಶಃ ॥ ೫೭

ಮರಣದಿಂದ ಬರುವ ಅಶುದ್ಧಿ ದ್ರವ್ಯಗಳ ಮಲನಿವೃತ್ತಿ ಇವುಗಳನ್ನು ಎಲ್ಲರಿಗೂ ಸಂಬಂಧಿಸಿದಂತೆ ಹೇಳಲಾಗುವುದು.

ದಂತಜಾತೇಽನುಜಾತೇ ಚ ಕೃತಚೂಡೇ ಚ ಸಂಸ್ಥಿತೇ ।
ಅಶುದ್ಧಾ ಬಾಂಧವಾಃ ಸರ್ವೇ ಸೂತಕೇ ಚ ತಥೋಚ್ಯತೇ ॥ ೫೮

ಹಲ್ಲು ಹುಟ್ಟಿದ ಮಗು, ಆಮೇಲಿನ ಮಗು, ಚೂಡಾಕರಣ ಆದಮಗು, ಉಪನಯನ ಆದ ಬಾಲ ಇಂತಹರ ಮರಣ ನಿಮಿತ್ತದಿಂದ ರಕ್ತಬಂಧುಗಳು ಆಕುಲದವರಾದ ಕವಲಿನವರೆಲ್ಲರೂ ಅಶುಚಿಗಳಾಗುವರು. ಜನನದಲ್ಲು ಹೀಗೆಯೇ ಅಶುದ್ಧಿಯು.

ದಶಾಹಂ ಶಾವಮಾಶೌಚಂ ಸಪಿಂಡೇಷು ವಿಧೀಯತೇ ।
ಅರ್ವಾಕ್‌ಸಂಚಯನಾದಸ್ಥ್ನಾಂ ತ್ರ್ಯಹಮೇಕಾಹಮೇವ ವಾ ॥ ೫೯

ಯಾರಿಗೆ ಪಿಂಡವನ್ನು ಇಬ್ಬರು ಹಾಕುವರೋ ಇಬ್ಬರು ಪರಸ್ಪರ ಸಪಿಂಡರು. ಅಂತಹವರಲ್ಲಿ ಒಬ್ಬನು ಮೃತನಾದರೆ ದಶರಾತ್ರಾ ಶೌಚವು ಜೀವಿಸಿರುವವರಿಗೆ ಧರ್ಮವು. ಅಧಿಕ ವಿದ್ಯಾವ್ರತಗಳಿದ್ದವರಿಗೆ ಆಶೌಚ ಸಂಕೋಚವಿದೆ. ಈಗ ಅದು ಆಚರಣೆಯಲ್ಲಿಲ್ಲ.

ಸಪಿಂಡತಾ ತು ಪುರುಷೇ ಸಪ್ತಮೇ ವಿನಿವರ್ತತೇ ।
ಸಮಾನೋದಕಭಾವಸ್ತು ಜನ್ಮನಾಮ್ನೋರವೇದನೇ ॥ ೬೦

ತನ್ನಿಂದ ಹಿಂದೆ ತಂದೆ ಅವನ ತಂದೆ ಹೀಗೆಯೇ ಆರು ಮಂದಿ ಮೃತರಾದಾಗ ಪಿಂಡಪ್ರದಾನ ಮಾಡಬೇಕು. ಕಿರಿ ಸಂತತಿಯವರು ಆ ಆರು ಮಂದಿಯಲ್ಲಿ ಒಬ್ಬನಿಗಾದರೂ ಪಿಂಡಹಾಕಬೇಕಾಗಿದ್ದರೆ ಆ ಕಿರಿಯರೆಲ್ಲ ಸಪಿಂಡರೆಂದು ಕರೆಯಲಾಗುವುದು. ಹೀಗೆ ಬಹಳ ಹಿಂದಿನ ತಲೆಮಾರಿನವರು ಈಗ ಇರುವ ಇಬ್ಬರು ಗೋತ್ರಜರಿಗೆ ಮೂಲಪುರುಷರಾಗುವರಾದರೆ ಸಂತತಿ ನಕ್ಷೆಯಲ್ಲಿ ತೋರುವಂತೆ ತಂದೆ ಮಗ ಎಂಬ ಸ್ಪಷ್ಟಸಂಬಂಧ ಹೆಸರು ತಿಳಿಯದೆ ಇರುವಾಗ ಅವರು ಸೋದಕರು. ಜಲತರ್ಪಣವನ್ನು ಒಬ್ಬನೆ ಪಿತೃವಿಗೆ ಕೊಡುವ ಇಬ್ಬರು, ಹಾಗೆ ಇತರರು, ಸೋದಕರು ಸಮಾನೋದಕರು ಎನಿಸುವರು.

ಯಥೇದಂ ಶಾವಮಾಶೌಚಂ ಸಪಿಂಡೇಷು ವಿಧೀಯತೇ ।
ಜನನೇಪ್ಯೇವಮೇವ ಸ್ಯಾತ್ ನಿಪುಣಂ ಶುದ್ಧಿಮಿಚ್ಛತಾಂ ॥ ೬೧

ಮರಣಾ ಶೌಚವು ಹತ್ತು ರಾತ್ರಿ ಇರುವಂತೆ ಜನನವು ಸಪಿಂಡರೊಳಗೆ ಆದಾಗಲೂ ಹತ್ತು ರಾತ್ರಿ ಅಶೌಚವಿದೆ.

ಸರ್ವೇಷಾಂ ಶಾವಮಾಶೌಚಂ ಮಾತಾಪಿತ್ರೋಸ್ತು ಸೂತಕಂ |
ಸೂತಕಂ ಮಾತುರೇವ ಸ್ಯಾದುಪಸ್ಪೃಶ್ಯ ಪಿತಾ ಶುಚಿಃ || ೬೨

ಶವಾಶೌಚವು ಇರುವಾಗ ಎಲ್ಲರೂ ಅಸ್ಪೃಶ್ಯರು. ಜನನದ ಅಶೌಚವು ಇರುವಾಗ ಸಪಿಂಡರಿಗೆ ಅಸ್ಪೃಶ್ಯತ್ವವಿಲ್ಲ. ತಾಯಿಗೆ ದಶರಾತ್ರವಿದೆ. ತಂದೆಗೆ ಸ್ನಾನಪರ್ಯಂತ, ಕರ್ಮ ಅನರ್ಹತ್ವವಿದೆ.

ನಿರಸ್ಯ ತು ಪುಮಾನ್ ಶುಕ್ರಮುಪಸ್ಪೃಶ್ಯೈವ ಶುಧ್ಯತೆ |
ಬೈಜಿಕಾದಭಿಸಂಬಂಧಾದನುರುಂಧ್ಯಾದಘಂ ತ್ರ್ಯಹಂ || ೬೩

ವೀರ್ಯಪಾತವಾದರೆ ಅದನ್ನು ತೊಳೆದರೆ ಶುದ್ಧಿಯು ನಿಯೋಗ ವಿಧಿಯಿಂದ ಪರಸ್ತ್ರೀಯಲ್ಲಿ ಸಂತತಿಯಾದಾಗ ಜನಕನಿಗೆ ಮೂರು ದಿನಗಳ ಅಶೌಚವಿದೆ.

ಅಹ್ನಾ ಚೈಕೇನ ರಾತ್ರ್ಯಾ ಚ ತ್ರಿರಾತ್ರೈರೇವ ಚ ತ್ರಿಭಿಃ |
ಶವಸ್ಪೃಶೋ ವಿಶುಧ್ಯಂತಿ ತ್ರ್ಯಹಾದುದಕದಾಯಿನಃ || ೬೪

ಸಪಿಂಡರು ವಿಶೇಷದಲ್ಲಿ ಅಲ್ಪಾಶೌಚ ಉಳ್ಳವರೆಂದು ಹೇಳಿದೆ, ಅವರೂ ಯಾವುದೇ ಕಾರಣದಿಂದ ಶವಸ್ಪರ್ಶಮಾಡಿದಾಗ ಅವರಿಗೆ ಹತ್ತು ರಾತ್ರಿಗಳ ಅಶೌಚವಿದೆ. ಸೋದಕರಿಗೆ ಆಗಲೂ ಮೂರು ದಿನ.

ಗುರೋಃ ಪ್ರೇತಸ್ಯ ಶಿಷ್ಯಸ್ತು ಪಿತೃಮೇಧಂ ಸಮಾಚರನ್ |
ಪ್ರೇತಹಾರ್ಯೈಃ ಸಮಂ ತ್ರ ದಶರಾತ್ರೇಣ ಶುಧ್ಯತಿ || ೬೫

ಶಿಷ್ಯನು ಗುರುವಿನ ಶವಸಂಸ್ಕಾರ (ಶ್ರಾದ್ಧಾದಿ) ಉತ್ತರ ಕ್ರಿಯೆಗಳನ್ನು ಮಾಡಿದರೆ ಸಪಿಂಡರಂತೆ ಅವನಿಗೆ ಆಗ ದಶರಾತ್ರ, ಅಶೌಚ.

ರಾತ್ರಿಭಿರ್ಮಾಸತುಲ್ಯಾಭಿರ್ಗರ್ಭಸ್ರಾವೇ ವಿಶುಧ್ಯತಿ |
ರಜಸ್ಯುಪರತೇ ಸಾಧ್ವೀ ಸ್ನಾನೇನ ಸ್ತ್ರೀ ರಜಸ್ವಲಾ || ೬೬

ಗರ್ಭಿಣಿಗೆ ಗರ್ಭಸ್ರಾವವಾದರೆ ಗರ್ಭಕ್ಕೆ ಎಷ್ಟು ತಿಂಗಳು ಆಗಿತ್ತೋ ಅಷ್ಟು ದಿನ ಸಪಿಂಡರಿಗೆ ಆಶೌಚವು. ರಜಸ್ವಲೆಯಾದಾಗ ಸ್ತ್ರೀಯು ರಜೋ ನಿವೃತ್ತಿಯಾದ ಮೇಲೆ ಸ್ನಾನ ಮಾಡಿದರೆ ಶುಚಿಯು.

ನೃಣಾಮಕೃತಚೂಡಾನಾಂ ವಿಶುದ್ಧಿರ್ನೈಶಿಕೀ ಸ್ಮೃತಾ ।
ನಿರ್ವೃತ್ತಚೂಡಕಾನಾಂ ತು ತ್ರಿರಾತ್ರಾಚ್ಛುದ್ಧಿರಿಷ್ಯತೇ ॥ ೬೭

ಚೂಡಾಕರಣ ಆಗದ ಮಗು ಸತ್ತರೆ ಒಂದು ರಾತ್ರಿ ಆಶೌಚ, ಆದ ಮಗು ಸತ್ತರೆ ಮೂರು ದಿನ.

ಊನದ್ವಿವಾರ್ಷಿಕಂ ಪ್ರೇತಂ ನಿದಧ್ಯುರ್ಬಾಂಧವಾ ಬಹಿಃ ।
ಅಲಂಕೃತ್ಯ ಶುಚೌ ಭೂಮಾವಸ್ಥಿಸಂಚಯನಾದೃತೇ ॥ ೬೮

ಎರಡು ವರ್ಷ ತುಂಬದ ಮಗು ಸತ್ತರೆ ದಹನವಿಲ್ಲ. ಖನನಸಂಸ್ಕಾರ. ಶವವನ್ನು ಅಲಂಕರಿಸಿ ಊರ ಹೊರಗೆ ಒಳ್ಳೆ ನೆಲದಲ್ಲಿ ಆಳತೋಡಿ ಹೂಳು ವುದು. ದಹನವು ಬೇಡ. ಅಸ್ಥಿಸಂಚಯನಯ ಅವಶ್ಯವಿಲ್ಲ.

ನಾಸ್ಯ ಕಾರ್ಯೋಽಗ್ನಿಸಂಸ್ಕಾರೋ ನ ಚ ಕಾರ್ಯೋದಕಕ್ರಿಯಾ ।
ಅರಣ್ಯೇ ಕಾಷ್ಠವತ್ ತ್ಯಕ್ತ್ವಾ ಕ್ಷಪೇಯುಸ್ತ್ರ್ಯಹಮೇವ ಚ ॥ ೬೯

ಎರಡು ವರ್ಷವಾಗದ ಮಗುವಿಗೆ ಅಗ್ನಿಸಂಸ್ಕಾರವು ಬೇಡ. ಜಲ ತರ್ಪಣಬೇಡ. ಕಾಡಿನ ಕಟ್ಟಿಗೆಯಂತೆ ಪರಿಗಣಿಸಬಹುದು.

ನಾತ್ರಿವರ್ಷಸ್ಯ ಕರ್ತವ್ಯಾ ಬಾಂಧವೈರುದಕಕ್ರಿಯಾ ।
ಜಾತದಂತಸ್ಯ ವಾ ಕುರ್ಯುರ್ನಾಮ್ನಿ ವಾಪಿ ಕೃತೇ ಸತಿ ॥ ೭೦

ಮೂರುವರ್ಷವಾಗದ ಮಗುವಿಗೆ ಉದಕದಾನವನ್ನು ಮಾಡುವುದು ಬೇಡ, ಆದರೆ ಹಲ್ಲು ಹುಟ್ಟಿದ ಮೇಲೆ ಪ್ರೀತಿಯಿಂದ ಪಿಂಡದಾನ ಶ್ರಾದ್ಧ ಗಳನ್ನು ಮಾಡಬಹುದು. ಮಾಡದಿದ್ದರೆ ಪಾಪವಿಲ್ಲ.

ಸಬ್ರಹ್ಮಚಾರಿಣ್ಯೇಕಾಹಮತೀತೇ ಕ್ಷಪಣಂ ಸ್ಮೃತಂ ।
ಜನ್ಮನ್ಯೇಕೋದಕಾನಾಂ ತು ತ್ರಿರಾತ್ರಾಚ್ಛುದ್ಧಿರಿಷ್ಯತೇ ॥ ೭೧

ಒಂದೇ ಗುರುವಿನಿಂದ ಒಡನೆ ವೇದಾಧ್ಯಯನ ಮಾಡಿದ ಸಹೋದ್ಯೋಗಿಯೂ ಮೃತನಾದರೆ ಒಂದು ದಿನ ಅಶೌಚವು. ಏಕೋದಕರಲ್ಲಿ ಜನನವಾದಾಗಲೂ ತ್ರಿರಾತ್ರಾಶೌಚವು.

ಸ್ತ್ರೀಣಾಮಸಂಸ್ಕೃತಾನಾಂ ತು ತ್ರ್ಯಹಾಚ್ಛುಧ್ಯಂತಿ ಬಾಂಧವಾಃ ।
ಯಥೋಕ್ತೇನೈವ ಕಲ್ಪೇನ ಶುಧ್ಯಂತಿ ತು ಸನಾಭಯಃ ॥ ೭೨

ವಿವಾಹವಾಗದ ಹುಡುಗಿಯರು ಸತ್ತರೆ ತಂದೆಯ ಕುಲದವರಿಗೆ ತ್ರಿರಾತ್ರಾಶೌಚವು.

ಅಕ್ಷಾರಲವಣಾನ್ನಾಃ ಸ್ಯುರ್ನಿಮಜ್ಜೇಯುಶ್ಚ ತೇ ತ್ರ್ಯಹಂ ।
ಮಾಂಸಾಶನಂ ಚ ನಾಶ್ನೀಯುಃ ಶಯೀರಂಶ್ಚ ಪೃಥಕ್ ಕ್ಷಿತೌ ॥ ೭೩

ಮರಣದ ಅಶೌಚ ಇರುವಾಗ ಸಾತ್ವಿಕಾಹಾರ ಸೇವಿಸಬೇಕು. ಪುಣ್ಯ ಜಲದಲ್ಲಿ ಮುಳುಗಿ ಸ್ನಾನಮಾಡಬೇಕು. ಮಾಂಸ ಆಗದು. ಒಂಟಿಯಾಗಿ ಮಲಗಬೇಕು. ಮೆಣಸು, ಹುಳಿ, ಉಪ್ಪು ತಾಮಸ ಆಹಾರವಾಗದು.

ಸನ್ನಿಧಾವೇಷ ವೈ ಕಲ್ಪಃ ಶಾವಾಶೌಚಸ್ಯ ಕೀರ್ತಿತಃ ।
ಅಸನ್ನಿಧಾವಯಂ ಜ್ಞೇಯೋ ವಿಧಿಃ ಸಂಬಂಧಿಬಾಂಧವೈಃ ॥ ೭೪

ಮರಣಕಾಲದಲ್ಲಿ ಬಳಿಯಲ್ಲಿದ್ದವರಾದ ಸಪಿಂಡರ ಆಚಾರ, ವಿಚಾರವನ್ನು ಈಗ ಮಾಡಿರುವುದು. ದೂರದಲ್ಲಿದ್ದ ಸಪಿಂಡ ಸೋದಕರು ಮುಂದೆ ಹೇಳುವಂತೆ ನಡೆಯುವುದು.

ವಿಗತಂ ತು ವಿದೇಶಸ್ಥಂ ಶೃಣುಯಾದ್ಯೋ ಹ್ಯನಿರ್ದಶಂ ।
ಯಚ್ಛೇಷಂ ದಶರಾತ್ರಸ್ಯ ತಾವದೇವಾಶುಚಿರ್ಭವೇತ್ ॥ ೭೫

ಮೃತನ ಸಪಿಂಡರು ಸೋದಕರು ದೂರದಲ್ಲಿದ್ದು ಮರಣ ಸಮಾಚಾರವು ದಶರಾತ್ರದ ಮೊದಲು ತಿಳಿದರೆ ಉಳಿದ ದಿನ ಮಾತ್ರ ಅಶೌಚವು. ವಾರ್ತಾ ಶ್ರವಣ ದಿನದಿಂದ ದಶರಾತ್ರವಿಲ್ಲ.

ಅತಿಕ್ರಾಂತೇ ದಶಾಹೇ ಚ ತ್ರಿರಾತ್ರಮಶುಚಿರ್ಭವೇತ್ ।
ಸಂವತ್ಸರೇ ವ್ಯತೀತೇ ತು ಸ್ಪೃಷ್ಟ್ವೈವಾಪೋ ವಿಶುಧ್ಯತಿ ॥ ೭೬

ದಶಾಹದ ನಂತರ ಮರಣ ವಾರ್ತಾ ಕೇಳಿಬಂದರೆ ಮೂರು ದಿನ ಪುನರಾಶೌಚವು. ಒಂದು ವರ್ಷ ಕಳೆದು ಹೋದರೆ ಮಿಂದರೆ ಆಶೌಚ ನಿವೃತ್ತಿಯು.

ನಿರ್ದಶಂ ಜ್ಞಾತಿಮರಣಂ ಶ್ರುತ್ವಾ ಪುತ್ರಸ್ಯ ಜನ್ಮ ಚ ।
ಸವಾಸಾ ಜಲಮಾಪ್ಲುತ್ಯ ಶುದ್ಧೋ ಭವತಿ ಮಾನವಃ ॥ ೭೭

ಹತ್ತುದಿನ ಕಳೆದು ಕುಲದವರ ಮರಣವೃತ್ತಾಂತವನ್ನು ಕೇಳಿದರೆ, ಪುತ್ರಜನ್ಮವನ್ನು ಕೇಳಿದರೆ, ಉಟ್ಟ ಬಟ್ಟೆ ಸಹ ಸ್ನಾನಮಾಡಿದ ಬಳಿಕ ಮುಟ್ಟ ಬಾರದಿರುವ ಅಶೌಚ ನಿವೃತ್ತಿಯಾಗುವುದು. ಶ್ರೌತಸ್ಮಾರ್ತಕರ್ಮಾನಧಿಕಾರ ರೂಪ ಅಶೌಚ ಉಳಿಯುವುದು.

ಬಾಲೇ ದೇಶಾಂತರಸ್ಥೇ ಚ ಪೃಥಕ್ಪಿಂಡೇ ಚ ಸಂಸ್ಥಿತೇ ।
ಸವಾಸಾ ಜಲಮಾಪ್ಲುತ್ಯ ಸದ್ಯ ಏವ ವಿಶುಧ್ಯತಿ ॥ ೭೮

ಹಲ್ಲು ಹುಟ್ಟಿದ ಮಗು ಸೋದಕನು ದೇಶಾಂತರದಲ್ಲಿ ಮೃತನಾದರೆ ಸ್ನಾನದಿಂದ ಶುದ್ಧಿಯು. ದೀರ್ಘಾಶೌಚವಿಲ್ಲ.

ಅಂತರ್ದಶಾಹೇ ಸ್ಯಾತಾಂ ಚೇತ್ಪುನರ್ಮರಣಜನ್ಮನೀ ।
ತಾವತ್ಸ್ಯಾದಶುಚಿರ್ವಿಪ್ರೋ ಯಾವತ್ತತ್ಸ್ಯಾದನಿರ್ದಶಂ ॥ ೭೯

ಒಂದು ಜಾತಾಶೌಚ ಮೃತಾಶೌಚ ಮಧ್ಯದಲ್ಲಿ (ದಶಾಹದ ಮೊದಲು) ಮತ್ತೊಂದು ಜನನ-ಮರಣ ಸಂಭವಿಸಿದರೆ ಮೊದಲನೆ ಅಶೌಚದ ದಶರಾತ್ರ ದಲ್ಲಿ ಉತ್ತರಾಶೌಚದ ನಿವೃತ್ತಿಯಾಗುವುದು.

ತ್ರಿರಾತ್ರಮಾಹುರಾಶೌಚಮಾಚಾರ್ಯೇ ಸಂಸ್ಥಿತೇ ಸತಿ ।
ತಸ್ಯ ಪುತ್ರೇ ಚ ಪತ್ನ್ಯಾಂ ಚ ದಿವಾರಾತ್ರಮಿತಿ ಸ್ಥಿತಿಃ ॥ ೮೦

ತನ್ನ ಆಚಾರ್ಯನು ಮೃತನಾದರೆ ಶಿಷ್ಯನಿಗೆ ಮೂರುದಿನ ಅಶೌಚ, ಆಚಾರ್ಯನ ಹೆಂಡತಿ-ಮಕ್ಕಳು ಸತ್ತಾಗ ಒಂದು ಹಗಲು, ರಾತ್ರಿ ಮಾತ್ರ ಅಶೌಚ.

ಶ್ರೋತ್ರಿಯೇ ತೂಪಸಂಪನ್ನೇ ತ್ರಿರಾತ್ರಮಶುಚಿರ್ಭವೇತ್ ।
ಮಾತುಲೇ ಪಕ್ಷಿಣೀಂ ರಾತ್ರಿಂ ಶಿಷ್ಯರ್ತ್ವಿಗ್ಬಾಂಧವೇಷು ಚ ॥ ೮೧

ವೇದಸಂಹಿತಾಯನ ಮಾಡಿದವನು ಮೃತನಾದರೆ ಅವನ ಮನೆಯಲ್ಲಿ ಗೆಳೆತನದಿಂದ ವಾಸಿಸುವಾಗ ತ್ರಿರಾತ್ರಾಶೌಚವು. ತಾಯಿಯ ಅಣ್ಣ, ತಮ್ಮ, ಶಿಷ್ಯ, ಋತ್ವಿಕ್ ಬಾಂಧವರು ಮೃತರಾದರೆ ಒಂದು ರಾತ್ರಿ ಎರಡು ಹಗಲು ಅಶೌಚವು.

ಪ್ರೇತೇ ರಾಜನಿ ಸಜ್ಯೋತಿರ್ಯಸ್ಯ ಸ್ಯಾದ್ವಿಷಯೇ ಸ್ಥಿತಃ ।
ಅಶ್ರೋತ್ರಿಯೇ ತ್ವಹಃ ಕೃತ್ಸ್ನಮನೂಚಾನೇ ತಥಾ ಗುರೌ ॥ ೮೨

ಊರಿನ ಕ್ಷತ್ರಿಯ ರಾಜನು, ಗುರು, ಅಶ್ರೋತಿಯನು ಮೃತರಾದರೆ ಆ ಕಾಲದ ಹಗಲು ಅಥವಾ ರಾತ್ರಿ ಮಾತ್ರ ಅಶೌಚವು.

ಶುಧ್ಯೇದ್ವಿಪ್ರೋ ದಶಾಹೇನ ದ್ವಾದಶಾಹೇನ ಭೂಮಿಪಃ ।
ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುಧ್ಯತಿ ॥ ೮೩

ವಿಪ್ರನು ದಶಾಹದಲ್ಲಿ, ಕ್ಷತ್ರಿಯನು ಹನ್ನೆರಡು ದಿನದಲ್ಲಿ, ವೈಶ್ಯನು ಹದಿನೈದು ದಿನದಲ್ಲಿ, ಶೂದ್ರನು ಒಂದು ತಿಂಗಳಿನಲ್ಲಿ, ಅವರವರ ಸಪಿಂಡರ ಮರಣ-ಜನನಗಳಲ್ಲಿ ಅಶೌಚ ಉಳ್ಳವರು.

ನ ವರ್ಧಯೇದಘಾಹಾನಿ ಪ್ರತ್ಯೂಹೇನ್ನಾಗ್ನಿಷು ಕ್ರಿಯಾಃ ।
ನ ಚ ತತ್ಕರ್ಮ ಕುರ್ವಾಣಃ ಸನಾಭ್ಯೋಽಪ್ಯಶುಚಿರ್ಭವೇತ್ ॥ ೮೪

ಆಲಸ್ಯ, ರಾಗ, ಮತ್ಸರ ಮೊದಲಾದ ಕಾರಣಗಳಿಂದ ಅಶೌಚ ಕಾಲವನ್ನು ವಿಧಿಮೀರಿ ಹೆಚ್ಚಿಸಲೂ ಕಡಿಮೆ ಮಾಡಲೂ ಬಾರದು.

ದಿವಾಕೀರ್ತಿಮುದಕ್ಯಾಂ ಚ ಪತಿತಂ ಸೂತಿಕಾಂ ತಥಾ ।
ಶವಂ ತತ್ಸ್ಪೃಷ್ಟಿನಂ ಚೈವ ಸ್ಪೃಷ್ಟ್ವಾ ಸ್ನಾನೇನ ಶುಧ್ಯತಿ ॥ ೮೫

ಕ್ಷೌರಿಕ, ರಜಸ್ವಲೆ, ಪಾಪಿ, ಪ್ರಸೂತೆ, ಶವವನ್ನು ಮುಟ್ಟಿದವರು, ಇವರನ್ನು ಮುಟ್ಟಿದ ಮೇಲೆ ಸ್ನಾನ ಮಾಡಿದರೆ ಶುದ್ಧಿಯು.

ಆಚಮ್ಯ ಪ್ರಯತೋ ನಿತ್ಯಂ ಜಪೇದಶುಚಿದರ್ಶನೇ ।
ಸೌರಾನ್ ಮಂತ್ರಾನ್ ಯಥೋತ್ಸಾಹಂ ಪಾವಮಾನೀಶ್ಚ ಶಕ್ತಿತಃ ॥ ೮೬

ಅಶುಚಿ ವಸ್ತುವನ್ನು ಕಂಡೊಡನೆ ಆಚಮನ ಮಾಡಿ ಸೂರ್ಯ ದೇವತೆಯ ಮಂತ್ರಗಳನ್ನು ಪವಮಾನಗಳನ್ನು ಸಾಧ್ಯವಾದಷ್ಟು ಜಪಿಸಬೇಕು.

ನಾರಂ ಸ್ಪೃಷ್ಟ್ವಾಸ್ಥಿ ಸಸ್ನೇಹಂ ಸ್ನಾತ್ವಾ ವಿಪ್ರೋ ವಿಶುಧ್ಯತಿ ।
ಆಚಮ್ಯೈವ ತು ನಿಃಸ್ನೇಹಂ ಗಾಮಾಲಭ್ಯಾರ್ಕಮೀಕ್ಷ್ಯ ವಾ ॥ ೮೭

ಒಣಗಿರದೆ ನೆಸೆದಿರುವ ಮನುಷ್ಯನ ಎಲುಬನ್ನು ಮುಟ್ಟಿದರೆ ಸ್ನಾನ ಮಾಡಿ ಶುದ್ಧನಾಗುವನು. ಆ ಎಲುಬು ಒಣಗಿದ್ದರೆ ಕೂಡಲೆ ಗೋಸ್ಪರ್ಶ ಮಾಡಬೇಕು, ಇಲ್ಲವೆ ಸೂರ್ಯದರ್ಶನ ಮಾಡಬೇಕು.

ಆದಿಷ್ಟೀ ನೋದಕಂ ಕುರ್ಯಾದಾವ್ರತಸ್ಯ ಸಮಾಪನಾತ್ ।
ಸಮಾಪ್ತೇ ತೂದಕಂ ಕೃತ್ವಾ ತ್ರಿರಾತ್ರೇಣೈವ ಶುಧ್ಯತಿ ॥ ೮೮

ಬ್ರಹ್ಮಚರ್ಯವ್ರತವುಳ್ಳವನು ತಂದೆ-ತಾಯಿಯ ಹೊರತು ಇತರ ಮೃತ ಪಿತೃಗಳಿಗೆ ಜಲತರ್ಪಣ, ಪಿಂಡದಾನ, ಶ್ರಾದ್ಧಾದಿಗಳನ್ನು ಮಾಡ ಬಾರದು. ವ್ರತಸಮಾಪ್ತಿಯ ನಂತರ ತರ್ಪಣ ಮಾಡಿ ಮೂರು ದಿನ ಅಶೌಚ ಆಚರಿಸಬೇಕು.

ವೃಥಾಸಂಕರಜಾತಾನಾಂ ಪ್ರವ್ರಜ್ಯಾಸು ಚ ತಿಷ್ಠತಾಂ ।
ಆತ್ಮನಸ್ತ್ಯಾಗಿನಾಂ ಚೈವ ನಿವರ್ತೇತೋದಕಕ್ರಿಯಾ ॥ ೮೯

ಮಿಶ್ರಸಂತತಿಯವರಿಗೆ, ವಿಧಿಮೀರಿದ, ವಿರಾಗಿಗಳಿಗೆ, ಆತ್ಮಹತ್ಯೆ ಮಾಡಿ ದವರಿಗೆ ಜಲತರ್ಪಣ-ಪಿಂಡದಾನಾದಿಯನ್ನು ಮಾಡುವುದು ಬೇಡ.

ಪಾಷಂಡಮಾಶ್ರಿತಾನಾಂ ಚ ಚರಂತೀನಾಂ ಚ ಕಾಮತಃ ।
ಗರ್ಭಭರ್ತೃದ್ರುಹಾಂ ಚೈವ ಸುರಾಪೀನಾಂ ಚ ಯೋಷಿತಾಂ ॥ ೯೦

ವೇದ ನಿಂದೆ, ವೇದ ವಿರುದ್ಧ ವಕ್ರವೇಶವುಳ್ಳವರು, ಹಿರಿಯರನ್ನು ಮೀರಿ ವರ್ತಿಸುವವರು, ಗರ್ಭದ್ವೇಷ-ಗಂಡನ ದ್ವೇಷ ಉಳ್ಳವರು–ಮದ್ಯ

ಪಾಯಿಗಳು, ಆದ ಸ್ತ್ರೀಯಗಿಗೆ ಇತರರಂತೆ ಮರಣೋತ್ತರ ಕ್ರಿಯೆಗಳನ್ನು ಮಾಡಬಾರದು.

ಆಚಾರ್ಯಂ ಸ್ವಮುಪಾಧ್ಯಾಯಂ ಪಿತರಂ ಮಾತರಂ ಗುರುಂ ।
ನಿರ್ಹೃತ್ಯ ತು ವ್ರತೀ ಪ್ರೇತಾನ್ನ ವ್ರತೇನ ವಿಯುಜ್ಯತೇ ॥ ೯೧

ಉಪನಯನಮಾಡಿ ವೇದಾಧ್ಯಾಪಕನು, ವೇದಭಾಗವನ್ನೋ-ವೇದಾಂಗವನ್ನೋ ಕಲಿಸಿದವನು, ಹೆತ್ತ ತಂದೆ-ತಾಯಿ, ವೇದದ ಅರ್ಥ ಪ್ರವಚನಕರ್ತ—ಇವರನ್ನು ಬ್ರಹ್ಮಚಾರಿಯು ಶವಸಂಸ್ಕಾರ ಉತ್ತರ ಸಂಸ್ಕಾರಗಳಿಂದ ಸಂಸ್ಕರಿಸಿದರೆ ವ್ರತಲೋಪವನ್ನು ಹೊಂದುವುದಿಲ್ಲ.

ದಕ್ಷಿಣೇನ ಮೃತಂ ಶೂದ್ರಂ ಪುರದ್ವಾರೇಣ ನಿರ್ಹರೇತ್ ।
ಪಶ್ಚಿಮೋತ್ತರಪೂರ್ವೈಸ್ತು ಯಥಾಯೋಗಂ ದ್ವಿಜನ್ಮನಃ ॥ ೯೨

ಪೂರ್ವಕಾಲದ ಪಟ್ಟಣಗಳು ಮಹಾಪ್ರಾಕಾರ—ಆವರಣವುಳ್ಳವುಗಳು. ನಾಲ್ಕು ದಿಕ್ಕಿಗೆ ನಾಲ್ಕು ಮಹಾದ್ವಾರಗಳು. ಅಂತಹ ನಗರನಿವಾಸದ ವ್ಯವಸ್ಥೆ ಇರುವಲ್ಲಿ ಹೊರಗಿನ ಸ್ಮಶಾನಕ್ಕೆ ಶವವನ್ನು ಕೊಂಡೊಯ್ಯುವಾಗ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನು ಪೂರ್ವ, ಉತ್ತರ, ಪಶ್ಚಿಮ, ದಕ್ಷಿಣದ್ವಾರಗಳನ್ನು ಕ್ರಮವಾಗಿ ಆಶ್ರಯಿಸಬಹುದು. ಈ ವ್ಯವಸ್ಥೆಯಿಂದ ಮಾರ್ಗ ನೋಡಿಯೇ ಶವವನ್ನು ಗುರುತಿಸಬಹುದು. ಇಂತಹ ರೀತಿಯು ಸರ್ವತ್ರ ಇದೆ. ಕಾಲುಂಗುರ, ಉದ್ದ ಬೊಟ್ಟು, ಬೈತಲೆ, ಅಂಗಾರ, ಭಸ್ಮ— ಇತ್ಯಾದಿಗಳಿಂದ ಒಂದೊಂದು ವಿಷಯದ ಸೂಚನೆಯನ್ನು ಕೊಡುವುದಕ್ಕಾಗಿ ಮಾಡುವುದುಂಟು. ರಾಷ್ಟ್ರದ ಎಲ್ಲ ಮಟ್ಟದ ಅಧಿಕಾರಿಗಳಿಗೆ ಮರಣಪೂರ್ವದಲ್ಲಿ ಮತ್ತು ಮರಣೋತ್ತರ ವಿವಿಧ ಚಿಹ್ನ, ತುಪಾಕಿನ ಗುಂಡಿನ ಸಂಖ್ಯೆ, ಸೈನಿಕ ಸಂಖ್ಯೆ ಇವುಗಳಿಂದ ವರ್ಗಭೇದ, ಗೌರವ, ತಾರತಮ್ಯ, ಕಲ್ಪನೆಯು ಎಂದೂ ಇಲ್ಲದಿರುವುದಿಲ್ಲ. ಒಮ್ಮೆ ಒಂದು ಬದಲಾಯಿಸಿರಬಹುದು. ಕಲ್ಪನೆಯು ಎಂದೂ ಇಲ್ಲದಾಗುವುದಿಲ್ಲ. ಜೀವನಾವಶ್ಯಕ ಸಾಮಗ್ರಿ ವ್ಯವಸ್ಥೆಗಳಲ್ಲಿ ಸಮಾನತೆಯಲ್ಲದೆ ಅನ್ಯತ್ರ ಅಸಮಾನತೆಯು ನಿಂದೆಗಾಗಿ ವಿರಚಿತವಾಗುವುದಿಲ್ಲ.

ನ ರಾಜ್ಞಾಮಘದೋಷೋಽಸ್ತಿ ವ್ರತಿನಾಂ ನ ಚ ಸತ್ರಿಣಾಂ ।
ಐಂದ್ರಂ ಸ್ಥಾನಮುಪಾಸೀನಾ ಬ್ರಹ್ಮಭೂತಾ ಹಿ ತೇ ಸದಾ ॥ ೯೩

ಕೆಲವರಿಗೆ ಕೆಲವು ಶಬ್ದಗಳ ಮೇಲೆ ದ್ವೇಷವಿದೆ. ಅದರಂತೆ ರಾಜಪದ ದ್ವೇಷಿಗಳಿಗೂ ರಾಷ್ಟ್ರಶಾಸನದಲ್ಲಿ ಪರಮೋಚ್ಚಾಧಿಕಾರಿಯೊಬ್ಬನಿಲ್ಲದುದು ಎಂದು ? ಎಂದು ನಾನು ಅಂತಹ ಮಹಾತ್ಮರಿಗೆ ವಿನಮ್ರ ಪ್ರಶ್ನೆಯನ್ನು ಕೇಳುತ್ತೇನೆ. ಇತರರ ನೌಕರರನ್ನು ಹಣ (ವೇತನ), ರೀತಿ, ನೀತಿಗಳ ಬಗ್ಗೆ ವರ್ಗೀಕರಿಸದಿರಲಾಗುವುದಿಲ್ಲ. ಆದುದರಿಂದ ರಾಜನಿಗೆ ಉಪನಯನ ಚಾಂದ್ರಾಯಣಾದಿ ವ್ರತಿಗಳಿಗೆ, ಯಾಗದೀಕ್ಷಿತರಿಗೆ, ಅವರವರ ಕರ್ಮದ ಮಟ್ಟಿಗೆ ಅಶೌಚವಿಲ್ಲ. ನೂತನ ಕರ್ಮಕ್ಕೆ ಆಶೌಚದೋಷವಿದೆ. ಅವರೆಲ್ಲ ಗುರುತರವಾದ ಕರ್ಮನಿರತರು. ಆದರ ಪ್ರಾಬಲ್ಯಕ್ಕೆ ಆಶೌಚವು ದುರ್ಬಲ.

ರಾಜ್ಞೋ ಮಾಹಾತ್ಮಿಕೇ ಸ್ಥಾನೇ ಸದ್ಯಃಶೌಚಂ ವಿಧೀಯತೇ ।
ಪ್ರಜಾನಾಂ ಪರಿರಕ್ಷಾರ್ಥಮಾಸನಂ ಚಾತ್ರ ಕಾರಣಂ ॥ ೯೪

ಅಧಿಕಾರ ಸ್ಥಾನವು ಮಹತ್ವಪೂರ್ಣವಾದುದು. ಆದುದರಿಂದ ಸದ್ಯಃ ಶೌಚವೆಂದು ಹೇಳಿರುವುದು. ಆಶೌಚನಿಮತ್ತವುಂಟಾದೊಡನೆ ಸ್ನಾನದಿಂದ ಶುದ್ಧಿಯೇ ಸದ್ಯಃಶೌಚವು. ಕರ್ತವ್ಯ ನಿರ್ವಹಣೆಯಲ್ಲಿ ಲೋಪನಿವಾರಣೆಯೇ ಈ ಸದ್ಯಃಶೌಚದ ಗುರಿಯು. ಇದು ಜಾತಿಯನ್ನು ಸಂಬಂಧಿಸುವುದಿಲ್ಲ. ಈ ವಿಷಯುಮೀಮಾಂಸಾಶಾಸ್ತ್ರ ಪ್ರಸಿದ್ಧವು.

ಡಿಂಭಾಹವಹತಾನಾಂ ಚ ವಿದ್ಯುತಾ ಪಾರ್ಥಿವೇನ ಚ ।
ಗೋಬ್ರಾಹ್ಮಣಸ್ಯ ಚೈವಾರ್ಥೇ ಯಸ್ಯ ಚೇಚ್ಛತಿ ಪಾರ್ಥಿವಃ ॥ ೯೫

ದಂಗೆ, ಡೊಂಬಿ, ವರ್ಗಕಲಹ, ಹತ್ಯಾಕಾಂಡ ಎಂದು ಈಗ ಕರೆಯಲಾಗುವ ಕಲಹವು ಡಿಂಭಾಹವ. ಯುದ್ಧವೆಂಬ ಹೆಸರಿನ ವಿಚಾರಪೂರ್ಣ ಸುವ್ಯವಸ್ಥೆಯು ನಿಯತ ಜನರಿಂದ ನಡೆಯುವ ದಮನವಲ್ಲ. ಹಾಗೆ ಸತ್ತ, ಸಿಡಿಲು ಬಡಿದ, ಈಗಿನ ವಿದ್ಯುತ್ ಅಲ್ಲ. ದಂಡಾಧಿಕಾರಿಯ ವಧದಂಡನೆಯಲ್ಲಿ ಸತ್ತ, ಗೋರಕ್ಷಣೆ–ಬ್ರಾಹ್ಮಣ ರಕ್ಷಣೆಗಳಲ್ಲಿ ನಿರತನಾಗಿ ಅಪಘಾತ ಮೃತನಾದರೆ ಇತರ ಸಂಬಂಧಿಗಳಿಗೆ ಸದ್ಯಃಶೌಚವು.

ಸೋಮಾಗ್ನ್ಯರ್ಕಾನಿಲೇಂದ್ರಾಣಾಂ ವಿತ್ತಾಪ್ಪತ್ಯೋರ್ಯಮಸ್ಯ ಚ ।
ಅಷ್ಟಾನಾಂ ಲೋಕಪಾಲಾನಾಂ ವಪುರ್ಧಾರಯತೇ ನೃಪಃ ॥ ೯೬

ಇಂದ್ರ, ಅಗ್ನಿ, ಯಮ, ರವಿ, ವರುಣ, ವಾಯು, ಕುಬೇರ, ಶಿವ ಎಂದು ಎಂಟು ಲೋಕಪಾಲರು. ಅವರ ಅಂಶಜಾತನು ರಾಷ್ಟ್ರದ ಉಚ್ಚಾಧಿಕಾರಿ ರಾಜನು—ಎಂದು ಪೂಜ್ಯ ಬುದ್ಧಿಯು. ದೇವರು ಒಬ್ಬನೆ ಆದರೂ ಜನರ ಅಭಿರುಚಿ ಆದರ ಪೂರಣೆಗಳಿಗೆ ಒಂದೊಂದು ಕಲ್ಪಿತರೂಪದ ದೇವತಾಭಾವವು ಪ್ರಾಪಂಚಿಕ—ಸಾಮಾನ್ಯ ಬುದ್ಧಿಯು. ತತ್ತ್ವದಗೊಡವೆ ಬಿಟ್ಟು ಪ್ರತ್ಯಕ್ಷ ವ್ಯವಹಾರದಲ್ಲಿ ರಾಜನು ನರಪತಿ–ಜನಮನಃ ಕೇಂದ್ರವು. ಅವನಿಂದ ಲೋಕವ್ಯವಸ್ಥೆಯು. ಅವನು ದೇವಸೃಷ್ಟನು.

ಲೋಕೇಶಾಧಿಷ್ಠಿತೋ ರಾಜಾ ನಾಸ್ಯಾಶೌಚಂ ವಿಧೀಯತೇ ।
ಶೌಚಾಶೌಚಂ ಹಿ ಮರ್ತ್ಯಾನಾಂ ಲೋಕೇಶಪ್ರಭವಾಪ್ಯಯಂ ॥ ೯೭

ಮನುಷ್ಯರಿಗೆ ಶೌಚ ಅಶೌಚಗಳು ದಿಕ್ಪಾಲಕರಿಂದ ಉಂಟಾಗುವುದು. ಆದುದರಿಂದ ದಿಕ್ಪಾಲರೂಪನಾದ ರಾಜನಿಗೆ ಅಶೌಚವು ಇಚ್ಛಾವಶವಾಗಿದೆ.

ಉದ್ಯತೈರಾಹವೇ ಶಸ್ತ್ರೈಃ ಕ್ಷತ್ರಧರ್ಮಹತಸ್ಯ ಚ ।
ಸದ್ಯಃ ಸಂತಿಷ್ಠತೇ ಯಜ್ಞಸ್ತಥಾಶೌಚಮಿತಿ ಸ್ಥಿತಿಃ ॥ ೯೮

ಯುದ್ಧದಲ್ಲಿ ಶಸ್ತ್ರಹತನಾದರೆ ಸಕಲಯಜ್ಞಗಳೂ ಪೂರ್ಣವಾದಷ್ಟು ಫಲ ಉತ್ಪನ್ನವಾಗುವುದು. ಅಶೌಚವೂ ಅದರಂತೆ ಸಮಾಪ್ತವಾಗುವುದು.

ವಿಪ್ರಃ ಶುಧ್ಯತ್ಯಪಃ ಸ್ಪೃಷ್ಟ್ವಾ ಕ್ಷತ್ರಿಯೋ ವಾಹನಾಯುಧಂ ।
ವೈಶ್ಯಃ ಪ್ರತೋದಂ ರಶ್ಮೀನ್ವಾ ಯಷ್ಟಿಂ ಶೂದ್ರಃ ಕೃತಕ್ರಿಯಃ ॥ ೯೯

ಚತುರ್ವರ್ಣದವರು ಅವರವರ ವಿಧಿಯಂತೆ ಮೃತನ ಉತ್ತರಕ್ರಿಯೆಯನ್ನು ಮಾಡಿದ ಮೇಲೆ ಅವರು ಕ್ರಮವಾಗಿ ನೀರನ್ನು, ರಥಶಸ್ತ್ರಗಳನ್ನು, ದನ ಹೊಡೆಯುವ ಕೋಲನ್ನು, ಬಿದಿರಿನ ದೊಣ್ಣೆಯನ್ನು ಮುಟ್ಟಿದರೆ ಶುದ್ಧಿಯುಂಟಾಗುವುದು. ಮಿಂಯುವುದು ಕೂಡದು.

ಏತದ್ವೋಽಭಿಹಿತಂ ಶೌಚಂ ಸಪಿಂಡೇಷು ದ್ವಿಜೋತ್ತಮಾಃ ।
ಅಸಂಪಿಡೇಷು ಸರ್ವೇಷು ಪ್ರೇತಶುದ್ಧಿಂ ನಿಬೋಧತ ॥ ೧೦೦

ಇಲ್ಲಿಯವರೆಗೆ ಸಪಿಂಡರು ಶುದ್ಧರಾಗುವ ಬಗೆಯನ್ನು ವಿವರಿಸಿದ್ದಾಯಿತು. ಇನ್ನು ಮೇಲೆ ಸೋದಕರು ಶುದ್ಧರಾಗಲಿರುವ ವಿಧಿಯನ್ನು ಕೇಳಿರಿ.

ಅಸಪಿಂಡಂ ದ್ವಿಜಂ ಪ್ರೇತಂ ವಿಪ್ರೋ ನಿರ್ಹೃತ್ಯ ಬಂಧುವತ್ ।
ವಿಶುಧ್ಯತಿ ತ್ರಿರಾತ್ರೇಣ ಮಾತುರಾಪ್ತಾಂಶ್ಚ ಬಾಂಧವಾನ್ ॥ ೧೦೧

ಸೋದಕರು ಮೃತನನ್ನು ಪ್ರೀತಿಪೂರ್ವಕವಾಗಿ ನೆಂಟನಂತೆ ಔರ್ಧ್ವ ದೇಹಿಕ ಕ್ರಿಯೆಗಳಿಂದ ಸಂಸ್ಕರಿಸಬಹುದು. ಪುಣ್ಯವಿಲ್ಲ, ಕರ್ತವ್ಯ ಮಾತ್ರ. ಆಗ ತ್ರಿರಾತ್ರಾಶೌಚ. ತಾಯಿಯ ನಿಕಟ ಬಂಧುಗಳನ್ನು ಇದೇ ರೀತಿ ಸಂಸ್ಕರಿಸಬಹುದು.

ಯದ್ಯನ್ನಮತ್ತಿ ತೇಷಾಂ ತು ದಶಾಹೇನೈವ ಶುಧ್ಯತಿ ।
ಅನದನ್ನನ್ನಮಹ್ನೈವ ನ ಚೇತ್ತಸ್ಮಿನ್ ಗೃಹೇ ವಸೇತ್ ॥ ೧೦೨

ಮೃತಗೃಹದ ಅನ್ನ ಭೋಜನ ಮಾಡಿದರೆ ದಶಾಹಾಶೌಚವು. ಆಶೌಚಾನ್ನ ಸ್ವೀಕರಿಸದೆ ಗೃಹವಾಸ ಮಾಡದೆ ಶವಸಂಸ್ಕಾರ ಮಾಡಿದರೆ ಕೂಡಲೇ ಅಶೌಚ ನಿವೃತ್ತಿಯು.

ಅನುಗಮ್ಯೇಚ್ಛಯಾ ಪ್ರೇತಂ ಜ್ಞಾತಿಮಜ್ಞಾತಿಮೇವ ಚ ।
ಸ್ನಾತ್ವಾ ಸಚೈಲಃ ಸ್ಪೃಷ್ಟ್ವಾಗ್ನಿಂ ಘೃತಂ ಪ್ರಾಶ್ಯ ವಿಶುಧ್ಯತಿ ॥ ೧೦೩

ಪ್ರೀತಿಯಿಂದ ಪ್ರೇತಪ್ರಯಾಣದಲ್ಲಿ ಸಹಪ್ರಯಾಣ ಮಾಡಿದರೆ ಉಟ್ಟ ಬಟ್ಟೆ ಸಹಿತ ಮಿಂದು ಅಗ್ನಿಸ್ಪರ್ಶ ಮಾಡಿ ತುಪ್ಪತಿನ್ನಬೇಕು. ಆಗ ಶುದ್ಧಿಯು. ಮೃತನು ತನ್ನ ಸಪಿಂಡನಾಗಲಿ, ಬೇರೆಯವನಾಗಲಿ ಇದೇ ನಿಯಮವು.

ನ ವಿಪ್ರಂ ಸ್ವೇಷು ತಿಷ್ಠತ್ಸು ಮೃತಂ ಶೂದ್ರೇಣ ನಾಯಯೇತ್ ।
ಅಸ್ವರ್ಗ್ಯಾ ಹ್ಯಾಹುತಿಃ ಸಾ ಸ್ಯಾಚ್ಛೂದ್ರಸಂಸ್ಪರ್ಶದೂಷಿತಾ ॥ ೧೦೪

ಮೃತನ ಸಮಾನರೇ ಶವಸಂಸ್ಕಾರ ಮಾಡಬೇಕು. ಬೇರೆಯವರು ಮಾಡಿದರೆ ನಿಷ್ಫಲ.

ಜ್ಞಾನಂ ತಪೋಽಗ್ನಿರಾಹಾರೋ ಮೃನ್ಮನೋ ವಾರ್ಯುಪಾಂಜನಂ ।
ವಾಯುಃ ಕರ್ಮಾರ್ಕಕಾಲೌ ಚ ಶುದ್ಧೇಃ ಕರ್ತೄಣಿ ದೇಹಿನಾಂ ॥ ೧೦೫

ಜ್ಞಾನ, ತಪಸ್, ಆಹಾರ, ಮಣ್ಣು, ಮನಸ್ಸು, ಅಗ್ನಿ, ನೀರು ಸವರುವುದು, ವಾಯು, ಕರ್ಮ, ಸೂರ್ಯ, ಕಾಲ ಈ ವಸ್ತುಗಳು ಬೇರೆ ಬೇರೆ ಸಂದರ್ಭದಲ್ಲಿ ಶುದ್ಧಿಕಾರಕಗಳು. ಜ್ಞಾನವು ಮನಸ್ಸಿಗೆ, ತಪಸ್ಸು ದೇಹ–ಮನಸ್ಸುಗಳಿಗೆ, ಉಚಿತಾಹಾರವು ಕರುಗಳಿಗೆ, ಲೋಹಪಾತ್ರೆಗಳಿಗೆ ಮಣ್ಣು, ನೀರು ಮಣ್ಣಿನ ಪಾತ್ರೆಗೆ, ಬೆಂಕಿ ಗೋಡೆ–ನೆಲಗಳಿಗೆ ಸುಣ್ಣ ಸಗಣಿ ಬಳಿಯುವುದು, ದಾರಿ ಆಕಾಶಗಳಿಗೆ ವಾಯು, ಪುಣ್ಯಲೋಕಗಳಿಗೆ ಯಜ್ಞವು ಅಶುಚಿದರ್ಶನಕ್ಕೆ ಸೂರ್ಯನು, ಶುದ್ಧೀಕರಗಳು.

ಸರ್ವೇಷಾಮೇವ ಶೌಚಾನಾಮರ್ಥಶೌಚಂ ಪರಂ ಸ್ಮೃತಂ ।
ಯೋಽರ್ಥೇ ಶುಚಿರ್ಹಿ ಸ ಶುಚಿರ್ನ ಮೃದ್ವಾರಿಶುಚಿಃ ಶುಚಿಃ ॥ ೧೦೬

ಶುದ್ಧಿಗಳಲ್ಲಿ ಹಣದ ಶುದ್ಧಿಯು ಮುಖ್ಯವು. ಸಾಬೂನು, ಸುಗಂಧ, ನೀರು, ಮಣ್ಣುಗಳಿಂದ ಮೈ-ಮಂಡೆ ಬಟ್ಟೆ-ಬರೆ ಶುಚಿಯಾದರೆ ಅವನು ಶುದ್ಧನಲ್ಲ. ಪರಪೀಡೆಯಿಲ್ಲದೆ ನ್ಯಾಯವಾಗಿ ಧನಾರ್ಜನೆ ಮಾಡುವುದು ಜೀವನದ ಶುಚಿಯತ್ರಿ. ಬಹುಜನರು ಧನಶುಚಿಯನ್ನು ಸುಲಭವಾಗಿ ಕಳೆದುಕೊಂಡು ಇತರ ಜನರ ಸಂಬಂಧಕ್ಕೆ ಅಸಹ್ಯರಾಗುತ್ತಾರೆ. ಇದು ಈ ಕಾಲದ ಸಾಮಾನ್ಯ ಪ್ರತ್ಯುದಾಹರಣೆ.

ಕ್ಷಾಂತ್ಯಾ ಶುಧ್ಯಂತಿ ವಿದ್ವಾಂಸೋ ದಾನೇನಾಕಾರ್ಯಕಾರಿಣಃ ।
ಪ್ರಚ್ಛನ್ನಪಾಪಾ ಜಪ್ಯೇನ ತಪಸಾ ದೇವವಿತ್ತಮಾಃ ॥ ೧೦೭

ವಿದ್ವಾಂಸರು ತಾಳ್ಮೆಯಿಂದ, ಅಕಾರ್ಯ ಮಾಡಿದವರು ದಾನದಿಂದ, ಗುಟ್ಟಾಗಿ ಪಾಪಮಾಡಿದವರು ಜಪದಿಂದ, ದೇವಜ್ಞರು ಚಾಂದ್ರಾಯಣಾದಿ ತಪಸ್ಸುಗಳಿಂದ ಶುದ್ಧರಾಗುತ್ತಾರೆ.

ಮೃತ್ತೋಯೈಃ ಶುಧ್ಯತೇ ಶೋಧ್ಯಂ ನದೀ ವೇಗೇನ ಶುಧ್ಯತಿ ।
ರಜಸಾ ಸ್ತ್ರೀ ಮನೋದುಷ್ಟಾ ಸನ್ಯಾಸೇನ ದ್ವಿಜೋತ್ತಮಃ ॥ ೧೦೮

ಬಟ್ಟೆ ಪಾತ್ರೆಗಳು ನೀರು ಮಣ್ಣುಗಳಿಂದ ತೊಳೆದು, ನದಿಯು ನೀರಿನ ಓಟದಿಂದ, ಮಾನಸ ವ್ಯಭಿಚಾರವು ರಜಸ್ಸಿನಿಂದ, ದ್ವಿಜೋತ್ತಮನು ಸನ್ಯಾಸದಿಂದ, ಶುದ್ಧರಾಗುವರು.

ಅದ್ಭಿರ್ಗಾತ್ರಾಣಿ ಶುಧ್ಯಂತಿ ಮನಃ ಸತ್ಯೇನ ಶುಧ್ಯತಿ ।
ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುಧ್ಯತಿ ॥ ೧೦೯

ದೇಹವು ನೀರಿನಿಂದ, ಮನಸ್ಸು ಸತ್ಯದಿಂದ, ಜೀವಾತ್ಮನು ಆತ್ಮಜ್ಞಾನ ತಪಸ್ಸುಗಳಿಂದ, ವಿರುದ್ಧಜ್ಞಾನವು ಯಥಾರ್ಥ ಜ್ಞಾನದಿಂದ, ಶುದ್ಧವಾಗುವುದು.

ಏಷ ಶೌಚಸ್ಯ ವಃ ಪ್ರೋಕ್ತಃ ಶಾರೀರಸ್ಯ ವಿನಿರ್ಣಯಃ ।
ನಾನಾವಿಧಾನಾಂ ದ್ರವ್ಯಾಣಾಂ ಶುದ್ಧೇಃ ಶೃಣಾತ ನಿರ್ಣಯಂ ॥ ೧೧೦

ದೇಹ ಆದರೊಳಗಿನ ಮನಸ್ಸು–ಆತ್ಮಗಳ ಶುದ್ಧಿಪ್ರಕಾರವು ಜ್ಞಾತವಾಯಿತು. ಇತರ ನಾನಾ ದ್ರವ್ಯಗಳ ಶುದ್ಧಿಯು ಹೇಳಲ್ಪಡುವುದು.

ತೈಜಸಾನಾಂ ಮಣೀನಾಂ ಚ ಸರ್ವಸ್ಯಾಶ್ಮಮಯಸ್ಯ ಚ ।
ಭಸ್ಮನಾದ್ಭಿರ್ಮೃದಾ ಚೈವ ಶುದ್ಧಿರುಕ್ತಾ ಮನೀಷಿಭಿಃ ॥ ೧೧೧

ಲೋಹಗಳು, ಮಣಿಗಳು, ಕಲ್ಲಿನವುಗಳು–ಬೂದಿ, ನೀರು, ಮಣ್ಣುಗಳಿಂದ ಉಜ್ಜಿ ತೊಳೆದರೆ ಶುದ್ಧವಾಗುವುವು.

ನಿರ್ಲೇಪಂ ಕಾಂಚನಂ ಭಾಂಡಮದ್ಭಿರೇವ ವಿಶುಧ್ಯತಿ ।
ಅಬ್ಜಮಶ್ಮಮಯಂ ಚೈವ ರಾಜತಂ ಚಾನುಪಸ್ಕೃತಂ ॥ ೧೧೨

ಕೊಳೆ ಮೆತ್ತದ ಚಿನ್ನ, ಶಂಖ, ಕವಡೆ, ಕಲ್ಲಿನದು, ಬೆಳ್ಳಿಯದು ಎಲ್ಲ ರೇಖೆ ಎಳೆದು ಕೊಳೆ ನಿಲ್ಲುವಂತೆ ಮಾಡದಿದ್ದರೆ ಬರಿ ನೀರಿನಿಂದ ಶುದ್ಧವಾಗುವುವು.

ಅಪಾಮಗ್ನೇಶ್ಚ ಸಂಯೋಗಾದ್ಧೈಮಂ ರೌಪ್ಯಂ ಚ ನಿರ್ಬಭೌ ।
ತಸ್ಮಾತ್ತಯೋಃ ಸ್ವಯೋನ್ಯೈವ ನಿರ್ಣೇಕೋ ಗುಣವತ್ತರಃ ॥ ೧೧೩

ಚಿನ್ನ-ಬೆಳ್ಳಿಯು ನೀರು-ಬೆಂಕಿಯಿಂದ ಜನಿಸಿದೆ. ಆದುದರಿಂದ ಅವುಗಳ ಮೂಲದ್ರವ್ಯದಿಂದ ಶುದ್ಧಿಯು ಉತ್ತಮ.

ತಾಮ್ರಾಯಃಕಾಂಸ್ಯರೈತ್ಯಾನಾಂ ತ್ರಪುಣಃ ಸೀಸಕಸ್ಯ ಚ ।
ಶೌಚಂ ಯಥಾರ್ಹಂ ಕರ್ತವ್ಯಂ ಕ್ಷಾರಾಮ್ಲೋದಕವಾರಿಭಿಃ ॥ ೧೧೪

ತಾಮ್ರ, ಕಬ್ಬಿಣ, ಕಂಚು, ಹಿತ್ತಾಳಿ, ಸೀಸ, ತವರಗಳ ಪಾತ್ರೆ ಮುಂತಾದುದು ಬೂದಿ, ಹುಳಿ, ನೀರುಗಳಿಂದ ಶೋಧ್ಯವಾಗಿದೆ.

ದ್ರವಾಣಾಂ ಚೈವ ಸರ್ವೇಷಾಂ ಶುದ್ಧಿರುತ್ಪವನಂ ಸ್ಮೃತಂ ।
ಪ್ರೋಕ್ಷಣಂ ಸಂಹತಾನಾಂ ಚ ದಾರವಾಣಾಂ ಚ ತಕ್ಷಣಂ ॥ ೧೧೫

ತುಪ್ಪ, ಎಣ್ಣೆ, ನೀರು ಶುದ್ಧವಾಗಲು ಸೋಸುವುದು, ಆರಿಸುವುದು, ಬಟ್ಟೆ-ದರ್ಭೆ ಸರಿಗೆ ಜಾಲರಿಗಳಿಂದ, ಹಾಸುಗೆಗೆ ಪ್ರೋಕ್ಷಣ, ಮರದ ಸಾಮಾನನ್ನು ಗೀಸುಳಿ ಹೊಯ್ಗ ಕಾಗದಗಳಿಂದ ಕಿತ್ತಿತೆಗೆದು ಶೋಧಿಸಬಹುದು.

ಮಾರ್ಜನಂ ಯಜ್ಞಪಾತ್ರಾಣಾಂ ಪಾಣಿನಾ ಯಜ್ಞಕರ್ಮಣಿ ।
ಚಮಸಾನಾಂ ಗ್ರಹಾಣಾಂ ಚ ಶುದ್ಧಿಃ ಪ್ರಕ್ಷಾಲನೇನ ತು ॥ ೧೧೬

ಯಜ್ಞಪಾತ್ರಗಳಾದ ಚಮಸ, ಗ್ರಹಗಳನ್ನು ನೀರಿನಿಂದ ತೊಳೆದು ದರ್ಭೆಯಿಂದ ಮಾರ್ಜನ ಮಾಡಿದರೆ ಶುದ್ಧಿಯಾಗುವುದು.

ಚರೂಣಾಂ ಸ್ರುಕ್ ಸ್ರುವಾಣಾಂ ಚ ಶುದ್ಧಿರುಷ್ಣೇನ ವಾರಿಣಾ ।
ಸ್ಫ್ಯಶೂರ್ಪಶಕಟಾನಾಂ ಚ ಮುಸಲೋಲೂಖಲಸ್ಯ ಚ ॥ ೧೧೭

ಸ್ರುಕ್, ಸ್ರುವ, ಸ್ಫ್ಯ, ಶೂರ್ಪ, ಶಕಟ, ಒನಕೆ, ಒರಳು ಇವುಗಳನ್ನು ಬಿಸಿನೀರಿನಿಂದ ತೊಳೆದು ಶುಚಿಗೊಳಿಸುವುದು.

ಅದ್ಭಿಸ್ತು ಪ್ರೋಕ್ಷಣಂ ಶೌಚಂ ಬಹೂನಾಂ ಧಾನ್ಯವಾಸಸಾಂ ।
ಪ್ರಕ್ಷಾಲನೇನ ತ್ವಲ್ಪಾನಾಮದ್ಭಿಃ ಶೌಚಂ ವಿಧೀಯತೇ ॥ ೧೧೮

ತುಂಬ ಕಾಳು, (ಧಾನ್ಯರಾಶಿ) ಬಟ್ಟೆ ಇವುಗಳನ್ನು ಪ್ರೋಕ್ಷಿಸಿದರೆ ಶುದ್ಧಿಯು. ಕಾಳು ( ಧಾನ್ಯ ) ಬಟ್ಟೆ ಕಡಿಮೆಯಿದ್ದರೆ ಕೊಳೆಯುವುದು.

ಚೇಲವಚ್ಚರ್ಮಣಾಂ ಶುದ್ಧಿರ್ವೈದಲಾನಾಂ ತಥೈವ ಚ ।
ಶಾಕಮೂಲಫಲಾನಾಂ ಚ ಧಾನ್ಯವಚ್ಛುದ್ಧಿರಿಷ್ಯತೇ ॥ ೧೧೯

ಚರ್ಮ, ಸಿಗುಳು ಹೆಣೆದು ಮಾಡಿದ ಎಲ್ಲ ಪಾತ್ರೆ ಇವುಗಳನ್ನು ಬಟ್ಟೆಯಂತೆ ಶುಚಿಗೊಳಿಸುವುದು. ತರಕಾರಿ, ಗೆಣಸು, ಹಣ್ಣುಗಳನ್ನು ಧಾನ್ಯದಂತೆ ಶುಚಿಗೊಳಿಸುವುದು. ಬಟ್ಟೆ ಮತ್ತು ಧಾನ್ಯಗಳ ಶುದ್ಧಿವಿಧಾನವು ಹಿಂದೆ ಇದೆ.

**ಕೌಶೇಯಾವಿಕಯೋರೂಷೈಃ ಕುತಪಾನಾಮರಿಷ್ಟಕೈಃ ।**
**ಶ್ರೀಫಲೈರಂಶುಪಟ್ಟಾನಾಂ ಕ್ಷೌಮಾಣಾಂ ಗೌರಸರ್ಷಪೈಃ ॥ ೧೨೦**

ಮೊಟ್ಟೆಯ ಉಣ್ಣೆಯ ಬಟ್ಟೆಗಳನ್ನು ಕ್ಷಾರವಾದ ಮಣ್ಣಿನಿಂದ, ನೇಪಾಳ ಕಂಬಳಿಯನ್ನು ಅರಿಷ್ಟ ಚೂರ್ಣಗಳಿಂದ, ಅಂಶುಪಟ್ಟಿಗಳನ್ನು ಬೆಲ್ಲಪತ್ರೆ ಬಿಲ್ವಪತ್ರ ಹಣ್ಣಿನ ನೀರಿನಿಂದ, ನಾರಿನ ತೊಗಟೆಯ ಬಟ್ಟೆಗಳನ್ನು ಬಿಳಿಸಾಸುವೆ ಹಿಟ್ಟಿನ ನೀರಿನಿಂದ ತೊಳೆದು ಶೋಧಿಸುವುದು.

**ಕ್ಷೌಮವಚ್ಛಂಖಶೃಂಗಾಣಾಮಸ್ಥಿದಂತಮಯಸ್ಯ ಚ ।**
**ಶುದ್ಧಿರ್ವಿಜಾನತಾ ಕಾರ್ಯಾ ಗೋಮೂತ್ರೇಣೋದಕೇನ ವಾ ॥ ೧೨೧**

ಶಂಖ, ಕೊಂಬು, ಆನೆ ದಂತ ಇವುಗಳ ಸಾಮಗ್ರಿಯನ್ನು ಬಿಳಿಸಾಸುವೆ ಹಿಟ್ಟನ್ನು, ಗೋಮೂತ್ರ, ತಿಳಿನೀರು ಯಾವುದರಲ್ಲಾದರೂ ಕದಡಿ ತೊಳೆಯಬೇಕು.

**ಪ್ರೋಕ್ಷಣಾತ್ತೃಣಕಾಷ್ಠಂ ಚ ಪಲಾಲಂ ಚೈವ ಶುಧ್ಯತಿ ।**
**ಮಾರ್ಜನೋಪಾಂಜನೈರ್ವೇಶ್ಮ ಪುನಃಪಾಕೇನ ಮೃನ್ಮಯಂ ॥ ೧೨೨**

ಹುಲ್ಲು, ಕಟ್ಟಿಗೆ ಮುಂತಾದುದು ಜಲಪ್ರೋಕ್ಷಣದಿಂದ ಶುದ್ಧವಾಗುವುದು. ಮನೆಯನ್ನು ಗುಡಿಸಿ, ಸಾರಿಸಿ, ಬಳಿದು ಶುದ್ಧ ಮಾಡುವುದು. ಮಣ್ಣಿನ ಪಾತ್ರೆಯನ್ನು ಸುಡುವುದು. ಇದರಿಂದ ಶುದ್ಧಿಯು.

**ಮದ್ಯೈರ್ಮೂತ್ರೈಃ ಪುರೀಷೈರ್ವಾ ಷ್ಠೀವನೈಃ ಪೂಯಶೋಣಿತೈಃ ।**
**ಸಂಸ್ಪೃಷ್ಟಂ ನೈವ ಶುಧ್ಯೇತ ಪುನಃಪಾಕೇನ ಮೃನ್ಮಯಂ ॥ ೧೨೩**

ಮಣ್ಣಿನ ಪಾತ್ರೆಯು ಕಳ್ಳು, ಮಲ-ಮೂತ್ರ, ಉಗುಳು, ಕೀವು-ರಕ್ತ

ಗಳಿಂದ ಲಿಪ್ತವಾಗಿ ಮಲಿನವಾದರೆ ಅಗ್ನಿದಾಹದಿಂದಲೂ ಶುದ್ಧಿಯಾಗದು. ನಾಶಪರಿತ್ಯಾಗಗಳು ಕರ್ತವ್ಯ.

ಸಮ್ಮಾರ್ಜನೋಪಾಂಜನೇನ ಸೇಕೇನೋಲ್ಲೇಖನೇನ ಚ ।
ಗವಾಂ ಚ ಪರಿವಾಸೇನ ಭೂಮಿಃ ಶುಧ್ಯತಿ ಪಂಚಭಿಃ ॥ ೧೨೪

ನೆಲವನ್ನು ಐದು ರೀತಿಯಿಂದ ಶುಚಿಗೊಳಿಸಬಹುದು. ಗುಡಿಸುವುದು, ಸಾರಿಸುವುದು—ಲೇಪಿಸುವುದು, ನೀರು—ಗೋಮೂತ್ರಗಳಿಂದ ತೊಳೆಯುವುದು, ಕಿತ್ತು ತೆಗೆಯುವುದು, ಗೋವಾಸ ಇವುಗಳು, ಪ್ರತ್ಯೇಕ ಶುದ್ಧಿ ಸಾಧನಗಳು. ಸಂದರ್ಭಾನುಸಾರ ಉಪಯೋಗ.

ಪಕ್ಷಿಜಗ್ಧಂ ಗವಾಘ್ರಾತಮವಧೂತಮವಕ್ಷುತಂ ।
ದೂಷಿತಂ ಕೇಶಕೀಟೈಶ್ಚ ಮೃತ್ಪ್ರಕ್ಷೇಪೇಣ ಶುಧ್ಯತಿ ॥ ೧೨೫

ಹಕ್ಕಿತಿಂದದ್ದು, ಆಕಳು ಮೂಸಿದ್ದು, ಕಾಲಿನಿಂದ ಒದೆದದ್ದು, ಉಗುಳಿದ್ದು, ಕೂದಲು ಕೀಟಗಳುಳ್ಳದ್ದು ಅಂತಹ ಆಹಾರವನ್ನು ಅಷ್ಟು ಭಾಗ ಎಸೆದು ಬಿಡುವುದು.

ಯಾವನ್ನಾಪೈತ್ಯಮೇಧ್ಯಾಕ್ತಾದ್ಗಂಧೋ ಲೇಪಶ್ಚ ತತ್ಕೃತಃ ।
ತಾವನ್ಮೃದ್ವಾರಿ ಚಾದೇಯಂ ಸರ್ವಾಸು ದ್ರವ್ಯಶುದ್ಧಿಷು ॥ ೧೨೬

ಕೊಳಕಾದುದು ಪೂರ್ಣಹೋಗಿ ದುರ್ಗಂಧ ತೊಲಗುವ ತನಕ ನೀರು ಮಣ್ಣಿನಿಂದ ಉಜ್ಜಿ ತೊಳೆಯಬೇಕು. ಮುಟ್ಟಿದರೆ ಸಾಲದು. ಎಲ್ಲ ದ್ರವ್ಯ ಶುದ್ಧಿಮಾನವು ಈ ಪ್ರಕಾರ.

ತ್ರೀಣಿ ದೇವಾಃ ಪವಿತ್ರಾಣಿ ಬ್ರಾಹ್ಮಣಾನಾಮಕಲ್ಪಯನ್ ।
ಅದೃಷ್ಟಮದ್ಭಿರ್ನಿರ್ಣಿಕ್ತಂ ಯಚ್ಚ ವಾಚಾ ಪ್ರಶಸ್ಯತೇ ॥ ೧೨೭

ಮೂರು ಶುದ್ಧಿ ವಿಧಾನವು ದೇವಕೃತವು. ಕೊಳಕಾದುದು ತಿಳಿಯದಂತಿರುವುದು, ನೀರಿನಿಂದ ತೊಳೆಯುವುದು, ಅದು ಶುದ್ಧವೆಂದು ಅನ್ಯಜನರ ವಚನ. ಹೀಗೆ ಶುದ್ಧಿ ನಿಶ್ಚಯವಾಗುವುದು.

ಆಪಃ ಶುದ್ಧಾ ಭೂಮಿಗತಾ ವೈತೃಷ್ಣ್ಯಂ ಯಾಸು ಗೋರ್ಭವೇತ್ ।
ಅವ್ಯಾಪ್ತಾಶ್ಚೇದಮೇಧ್ಯೇನ ಗಂಧವರ್ಣರಸಾನ್ವಿತಾಃ ॥ ೧೨೮

ಯಾವುದೇ ಒಂದು ಕಡೆ ಇದ್ದ ನೀರು ಪರಿಗ್ರಾಹ್ಯವೆಂದು ಹೀಗೆ ನಿರ್ಣೈಸಬೇಕು. ಆ ನೀರು ಒಂದು ಹಸು ಬಾಯಾರಿದಾಗ ಕುಡಿದುಬಿಡುವಷ್ಟು ಎಂದರೆ ಒಂದು ಕೊಡ (ಮಣ) ಕ್ಕೆ ಕಡಿಮೆಯಿಲ್ಲದಷ್ಟು ಇರಬೇಕು. ಮತ್ತು ಆ ನೀರು ಬಣ್ಣ, ಪರಿಮಳ, ರುಚಿ, ಮಲಗಳಿಂದ ಕೆಟ್ಟಿರಬಾರದು. ಅಂತಹ ನೀರನ್ನು ಎಲ್ಲಿದ್ದರೂ ಪರಿಶುದ್ಧವೆಂದು ಸ್ವೀಕರಿಸಬಹುದು.

ನಿತ್ಯಂ ಶುದ್ಧಃ ಕಾರುಹಸ್ತಃ ಪಣ್ಯೇ ಯಚ್ಚ ಪ್ರಸಾರಿತಂ ।
ಬ್ರಹ್ಮಚಾರಿಗತಂ ಭೈಕ್ಷಂ ನಿತ್ಯಂ ಮೇಧ್ಯಮಿತಿ ಸ್ಥಿತಿಃ ॥ ೧೨೯

ಕಸುಬುದಾರರು ಅಂಗಡಿಯಲ್ಲಿ ಮಾರಾಟಕ್ಕೆ ಹರವಿದುದು, ಬ್ರಹ್ಮಚಾರಿ ಕೈಯ ಭಿಕ್ಷಾನ್ನ ಇದೆಲ್ಲ ಪವಿತ್ರವು. ಮೂಲಾಕಾರ ಮಾಡಿದ ಮೇಲೆ ಅನೇಕರು ಮುಟ್ಟಿ ನೋಡಿದ ಅಂಗಡಿ ಸಾಮಾನು ದಾರಿಸಡೆದ ಕೈಯ ಭಿಕ್ಷಾನ್ನಗಳು ಅಶುದ್ಧಗಳಲ್ಲ.

ನಿತ್ಯಮಾಸ್ಯಂ ಶುಚಿ ಸ್ತ್ರೀಣಾಂ ಶಕುನಿಃ ಫಲಪಾತನೇ ।
ಪ್ರಸ್ರವೇ ಚ ಶುಚಿರ್ವತ್ಸಃ ಶ್ವಾ ಮೃಗಗ್ರಹಣೇ ಶುಚಿಃ ॥ ೧೩೦

ಬೇಟೆಯನಾಯಿ, ಹಣ್ಣು ಬೀಳಿಸುವ ಹಕ್ಕಿ, ಮೊಲೆ ತಿಂದು ಹಾಲು ಇಳಿಸುವ ಕರು, ಸ್ತ್ರೀಮುಖ ಇವು ಯಾವಾಗಲೂ ಶುಚಿ ಎಂದು ಶಾಸ್ತ್ರ ಮರ್ಯಾದೆಯು.

ಶ್ವಭಿರ್ಹತಸ್ಯ ಯನ್ಮಾಂಸಂ ಶುಚಿ ತನ್ಮನುರಬ್ರವೀತ್ ।
ಕ್ರವ್ಯಾದ್ಭಿಶ್ಚ ಹತಸ್ಯಾನ್ಯೈಶ್ಚಂಡಾಲಾದ್ಯೈಶ್ಚ ದಸ್ಯುಭಿಃ ॥ ೧೩೧

ನಾಯಿಕೊಂದ ಮೃಗದ ಮಾಂಸ, ಮಾಂಸಾಹಾರಿಗಳು ತಿಂದುಳಿದ ಮಾಂಸ, ಮಾಂಸಾಹಾರಿ ಮನುಷ್ಯರು ಸಂಗ್ರಹಿಸಿದ ಮಾಂಸ ಎಲ್ಲ ಶುಚಿಯು.

ಊರ್ಧ್ವಂ ನಾಭೇರ್ಯಾನಿ ಖಾನಿ ತಾನಿ ಮೇಧ್ಯಾನಿ ಸರ್ವಶಃ ॥
ಯಾನ್ಯಧಸ್ತಾನ್ಯಮೇಧ್ಯಾನಿ ದೇಹಾಚ್ಚೈವ ಮಲಾಶ್ಚ್ಯುತಾಃ ॥ ೧೩೨

ಹೊಕ್ಕುಳಿನ ಮೇಲೆ ದೇಹದ ಇಂದ್ರಿಯಗಳು ಮೇಧ್ಯ. ಕೆಳಗಿನವು ಅಮೇಧ್ಯ. ಮಲಗಳು ಶರೀರದಲ್ಲಿರುವಾಗ ಅಮೇಧ್ಯವಲ್ಲ ಇದೊಂದು ವಿಭಾಗವು.

**ಮಕ್ಷಿಕಾ ವಿಪ್ರುಷಶ್ಛಾಯಾ ಗೌರಶ್ವಃ ಸೂರ್ಯರಶ್ಮಯಃ ।**
**ರಜೋ ಭೂರ್ವಾಯುರಗ್ನಿಶ್ಚ ಸ್ಪರ್ಶೇ ಮೇಧ್ಯಾನಿ ನಿರ್ದಿಶೇತ್ ॥ ೧೩೩**

ನೊಣ, ಬಾಯಿಂದ ಹಾರಿದ ಹನಿ, ನೆರಳು, ಗೋ, ಕುದುರೆ, ಸೂರ್ಯ ರಶ್ಮಿ, ಧೂಳಿ, ಭೂಮಿ, ವಾಯು, ಅಗ್ನಿ ಇವು ಎಂದೂ ಅಸ್ಪೃಶ್ಯ, ಮಲಿನ ಆಗುವುದಿಲ್ಲ.

**ವಿಣ್ಮೂತ್ರೋತ್ಸರ್ಗಶುದ್ಧ್ಯರ್ಥಂ ಮೃದ್ವಾರ್ಯಾದೇಯಮರ್ಥವತ್ ।**
**ದೈಹಿಕಾನಾಂ ಮಲಾನಾಂ ಚ ಶುದ್ಧಿಷು ದ್ವಾದಶಸ್ವಪಿ ॥ ೧೩೪**

ಮಲದ್ವಾರಗಳ ಪರಿಶುದ್ಧಿಯು ಸಾಧಿಕವಾಗುವಷ್ಟು ಧುರ್ಗಂಧನಿವೃತ್ತಿಯಾಗುವಷ್ಟು (ಮಣ್ಣು) ಶುದ್ಧಮೃತ್ತಿಕೆ ನೀರುಗಳನ್ನು ಉಪಯೋಗಿಸಬೇಕು. ಮೇಲೆ ಹೇಳುವ ವಸಾದಿಗಳ ಮಾರ್ಜನೆಗೂ ಇದೇ ರೀತಿಯು.

**ವಸಾ ಶುಕ್ರಮಸೃಙ್ಮಜ್ಜಾ ಮೂತ್ರವಿಟ್ ಘ್ರಾಣಕರ್ಣವಿಟ್ ।**
**ಶ್ಲೇಷ್ಮಾಶ್ರು ದೂಷಿಕಾ ಸ್ವೇದೋ ದ್ವಾದಶೈತೇ ನೃಣಾಂ ಮಲಾಃ ॥ ೧೩೫**

ವಸೆ, ವೀರ್ಯ, ರಕ್ತ, ಮಜ್ಜೆ, ಮೂತ್ರ, ಮಲ, ಸಿಂಬಳ, ಕಿವಿಯ ಮಲ, ಕಫ, ಕಣ್ಣೀರು, ಕಣ್ಣಿನ ಮಲ, ಬೆವರು ಇವು ಹನ್ನೆರಡು ಮನುಷ್ಯರ ಮಲಗಳು.

**ಏಕಾ ಲಿಂಗೇ ಗುದೇ ತಿಸ್ರಸ್ತಥೈಕತ್ರ ಕರೇ ದಶ ।**
**ಉಭಯೋಃ ಸಪ್ತ ದಾತವ್ಯಾ ಮೃದಃ ಶುದ್ಧಿಮಭೀಪ್ಸತಾ ॥ ೧೩೬**

ಮೃತ್ತಿಕೆಯಿಂದ ದೇಹಶುದ್ಧಿ ಮಾಡುವಾಗ ಸಾಮಾನ್ಯವಾಗಿ ಅಗತ್ಯವಿದ್ದಷ್ಟು ದುರ್ಗಂಧ ನಿವೃತ್ತಿಹೊಂದುವಷ್ಟು ಮಣ್ಣಿನ ಮುದ್ದೆ ತಕ್ಕೊಳ್ಳುವುದು. ಭೂಗರ್ಭದ ನುಣುಪಾದ ಮಣ್ಣನ್ನು ಉಪಯೋಗಿಸುವುದು. ಲಿಂಗವನ್ನು ಒಂದು ಪಿಂಡದಿಂದ ಗುದವನ್ನು ಮೂರರಿಂದ, ಎಡಗೈಗೆ ಹತ್ತು, ಎರಡು ಕೈಗೆ ಏಳು ಹೀಗೆ ಮೃತ್ತಿಕಾ ಸಾಮಾನ್ಯ ಪ್ರಮಾಣವು.

ಏತಚ್ಛೌಚಂ ಗೃಹಸ್ಥಾನಾಂ ದ್ವಿಗುಣಂ ಬ್ರಹ್ಮಚಾರಿಣಾಂ ।
ತ್ರಿಗುಣಂ ಸ್ಯಾದ್ವನಸ್ಥಾನಾಂ ಯತೀನಾಂ ತು ಚತುರ್ಗುಣಂ ॥ ೧೩೭

ಮೇಲೆ ಹೇಳಿದುದು ಗೃಹಸ್ಥ ಶೌಚವಿಧಿ. ಬ್ರಹ್ಮಚಾರಿಯು ಅದರ ಇಮ್ಮಡಿ, ವನಸ್ಥರು ಮುಮ್ಮಡಿ, ಯತಿಗಳು ನಾಲ್ಮಡಿ ಪ್ರಮಾಣದಲ್ಲಿ ಜಲ ಮೃತ್ತಿಕೆಗಳಿಂದ ಶೌಚಮಾಡುವುದು.

ಕೃತ್ವಾ ಮೂತ್ರಂ ಪುರೀಷಂ ವಾ ಖಾನ್ಯಾಚಾಂತ ಉಪಸ್ಪೃಶೇತ್ ।
ವೇದಮಧ್ಯೇಷ್ಯಮಾಣಶ್ಚ ಅನ್ನಮಶ್ನಂಶ್ಚ ಸರ್ವದಾ ॥ ೧೩೮

ಬ್ರಹ್ಮಚರ್ಯವ್ರತ ಪ್ರಕರಣದಲ್ಲಿ ವ್ರತಾಂಗವಾಗಿ ಒಮ್ಮೆ ಈಗ ಶುಚಿಗಾಗಿ ಹೀಗೆ. ಎರಡು ಬಾರಿ ಒಂದೇ ವಿಷಯ ಬಂದಿದೆ ಎಂದರೆ ಎಂದೂ ಗೃಹಸ್ಥನೂ ಇದಕ್ಕೆ ತಪ್ಪಬಾರದೆಂದರ್ಥ. ವೇದಾಧ್ಯಯನ, ಭೋಜನಗಳ ಮೊದಲು ಮಲಮೂತ್ರ ವಿಸರ್ಜನೆಗಳ ಬಳಿಕವೂ ಆಚಮನ ಮಾಡಿ ತಲೆಯಲ್ಲಿರುವ ಮತ್ತು ಕೆಳಗಿನ ಇಂದ್ರಿಯಾಗ್ರಗಳನ್ನು ನೀರಿನಿಂದ ಒದ್ದೆಕೈಯಿಂದ ಮುಟ್ಟಬೇಕು. ಆಗ ಮನಸ್ಸು-ದೇಹಗಳು ಪ್ರಸನ್ನಗಳಾಗುವುವು.

ತ್ರಿರಾಚಾಮೇದಪಃ ಪೂರ್ವಂ ದ್ವಿಃ ಪ್ರಮೃಜ್ಯಾತ್ತತೋ ಮುಖಂ ।
ಶಾರೀರಂ ಶೌಚಮಿಚ್ಛನ್ ಹಿ ಸ್ತ್ರೀ ಶೂದ್ರಸ್ತು ಸಕೃತ್ಸಕೃತ್ ॥ ೧೩೯

ದೇಹಶುದ್ಧಿಯಿಂದ ಚಿತ್ತಪ್ರಸಾದವಾಗಿ ಕರ್ಮವು ಮನಃ ಸಮಾಧಾನದಿಂದ ನಡೆದು ಪೂರ್ಣಫಲದಾಯಕವಾಗುವ ಈ ಆಚಮನ ಹೀಗೆ—ಮೂರು ಬಾರಿ. ಮಂತ್ರಪೂರ್ವಕ ಜಲಪಾನ ಎರಡು ಬಾರಿ ಬಾಯಿ ಸವರುವುದು. ಉಪನೀತನು ಈ ರೀತಿ ಮಾಡುವುದು. ಇತರರು ಒಮ್ಮೊಮ್ಮೆ.

ಶೂದ್ರಾಣಾಂ ಮಾಸಿಕಂ ಕಾರ್ಯಂ ವಪನಂ ನ್ಯಾಯವರ್ತಿನಾಂ ।
ವೈಶ್ಯವಚ್ಛೌಚಕಲ್ಪಶ್ಚ ದ್ವಿಜೋಚ್ಛಿಷ್ಟಂ ಚ ಭೋಜನಂ ॥ ೧೪೦

ಪರಿಷ್ಕಾರವಾಗಿ ನ್ಯಾಯವಾಗಿ ಸೇವಾಮನೋವೃತ್ತಿಯವನು ತಿಂಗಳಿಗೊಮ್ಮೆ ಕ್ಷೌರ, ಜನನ, ಮರಣಗಳಲ್ಲಿ ದೇಹಶುದ್ಧಿ ಮಾಡಿಕೊಂಡು ಸ್ವಾಮಿಯು ಕೊಟ್ಟ ಆಹಾರ ಸೇವಿಸುತ್ತಿದ್ದು ವಿಧೇಯನಾಗಿರಬಹುದು.

ನೋಚ್ಛಿಷ್ಟಂ ಕುರ್ವತೇ ಮುಖ್ಯಾ ವಿಪ್ರುಷೋಽಂಗೇ ಪತಂತಿ ಯಾಃ ।
ನ ಶ್ಮಶ್ರೂಣಿ ಗತಾನ್ಯಾಸ್ಯಂ ನ ದಂತಾಂತರಧಿಷ್ಠಿತಂ ॥ ೧೪೧

ಓದುವುದು, ಮಾತಾಡುವುದು ಮಾಡುತ್ತಿರುವಾಗ ತಿಳಿಯದೆ ಬಿದ್ದ ಬಾಯಿಹನಿ, ಬಾಯೊಳಗೆ ಹೋದ ಗಡ್ಡ-ಮೀಸೆ, ಹಲ್ಲಿನ ಸಂದಿನಲ್ಲಿದ್ದ ಆಹಾರಾಂಶ ಇವು ಎಂಜಲು ಎಂಬ ಪರಿಗಣನೆಗೆ ಬರುವುದಿಲ್ಲ.

ಸ್ಪೃಶಂತಿ ಬಿಂದವಃ ಪಾದೌ ಯ ಆಚಾಮಯತಃ ಪರಾನ್ ।
ಭೌಮಿಕೈಸ್ತೇ ಸಮಾ ಜ್ಞೇಯಾ ನ ತೈರಾಪ್ರಯತೋ ಭವೇತ್ ॥ ೧೪೨

ಬೇರೆಯವರು ಆಚಮನಮಾಡುವಾಗ ಮತ್ತೊಬ್ಬನ ಕಾಲ ಮೇಲೆ ಬಿದ್ದ ಆ ನೀರು ಅಶುಚಿಯಲ್ಲ. ಅದು ಇತರ ಶುದ್ಧೋದಕ ಸಮ. ಅವನು ಅಶುದ್ಧನಲ್ಲ. ಆಚಮನ ಮಾಡುವುದು ಬೇಡ.

ಉಚ್ಛಿಷ್ಟೇನ ತು ಸಂಸ್ಪೃಷ್ಟೋ ದ್ರವ್ಯಹಸ್ತಃ ಕಥಂಚನ ।
ಅನಿಧಾಯೈವ ತದ್ದ್ರವ್ಯಮಾಚಾಂತಃ ಶುಚಿತಾಮಿಯಾತ್ ॥ ೧೪೩

ಮೈಯಲ್ಲಿ ತಗಲಿರುವ ವಸ್ತು ಅಶುಚಿಯಾದರೆ ತಾನು ಆಚಮನ ಮಾಡಿದರೆ ಸಾಕು.

ವಾಂತೋ ವಿರಿಕ್ತಃ ಸ್ನಾತ್ವಾ ತು ಘೃತಪ್ರಾಶನಮಾಚರೇತ್ ।
ಆಚಾಮೇದೇವ ಭುಕ್ತ್ವಾನ್ನಂ ಸ್ನಾನಂ ಮೈಥುನಿನಃ ಸ್ಮೃತಂ ॥ ೧೪೪

ವಾಂತಿ ಮಾಡಿದರೂ, ವಿರೇಚನೆ ಹೊಂದಿದರೂ ಸ್ನಾನ ಮಾಡಿ ತುಪ್ಪ ತಿನ್ನಬೇಕು. ಉಂಡಮೇಲೂ ಆಚಮನ ಮಾಡಬೇಕು. ಋತುಕಾಲದಲ್ಲಿ ಮೈಥುನದ ನಂತರವೂ ಸ್ನಾನ ಮಾಡಬೇಕು.

ಸುಪ್ತ್ವಾ ಕ್ಷುತ್ವಾ ಚ ಭುಕ್ತ್ವಾ ಚ ನಿಷ್ಠೀವ್ಯೋಕ್ತ್ವಾನೃತಾನಿ ಚ ।
ಪೀತ್ವಾಪೋಽಧ್ಯೇಷ್ಯಮಾಣಶ್ಚ ಆಚಾಮೇತ್ಪ್ರಯತೋಽಪಿ ಸನ್ ॥ ೧೪೫

ನಿದ್ದೆ, ಆಕಳಿಕೆ, ಊಟ, ಉಗುಳು, ಸುಳ್ಳುಮಾತು, ಜಲಪಾನ ಮಾಡಿದ ಮೇಲೆಯೂ, ವೇದಾಧ್ಯಯನ ಮೊದಲು ಶುಚಿಯಾಗಿದ್ದರೂ ಆಚಮನ ಮಾಡಬೇಕು.

ಏಷ ಶೌಚವಿಧಿಃ ಕೃತ್ಸ್ನೋ ದ್ರವ್ಯಶುದ್ಧಿಸ್ತಥೈವ ಚ ।
ಉಕ್ತೋ ವಃ ಸರ್ವವರ್ಣಾನಾಂ ಸ್ತ್ರೀಣಾಂ ಧರ್ಮಾನ್ನಿಬೋಧತ ॥ ೧೪೬

ಈ ವರೆಗೆ ದೇಹಶುದ್ಧಿ ದ್ರವ್ಯಶುದ್ಧಿ ಪ್ರಕಾರವು ಉಕ್ತವಾಯಿತು. ಇನ್ನು ಮೇಲೆ ಸ್ತ್ರೀಧರ್ಮಗಳನ್ನು ಹೇಳುತ್ತೇನೆ.

ಬಾಲಯಾ ವಾ ಯುವತ್ಯಾ ವಾ ವೃದ್ಧಯಾ ವಾಪಿ ಯೋಷಿತಾ ।
ನ ಸ್ವಾತಂತ್ರ್ಯೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವಪಿ ॥ ೧೪೭

ಹುಡುಗಿ, ಯುವತಿ, ಮುದುಕಿ ಆಗಿ ಹೆಂಗಸು ಮನೆಯಲ್ಲಿರುವಾಗ ತಾನು ಮುಂದಾಗಿ ಏನೂ ಮಾಡದಿದ್ದರೆ. ಇತರ ಗಂಡುಸರ ಆಕ್ಷೇಪಕ್ಕೆ ಎಡೆ ಯಿಲ್ಲ. ಗಂಡುಸರು ಎಲ್ಲದಕ್ಕೂ ಹೊಣೆಯಾಗಿರುವಾಗ ಇದು ಸರಿ. ತಾನು ಪುರುಷ ಸಹಾಯವಿಲ್ಲದೆ ಎಲ್ಲವನ್ನೂ ಮಾಡಬಲ್ಲೆನೋ ಎಂದು ಸದಾ ಸ್ತ್ರೀ ವಿಚಾರಿಸಬೇಕು.

ಬಾಲ್ಯೇ ಪಿತುರ್ವಶೇ ತಿಷ್ಠೇತ್ಪಾಣಿಗ್ರಾಹಸ್ಯ ಯೌವನೇ ।
ಪುತ್ರಾಣಾಂ ಭರ್ತರಿ ಪ್ರೇತೇ ನ ಭಜೇತ್ಸ್ತ್ರೀ ಸ್ವತಂತ್ರತಾಂ ॥ ೧೪೮

ಹೆಂಗಸು ಬಾಲ್ಯದಲ್ಲಿ ತಂದೆಯ, ಯೌವನದಲ್ಲಿ ಗಂಡನ, ಅವನಿಲ್ಲದಿದ್ದರೆ ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲಿ ಬಾಳಬಹುದು. ಸ್ವತಂತ್ರಳಾಗುವ ಅವಶ್ಯ ವಿಲ್ಲ. ಅವರು ದುರ್ವೃತ್ತರಾದರೆ ನ್ಯಾಯಪ್ರಿಯನನ್ನು, ಅಥವಾ ರಾಜನನ್ನು ಹೊಂದಬಹುದು.

ಪಿತ್ರಾ ಭರ್ತ್ರಾ ಸುತೈರ್ವಾಪಿ ನೇಚ್ಛೇದ್ವಿರಹಮಾತ್ಮನಃ ।
ಏಷಾಂ ಹಿ ವಿರಹೇಣ ಸ್ತ್ರೀ ಗರ್ಹ್ಯೇ ಕುರ್ಯಾದುಭೇ ಕುಲೇ ॥ ೧೪೯

ತಂದೆ, ಗಂಡ, ಮಕ್ಕಳನ್ನು ಹೊರತು ತಾನು ಒಂಟಿಯಾಗಿದ್ದರೆ ಹೆಂಗುಸಾದ ತನ್ನ ಮನಸ್ಸನ್ನು, ದೇಹವನ್ನು ಪರಪುರುಷರು ಆಕ್ರಮಿಸುವ ಸಂಭವವು ಬಹಳವಿದೆ. ಹೆಂಗಸಿನ ಎರಡು ಕುಲವೂ ಆಗ ಇತರರ ದೂಷಣೆಗೆ ಒಳಗಾಗುವುದು.

ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ ।
ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಮುಕ್ತಹಸ್ತಯಾ ॥ ೧೫೦

ಹೆಂಗಸು ಮನೆಯಲ್ಲಿ ಸದಾ ಸಂತುಷ್ಟಳಾಗಿಯೂ ಮನೆಕೆಲಸದಲ್ಲಿ ನುರಿತವಳಾಗಿಯೂ, ಒಪ್ಪಓರಣವುಳ್ಳವಳಾಗಿಯೂ, ಖರ್ಚಿನಲ್ಲಿ ಬಿಡುಗೈ ಯಾಗದೆಯೂ ಇದ್ದರೆ ಗಂಡುಸರು ಪ್ರಸನ್ನಚಿತ್ತರಾಗಿ ಗೃಹವಾಸವು ಎಲ್ಲರಿಗೂ ಸುಖಮಯವಾಗುವುದು.

ಯಸ್ಮೈ ದದ್ಯಾತ್ಪಿತಾ ತ್ವೇನಾಂ ಭ್ರಾತಾ ವಾನುಮತೇ ಪಿತುಃ ।
ತಂ ಶುಶ್ರೂಷೇತ ಜೀವಂತಂ ಸಂಸ್ಥಿತಂ ಚ ನ ಲಂಘಯೇತ್ ॥ ೧೫೧

ತಂದೆ ವಾ ತನ್ನ ಸೋದರರು ಮದುವೆ ಮಾಡಿದ ಮೇಲೆ ಗಂಡನು ಬದುಕಿರುವಾಗಲೂ, ಸತ್ತಮೇಲೂ ಅವನಿಗೆ ಇಂತವರಿಗೆಲ್ಲ ಅಪ್ರಿಯವಾಗಿ ವರ್ತಿಸಿ ಫಲವಿಲ್ಲ

ಮಂಗಲಾರ್ಥಂ ಸ್ವಸ್ತ್ಯಯನಂ ಯಜ್ಞಶ್ಚಾಸಾಂ ಪ್ರಜಾಪತೇಃ ।
ಪ್ರಯುಜ್ಯತೇ ವಿವಾಹೇಷು ಪ್ರದಾನಂ ಸ್ವಾಮ್ಯಕಾರಣಂ ॥ ೧೫೨

ವಿವಾಹದಲ್ಲಿ ಸ್ವಸ್ತಿವಾಚನ ಪ್ರಜಾಪತಿ ಹೋಮಗಳನ್ನು ಮಾಡುವರು. ಆದರಿಂದ ಮಂಗಲಸಿದ್ಧಿಯು. ದಾನದಿಂದ ಸ್ತ್ರೀಯು ಪತಿಯ ಸೊತ್ತಾಗುವಳು.

ಅನೃತಾವೃತುಕಾಲೇ ಚ ಮಂತ್ರಸಂಸ್ಕಾರಕೃತ್ಪತಿಃ ।
ಸುಖಸ್ಯ ನಿತ್ಯಂ ದಾತೇಹ ಪರಲೋಕೇ ಚ ಯೋಷಿತಃ ॥ ೧೫೩

ಮಂತ್ರಸಂಸ್ಕಾರದಿಂದ ಸ್ವೀಕರಿಸಿದ ಪತಿಯು ಈಗಲೂ ಮತ್ತೂ ಋತುವಿನಲ್ಲಿ ಅಲ್ಲದ ಸಮಯವೂ ಎಲ್ಲ ವಿಧದ ಸುಖವನ್ನು ಕೊಡತಕ್ಕವನು. ಜನ್ಮಾಂತರದ ಕ್ಷೇಮಚಿಂತನೆಯನ್ನೂ ಪತಿಯು ಮಾಡುವನು.

ವಿಶೀಲಃ ಕಾಮವೃತ್ತೋ ವಾ ಗುಣೈರ್ವಾ ಪರಿವರ್ಜಿತಃ ।
ಉಪಚರ್ಯಃ ಸ್ತ್ರಿಯಾ ಸಾಧ್ವ್ಯಾ ಸತತಂ ದೇವವತ್ಪತಿಃ ॥ ೧೫೪

ಮಂತ್ರ, ದೇವಬ್ರಾಹ್ಮಣ ಗುರುಸಮ್ಮುಖದಲ್ಲಿ ವರಿಸಿದ ಪತಿಯು ದುರದೃಷ್ಟದಿಂದ ಗುಣಹೀನನಾಗಿ ಪರಿವರ್ತನೆ ಹೊಂದಿದರೂ ಅವನನ್ನು ಗೌರವಿಸಿ ಉಪಚರಿಸಿದರೆ ಅವನು ಒಲಿದು ಪ್ರಿಯಕರನಾಗುವನು. ಪರದೇಶದಲ್ಲಿ ಕ್ಷಣಿಕ

ವಿಚಾರಕೊಳ್ಳಗಾಗಿ ನೂರಾರು ವಿವಾಹ ವಿಚ್ಛೇದದಿಂದ ಪುರುಷ ಸಂಬಂಧ ಹೊಂದಿದ ಸ್ತ್ರೀಯರೂ ಸುಖವಿಲ್ಲದೆ ಪರಿತಪಿಸುವುದು ಪ್ರತ್ಯಕ್ಷವಾದುದರಿಂದ ತಾಳ್ಮೆಯ ಜೀವನವು ಗಂಡಹೆಂಡಿರಿಗೆ ಸುಖಮಯವಾಗುವುದು ಎಂದು ತಿಳಿಯುವುದು. ಇಬ್ಬರ ಮನಸ್ಸು ಕಾಲದಿಂದ ಉದಾತ್ತವಾಗಿ ಮನೋಹರ ವಾಗುವುದು. ಮನಸ್ಸು ಅನ್ಯೋನ್ಯ ರಮಿಸುವುದು. ಚಾಂಚಲ್ಯವು ಏನನ್ನೂ ಸಾಧಿಸದು.

ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಣಂ ।
ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ ॥ ೧೫೫

ಸೇವಕನಿಗೆ ಸ್ವಾಮಿಸೇವೆ, ಹೆಂಡತಿಗೆ ಗಂಡನ ಸೇವೆಯಲ್ಲದೆ, ಪೂಜೆ ಹೋಮಯಾಗ, ಉಪವಾಸ, ಜಪ ಒಂದೂ ಬೇಡ. ಅವಾದರೂ ಹೇಗೆ ಏನನ್ನು ಕೊಡುವುವೋ. ಅದು ಸೇವೆಯಿಂದಲೂ ಸಾಧ್ಯವು. ಅವರಲ್ಲೇ ಮನಸ್ಸು ದೇವ ಬುದ್ಧಿಯನ್ನು ತಾಳಿ ಭಜಿಸುವುದಾದರೆ ಆಗ ಕ್ಷೇಮವು ದೊರೆ ಯುವುದು. ಇದರಿಂದ ಕ್ಷೇಮವಿಲ್ಲವೆನ್ನುವುದಾದರೆ ಇನ್ನಾವುದರಿಂದ ಅದು ಲಭಿಸಲೂ ನ್ಯಾಯವಿಲ್ಲ. ಅದ್ವೈತದಲ್ಲಿ ಎಲ್ಲವೂ ಬ್ರಹ್ಮ ದೂರದತತ್ತ್ವವೂ ಹತ್ತಿರದ್ದೂ ಒಂದೇ ಆದರೆ ಅರಸುವುದೇನಿದೆ.

ಪಾಣಿಗ್ರಾಹಸ್ಯ ಸಾಧ್ವೀ ಸ್ತ್ರೀ ಜೀವತೋ ವಾ ಮೃತಸ್ಯ ವಾ ।
ಪತಿಲೋಕಮಭೀಪ್ಸಂತೀ ನಾಚರೇತ್ಕಿಂಚಿದಪ್ರಿಯಂ ॥ ೧೫೬

ಗಂಡನ ಮನೋವೃತ್ತಿಯನ್ನು ಮೆಚ್ಚಿದ ಸ್ತ್ರೀಯು ಗಂಡನು ಜೀವದಲ್ಲಿ ದ್ದಾಗಲೂ ಸತ್ತಾಗಲೂ ಅವನನ್ನು ಧ್ಯಾನಿಸಿ ಅದರಂತೆ ನಡೆಯಲು ತಪ್ಪುವು ದಿಲ್ಲ.

ಕಾಮಂ ತು ಕ್ಷಪಯೇದ್ದೇಹಂ ಪುಷ್ಪಮೂಲಫಲೈಃ ಶುಭೈಃ ।
ನತು ನಾಮಾಪಿ ಗೃಹ್ಣೀಯಾತ್ಪತ್ಯೌ ಪ್ರೇತೇ ಪರಸ್ಯ ತು ॥ ೧೫೭

ಗಂಡನು ಸತ್ತರೆ ತನ್ನ ದೇಹವನ್ನು ಪರಿಪುಷ್ಟಾಹಾರದಿಂದ ಕೊಬ್ಬಿಸು ವುದು ಬೇಡ, ಅಲಂಕರಿಸುವುದು ಬೇಡ, ಪರಪುರುಷ ಸ್ಮರಣೆಯೂ ಬೇಡ, ಪುನರ್ವಿವಾಹವನ್ನು ಸ್ತ್ರೀಗೆ ಸಮರ್ಥಿಸಿದ ಧೀರರು ಲೋಕದಲ್ಲಿ ಸ್ತ್ರೀಪ್ರಜಾ

ಧಿಕ್ಯದಿಂದಲೂ, ಜನಾಧಿಕ್ಯದಿಂದಲೂ ಆಹಾರಾಭಾವ, ಸ್ಥಳಾಭಾವ, ಉದ್ಯೋಗಾಭಾವದಿಂದ, ಜನಸಮ್ಮರ್ದ ಪರಿಹಾರಕ್ಕೆ ಗರ್ಭನಾಶ, ಸಂತತ್ಯಭಾವಗಳನ್ನು ಪ್ರೀತಿಸಿ ಆಹ್ವಾನಿಸುತ್ತಾರೆ. ಆದರೆ ಬ್ರಹ್ಮಚರ್ಯ ಸಂಯಮ-ಸಹಗಮನಗಳು ಸ್ತ್ರೀಯ ಹಿಂಸಾಪಕ್ಷಪಾತವಾದುದು ಹೇಗೆ? ಘಾತುಕತನದ (ಪರಿವರ್ಜನೆ) ಇವರನ್ನು ಬಿಟ್ಟಿದೆಯೇ? ದೈವವಾದದಲ್ಲಿ ಪ್ರಾಪ್ತವೆಲ್ಲ ದೈವಾಯತ್ತವು. ಪ್ರಥಮ ವ್ಯವಸ್ಥೆಯು ಸ್ವಾಯತ್ತವು.

ಆಸೀತಾಮರಣಾತ್ಕ್ಷಾಂತಾ ನಿಯತಾ ಬ್ರಹ್ಮಚಾರಿಣೀ।
ಯೋ ಧರ್ಮ ಏಕಪತ್ನೀನಾಂ ಕಾಂಕ್ಷಂತೀ ತಮನುತ್ತಮಂ ॥ ೧೫೮

ಪತಿಹೀನಳಾದ ಸ್ತ್ರೀಯು ಸಹನೆಯ ಬ್ರಹ್ಮಚರ್ಯವನ್ನು ಪಾಲಿಸಿ ಉತ್ತಮ ಏಕಪತ್ನೀವ್ರತವಂತಳಾಗಬಹುದು. ಸಂತತ್ಯ ಭಾವಕ್ಕೆ ವಿವಾಹ ವಯಸ್ಸನ್ನು ಮುಂದೂಡುವ ಸಾಧನೆ ಈಗಿನದು ಮಾನ್ಯವಾದರೆ ಅಂದಿನ ಪತಿಮರಣೋತ್ತರ ಸಂಯಮವು ಅಧರ್ಮವಲ್ಲ, ಅಸಾಧ್ಯವಲ್ಲ, ಹಾಸ್ಯಾಸ್ಪದವಲ್ಲ, ಪಕ್ಷಪಾತವಲ್ಲ. ಮೊದಲಿನ ವ್ಯವಸ್ಥೆಯನ್ನು ಪಾಲಿಸುವ ಘನಉದ್ದೇಶವು.

ಅನೇಕಾನಿ ಸಹಸ್ರಾಣಿ ಕುಮಾರಬ್ರಹ್ಮಚಾರಿಣಾಂ।
ದಿವಂ ಗತಾನಿ ವಿಪ್ರಾಣಾಂ ಅಕೃತ್ವಾ ಕುಲಸಂತತಿಂ ॥ ೧೫೯

ಅನೇಕ ಮಂದಿ ಬ್ರಹ್ಮಚಾರಿಗಳಾಗಿ ಸಂತತಿ ಜನನ ಮಾಡದೆ ಸದ್ಗತಿಯನ್ನು ಪಡೆದಿದ್ದಾರೆ.

ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ।
ಸ್ವರ್ಗಂ ಗಚ್ಛತ್ಯಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ ॥ ೧೬೦

ಆ ಸಹಸ್ರಾರು ಗಂಡು ಬ್ರಹ್ಮಚಾರಿಗಳಂತೆ ಗಂಡ ಸತ್ತ ಹೆಂಗಸರು ಬ್ರಹ್ಮಚಾರಿಗಳಾಗಿ ಲೋಕೋತ್ತರ ಶ್ರೇಯಸ್ಸನ್ನು ಪಡೆಯುವರು. ವಿಧುರರೆಲ್ಲ ಸನ್ಯಾಸಿಗಳಾದರೆ ದೇಶದಲ್ಲಿ ಜನಸಂಖ್ಯೆಯ ನ್ಯೂನತೆ ಇಳಿತ ಉಂಟಾಗಬಹುದು.

ಅಪತ್ಯಲೋಭಾದ್ಯಾ ತು ಸ್ತ್ರೀ ಭರ್ತಾರಮತಿವರ್ತತೇ।
ಸೇಹ ನಿಂದಾಮವಾಪ್ನೋತಿ ಪತಿಲೋಕಾಚ್ಚ ಹೀಯತೇ ॥ ೧೬೧

ಪತಿಮರಣದ ನಂತರ ಸಂತತಿಗಾಗಿ ಪರಪುರುಷನನ್ನು ಸೇವಿಸಿದರೆ ಆ ಸಂತತಿಯಿಂದಲೂ ಅವಳು ಶುಭವನ್ನು ಪಡೆಯಲಾರಳು. ಅದು ಅವಳ ಪೂರ್ವಪತಿಗೆ ಪ್ರಿಯವಲ್ಲ

ನಾನ್ಯೋತ್ಪನ್ನಾ ಪ್ರಜಾಸ್ತೀಹ ನ ಚಾಪ್ಯನ್ಯಪರಿಗ್ರಹೇ ।
ನ ದ್ವಿತೀಯಶ್ಚ ಸಾಧ್ವೀನಾಂ ಕ್ವಚಿದ್ಭರ್ತೋಪದಿಶ್ಯತೇ ॥ ೧೬೨

ಅನ್ಯ ಸ್ತ್ರೀಸಂಜಾತನು ಗಂಡಸಿಗೆ ತನ್ನ ಸಂತತಿಯಾಗದಿರುವಂತೆ ಹೆಂಗಸಿಗೂ ಬೇರೆಯವನಿಂದಾದ ಸಂತತಿಯು ತನ್ನದಾಗಲಾರದು. ಚಿತ್ತಶುದ್ಧಿಯಿರುವ ಸ್ತ್ರೀಯರು ಅದನ್ನು ಮೆಚ್ಚುವುದಿಲ್ಲ.

ಪತಿಂ ಹಿತ್ವಾಪಕೃಷ್ಟಂ ಸ್ವಮುತ್ಕೃಷ್ಟಂ ಯಾ ನಿಷೇವತೇ ।
ನಿಂದ್ಯೈವ ಸಾ ಭವೇಲ್ಲೋಕೇ ಪರಪೂರ್ವೇತಿ ಚೋಚ್ಯತೇ ॥ ೧೬೩

ಮೊದಲಿಗಿಂತ ಒಳ್ಳೆಯವನು ಸಿಗುವನೆಂದು ಆಶ್ರಯಿಸಿದವಳು ಪುನಃ ಇನ್ನೊಬ್ಬನನ್ನು ಕಾಲಾಂತರದಲ್ಲಿ ವರಿಸುವಳು. ರಾಗಕ್ಕೆ ಮಿತಿಯಿಲ್ಲ. ಉದಾತ್ತೀಕರಣವು ಪ್ರಶಸ್ತ.

ವ್ಯಭಿಚಾರಾತ್ತು ಭರ್ತುಃ ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಂ ।
ಶೃಗಾಲಯೋನಿಂ ಪ್ರಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥ ೧೬೪

ಹಾಗೆ ಬಹುಪುರುಷರನ್ನು ಸೇವಿಸಿದ ಸ್ತ್ರೀಯು ಪಾಪಕೃತ್ಯದಿಂದ ಭಯಂಕರ ರೋಗವನ್ನು ದುಃಖವನ್ನು ತಪ್ಪದೆ ಅನುಭವಿಸುವುದು ಪ್ರತ್ಯಕ್ಷ.

ಪತಿಂ ಯಾ ನಾಭಿಚರತಿ ಮನೋವಾಗ್ದೇಹಸಂಯುತಾ ।
ಸಾ ಭರ್ತೃಲೋಕಮಾಪ್ನೋತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ॥ ೧೬೫

ಪತಿಪರಾಯಣಳಾದ ಸ್ತ್ರೀಯನ್ನು ಉತ್ತಮ ಗಂಡ-ಹೆಂಡಿರು ಹೊಗಳುತ್ತಾರೆ.

ಅನೇನ ನಾರೀವೃತ್ತೇನ ಮನೋವಾಗ್ದೇಹ ಸಂಯುತಾ ।
ಇಹಾಗ್ರ್ಯಾಂ ಕೀರ್ತಿಮಾಪ್ನೋತಿ ಪತಿಲೋಕಂ ಪರತ್ರ ಚ ॥ ೧೬೬

ಹೀಗೆ ಮನಸ್ಸಿನ, ಮಾತಿನ, ದೇಹದ ಸಂಯತ ಜೀವನದಿಂದ ಸದಾ ಶುಭವನ್ನು ಶುಭಾಭಿಸಂಧಾನದ ಮೂಲಕ ಪಡೆಯಬಹುದಲ್ಲದೆ ಸ್ವೈರವೃತ್ತಿಯಿಂದ ಹೊಂದಲು ಸಾಧ್ಯವಿಲ್ಲ.

ಏವಂವೃತ್ತಾಂ ಸವರ್ಣಾಂ ಸ್ತ್ರೀಂ ದ್ವಿಜಾತಿಃ ಪೂರ್ವಮಾರಿಣೀಂ |
ದಾಹಯೇದಗ್ನಿಹೋತ್ರೇಣ ಯಜ್ಞಪಾತ್ರೈಶ್ಚ ಧರ್ಮವಿತ್ || ೧೬೭

ಇಂತಹ ಪತಿವ್ರತಾ ಸ್ತ್ರೀಯು ಸ್ವವರ್ಣದವಳಾದರೆ ಅವಳು ತನ್ನ ಜೀವನ ಕಾಲದಲ್ಲಿ ಮೃತಳಾದಾಗ ತನ್ನ ಅಗ್ನಿಹೋತ್ರದ ಅಗ್ನಿ ಔಪಾಸನಾಗ್ನಿಗಳಿಂದ ಯಜ್ಞಪಾತ್ರ ಸಹಿತವಾಗಿ ಸುಡಬೇಕು.

ಭಾರ್ಯಾಯೈ ಪೂರ್ವಮಾರಿಣ್ಯೈ ದತ್ವಾಗ್ನೀನಂತ್ಯಕರ್ಮಣಿ |
ಪುನರ್ದಾರಕ್ರಿಯಾಂ ಕುರ್ಯಾತ್ಪುನರಾಧಾನಮೇವ ಚ || ೧೬೮

ಹೀಗೆ ಹೆಂಡತಿಯು ತನ್ನಿಂದ ಮೊದಲು ಮೃತಳಾದರೆ ತನಗೆ ಯೌವನವಿದ್ದು ಪುತ್ರೇಚ್ಛೆಯಿರುವಾಗ ಪುನರ್ವಿವಾಹವನ್ನು ಮಾಡಿಕೊಂಡು ಪುನಃ ಅಗ್ನಿಸಂಪಾದನೆ ಮಾಡಿ ಅಗ್ನಿಹೋತ್ರ ಹೋಮ ಮಾಡುತ್ತಿರಬಹುದು.

ಅನೇನ ವಿಧಿನಾ ನಿತ್ಯಂ ಪಂಚಯಜ್ಞಾನ್ನ ಹಾಪಯೇತ್ |
ದ್ವಿತೀಯಮಾಯುಷೋ ಭಾಗಂ ಕೃತದಾರೋ ಗೃಹೇ ವಸೇತ್ || ೧೬೯

ಉಕ್ತಪ್ರಕಾರದಿಂದ ಪಂಚಯಜ್ಞಗಳನ್ನು ಮಾಡುತ್ತ ಆಯುಸ್ಸಿನ ಎರಡನೆ ಭಾಗವನ್ನು ಪತ್ನೀಸಹಿತನಾಗಿ ಮನೆಯಲ್ಲಿ ಕಳೆಯಬಹುದು. ಇದು ಗೃಹಸ್ಥಾಶ್ರಮ ವಿಧಿಯು. ಇನ್ನು ವನಸ್ಥ ವಿಧಿಯು ಹೇಳಲ್ಪಡುವುದು.

# ಅಧ್ಯಾಯ ೬.

ಏವಂ ಗೃಹಾಶ್ರಮೇ ಸ್ಥಿತ್ವಾ ವಿಧಿವತ್‌ಸ್ನಾತಕೋ ದ್ವಿಜಃ ।
ವನೇ ವಸೇತ್ತು ನಿಯತೋ ಯಥಾವದ್ವಿಜಿತೇಂದ್ರಿಯಃ ॥ ೧

ಸ್ನಾತಕನು ಈ ರೀತಿ ಗೃಹಸ್ಥಾಶ್ರಮವಾಸವನ್ನು ಮುಗಿಸಿ ಜಿತೇಂದ್ರಿಯನಾಗಿ ವನವಾಸವನ್ನು ಮಾಡಬೇಕು.

ಗೃಹಸ್ಥಸ್ತು ಯದಾ ಪಶ್ಯೇದ್ವಲೀಪಲಿತಮಾತ್ಮನಃ ।
ಅಪತ್ಯಸ್ಯೈವ ಚಾಪತ್ಯಂ ತದಾರಣ್ಯಂ ಸಮಾಶ್ರಯೇತ್ ॥ ೨

ಗೃಹಸ್ಥನು ಮೈಸುಕ್ಕುಬಿದ್ದು ಕೂದಲು ನೆರೆತು ಮಗನಿಗೆ ಮಗನು ಜನಿಸಿದಾಗ ಅರಣ್ಯವನ್ನು ಗಮಿಸಬಹುದು.

ಸಂತ್ಯಜ್ಯ ಗ್ರಾಮ್ಯಮಾಹಾರಂ ಸರ್ವಂ ಚೈವ ಪರಿಚ್ಛದಂ ।
ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ವನಂ ಗಚ್ಛೇತ್ಸಹೈವ ವಾ ॥ ೩

ಸ್ಥಿರಚರಸೊತ್ತುಗಳನ್ನು ಹೆಂಡತಿಯನ್ನು ಮಕ್ಕಳಿಗೆ ವಹಿಸಿ ಗ್ರಾಮ್ಯಾಹಾರಗಳನ್ನು ಬಿಟ್ಟು ಬಿಡಬೇಕು (ಹೆಂಡತಿಯನ್ನು) ಸಮ್ಮತಿಯಿದ್ದರೆ ಕಾಡಿಗೆ ಕರಕೊಂಡು ಹೋಗಬಹುದು.

ಅಗ್ನಿಹೋತ್ರಂ ಸಮಾದಾಯ ಗೃಹ್ಯಂ ಚಾಗ್ನಿಪರಿಚ್ಛದಂ ।
ಗ್ರಾಮಾದರಣ್ಯಂ ನಿಃಸೃತ್ಯ ನಿವಸೇನ್ನಿಯತೇಂದ್ರಿಯಃ ॥ ೪

ಅಶ್ರೌತಾಗ್ನಿ ಗೃಹ್ಯಾಗ್ನಿ ಅದರ ಉಪಕರಣಗಳನ್ನು ತಕ್ಕೊಂಡು ಊರು ಬಿಟ್ಟು ವನವಾಸವನ್ನು ಮಾಡಲು ಇಂದ್ರಿಯವನ್ನು ಬಿಗಿಗೊಳಿಸಬೇಕು.

ಮುನ್ಯನ್ನೈರ್ವಿವಿಧೈರ್ಮೇಧ್ಯೈಃ ಶಾಕಮೂಲಫಲೇನ ವಾ ।
ಏತಾನೇವ ಮಹಾಯಜ್ಞಾನ್ ನಿರ್ವಪೇದ್ವಿಧಿಪೂರ್ವಕಂ ॥ ೫

ನೀವಾರಾದಿ ತೃಣಧಾನ್ಯಗಳಿಂದ ಒಳ್ಳೆಯ ಗಡ್ಡೆ-ಗೆಣಸು-ಹಣ್ಣುಗಳಿಂದ ಮೊದಲಿನ ಪಂಚಯಜ್ಞಗಳನ್ನು ಮಾಡಬೇಕು.

ವಸೀತ ಚರ್ಮ ಚೀರಂ ವಾ ಸಾಯಂ ಸ್ನಾಯಾತ್ಪ್ರಗೇ ತಥಾ ।
ಜಟಾಶ್ಚ ಬಿಭೃಯಾನ್ನಿತ್ಯಂ ಶ್ಮಶ್ರುಲೋಮನಖಾನಿ ಚ ॥ ೬

ಬೆಳಗ್ಗೆ ಮತ್ತು ಸಾಯಂ ಮಿಂಯಬೇಕು. ಚರ್ಮವನ್ನು ಉಡಬೇಕು. ತೊಗಟೆಯೂ ಆಗಬಹುದು. ಗಡ್ಡ, ಮೀಸೆ, ರೋಮ, ಕೂದಲು, ಉಗುರುಗಳನ್ನು ಕತ್ತರಿಸದೆ ಬೆಳೆಸಬೇಕು.

ಯದ್ಭಕ್ಷ್ಯಂ ಸ್ಯಾತ್ತತೋ ದದ್ಯಾದ್ಬಲಿಂ ಭಿಕ್ಷಾಂ ಚ ಶಕ್ತಿತಃ ।
ಅಮ್ಮೂಲಫಲಭಿಕ್ಷಾಭಿರರ್ಚಯೇದಾಶ್ರಮಾಗತಾನ್ ॥ ೭

ಆಶ್ರಮಾಗತರಿಗೆ ತಿಂಡಿ, ಭೋಜನ, ನೀರು, ಗೆಣಸು, ಹಣ್ಣುಗಳಿಂದ ಸತ್ಕರಿಸಬೇಕು.

ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾದ್ದಾಂತೋ ಮೈತ್ರಃ ಸಮಾಹಿತಃ ।
ದಾತಾ ನಿತ್ಯಮನಾದಾತಾ ಸರ್ವಭೂತಾನುಕಂಪಕಃ ॥ ೮

ಸದಾ ವೇದಾಧ್ಯಯನ ಮಾಡಬೇಕು. ಶೀತೋಷ್ಣಗಳನ್ನು ಸಹಿಸಿ ಸಕಲಪ್ರಾಣಿಗಳಿಗೂ ಮಿತ್ರನಂತೆ ವರ್ತಿಸುತ್ತ ದಯಾಮಯನಾಗಿ ಪ್ರತಿಗ್ರಹ ಮಾಡದೆ ದಾನಮಾಡುತ್ತ ಸರ್ವೋಪಕಾರಕನಾಗಬೇಕು.

ವೈತಾನಿಕಂ ಚ ಜುಹುಯಾದಗ್ನಿಹೋತ್ರಂ ಯಥಾವಿಧಿ ।
ದರ್ಶಮಸ್ಕಂದಯನ್ ಪರ್ವ ಪೌರ್ಣಮಾಸಂ ಚ ಯೋಗತಃ ॥ ೯

ಗಾರ್ಹಪತ್ಯಾಗ್ನಿಯನ್ನು ಆಹವನೀಯ ದಕ್ಷಿಣಾಗ್ನಿಗಳಲ್ಲಿ ವಿಹರಿಸಿ ಅಗ್ನಿಹೋತ್ರ ಮಾಡಬೇಕು, ಪರ್ವಕಾಲದ ದರ್ಶಪೂರ್ಣಮಾಸಯಾಗಗಳನ್ನು ಸಕಾಲದಲ್ಲಿ ಮಾಡಬೇಕು.

ಋಕ್ಷೇಷ್ಟ್ಯಾಗ್ರಯಣಂ ಚೈವ ಚಾತುರ್ಮಾಸ್ಯಾನಿ ಚಾಹರೇತ್ ।
ತುರಾಯಣಂ ಚ ಕ್ರಮಶೋ ದಾಕ್ಷಸ್ಯಾಯನಮೇವ ಚ ॥ ೧೦

ನಕ್ಷತ್ರೇಷ್ಟಿ ಆಗ್ರಯಣ ಚಾತುರ್ಮಾಸ್ಯ ತುರಾಯಣ, ದಾಕ್ಷಾಯಣ ಎಂಬ ಯಾಗಗಳನ್ನು ಮಾಡಬೇಕು. ಆದರ ಚರುಪುರೋಶ ದ್ರವ್ಯವನ್ನು ಈಗಲೇ ಹೇಳುತ್ತಾರೆ.

ವಾಸಂತಶಾರದೈರ್ಮೇಧ್ಯೈರ್ಮುನ್ಯನ್ನೈಃ ಸ್ವಯಮಾಹೃತೈಃ ।
ಪುರೋಡಾಶಾಂಶ್ಚರೂಂಶ್ಚೈವ ವಿಧಿವನ್ನಿರ್ವಪೇತ್ಪೃಥಕ್ ॥ ೧೧

ಮೇಲೆ ಹೇಳಿದ ಯಾಗಗಳನ್ನು ವಸಂತ ಶರತ್ ಋತುಗಳಲ್ಲಿ ಫಲಿಸುವ ಮುನ್ಯಾಹಾರಧಾನ್ಯಗಳಿಂದ ಚರುಪುರೋಡಾಶವನ್ನು ಮಾಡಿ ಸಾಧಿಸಬೇಕು. ಗ್ರಾಮದಂತೆ ಅಲ್ಲ.

ದೇವತಾಭ್ಯಸ್ತು ತದ್ಧುತ್ವಾ ವನ್ಯಂ ಮೇಧ್ಯತರಂ ಹವಿಃ ।
ಶೇಷಮಾತ್ಮನಿ ಯುಂಜೀತ ಲವಣಂ ಚ ಸ್ವಯಂ ಕೃತಂ ॥ ೧೨

ವನಜವಾದ ಈ ಮೇಧ್ಯಹವಿಸ್ಸನ್ನು ದೇವತೆಗಳಿಗೂ ಹೋಮಿಸಿ ಉಳಿದುದನ್ನು ತಾನು ಉಪಯೋಗಿಸಬೇಕು. ಊಷರಲವಣವಲ್ಲದೆ ಇತರ ಉಪ್ಪನ್ನು ಸೇವಿಸಬಾರದು.

ಸ್ಥಲಜೌದಕಶಾಕಾನಿ ಪುಷ್ಪಮೂಲಫಲಾನಿ ಚ ।
ಮೇಧ್ಯವೃಕ್ಷೋದ್ಭವಾನ್ಯದ್ಯಾತ್ಸ್ನೇಹಾಂಶ್ಚ ಫಲಸಂಭವಾನ್ ॥ ೧೩

ನೀರಿನಲ್ಲಿ ನೆಲದಲ್ಲಿ ಹುಟ್ಟುವ ತರಕಾರಿ, ಹೂ-ಹಣ್ಣು ಗೆಣಸು ಪವಿತ್ರ ಮರಗಳದ್ದಾದರೆ ಅದನ್ನು, ಅಂತಹ ಬೀಜದ ಎಣ್ಣೆ ಇವುಗಳನ್ನು ಸೇವಿಸಬೇಕು.

ವರ್ಜಯೇನ್ಮಧು ಮಾಂಸಂ ಚ ಭೌಮಾನಿ ಕವಕಾನಿ ಚ ।
ಭೂಸ್ತೃಣಂ ಶಿಗ್ರುಕಂ ಚೈವ ಶ್ಲೇಷ್ಮಾತಕಫಲಾನಿ ಚ ॥ ೧೪

ಮದ್ಯ, ಮಾಂಸ, ಕವಕ, ಭೂಸ್ತೃಣ, ಶಿಗ್ರು, ಶ್ಲೇಷ್ಮಾತಕ ಇವುಗಳನ್ನು ವರ್ಜಿಸಬೇಕು.

ತ್ಯಜೇದಾಶ್ವಯುಜೇ ಮಾಸಿ ಮುನ್ಯನ್ನಂ ಪೂರ್ವಸಂಚಿತಂ ।
ಜೀರ್ಣಾನಿ ಚೈವ ವಾಸಾಂಸಿ ಶಾಕಮೂಲಫಲಾನಿ ಚ ॥ ೧೫

ಆಶ್ವಯುಜಮಾಸದಲ್ಲಿ ಆವರೆಗೆ ಖರ್ಚಾಗಿ ಉಳಿದಿರುವ ಧಾನ್ಯ, ಹಳೆ ಬಟ್ಟೆ, ಹಣ್ಣು, ಹಂಪಲು ಎಲ್ಲ ಬಿಟ್ಟು ಹೊಸದು ಸಂಪಾದಿಸಬೇಕು.

ನ ಫಾಲಕೃಷ್ಟಮಶ್ನೀಯಾದುತ್ಸೃಷ್ಟಮಪಿ ಕೇನಚಿತ್ ।
ನ ಗ್ರಾಮಜಾತಾನ್ಯಾರ್ತೋಽಪಿ ಮೂಲಾನಿ ಚ ಫಲಾನಿ ಚ ॥ ೧೬

ನೇಗಿಲಿನಿಂದ ಉತ್ತು ಬೆಳಸಿದ ಧಾನ್ಯವನ್ನು ಬೇಡವೆಂದು ಬಿಟ್ಟಿದ್ದನ್ನಾದರೂ ಸ್ವೀಕರಿಸಬಾರದು. ಊರಿನ ಎಲ್ಲ ಸಾಮಗ್ರಿಯನ್ನು ಬಿಡುವುದು ಒಳ್ಳೆದು. ಕಾಡಿನದೇ ಆಗಬೇಕು.

ಅಗ್ನಿಪಕ್ವಾಶನೋ ವಾ ಸ್ಯಾತ್ಕಾಲಪಕ್ವಭುಗೇವ ವಾ ।
ಅಶ್ಮಕುಟ್ಟೋ ಭವೇದ್ವಾಪಿ ದಂತೋಲೂಖಲಿಕೋಽಪಿ ವಾ ॥ ೧೭

ಅಗ್ನಿಪಾಕವನ್ನು ಮಾಡಬಹುದು. ಕಾಲಪಕ್ವವನ್ನು ಸ್ವೀಕರಿಸಬಹುದು. ಕಲ್ಲಿನಲ್ಲಿ ಜಜ್ಜಿ ತಿನ್ನಬಹುದು. ಹಲ್ಲಿನಲ್ಲಿ ಜಗಿದು ತಿನ್ನಬಹುದಾದುದನ್ನು ಮಾತ್ರ ತಿಂದು ಬದುಕಬಹುದು.

ಸದ್ಯಃಪ್ರಕ್ಷಾಲಕೋ ವಾ ಸ್ಯಾನ್ಮಾಸಸಂಚಯಿಕೋಽಪಿ ವಾ ।
ಷಣ್ಮಾಸನಿಚಯೋ ವಾ ಸ್ಯಾತ್ಸಮಾನಿಚಯ ಏವ ವಾ ॥ ೧೮

ಒಂದು ದಿನ ಒಂದು ತಿಂಗಳು ಆರುತಿಂಗಳು ಒಂದುವರ್ಷ ಈ ನಾಲ್ಕರಲ್ಲಿ ಕಡಿಮೆ ಸಮಯಕ್ಕೆ ತಕ್ಕ ಧಾನ್ಯಸಂಗ್ರಹ ಮಾಡುವುದು ಒಳ್ಳೆದು.

ನಕ್ತಂ ಚಾನ್ನಂ ಸಮಶ್ನೀಯಾದ್ದಿವಾ ವಾಽಽಹೃತ್ಯ ಶಕ್ತಿತಃ ।
ಚತುರ್ಥಕಾಲಿಕೋ ವಾ ಸ್ಯಾತ್ಸ್ಯಾದ್ವಾಪ್ಯಷ್ಟಮಕಾಲಿಕಃ ॥ ೧೯

ರಾತ್ರಿ ಆಹಾರ, ಹಗಲು ಆಹಾರ, ನಾಲ್ಕುದಿನಕ್ಕೊಮ್ಮೆ, ಎಂಟುದಿನಕ್ಕೊಮ್ಮೆ ಹೀಗೆ ಉಣ್ಣುತ್ತ ಆಹಾರ ಕಡಿಮೆ ಮಾಡಬೇಕು.

ಚಾಂದ್ರಾಯಣವಿಧಾನೈರ್ವಾ ಶುಕ್ಲ ಕೃಷ್ಣೇ ಚ ವರ್ತಯೇತ್ ।
ಪಕ್ಷಾಂತಯೋರ್ವಾಪ್ಯಶ್ನೀಯಾದ್ಯವಾಗೂಂ ಕ್ವಥಿತಾಂ ಸಕೃತ್ ॥ ೨೦

ಚಂದ್ರಕಲೆಯು ವರ್ಧಿಸಿ ಕ್ಷೀಣಿಸುವಂತೆ ಆಹಾರದ ತುತ್ತನ್ನು ಕಡಿಮೆ ಮಾಡಿ ಅಮಾವಾಸ್ಯೆಯಂದು ಗಂಜಿ ಕುಡಿಯಬೇಕು.

ಪುಷ್ಪಮೂಲಫಲೈರ್ವಾಪಿ ಕೇವಲೈರ್ವರ್ತಯೇತ್ಸದಾ ।
ಕಾಲಪಕ್ವೈಃ ಸ್ವಯಂಶೀರ್ಣೈರ್ವೈಖಾನಸಮತೇ ಸ್ಥಿತಃ ॥ ೨೧

ವೈಖಾನಸ ಶಾಸ್ತ್ರದಂತೆ ಧಾನ್ಯ, ಅಗ್ನಿಪಕ್ವಗಳನ್ನು ಬಿಟ್ಟು ಹಣ್ಣು ತಿಂದು ಬದುಕಬಹುದು.

ಭೂಮೌ ವಿಪರಿವರ್ತೇತ ತಿಷ್ಠೇದ್ವಾ ಪ್ರಪದೈರ್ದಿನಂ ।
ಸ್ಥಾನಾಸನಾಭ್ಯಾಂ ವಿಹರೇತ್ಸವನೇಷೂಪಯನ್ನಪಃ ॥ ೨೨

ಮೂರು ಬಾರಿ ಸ್ನಾನ ಆಹಾರ ಕಾಲಹೊರತು ಇತರ ಕಾಲಗಳಲ್ಲಿ ನಿಂತಿರಬಹುದು ಕುಳಿತಿರಬಹುದು. ಹೀಗೆ ಕಾಲಕಳೆಯಬಹುದು.

ಗ್ರೀಷ್ಮೇ ಪಂಚತಪಾಸ್ತು ಸ್ಯಾದ್ವರ್ಷಾಸ್ವಭ್ರಾವಕಾಶಿಕಃ ।
ಆರ್ದ್ರವಾಸಾಸ್ತು ಹೇಮಂತೇ ಕ್ರಮಶೋ ವರ್ಧಯಂಸ್ತಪಃ ॥ ೨೩

ಚಳಿಗೆ ನೆನೆದ ಬಟ್ಟೆಯುಟ್ಟು ಮಳೆಗೆ ಮೈಯೊಡ್ಡಿ ಬಿಸಿಲಲ್ಲಿ ನಿಂತಿದ್ದು ದೇಹವನ್ನು ದಂಡಿಸಿ ಶೀತೋಷ್ಣಗಳಲ್ಲಿ ಸಮಾನಾನುಭವವನ್ನು ಸಾಧಿಸಬಹುದು.

ಉಪಸ್ಪೃಶಂಸ್ತ್ರಿಷವಣಂ ಪಿತೄನ್ದೇವಾಂಶ್ಚ ತರ್ಪಯೇತ್ ।
ತಪಶ್ಚರಂಶ್ಚೋಗ್ರತರಂ ಶೋಷಯೇದ್ದೇಹಮಾತ್ಮನಃ ॥ ೨೪

ಪಿತೃದೇವತರ್ಪಣ ಮಾಡುತ್ತ ಕಠಿಣ ತಪಸ್ಸನ್ನು ಆಚರಿಸಬಹುದು. ಪಕ್ಷೋಪವಾಸ ಮಾಸೋಪವಾಸ ಮಾಡಬಹುದು.

ಅಗ್ನೀನಾತ್ಮನಿ ವೈತಾನಾನ್ಸಮಾರೋಪ್ಯ ಯಥಾವಿಧಿ ।
ಅನಗ್ನಿರನಿಕೇತಃ ಸ್ಯಾನ್ಮುನಿರ್ಮೂಲಫಲಾಶನಃ ॥ ೨೫

ಹಿಂದೆ ಹೇಳಿದ ವೈತಾನಾಗ್ನಿಯನ್ನು ತನ್ನಲ್ಲಿ ಸಮಾರೋಪಣ ಮಾಡಿ ಅಗ್ನಿಯಿಲ್ಲದೆ, ಮನೆಯಿಲ್ಲದೆ ಕಾಡಾಡಿಯಾಗಬಹುದು.

ಅಪ್ರಯತ್ನಃ ಸುಖಾರ್ಥೇಷು ಬ್ರಹ್ಮಚಾರೀ ಧರಾಶಯಃ ।
ಶರಣೇಷ್ವಮಮಶ್ಚೈವ ವೃಕ್ಷಮೂಲನಿಕೇತನಃ ॥ ೨೬

ಸುಖಸಾಧನೆಯಲ್ಲಿ ಪ್ರಯತ್ನ ಮಾಡದೆ ಸ್ತ್ರೀಸಂಗ ಬಿಟ್ಟು ನೆಲದಲ್ಲಿ ಮಲಗಿ ಮರದಡಿಯೇ ಮನೆಯಾಗಿ ಒಳ್ಳೆ ಮನೆಯ ಆಸೆಯನ್ನು ತೊರೆಯಬೇಕು.

ತಾಪಸೇಷ್ವೇವ ವಿಪ್ರೇಷು ಯಾತ್ರಿಕಂ ಭೈಕ್ಷಮಾಚರೇತ್ ।
ಗೃಹಮೇಧಿಷು ಚಾನ್ಯೇಷು ದ್ವಿಜೇಷು ವನವಾಸಿಷು ॥ ೨೭

ಅವನಿದ್ದ ವನದಲ್ಲಿ ಹಣ್ಣು-ಹಂಪಲು, ಗಡ್ಡೆ-ಗೆಣಸು ಸಿಗುವುದಿಲ್ಲವಾದರೆ ವನವಾಸಿಗಳಾದ ಇತರ ಗೃಹಸ್ಥರಿಂದ ಜೀವ ಉಳಿಸುವಷ್ಟು ಮಾತ್ರ ತಿನ್ನಲು ಭಿಕ್ಷೆ ಎತ್ತಬಹುದು.

ಗ್ರಾಮಾದಾಹೃತ್ಯ ವಾಶ್ನೀಯಾತ್ ಅಷ್ಟೌ ಗ್ರಾಸಾನ್ ವನೇ ವಸನ್ ।
ಪ್ರತಿಗೃಹ್ಯ ಪುಟೇನೈವ ಪಾಣಿನಾ ಶಕಲೇನ ವಾ ॥ ೨೮

ಗ್ರಾಮದಿಂದ ಭಿಕ್ಷೆ ಬೇಡಿ ತಂದರೂ ಎಂಟುತುತ್ತು ಕೈಯಲ್ಲೋ ಏನಾದರೂ ಪಾತ್ರೆಯಲ್ಲೋ ತಿನ್ನಬಹುದು. ಕಾಡಿನಲ್ಲಿ ವಾಸವು.

ಏತಾಶ್ಚಾನ್ಯಾಶ್ಚ ಸೇವೇತ ದೀಕ್ಷಾ ವಿಪ್ರೋ ವನೇ ವಸನ್ ।
ವಿವಿಧಾಶ್ಚೌಪನಿಷದೀರಾತ್ಮಸಂಸಿದ್ಧಯೇ ಶ್ರುತೀಃ ॥ ೨೯

ಇಂತಹ ವಿವಿಧ ದೀಕ್ಷೆಯುಳ್ಳವನಾಗಿ ಆತ್ಮಸಿದ್ಧಿ ಹೇತುವಾದ ಅನೇಕ ಉಪನಿಷತ್ತುಗಳನ್ನು ಮನನ ಮಾಡಬೇಕು.

ಋಷಿಭಿರ್ಬ್ರಾಹ್ಮಣೈಶ್ಚೈವ ಗೃಹಸ್ಥೈರೇವ ಸೇವಿತಾಃ ।
ವಿದ್ಯಾತಪೋವಿವೃದ್ಧ್ಯರ್ಥಂ ಶರೀರಸ್ಯ ಚ ಶುದ್ಧಯೇ ॥ ೩೦

ಈ ಉಪನಿಷತ್ತುಗಳನ್ನು ಋಷಿಗಳು, ಗೃಹಸ್ಥರು ದೇಹಶುದ್ಧಿಗೆ ವಿದ್ಯಾ ತಪೋವೃದ್ಧಿಗೆ ತುಂಬ ಮನನ ಮಾಡಿದ್ದಾರೆ.

ಅಪರಾಜಿತಾಂ ವಾಸ್ಥಾಯ ವ್ರಜೇದ್ದಿಶಮಜಿಹ್ಮಗಃ ।
ಆ ನಿಪಾತಾಚ್ಛರೀರಸ್ಯ ಯುಕ್ತೋ ವಾರ್ಯನಿಲಾಶನಃ ॥ ೩೧

ಜಲ, ವಾಯುಗಳನ್ನು ಮಾತ್ರ ಸೇವಿಸುತ್ತಾ ನೇರಾಗಿ ಮರಣಪರ್ಯಂತ ಈಶಾನ್ಯ ದಿಕ್ಕಿಗೆ ಸಂಚರಿಸಬಹುದು.

ಆಸಾಂ ಮಹರ್ಷಿಚರ್ಯಾಣಾಂ ತ್ಯಕ್ತ್ವಾನ್ಯತಮಯಾ ತನುಂ |
ವೀತಶೋಕಭಯೋ ವಿಪ್ರೋ ಬ್ರಹ್ಮಲೋಕೇ ಮಹೀಯತೇ || ೩೨

ಮಹರ್ಷಿಗಳ ಯಾವುದೇ ಜೀವನದಿಂದ ಇರುವಾಗ ಮರಣ ಸಂಭವಿಸಿದರೆ ಸಂಸಾರದುಃಖ ನಿವೃತ್ತಿಯಾಗಿ ಬ್ರಹ್ಮಪ್ರಾಪ್ತಿಯನ್ನು ಹೊಂದುವನು ಅನುಭವಿಸುವನು.

ವನೇಷು ಚ ವಿಹೃತ್ಯೈವಂ ತೃತೀಯಂ ಭಾಗಮಾಯುಷಃ |
ಚತುರ್ಥಮಾಯುಷೋ ಭಾಗಂ ತ್ಯಕ್ತ್ವಾ ಸಂಗಾನ್ಪರಿವ್ರಜೇತ್ || ೩೩

ಈ ವರೆಗೆ ವಿವರಿಸಿದಂತೆ ವನವಾಸವನ್ನು ಮಾಡಿ ಆಯುಸ್ಸು ಇನ್ನು ಉಳಿದಿದ್ದರೆ ಆ ಚತುರ್ಥ ಭಾಗದಲ್ಲಿ ಸರ್ವಸಂಗ ಪರಿತ್ಯಾಗ ಮಾಡಬೇಕು.

ಆಶ್ರಮಾದಾಶ್ರಮಂ ಗತ್ವಾ ಹುತಹೋಮೋ ಜಿತೇಂದ್ರಿಯಃ |
ಭಿಕ್ಷಾಬಲಿಪರಿಶ್ರಾಂತಃ ಪ್ರವ್ರಜನ್ಪ್ರೇತ್ಯ ವರ್ಧತೇ || ೩೪

ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಎಂಬ ಮೂರು ಆಶ್ರಮಗಳನ್ನು ವಿಧ್ಯುಕ್ತ ಹೋಮದಿಂದ ಸಾಂಗಗೊಳಿಸಿ ವೈರಾಗ್ಯದಿಂದ ಪ್ರವ್ರಜ್ಯೆಯನ್ನು ಸ್ವೀಕರಿಸಿದರೆ ಆಗಲೂ ಬ್ರಹ್ಮಸಿದ್ಧಿಯನ್ನು ಹೊಂದುವನು.

ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ |
ಅನಪಾಕೃತ್ಯ ಮೋಕ್ಷಂ ತು ಸೇವಮಾನೋ ವ್ರಜತ್ಯಧಃ || ೩೫

ಹಿಂದಿನ ಮೂರು ಆಶ್ರಮಗಳಲ್ಲಿ ಮೂರು ಋಣಗಳನ್ನು ತೀರಿಸಿ ಮೋಕ್ಷಾಭಿಲಾಷೆ ಬಂದರೆ ಅವನು ಅಧೋಗತಿಯನ್ನು ಸರ್ವಥಾ ಹೊಂದಲಾರನು. ತಾತ್ಕಾಲಿಕ ವೈರಾಗ್ಯದಿಂದ ಬ್ರಹ್ಮಸಿದ್ಧಿಗೆ ಹೊರಟ ಎಷ್ಟೋ ಮಂದಿ ಲೈಂಗಿಕ ಒತ್ತಡದಿಂದ ಸ್ತ್ರೀಸಂಬಂಧವನ್ನು ಹೊಂದಿ ಭ್ರಷ್ಟರಾದುದು ಉಂಟು. ಆದುದರಿಂದ ಅಲ್ಪವಿಚಾರ, ಸಾಧನೆ, ಇಂದ್ರಿಯ ನಿಗ್ರಹದಿಂದ ಒಂದು ಆಶ್ರಮವನ್ನು ವ್ರತವನ್ನು ವ್ಯವಸ್ಥೆಯನ್ನು ಮೆಟ್ಟಿದರೆ ಚಲಿಸುವ ಸಂದರ್ಭ ಬಾರದಂತೆ ತುಂಬ ವಿಚಾರ ಸಿದ್ಧಿಗಳನ್ನು ಸಾಧಿಸಿ ಪರಾಮರ್ಶವುಳ್ಳ ಪುನರಾವರ್ತನೆಯಾಗದ ಕಾರ್ಯ ಕೈಕೊಳ್ಳುವುದು ಮೇಲ್ಮಟ್ಟದ ವರ್ತನೆ. ಅದನ್ನೆ ವಿಶದವಾಗಿ ವಿವರಿಸುತ್ತಾರೆ.

ಅಧೀತ್ಯ ವಿಧಿವದ್ವೇದಾನ್ ಪುತ್ರಾಂಶ್ಚೋತ್ಪಾದ್ಯ ಧರ್ಮತಃ ।
ಇಷ್ಟ್ವಾ ಚ ಶಕ್ತಿತೋ ಯಜ್ಞೈರ್ಮನೋ ಮೋಕ್ಷೇ ನಿವೇಶಯೇತ್ ॥ ೩೬

ವೇದ ಓದಿ ಸಂತಾನ ಪಡೆದು ಯಾಗ ಮಾಡಿ ಮನಸ್ಸು ಪರಿಶುದ್ಧವಾಗಿ ಸರ್ವಕಾಮನಾ ಸ್ವರೂಪಜ್ಞಾನದ ಬಳಿಕ ಬಂದ ಮೋಕ್ಷಾಭಿಲಾಷೆಯು ಚಲಿಸಲಾರದು.

ಅನಧೀತ್ಯ ದ್ವಿಜೋ ವೇದಾನನುತ್ಪಾದ್ಯ ತಥಾ ಸುತಾನ್ ।
ಅನಿಷ್ಟ್ವಾ ಚೈವ ಯಜ್ಞೈಶ್ಚ ಮೋಕ್ಷಮಿಚ್ಛನ್ ವ್ರಜತ್ಯಧಃ ॥ ೩೭

ಎಲ್ಲರಿಗೂ ವೈರಾಗ್ಯ ಬರಲಾರದು. ಬಂದು ಸನ್ಯಾಸಿಗಳಾಗಿ ವಿವಾಹ ಧನಾರ್ಜನೆ ವಿದ್ಯಾದಾನಗಳು ನಡೆಯದಿದ್ದರೆ ಪ್ರಜೆ, ವಿದ್ಯೆ, ಧನವು ಲೋಕದಲ್ಲಿ ಇಲ್ಲದೆ ಊರು ಬರಿದಾಗುವುದು.

ಪ್ರಾಜಾಪತ್ಯಾಂ ನಿರುಪ್ಯೇಷ್ಟಿಂ ಸರ್ವವೇದಸದಕ್ಷಿಣಾಂ ।
ಆತ್ಮನ್ಯಗ್ನೀನ್ ಸಮಾರೋಪ್ಯ ಬ್ರಾಹ್ಮಣಃ ಪ್ರವ್ರಜೇದ್ಗೃಹಾತ್ ॥ ೩೮

ಯಜುರ್ವೇದದಲ್ಲಿ ಹೇಳಿದಂತೆ ಸರ್ವಸ್ವದಕ್ಷಿಣ ಯಾಗವನ್ನು ಮಾಡಿ ಅಗ್ನಿಯನ್ನು ತನ್ನಲ್ಲಿ ಆವಾಹಿಸಿ ಪ್ರವ್ರಜ್ಯೆಯನ್ನು ಆಶ್ರಯಿಸಬಹುದು. ಜನರ ಅಭಿರುಚಿ, ಪರಿಪಾಕ, ಸಾಮರ್ಥ್ಯ, ಯೋಗ್ಯತೆಗಳು ವಿಚಿತ್ರವಾದುದರಿಂದ ಆವರವರಿಗೆ ಅಭೀಷ್ಟವಾದ ಪದ್ಧತಿಯನ್ನು ಪರಿಗ್ರಹಿಸಬಹುದೆಂದು ಈ ಪ್ರಕರಣದಲ್ಲಿ ತುಂಬ ಮಾದರಿಯ ಅವಸ್ಥೆಯನ್ನು ತೋರಿಸಿದ್ದಾರೆ.

ಯೋ ದತ್ವಾ ಸರ್ವಭೂತೇಭ್ಯಃ ಪ್ರವ್ರಜತ್ಯಭಯಂ ಗೃಹಾತ್ ।
ತಸ್ಯ ತೇಜೋಮಯಾ ಲೋಕಾ ಭವಂತಿ ಬ್ರಹ್ಮವಾದಿನಃ ॥ ೩೯

ಎಲ್ಲ ಸ್ಥಾವರಜಂಗಮ ಪ್ರಾಣಿಗಳಿಗೆ ಹಿಂಸಾಕರವಾದ ಗೃಹಸ್ಥಾಶ್ರಮವನ್ನು ಬಿಟ್ಟರೆ, ಅವುಗಳಿಗೆ ಅಭಯದಾನ ಮಾಡಿದಂತೆ. ಉಳುವುದು, ಕೊಯ್ಯುವುದು, ಅಗೆಯುವುದು ಇದರಿಂದ ಕೆಲವು ಅಂಶದಲ್ಲಿ ನೆಲ, ಜಂತು, ದನ, ಕರು, ಮರ, ಗಿಡಗಳಿಗೆ ಪೀಡೆಯಿದೆ. ಆದುದರಿಂದ ಮನೆ ಬಿಟ್ಟು

ಸನ್ಯಾಸಿಯಾದರೆ ಅನೇಕ ಹಿಂಸಾಪ್ರಕರಣಗಳಿಂದ ತಪ್ಪಿಕೊಂಡು ಬ್ರಹ್ಮಜ್ಞಾನದಿಂದ ಶ್ರೇಯೋಭಾಜನನಾಗುವನು.

ಯಸ್ಮಾದಣ್ವಪಿ ಭೂತಾನಾಂ ದ್ವಿಜಾನ್ನೋತ್ಪದ್ಯತೇ ಭಯಂ |
ತಸ್ಯ ದೇಹಾದ್ವಿಮುಕ್ತಸ್ಯ ಭಯಂ ನಾಸ್ತಿ ಕುತಶ್ಚನ || ೪೦

ಪರರಿಗೆ ಅಣು ಮಾತ್ರ ಭಯವನ್ನು ಕೊಡದವನು ತಾನು ಅಭಯ ಹೊಂದುವುದು ವಿರುದ್ಧವಲ್ಲ.

ಅಗಾರಾದಭಿನಿಷ್ಕ್ರಾಂತಃ ಪವಿತ್ರೋಪಚಿತೋ ಮುನಿಃ |
ಸಮುಪೋಢೇಷು ಕಾಮೇಷು ನಿರಪೇಕ್ಷಃ ಪರಿವ್ರಜೇತ್ || ೪೧

ಬಳಿಸಾರಿದ ವಸ್ತುಗಳಲ್ಲಿ ಆಶೆಯಿಲ್ಲದೆ ಮನೆ ಬಿಟ್ಟು ದಂಡಕಮಂಡಲು ಹಿಡಿದು ಸನ್ಯಾಸಿಯಾಗುವುದು ವಿರಾಗಾವಸ್ಥೆಯಲ್ಲಿ ಯೋಗ್ಯವು

ಏಕ ಏವ ಚರೇನ್ನಿತ್ಯಂ ಸಿದ್ಧ್ಯರ್ಥಮಸಹಾಯವಾನ್ |
ಸಿದ್ಧಿಮೇಕಸ್ಯ ಸಂಪಶ್ಯನ್ನ ಜಹಾತಿ ನ ಹೀಯತೇ || ೪೨

ತನ್ನ ಪ್ರಯತ್ನದಿಂದ ತನಗೆ ಮಾತ್ರ ಚಿತ್ತಶುದ್ಧಿಯಾಗಿ ದುಃಖವುಂಟಾಗದೆ ಕೇವಲಾವಸ್ಥೆಯು ಬರುವುದರಿಂದ ಇತರರಂತೆ ಪತ್ನೀಪುತ್ರರ ಸಹಾಯವೂ ಅವಶ್ಯವಿಲ್ಲ. ಸರ್ವಸಂಗ ಪರಿತ್ಯಾಗವು ಯುಕ್ತವಾದುದು.

ಅನಗ್ನಿರನಿಕೇತಃ ಸ್ಯಾದ್ಗ್ರಾಮಮನ್ನಾರ್ಥಮಾಶ್ರಯೇತ್ |
ಉಪೇಕ್ಷಕೋಽಸಂಕುಸುಕೋ ಮುನಿರ್ಭಾವಸಮಾಹಿತಃ || ೪೩

ಅಗ್ನಿಯಿಲ್ಲ ಮನೆಯಿಲ್ಲ ಅವೆರಡು ಹೆಂಡತಿಯ ಅಧಿಕಾರ. ದೇಹಸುಖದಲ್ಲಿ ಅನಾಸಕ್ತಿ ಸ್ಥಿರನಿಶ್ಚಯ ಬ್ರಹ್ಮಮನನ ಶೀಲ ಇರುವಾಗ ಬದುಕುವ ನಾಲ್ಕು ತುತ್ತಿಗೆ ಮಾತ್ರ ಮನೆ ಹುಡುಕಿ ಭಿಕ್ಷೆ ಎತ್ತಿ ಇತರ ಸಮಯ ಧ್ಯಾನ ಮಗ್ನನಾಗಬೇಕು.

ಕಪಾಲಂ ವೃಕ್ಷಮೂಲಾನಿ ಕುಚೇಲಮಸಹಾಯತಾ |
ಸಮತಾ ಚೈವ ಸರ್ವಸ್ಮಿನ್ನೇತನ್ಮುಕ್ತಸ್ಯ ಲಕ್ಷಣಂ || ೪೪

ಮಣ್ಣಿನ ಓಡು ಮರದಡಿ ಮಾನ ಮುಚ್ಚುವ ಬಟ್ಟೆ ಶತ್ರುಮಿತ್ರಭಾವ ಬಿಡುವುದು ಇದು ಮುಕ್ತಿ ಯೋಗ್ಯನಿಗೆ ಮಾತ್ರ ಪ್ರಿಯವಾಗುವ ಅವಸ್ಥೆ.

ನಾಭಿನಂದೇತ ಮರಣಂ ನಾಭಿನಂದೇತ ಜೀವಿತಂ ।
ಕಾಲಮೇವ ಪ್ರತೀಕ್ಷೇತ ನಿರ್ದೇಶಂ ಭೃತಕೋ ಯಥಾ ॥ ೪೫

ಸಾಯಲು ಬದುಕಲು ಎರಡಕ್ಕೂ ಆಶೆಪಡಬಾರದು. ಸಂಬಳದವನು ಆಜ್ಞೆಯನ್ನು ಇಲ್ಲವೇ ಹಣ ಸಿಗುವುದನ್ನು ಗುರಿಯಿಟ್ಟು ಕಾಯುವಂತೆ ಜ್ಞಾನ ಪ್ರಾದುರ್ಭಾವದ ಬಳಿಕ ಏನನ್ನೂ ನಿರೀಕ್ಷಿಸದೆ ಮೋಕ್ಷಕಾಲವನ್ನು ಮಾತ್ರ ಕಾಯಬೇಕು.

ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಜಲಂ ಪಿಬೇತ್ ।
ಸತ್ಯಪೂತಾಂ ವದೇದ್ವಾಚಂ ಮನಃಪೂತಂ ಸಮಾಚರೇತ್ ॥ ೪೬

ಕೇವಲ ಹಿಂಸಾವರ್ಜನಕ್ಕಾಗಿ ನೆಲ ನೋಡಿ ನಡೆಯಬೇಕು. ನೀರನ್ನು ಬಟ್ಟೆಯಲ್ಲಿ ಗಾಳಿಸದೆ ಕುಡಿಯಬಾರದು. ಸುಳ್ಳಾಡಬಾರದು. ತನ್ನ ಧ್ಯಾನಕ್ಕೆ ವಿರುದ್ಧವಾದುದನ್ನು ಚಿಂತಿಸಬಾರದು.

ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।
ನ ಚೇಮಂ ದೇಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ॥ ೪೭

ತನ್ನನ್ನು ಕುರಿತ ನಿಂದೆಯಿಂದಲೂ ಶಾಂತಿಯು ಇರಬೇಕು. ಅವಮಾನ ವೈರಗಳನ್ನು ಯಾರಿಗೂ ಮಾಡಬಾರದು.

ಕ್ರುಧ್ಯಂತಂ ನ ಪ್ರತಿಕ್ರುಧ್ಯೇದಾಕ್ರುಷ್ಟಃ ಕುಶಲಂ ವದೇತ್ ।
ಸಪ್ತದ್ವಾರಾವಕೀರ್ಣಾಂ ಚ ನ ವಾಚಮನೃತಾಂ ವದೇತ್ ॥ ೪೮

ತನ್ನ ಮೇಲೆ ಸಿಟ್ಟುಗೊಂಡವನ ಮೇಲೆ ತಾನು ಸಿಟ್ಟಾಗುವುದು ಬೇಡ. ತನ್ನನ್ನು ಬೈದರೂ ಅವನಿಗೆ ಶುಭವನ್ನಾಡಬೇಕು. ಇಂದ್ರಿಯ ವಿಷಯಗಳು ಅನಿತ್ಯಗಳಾದುದರಿಂದ ಅದರ ಗೊಡವೆ ಬಿಟ್ಟು ನಿತ್ಯಾತ್ಮ ಪರವಾದ ವಚನವನ್ನು ಮಾತ್ರ ಆಡಬೇಕು.

ಅಧ್ಯಾತ್ಮರತಿರಾಸೀನೋ ನಿರಪೇಕ್ಷೋ ನಿರಾಮಿಷಃ ।
ಆತ್ಮನೈವ ಸಹಾಯೇನ ಸುಖಾರ್ಥೀ ವಿಚರೇದಿಹ ॥ ೪೯

ಯೋಗ...ನನಬದ್ಧನಾಗಿ ಧ್ಯಾನಾಸಕ್ತನಾಗಬೇಕು. ಬ್ರಹ್ಮಾನಂದವನ್ನು ಮಾತ್ರ ಆಶಿಸಬೇಕು.

ನ ಚೋತ್ಪಾತನಿಮಿತ್ತಾಭ್ಯಾಂ ನ ನಕ್ಷತ್ರಾಂಗವಿದ್ಯಯಾ ।
ನಾನುಶಾಸನವಾದಾಭ್ಯಾಂ ಭಿಕ್ಷಾಂ ಲಿಪ್ಸೇತ ಕರ್ಹಿಚಿತ್ ॥ ೫೦

ಶಕುನ, ಪ್ರಶ್ನೆ, ಭವಿಷ್ಯ, ರೇಖಾ, ನೀತಿಗಳ ಫಲಬೋಧನೆಯಿಂದ ಲೋಭಗೊಳಿಸಿ ಭಿಕ್ಷೆ ಪಡೆಯುವ ಸಂಚು ಹೂಡಬಾರದು.

ನ ತಾಪಸೈರ್ಬ್ರಾಹ್ಮಣೈರ್ವಾ ವಯೋಭಿರಪಿ ವಾ ಶ್ವಭಿಃ ।
ಆಕೀರ್ಣಂ ಭಿಕ್ಷುಕೈರ್ವಾನ್ಯೈರಗಾರಮುಪಸಂವ್ರಜೇತ್ ॥ ೫೧

ತಾಪಸ, ಬ್ರಾಹ್ಮಣರು, ಹಕ್ಕಿ, ನಾಯಿ, ಭಿಕ್ಷುಕರು—ಇವರಿಂದ ತುಂಬಿದ ಮನೆಯನ್ನು ಭಿಕ್ಷೆಗಾಗಿ ಸೇರಬಾರದು.

ಕ್ಲೃಪ್ತಕೇಶನಖಶ್ಮಶ್ರುಃ ಪಾತ್ರೀ ದಂಡೀ ಕುಸುಂಭವಾನ್ ।
ವಿಚರೇನ್ನಿಯತೋ ನಿತ್ಯಂ ಸರ್ವಭೂತಾನ್ಯಪೀಡಯನ್ ॥ ೫೨

ಉಗುರು (ಕೂದಲು) ತಲೆ ಮುಖ ಬೋಳಿಸಿ ದಂಡ ಕಮಂಡಲು ಹಿಡಿದು ಸಂಚರಿಸಬೇಕು. ಇದು ಪರಿಚಯಕ್ಕೆ.

ಅತೈಜಸಾನಿ ಪಾತ್ರಾಣಿ ತಸ್ಯ ಸ್ಯುರ್ನಿರ್ವ್ರಣಾನಿ ಚ ।
ತೇಷಾಮದ್ಭಿಃ ಸ್ಮೃತಂ ಶೌಚಂ ಚಮಸಾನಾಮಿವಾಧ್ವರೇ ॥ ೫೩

ಲೋಹದ ಪಾತ್ರೆ ಬೇಡ, ಇದ್ದುದನ್ನು ನೀರಿನಿಂದ ತೊಳೆದು ಶುಚಿ ಮಾಡುವುದು. ಅಂತಹದನ್ನು ಮುಂದೆ ಹೇಳುತ್ತಾರೆ.

ಅಲಾಬುಂ ದಾರುಪಾತ್ರಂ ಚ ಮೃನ್ಮಯಂ ವೈದಲಂ ತಥಾ ।
ಏತಾನಿ ಯತಿಪಾತ್ರಾಣಿ ಮನುಃ ಸ್ವಾಯಂಭುವೋಽಬ್ರವೀತ್ ॥ ೫೪

ಸೋರೆಬುರುಡೆ, ಮರದಮರಿಗೆ, ಮಣ್ಣಿನ ಓಡು, ಬಿದಿರುಸಿಗುಳಿನ ಕುಕ್ಕೆ, ಇವೆಲ್ಲ ಯತಿಪಾತ್ರಗಳಾಗಬಹುದೆಂದು ಮನುಮತವು.

ಏಕಕಾಲಂ ಚರೇದ್ಭೈಕ್ಷಂ ನ ಪ್ರಸಜ್ಜೇತ ವಿಸ್ತರೇ ।
ಭೈಕ್ಷೇ ಪ್ರಸಕ್ತೋ ಹಿ ಯತಿರ್ವಿಷಯೇಷ್ವಪಿ ಸಜ್ಜತಿ ॥ ೫೫

ಒಂದೇ ಹೊತ್ತು ಭಿಕ್ಷೆ ತಂದು ಆಹಾರವು ಅಧಿಕಪ್ರಸಂಗ ಮಾಡಬಾರದು. ಅದರಿಂದ ವಿಷಯಾಭಿಲಾಷೆಯು ಉಲ್ಬಣಿಸುವುದು.

ವಿಧೂಮೇ ಸನ್ನಮುಸಲೇ ವ್ಯಂಗಾರೇ ಭುಕ್ತವಜ್ಜನೇ ।
ವೃತ್ತೇ ಶರಾವಸಂಪಾತೇ ಭಿಕ್ಷಾಂ ನಿತ್ಯಂ ಯತಿಶ್ಚರೇತ್ ॥ ೫೬

ಸಾಯಂಕಾಲವು ಸನ್ಯಾಸಿಯ ಭಿಕ್ಷಾಕಾಲವು ಆಗ ಮನೆ ಮೇಲೆ ಹೊಗೆಯಾಡದು. ಒನಕೆ ಸದ್ದಿಲ್ಲ. ಒಲೆ ಕೆಂಡ ತಣಿಯುವುದು. ಮನೆ ಜನ ಉಂಡಿರುವರು. ಅಡಿಗೆ ಪಾತ್ರೆ ತೊಳೆಯಲು ಹೊರಗಿಟ್ಟಿರುವುದು. ಆಗ ಭಿಕ್ಷೆ ಬೇಡುವುದು.

ಅಲಾಭೇ ನ ವಿಷಾದೀ ಸ್ಯಾಲ್ಲಾಭೇ ಚೈವ ನ ಹರ್ಷಯೇತ್ ।
ಪ್ರಾಣಯಾತ್ರಿಕಮಾತ್ರಃ ಸ್ಯಾನ್ಮಾತ್ರಾಸಂಗಾದ್ವಿನಿರ್ಗತಃ ॥ ೫೭

ಭಿಕ್ಷೆ ಸಿಕ್ಕಿದರೆ ಸಂತೋಷವೂ ಬೇಡ. ಸಿಕ್ಕದೆ ಇದ್ದರೆ ವಿಷಾದವೂ ಬೇಡ. ಚಂದದ ದಂಡಕಮಂಡಲು ಹುಡುಕುವುದೂ ಬೇಡ. ಜೀವ ಇದ್ದರಾಯಿತು.

ಅಭಿಪೂಜಿತಲಾಭಾಂಸ್ತು ಜುಗುಪ್ಸೇತೈವ ಸರ್ವಶಃ ।
ಅಭಿಪೂಜಿತಲಾಭೈಶ್ಚ ಯತಿರ್ಮುಕ್ತೋಽಪಿ ಬಧ್ಯತೇ ॥ ೫೮

ಸತ್ಕಾರ ಮಾಡಿ ಭಿಕ್ಷೆ ಕೊಡುವುದನ್ನು ಆಶಿಸಬಾರದು. ಅದು ಬಂಧನವಾಗುವುದು. ಪ್ರೀತಿ ಬೆಳೆಯುವುದು.

ಅಲ್ಪಾನ್ನಾಭ್ಯವಹಾರೇಣ ರಹಃಸ್ಥಾನಾಸನೇನ ಚ ।
ಹ್ರಿಯಮಾಣಾನಿ ವಿಷಯೈರಿಂದ್ರಿಯಾಣಿ ನಿವರ್ತಯೇತ್ ॥ ೫೯

ಅಲ್ಪಾಹಾರ, ವಿಜನದೇಶವಾಸ ಇವುಗಳಿಂದ ಇಂದ್ರಿಯಗಳು ಹೊರಗೆ ರಮಿಸುವ ಆಸ್ಪದವು ಕಡಿಮೆ.

ಇಂದ್ರಿಯಾಣಾಂ ನಿರೋಧೇನ ರಾಗದ್ವೇಷಕ್ಷಯೇಣ ಚ ।
ಅಹಿಂಸಯಾ ಚ ಭೂತಾನಾಮಮೃತತ್ವಾಯ ಕಲ್ಪತೇ ॥ ೬೦

ರಾಗದ್ವೇಷವಿಲ್ಲದೆ ಇಂದ್ರಿಯವು ಶಾಂತವಾದಾಗ ಪರಹಿಂಸೆಯಿಲ್ಲದಿರುವುದರಿಂದ ಮರಣಧರ್ಮವನ್ನು ದಾಟುವನು.

ಅವೇಕ್ಷೇತ ಗತೀರ್ನೃಣಾಂ ಕರ್ಮದೋಷಸಮುದ್ಭವಾಃ ।
ನಿರಯೇ ಚೈವ ಪತನಂ ಯಾತನಾಶ್ಚ ಯಮಕ್ಷಯೇ ॥ ೬೧

ಅಕಾರ್ಯಕರಣ, ಕಾರ್ಯಪರಿತ್ಯಾಗಗಳಿಂದ ದುರ್ಗತಿಯನ್ನು ನರಕವಾಸ ಯಮನ ಯಾತನೆಗಳನ್ನು ನೆನಸಬೇಕು.

ವಿಪ್ರಯೋಗಂ ಪ್ರಿಯೈಶ್ಚೈವ ಸಂಯೋಗಂ ಚ ತಥಾಪ್ರಿಯೈಃ ।
ಜರಯಾ ಚಾಭಿಭವನಂ ವ್ಯಾಧಿಭಿಶ್ಚೋಪಪೀಡನಂ ॥ ೬೨

ಬಯಸಿದುದು ತಪ್ಪುವುದು. ಬೇಡವಾದುದು ದೊರಕುವುದು. ಮುಪ್ಪು ಆವರಿಸುವುದು. ರೋಗಜೀರ್ಣನಾಗುವುದು.

ದೇಹಾದುತ್ಕ್ರಮಣಂ ಚಾಸ್ಮಾತ್ಪುನರ್ಗರ್ಭೇ ಚ ಸಂಭವಂ ।
ಯೋನಿಕೋಟಿಸಹಸ್ರೇಷು ಸೃತೀಶ್ಚಾಸ್ಯಾಂತರಾತ್ಮನಃ ॥ ೬೩

ಈ ದೇಹ ಬಿಡುವುದು ಮತ್ತೊಂದು ಗರ್ಭವಾಸ ಹಾಗೆ ಅನೇಕ ಮೃಗಪಕ್ಷಿ ಜನ್ಮ ಇಂತಹ ಆತ್ಮಯಾತ್ರೆಯನ್ನು ಕಷ್ಟಮಯವೆಂದು ಪರಾಮರ್ಶಿಸಬೇಕು.

ಅಧರ್ಮಪ್ರಭವಂ ಚೈವ ದುಃಖಯೋಗಂ ಶರೀರಿಣಾಂ ।
ಧರ್ಮಾರ್ಥಪ್ರಭವಂ ಚೈವ ಸುಖಸಂಯೋಗಮಕ್ಷಯಂ ॥ ೬೪

ಅಧರ್ಮದಿಂದ ಜೀವನ ದುಃಖರಾಶಿ. ಧರ್ಮದಿಂದ ಶಾಶ್ವತ ಸುಖ ಉಂಟಾಗುವುದು.

ಸೂಕ್ಷ್ಮತಾಂ ಚಾನ್ವವೇಕ್ಷೇತ ಯೋಗೇನ ಪರಮಾತ್ಮನಃ ।
ದೇಹೇಷು ಚ ಸಮುತ್ಪತ್ತಿಮುತ್ತಮೇಷ್ವಧಮೇಷು ಚ ॥ ೬೫

ಆತ್ಮನ ಲಿಂಗ ಶರೀರ ದೇವಪಶ್ವಾದಿ ಶರೀರ ಸಂಬಂಧದಿಂದ ಶುಭಾಶುಭಗಳನ್ನು ಯೋಗದೃಷ್ಟಿಯಿಂದ ನೋಡಬೇಕು.

ದೂಷಿತೋಽಪಿ ಚರೇದ್ಧರ್ಮಂ ಯತ್ರ ತತ್ರಾಶ್ರಮೇ ರತಃ ।
ಸಮಃ ಸರ್ವೇಷು ಭೂತೇಷು ನ ಲಿಂಗಂ ಧರ್ಮಕಾರಣಂ ॥ ೬೬

ಮರವೃಷ್ಟಿಯಿಂದ ಧರ್ಮಲೋಪವು ಬಂದರೂ ಪುನಃ ಸರ್ವತ್ರ ಸಮಬುದ್ಧಿಯಿಂದ ಧರ್ಮಪರಾಯಣನಾಗಬೇಕು. ಕಾವಿಬಟ್ಟೆ ದಂಡ ಕಮಂಡಲುಗಳು ಮಾತ್ರ ಧರ್ಮವಲ್ಲ.

ಫಲಂ ಕತಕವೃಕ್ಷಸ್ಯ ಯದ್ಯಪ್ಯಂಬುಪ್ರಸಾದಕಂ ।
ನ ನಾಮಗ್ರಹಣಾದೇವ ತಸ್ಯ ವಾರಿ ಪ್ರಸೀದತಿ ॥ ೬೭

ಕತಕದ ಬೀಜವು ಕಲಕು ನೀರನ್ನು ಹಣಿಸುವುದಾದರೂ ಹೆಸರು ಹೇಳಿದರೆ ಸಾಲದು. ಅರೆದು ನೀರಲ್ಲಿ ಕದಡಬೇಕು. ಅದರಂತೆ ವೇಶವು ಫಲದಾಯಕವಲ್ಲ. ಮನಃಪೂರ್ವಕ ಕರ್ಮವು.

ಸಂರಕ್ಷಣಾರ್ಥಂ ಜಂತೂನಾಂ ರಾತ್ರಾವಹನಿ ವಾ ಸದಾ ।
ಶರೀರಸ್ಯಾತ್ಯಯೇ ಚೈವ ಸಮೀಕ್ಷ್ಯ ವಸುಧಾಂ ಚರೇತ್ ॥ ೬೮

ದೇಹಕ್ಕೆ ದುಃಖವಿದ್ದರೂ ಹಗಲು-ರಾತ್ರಿ ಕ್ರಿಮಿಕೀಟಗಳಿಗೂ ಪೀಡೆಯಾಗದಂತೆ ಎಚ್ಚರವಹಿಸಬೇಕು.

ಅಹ್ನಾ ರಾತ್ರ್ಯಾ ಚ ಯಾಞ್ಜಂತೂನ್ ಹಿನಸ್ತ್ಯಜ್ಞಾನತೋ ಯತಿಃ ।
ತೇಷಾಂ ಸ್ನಾತ್ವಾ ವಿಶುದ್ಧ್ಯರ್ಥಂ ಪ್ರಾಣಾಯಾಮಾನ್ ಷಡಾಚರೇತ್ ॥ ೬೯

ಮಿಂದು ಆರು ಪ್ರಾಣಾಯಾಮ ಮಾಡಿದರೆ ಹಗಲು-ರಾತ್ರಿ ಕಾಲಗಳಲ್ಲಿ ತಿಳಿಯದೆ ಸಂಭವಿಸಿದ ಪ್ರಾಣಿಹಿಂಸೆಯ ಪ್ರಾಯಶ್ಚಿತ್ತವು.

ಪ್ರಾಣಾಯಾಮಾ ಬ್ರಾಹ್ಮಣಸ್ಯ ತ್ರಯೋಽಪಿ ವಿಧಿವತ್ಕೃತಾಃ ।
ವ್ಯಾಹೃತಿಪ್ರಣವೈರ್ಯುಕ್ತಾ ವಿಜ್ಞೇಯಂ ಪರಮಂ ತಪಃ ॥ ೭೦

ವ್ಯಾಹೃತಿಪ್ರಣವ ಸಹಿತವಾಗಿ ಮಾಡಿದ ಮೂರು ಪ್ರಾಣಾಯಾಮವೂ ದೊಡ್ಡ ತಪಸ್ಸು. ವಾಯುವನ್ನು ನಿಲ್ಲಿಸುವ ಸೇದುವ ಬಿಡುವ ಕ್ರಮದಿಂದ ದೇಹದ ಎಲ್ಲ ಭಾಗವು ವಾಯು ಸಂಚಾರದಿಂದ ಮಲನಿವಾರಣೆಯನ್ನು ಮನಶ್ಚಾಂಚಲ್ಯವನ್ನು ತಡೆಗಟ್ಟುವುದರಿಂದ ಕಾರ್ಯಕಾರಿಯಾಗಿದೆ.

ದಹ್ಯಂತೇ ಧ್ಮಾಯಮಾನಾನಾಂ ಧಾತೂನಾಂ ಹಿ ಯಥಾ ಮಲಾಃ ।
ತಥೇಂದ್ರಿಯಾಣಾಂ ದಹ್ಯಂತೇ ದೋಷಾಃ ಪ್ರಾಣಸ್ಯ ನಿಗ್ರಹಾತ್ ॥ ೭೧

ಲೋಹಗಳು ಬೆಂಕಿಯಲ್ಲಿ ಕಾದು ಶುದ್ಧವಾಗುವಂತೆ ಇಂದ್ರಿಯಗಳು ದೋಷಮುಕ್ತವಾಗುವುವು.

ಪ್ರಾಣಾಯಾಮೈರ್ದಹೇದ್ದೋಷಾನ್ಧಾರಣಾಭಿಶ್ಚ ಕಿಲ್ಬಿಷಂ ।
ಪ್ರತ್ಯಾಹಾರೇಣ ಸಂಸರ್ಗಾನ್ಧ್ಯಾನೇನಾನೀಶ್ವರಾನ್‌ಗುಣಾನ್ ॥ ೭೨

ಪ್ರಾಣಯಾಮದಿಂದ ಇಂದ್ರಿಯಶುದ್ಧಿ, ಬ್ರಹ್ಮನಲ್ಲಿ ಮನೋಧಾರಣೆಯಿಂದ ಪಾಪನಾಶ ವಿಷಯಗಳಿಂದ ಇಂದ್ರಿಯವನ್ನು ಹಿಂಗಿಸುವುದು, ಕ್ರೋಧ ಲೋಭಾದಿ ದೇವಗುಣವಲ್ಲದ ತಮೋಗುಣವನ್ನು ಅಡಗಿಸುವುದು. ಇವನ್ನು ಸಾಧಿಸಬೇಕು.

ಉಚ್ಚಾವಚೇಷು ಭೂತೇಷು ದುರ್ಜ್ಞೇಯಾಮಕೃತಾತ್ಮಭಿಃ ।
ಧ್ಯಾನಯೋಗೇನ ಸಂಪಶ್ಯೇದ್ಗತಿಮಸ್ಯಾಂತರಾತ್ಮನಃ ॥ ೭೩

ಅನಂತ ನೀಚೋಚ್ಚ ಜನ್ಮಸರಣಿಯು ಅಸಂಸ್ಕೃತ ಮತಿಗೆ ಗೋಚರವಲ್ಲ. ಧ್ಯಾನಯೋಗದಿಂದ ಆತ್ಮನ ವಿವಿಧ ಗತಿಯನ್ನು ತಿಳಿದು ಸದ್ಗತಿಯನ್ನು ಸಾಧಿಸಬೇಕು.

ಸಮ್ಯಗ್ದರ್ಶನಸಂಪನ್ನಃ ಕರ್ಮಭಿರ್ನ ನಿಬಧ್ಯತೇ ।
ದರ್ಶನೇನ ವಿಹೀನಸ್ತು ಸಂಸಾರಂ ಪ್ರತಿಪದ್ಯತೇ ॥ ೭೪

ಸಮ್ಯಗ್ದರ್ಶನವಿದ್ದರೆ ಕರ್ಮವು ಬಂಧಿಸಲಾರದು. ಅದಿಲ್ಲದೆ ಇದ್ದರೆ ಸಂಸಾರಬಂಧನವು.

ಅಹಿಂಸಯೇಂದ್ರಿಯಾಸಂಗೈರ್ವೈದಿಕೈಶ್ಚೈವ ಕರ್ಮಭಿಃ ।
ತಪಸಶ್ಚರಣೈಶ್ಚೋಗ್ರೈಃ ಸಾಧಯಂತೀಹ ತತ್ಪದಂ ॥ ೭೫

ಹಿಂಸಾವರ್ಜನೆ, ಕಾಮನಾತ್ಯಾಗ, ವೈದಿಕ ಕರ್ಮಾಚರಣೆ ಚಾಂದ್ರಾಯಣಾದಿ ಉಗ್ರತಪಸು ಇವುಗಳು ಪರಮಪದವನ್ನು ದೊರಕಿಸುವುವು.

ಅಸ್ಥಿಸ್ಥೂಣಂ ಸ್ನಾಯುಯುತಂ ಮಾಂಸಶೋಣಿತಲೇಪನಂ |
ಚರ್ಮಾವನದ್ಧಂ ದುರ್ಗಂಧಿ ಪೂರ್ಣಂ ಮೂತ್ರಪುರೀಷಯೋಃ || ೭೬

ಜರಾಶೋಕಸಮಾವಿಷ್ಟಂ ರೋಗಾಯತನಮಾತುರಂ |
ರಜಸ್ವಲಮನಿತ್ಯಂ ಚ ಭೂತಾವಾಸಮಿಮಂ ತ್ಯಜೇತ್ || ೭೭

ಎಲುಬಿನಕಂಬ ಸ್ನಾಯುಬಳ್ಳಿ, ರಕ್ತಮಾಂಸಲೇಪ, ಚರ್ಮದಹೊದಿಕೆ, ದುರ್ವಾಸನೆಯ ಮಲಮೂತ್ರ, ಮುಪ್ಪು, ಸಿಟ್ಟು, ರೋಗ, ಹಸಿವು, ಬಾಯಾರಿಕೆ, ರಜೋಗುಣ, ಪರಿಣಾಮಶೀಲ ಇಂತಹ ಕೊಳಕು ಮನೆಯನ್ನು ಆತ್ಮನು ಪಡೆಯದಂತೆ ಮಾಡಬೇಕು.

ನದೀಕೂಲಂ ಯಥಾ ವೃಕ್ಷೋ ವೃಕ್ಷಂ ವಾ ಶಕುನಿರ್ಯಥಾ |
ತಥಾ ತ್ಯಜನ್ನಿಮಂ ದೇಹಂ ಕೃಚ್ಛ್ರಾದ್ಗ್ರಾಹಾದ್ವಿಮುಚ್ಯತೇ || ೭೮

ನದೀದಡದ ಮರ ಅದರ ಮೇಲಿನ ಹಕ್ಕಿ ಇವೆರಡರಲ್ಲಿ ಮರವು ತಿಳಿಯದೆ ನೀರಲ್ಲಿ ಕೊಚ್ಚಿಹೋಗುವುದು. ಜ್ಞಾನಿಯಾದವನು (ತಿಳಿದು) ಹಕ್ಕಿಯಂತೆ ಹಾರಿ, ಬಿಟ್ಟುಹೋಗುವನು. ಅಪಾಯಕ್ಕೆ ಒಳಗಾಗುವುದಿಲ್ಲ. ಹಾಗೆಯೇ ಮೊಸಳೆಯಿಂದ ಜಲಚರಗಳು ಪಾರಾಗುವಂತೆ ಆತ್ಮನು ಪಾರಾಗಬೇಕು.

ಪ್ರಿಯೇಷು ಸ್ವೇಷು ಸುಕೃತಮಪ್ರಿಯೇಷು ಚ ದುಷ್ಕೃತಂ |
ವಿಸೃಜ್ಯ ಧ್ಯಾನಯೋಗೇನ ಬ್ರಹ್ಮಾಭ್ಯೇತಿ ಸನಾತನಂ || ೭೯

ಜ್ಞಾನಿಯು ತನ್ನ ಹಿತದವರಲ್ಲಿ ತನ್ನ ಪುಣ್ಯವನ್ನು ಅಪ್ರಿಯರತ ದುಷ್ಕೃತವನ್ನು ಬಿಟ್ಟು ತಾನೊಬ್ಬನೆ ಬ್ರಹ್ಮನಾಗುವನು.

ಯದಾ ಭಾವೇನ ಭವತಿ ಸರ್ವಭಾವೇಷು ನಿಃಸ್ಪೃಹಃ |
ತದಾ ಸುಖಮವಾಪ್ನೋತಿ ಪ್ರೇತ್ಯ ಚೇಹ ಚ ಶಾಶ್ವತಂ || ೮೦

ಎಲ್ಲ ಇಚ್ಛೆಯನ್ನು ಬಿಟ್ಟರೆ ಶಾಶ್ವತ ಸುಖ ದೊರೆಯುವುದು.

ಅನೇನ ವಿಧಿನಾ ಸರ್ವಾಂಸ್ತ್ಯಕ್ತ್ವಾ ಸಂಗಾಂಛನೈಃ ಶನೈಃ |
ಸರ್ವದ್ವಂದ್ವವಿನಿರ್ಮುಕ್ತೋ ಬ್ರಹ್ಮಣ್ಯೇವಾವತಿಷ್ಠತೇ || ೮೧

ಹಿಂದೆ ಹೇಳಿದ ಕ್ರಮದಂತೆ ಸ್ವಲ್ಪಸ್ವಲ್ಪವಾಗಿ ಸಂಗವನ್ನು ಬಿಟ್ಟು ಸುಖ ದುಃಖರಾಗದ್ವೇಷ ದ್ವಂದ್ವದ ಸುಳಿಯಿಂದ ತಪ್ಪಿಕೊಂಡರೆ ಬ್ರಹ್ಮಾವಸ್ಥಿತಿಯು ಬರುವುದು.

ಧ್ಯಾನಿಕಂ ಸರ್ವಮೇವೈತದ್ಯದೇತದಭಿಶಬ್ದಿತಮ್ ।
ನ ಹ್ಯನಧ್ಯಾತ್ಮವಿತ್ ಕಶ್ಚಿತ್ ಕ್ರಿಯಾಫಲಮುಪಾಶ್ನುತೇ ॥ ೮೨

ಜೀವಬ್ರಹ್ಮಾಭೇದ ಬುದ್ಧಿಯಿದ್ದರೆ ಮಾತ್ರ ಈಗ ತಾನೆ ಹೇಳಿದ ದ್ವಂದ್ವನಿವೃತ್ತಿ ಮುಂತಾದ ಧ್ಯಾನಫಲಸಿದ್ಧಿಯು.

ಅಧಿಯಜ್ಞಂ ಬ್ರಹ್ಮ ಜಪೇದಾಧಿದೈವಿಕಮೇವ ಚ ।
ಆಧ್ಯಾತ್ಮಿಕಂ ಚ ಸತತಂ ವೇದಾಂತಾಭಿಹಿತಂ ಚ ಯತ್ ॥ ೮೩

ಯಜ್ಞ, ದೇವತೆ, ಜೀವ ಪ್ರತಿಪಾದಕಗಳಾದ ವೇದಭಾಗಗಳನ್ನು ಜಪಿಸಬೇಕು.

ಇದಂ ಶರಣಮಜ್ಞಾನಾಮಿದಮೇವ ವಿಜಾನತಾಮ್ ।
ಇದಮನ್ವಿಚ್ಛತಾಂ ಸ್ವರ್ಗಮಿದಮಾನಂತ್ಯಮಿಚ್ಛತಾಮ್ ॥ ೮೪

ಜ್ಞಾನ ಇದ್ದರೆ, ಇಲ್ಲದಿದ್ದರೆ, ಸ್ವರ್ಗಾಪೇಕ್ಷೆಯಿದ್ದರೆ, ಮೋಕ್ಷವು ಬೇಕಾದರೆ ಅಂತಹ ಎಲ್ಲರೂ ವೇದವನ್ನೆ ಹೊಂದಬೇಕು.

ಅನೇನ ಕ್ರಮಯೋಗೇನ ಪರಿವ್ರಜತಿ ಯೋ ದ್ವಿಜಃ ।
ಸ ವಿಧೂಯೇಹ ಪಾಪ್ಮಾನಂ ಪರಂ ಬ್ರಹ್ಮಾಧಿಗಚ್ಛತಿ ॥ ೮೫

ಈ ಕ್ರಮದಿಂದ ಸಂಸಾರವನ್ನು ಬಿಡುತ್ತ ಬಂದರೆ ಪಾಪ ತೊಲಗಿ ಬ್ರಹ್ಮಾನಂದ ಪಾತ್ರನಾಗುವನು.

ಏಷ ಧರ್ಮೋಽನುಶಿಷ್ಟೋ ವೋ ಯತೀನಾಂ ನಿಯತಾತ್ಮನಾಮ್ ।
ವೇದಸನ್ನ್ಯಾಸಿಕಾನಾಂ ತು ಕರ್ಮಯೋಗಂ ನಿಬೋಧತ ॥ ೮೬

ಈಗ ಹೇಳಿದುದು ಸನ್ಯಾಸಿ ಧರ್ಮವು. ವೇದಸನ್ಯಾಸಿಗಳ ಕರ್ಮ ಯೋಗವನ್ನು ಹೇಳುತ್ತೇನೆ.

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।
ಏತೇ ಗೃಹಸ್ಥಪ್ರಭವಾಶ್ಚತ್ವಾರಃ ಪೃಥಗಾಶ್ರಮಾಃ ॥ ೮೭

ವೇದಸನ್ಯಾಸಿ ಎಂಬ ಹೊಸ ಪದದಿಂದ ಸಂಶಯವು. ಅದಕ್ಕೆ ಸಮಾಧಾನವು—ನಾಲ್ಕೇ ಆಶ್ರಮ, ಬೇರೆಯಿಲ್ಲ. ಅದರ ಒಂದು ಒಳಭೇದ. ಆದರೆ ಎಲ್ಲರೂ ಗೃಹಸ್ಥಾಧಾರವುಳ್ಳವರು.

ಸರ್ವೇಽಪಿ ಕ್ರಮಶಸ್ತ್ವೇತೇ ಯಥಾಶಾಸ್ತ್ರಂ ನಿಷೇವಿತಾಃ ।
ಯಥೋಕ್ತಕಾರಿಣಂ ವಿಪ್ರಂ ನಯಂತಿ ಪರಮಾಂ ಗತಿಂ ॥ ೮೮

ಗೃಹಸ್ಥನ ಶ್ರೇಯಸ್ಸಿಗೆ ಬೇರೆ ಬೇಡ. ಉಳಿದ ಆಶ್ರಮಿಗಳನ್ನು ಕುರಿತು ಹಿಂದೆ ಹೇಳಿದಂತೆ ವರ್ತಿಸಿದರೆ ಸಾಕು.

ಸರ್ವೇಷಾಮಪಿ ಚೈತೇಷಾಂ ವೇದಸ್ಮೃತಿವಿಧಾನತಃ ।
ಗೃಹಸ್ಥ ಉಚ್ಯತೇ ಶ್ರೇಷ್ಠಃ ಸ ತ್ರೀನೇತಾನ್ ಬಿಭರ್ತಿ ಹಿ ॥ ೮೯

ಉಳಿದ ಎಲ್ಲರ ಪೋಷಣೆಯೂ ಗೃಹಸ್ಥನಿಂದಾಗುವುದರಿಂದ ಗೃಹಸ್ಥನು ಶ್ರೇಷ್ಠನು. ಇದಕ್ಕೆ ವೇದವೇ ಪ್ರಮಾಣ.

ಯಥಾ ನದೀನದಾಃ ಸರ್ವೇ ಸಾಗರೇ ಯಾಂತಿ ಸಂಸ್ಥಿತಿಂ ।
ತಥೈವಾಶ್ರಮಿಣಃ ಸರ್ವೇ ಗೃಹಸ್ಥೇ ಯಾಂತಿ ಸಂಸ್ಥಿತಿಂ ॥ ೯೦

ಎಲ್ಲ ಹೊಳೆಗಳು ಸಮುದ್ರದಲ್ಲಿ ತಂಗುವಂತೆ ಇತರ ಆಶ್ರಮಿಗಳು ಗೃಹಸ್ಥನ ಆಶ್ರಯವುಳ್ಳವರು.

ಚತುರ್ಭಿರಪಿ ಚೈವೈತೈರ್ನಿತ್ಯಮಾಶ್ರಮಿಭಿರ್ದ್ವಿಜೈಃ ।
ದಶಲಕ್ಷಣಕೋ ಧರ್ಮಃ ಸೇವಿತವ್ಯಃ ಪ್ರಯತ್ನತಃ ॥ ೯೧

ಈ ನಾಲ್ಕು ಆಶ್ರಮದವರೂ ಹತ್ತು ವಿಧವಾದ ಧರ್ಮವನ್ನು ಸೇವಿಸಲೇ ಬೇಕು. ಅದು ನಿತ್ಯವು.

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ॥ ೯೨

ಸಂತೋಷ, ಸಹನೆ, ಮನೋವಿಕಾರಾಭಾವ, ಪರಧನವರ್ಜನೆ ಶುಚಿ, ಚಕ್ಷುರಾದೀಂದ್ರಿಯ ಸಂಯಮ, ಶಾಸ್ತ್ರಾರ್ಥ ನಿಶ್ಚಯ, ಉಪನಿಷದಧ್ಯಯನ, ಸತ್ಯವಚನ, ಅಕೋಪನಶೀಲತೆ ಇವು ಹತ್ತು ಧರ್ಮ ವಿಭಾಗಗಳು ಈ ಲೋಕ ಪರಲೋಕದಲ್ಲಿ ಶ್ರೇಯಃಸಾಧನಗಳು. ಈ ಗುಣಗಳಿಲ್ಲದವನು ಈ ಲೋಕದ ಜನಪ್ರಿಯತೆ, ಧನ, ಕನಕ ಒಂದನ್ನೂ ಪಡೆಯಲಾರನು.

ದಶ ಲಕ್ಷಣಾನಿ ಧರ್ಮಸ್ಯ ಯೇ ವಿಪ್ರಾಃ ಸಮಧೀಯತೇ |
ಅಧೀತ್ಯ ಚಾನುವರ್ತಂತೇ ತೇ ಯಾಂತಿ ಪರಮಾಂ ಗತಿಂ || ೯೩

ಈ ಧರ್ಮಗಳನ್ನು ತಿಳಿದು ಆಚರಿಸಿದರೆ ಶುಭವು ತಪ್ಪಲಾರದು.

ದಶಲಕ್ಷಣಕಂ ಧರ್ಮಮನುತಿಷ್ಠನ್ ಸಮಾಹಿತಃ |
ವೇದಾಂತ ವಿಧಿವಚ್ಛ್ರುತ್ವಾ ಸನ್ಯಸೇದನೃಣೋ ದ್ವಿಜಃ || ೯೪

ಈ ಹತ್ತು ಧರ್ಮಗಳನ್ನು ಆಚರಿಸುತ್ತ ಸನ್ಯಾಸವನ್ನು ಸೇವಿಸಬೇಕು. ಗುರುಮುಖದಿಂದ ವೇದಾಂತಾರ್ಥವನ್ನು ಅವಧರಿಸಿದವನೇ ಆಗಿದ್ದಾನೆ. ಕರ್ತವ್ಯವು ಪೂರ್ಣವಾಗಿದೆ. ಯಾರ ಋಣವೂ ಉಳಿದಿಲ್ಲ.

ಸನ್ನ್ಯಸ್ಯ ಸರ್ವಕರ್ಮಾಣಿ ಕರ್ಮದೋಷಾನಪಾನುದನ್ |
ನಿಯತೋ ವೇದಮಭ್ಯಸ್ಯ ಪುತ್ರೈಶ್ವರ್ಯೇ ಸುಖಂ ವಸೇತ್ || ೯೫

ಕರ್ಮದೋಷಗಳನ್ನು ಬಿಟ್ಟು ಕರ್ಮಗಳನ್ನು ಬಿಟ್ಟು ವೇದವನ್ನು ಪರಿಗ್ರಹಿಸಿ ಮಕ್ಕಳು ಮಾಡುವ ತನ್ನ ಪೋಷಣೆಯಿಂದ ನಿಶ್ಚಿಂತನಾಗಿ ಸುಖವಾಗಿರಬೇಕು.

ಏವಂ ಸನ್ನ್ಯಸ್ಯ ಕರ್ಮಾಣಿ ಸ್ವಕಾರ್ಯಪರಮೋಽಸ್ಪೃಹಃ |
ಸನ್ಯಾಸೇನಾಪಹತ್ಯೈನಃ ಪ್ರಾಪ್ನೋತಿ ಪರಮಾಂ ಗತಿಂ || ೯೬

ಗೃಹಸ್ಥಕರ್ಮಗಳನ್ನು ಬಿಟ್ಟು ಧ್ಯಾನಪ್ರಾಣಾಯಾಮಾದಿ ಸ್ವಕರ್ಮ ನಿರತನಾಗಿರುವುದರಿಂದ ಕಾಮನೆಯೂ ಪಾಪವೂ ಇಲ್ಲದೆ ಉತ್ತಮಾವಸ್ಥೆಯನ್ನು ಸೇರುವನು. ಧರ್ಮದ ಮುಖ್ಯಸಾರವನ್ನು ಹೇಳಿದೆ. ಆದರಿಂದ

ಯಾವ ರೀತಿಯ ಜೀವನ ನಡೆಸಿದರೂ ಸದ್ಗತಿಯುಂ. ಅನುಕೂಲ ಅಭಿರುಚಿಗಳು ವಿವಿಧ. ಪದ್ಧತಿಯೂ ವಿವಿಧವಾಗಿ ಪ್ರದರ್ಶಿತವಾಗಿದೆ. ಒಬ್ಬನಿಗೆ ಎಲ್ಲ ಬೇಡ.

ಏಷ ವೋಽಭಿಹಿತೋ ಧರ್ಮೋ ಬ್ರಾಹ್ಮಣಸ್ಯ ಚತುರ್ವಿಧಃ ।
ಪುಣ್ಯೋಽಕ್ಷಯಫಲಃ ಪ್ರೇತ್ಯ ರಾಜ್ಞಾಂ ಧರ್ಮಂ ನಿಬೋಧತ ॥ ೯೭

ಚತುರ್ವಿಧ ಬ್ರಾಹ್ಮಣ ಧರ್ಮವನ್ನು ಹೇಳಿದ ಮೇಲೆ ರಾಜಧರ್ಮವನ್ನು ತಿಳಿಯಿರಿ ಮುಂದಿನವು ರಾಜಕಾರ್ಯಗಳು.

# ಅಧ್ಯಾಯ ೭.

ರಾಜಧರ್ಮಾನ್ಪ್ರವಕ್ಷ್ಯಾಮಿ ಯಥಾವೃತ್ತೋ ಭವೇನ್ನೃಪಃ ।
ಸಂಭವಶ್ಚ ಯಥಾ ತಸ್ಯ ಸಿದ್ಧಿಶ್ಚ ಪರಮಾ ಯಥಾ ॥ ೧

ರಾಜನ ವರ್ತನೆ, ಉತ್ಪತ್ತಿ, ಉದ್ದೇಶ ಸಿದ್ಧಿಗಳು ನೇರವೇರಲು ಬೇಕಾಗಿರುವ ರಾಜಧರ್ಮವನ್ನು ವಿವರಿಸುತ್ತೇನೆ.

ಬ್ರಾಹ್ಮಂ ಪ್ರಾಪ್ತೇನ ಸಂಸ್ಕಾರಂ ಕ್ಷತ್ರಿಯೇಣ ಯಥಾವಿಧಿ ।
ಸರ್ವಸ್ಯಾಸ್ಯ ಯಥಾನ್ಯಾಯಂ ಕರ್ತವ್ಯಂ ಪರಿರಕ್ಷಣಂ ॥ ೨

ವೇದಸಂಸ್ಕಾರವಾದ ಉಪನಯನ ಸಂಸ್ಕಾರವನ್ನು ಹೊಂದಿದವನು ರಾಜನಾಗಿ ಪ್ರಜಾರಕ್ಷಣ ಕಾರ್ಯವನ್ನು ನ್ಯಾಯವಾಗಿ ಮಾಡಬೇಕು.

ಅರಾಜಕೇ ಹಿ ಲೋಕೇಽಸ್ಮಿನ್ ಸರ್ವತೋ ವಿದ್ರುತೇ ಭಯಾತ್ ।
ರಕ್ಷಾರ್ಥಮಸ್ಯ ಸರ್ವಸ್ಯ ರಾಜಾನಮಸೃಜತ್ಪ್ರಭುಃ ॥ ೩

ಊರಿನಲ್ಲಿ ರಾಜನಿಲ್ಲದಿದ್ದರೆ ಎಲ್ಲರಿಗೂ ಪರಸ್ಪರ ಭಯವು. ಇಂತಹ ಆಪತ್ತಿನ ರಕ್ಷಣೆಗೆ ರಾಜನು ಬೇಕಾಗುವನು.

ಇಂದ್ರಾನಿಲಯಮಾರ್ಕಾಣಾಮಗ್ನೇಶ್ಚ ವರುಣಸ್ಯ ಚ ।
ಚಂದ್ರವಿತ್ತೇಶಯೋಶ್ಚೈವ ಮಾತ್ರಾ ನಿರ್ಹೃತ್ಯ ಶಾಶ್ವತೀಃ ॥ ೪

ಇಂದ್ರ, ವಾಯು, ಯಮ, ಸೂರ್ಯ, ಅಗ್ನಿ, ವರುಣ, ಚಂದ್ರ, ಕುಬೇರರು ಅಷ್ಟದಿಕ್ಪಾಲರು. ಇವರ ಉತ್ತಮಾಂಶವನ್ನು ಸಂಗ್ರಹಿಸಿ ರಾಜನ ಸೃಷ್ಟಿಯು.

ಯಸ್ಮಾದೇಷಾಂ ಸುರೇಂದ್ರಾಣಾಂ ಮಾತ್ರಾಭ್ಯೋ ನಿರ್ಮಿತೋ ನೃಪಃ ।
ತಸ್ಮಾದಭಿಭವತ್ಯೇಷ ಸರ್ವಭೂತಾನಿ ತೇಜಸಾ ॥ ೫

ರಾಜನು ದೇವಾಂಶ ಸಂಭೂತನಾದುದರಿಂದ ಎಲ್ಲ ಪ್ರಾಣಿಗಳನ್ನು ತನ್ನ ವಶಕ್ಕೆ ತಂದು ಇಚ್ಛಾನುವರ್ತಿಯಾಗಿ ಮಾಡಿಕೊಳ್ಳುವನು.

ತಪತ್ಯಾದಿತ್ಯವಚ್ಚೈಷ ಚಕ್ಷೂಂಷಿ ಚ ಮನಾಂಸಿ ಚ ।
ನ ಚೈನಂ ಭುವಿ ಶಕ್ನೋತಿ ಕಶ್ಚಿದಪ್ಯಭಿವೀಕ್ಷಿತುಂ ॥ ೬

ರಾಜನಿಗೆ (ದೇಹ) ಇತರರ ಕಣ್ಣನ್ನು ಮನಸ್ಸನ್ನು ಕುಕ್ಕುವ ಸಾಮರ್ಥ್ಯವಿರುವುದರಿಂದ ಅವನಿಗೆ ಎದುರಾಡಲು ಯಾರಿಗೂ ಸಾಧ್ಯವಾಗುವುದಿಲ್ಲ. ಬೆಂಕಿ, ವಾಯು, ನೀರು ಮುಂತಾದುವು. ಪ್ರವೃದ್ಧಾವಸ್ಥೆಯಲ್ಲಿರುವಾಗ ಯಾರಿಗೂ ವಿಜೇಯರಾಗುವುದಿಲ್ಲ. ಒಳ್ಳೆ ರಾಜನು ಮೋಸಕ್ಕೆ ಗುರಿಯಾದರೆ ಅದು ಪ್ರಜೆಗಳ ಪುಣ್ಯ.

ಸೋಽಗ್ನಿರ್ಭವತಿ ವಾಯುಶ್ಚ ಸೋಽರ್ಕಃ ಸೋಮಃ ಸ ಧರ್ಮರಾಟ್ ।
ಸ ಕುಬೇರಃ ಸ ವರುಣಃ ಸ ಮಹೇಂದ್ರಃ ಪ್ರಭಾವತಃ ॥ ೭

ರಾಜನಲ್ಲಿ ಅಷ್ಟದಿಕ್ಪಾಲಕರ ಗುಣಧರ್ಮವು ಪ್ರತ್ಯೇಕವಾಗಿಯೂ ಇರುವುದರಿಂದ ಅವನು ಅವರೊಬ್ಬರಿಗೂ ಸಮನು.

ಬಾಲೋಽಪಿ ನಾವಮಂತವ್ಯೋ ಮನುಷ್ಯ ಇತಿ ಭೂಮಿಪಃ ।
ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥ ೮

ರಾಜನು ಹುಡುಗನಾದರೂ ಪೂಜ್ಯನು. ಇತರ ಸರ್ವಾತಿಶಾಯಿ ಯೋಗ್ಯತೆಯು ದೇವರಿಗಲ್ಲದೆ ಯಾರಿಗಿದೆ.

ಏಕಮೇವ ದಹತ್ಯಗ್ನಿರ್ನರಂ ದುರುಪಸರ್ಪಿಣಂ ।
ಕುಲಂ ದಹತಿ ರಾಜಾಗ್ನಿಃ ಸಪಶುದ್ರವ್ಯಸಂಚಯಂ ॥ ೯

ತಪ್ಪಾಗಿ ಸೇವಿಸಿದ ಒಬ್ಬನನ್ನು ಮಾತ್ರ ಅಗ್ನಿಯು ದಹಿಸುವುದು. ರಾಜಾಪಚಾರವು ಸ್ಥಿರಚರ ಸೊತ್ತುಗಳನ್ನು ಕುಟುಂಬದ ಎಲ್ಲ ಪ್ರಜೆಯನ್ನು ಬಾಧಿಸುವುದು.

ಕಾರ್ಯಂ ಸೋಽವೇಕ್ಷ್ಯ ಶಕ್ತಿಂ ಚ ದೇಶಕಾಲೌ ಚ ತತ್ತ್ವತಃ ।
ಕುರುತೇ ಧರ್ಮಸಿದ್ಧ್ಯರ್ಥಂ ವಿಶ್ವರೂಪಂ ಪುನಃ ಪುನಃ ॥ ೧೦

ಕೆಲಸ, ಲಾಭ, ನಷ್ಟ, ಶಕ್ತಿ, ದೇಶ, ಕಾಲ ಎಲ್ಲ ನೋಡಿಕೊಂಡು ಅವನು ಮೃದುವು ಕ್ರೂರನು ಆಗಬಲ್ಲನು. ಕಪಟಿ, ಧರ್ಮಿಷ್ಠ, ನ್ಯಾಯಪ್ರಿಯನೂ ಆಗುವನು.

ಯಸ್ಯ ಪ್ರಸಾದೇ ಪದ್ಮಾ ಶ್ರೀರ್ವಿಜಯಶ್ಚ ಪರಾಕ್ರಮೇ ।
ಮೃತ್ಯುಶ್ಚ ವಸತಿ ಕ್ರೋಧೇ ಸರ್ವತೇಜೋಮಯೋ ಹಿ ಸಃ ॥ ೧೧

ರಾಜನ ಸಂತೋಷದಿಂದ ಅತುಲೈಶ್ವರ್ಯ, ಪರಾಕ್ರಮದಿಂದ ಜಯ, ಕೋಪದಿಂದ ಮರಣ, ಇವುಗಳು ಇತರರಿಗೆ ಒದಗುವುವು.

ತಂ ಯಸ್ತು ದ್ವೇಷ್ಟಿ ಸಂಮೋಹಾತ್ಸ ವಿನಶ್ಯತ್ಯಸಂಶಯಂ ।
ತಸ್ಯ ಹ್ಯಾಶು ವಿನಾಶಾಯ ರಾಜಾ ಪ್ರಕುರುತೇ ಮನಃ ॥ ೧೨

ಇದೆಲ್ಲ ಒಳ್ಳೆ ರಾಜನ ಸ್ತುತಿ. ಕೆಟ್ಟವನನ್ನು ನೋಡಿ ಈ ಮಾತಿಗೆ ನಗುವುದು ಬೇಡ. ನಿಂದೆಯೂ ಮುಂದೆ ಬರುವುದು. ರಾಜನನ್ನು ಅನ್ಯಾಯ ವಾಗಿ ದ್ವೇಷಿಸಿದರೆ ದೈವಸಹಾಯವುಳ್ಳ ರಾಜನಿಂದ ದ್ವೇಷಬುದ್ಧಿಯ ಫಲವು ಕೂಡಲೆ ದೊರೆಯುವುದು.

ತಸ್ಮಾದ್ಧರ್ಮಂ ಯಮಿಷ್ಟೇಷು ಸ ವ್ಯವಸ್ಯೇನ್ನರಾಧಿಪಃ ।
ಅನಿಷ್ಟಂ ಚಾಪ್ಯನಿಷ್ಟೇಷು ತಂ ಧರ್ಮಂ ನ ವಿಚಾಲಯೇತ್ ॥ ೧೩

ಶಾಸ್ತ್ರಸಮ್ಮತವಾಗಿ ಇಷ್ಟರಲ್ಲಿ ಧರ್ಮವನ್ನು ಅಪ್ರಿಯರಲ್ಲಿ ದುಃಖ ವನ್ನು ಉಂಟುಮಾಡುವ ನಿಯಮವನ್ನು ರಾಜನು ಸದುಪಯೋಗವಡಿಸ ಬೇಕು.

ತಸ್ಯಾರ್ಥೇ ಸರ್ವಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಂ ।
ಬ್ರಹ್ಮತೇಜೋಮಯಂ ದಂಡಮಸೃಜತ್ಪೂರ್ವಮೀಶ್ವರಃ ॥ ೧೪

ಇಂತಹ ರಾಜಕಾರ್ಯಸಿದ್ಧಿ, ಧರ್ಮರಕ್ಷಣೆ, ಇವು ನೆರವೇರಲು ಬ್ರಹ್ಮನು ಸ್ವತೇಜಸ್ಸಿನ ದಂಡವನ್ನು ನಿರ್ಮಿಸಿದನು.

ತಸ್ಯ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಭಯಾದ್ಭೋಗಾಯ ಕಲ್ಪಂತೇ ಸ್ವಧರ್ಮಾನ್ನ ಚಲಂತಿ ಚ ॥ ೧೫

ಆ ದಂಡ ಭಯದಿಂದ ಎಲ್ಲ ಪ್ರಾಣಿಗಳು ತಾವು ತಾವು ಅರ್ಜಿಸಿದ ಧನ, ಕನಕ, ಪತ್ನಿಪುತ್ರರನ್ನು ತಪ್ಪದೆ ಅನುಭವಿಸುತ್ತಾರೆ. ಶಾಸನದಂಡ ಭಯವಿಲ್ಲ ದಿದ್ದರೆ ದುರ್ಬಲರು ಪ್ರಬಲರ ಹಿಂಸೆಗೊಳಗಾಗುವರು.

ತಂ ದೇಶಕಾಲೌ ಶಕ್ತಿಂ ಚ ವಿದ್ಯಾಂ ಚಾವೇಕ್ಷ್ಯ ತತ್ತ್ವತಃ |
ಯಥಾರ್ಹತಃ ಸಂಪ್ರಣಯೇನ್ನರೇಷ್ವನ್ಯಾಯವರ್ತಿಷು || ೧೬

ರಾಜನು ಜನರ ಅಪರಾಧದ ಪ್ರಮಾಣ ಸ್ವರೂಪಗಳನ್ನು, ಅದರ ದಂಡ ನೆಯ ತೂಕವನ್ನು ಶಾಸ್ತ್ರದಿಂದ ವಿಮರ್ಶಿಸಿ ನ್ಯಾಯವಾಗಿ ವಿನಿಯೋಗಿಸ ಬೇಕು.

ಸ ರಾಜಾ ಪುರುಷೋ ದಂಡಃ ಸ ನೇತಾ ಶಾಸಿತಾ ಚ ಸಃ |
ಚತುರ್ಣಾಮಾಶ್ರಮಾಣಾಂ ಚ ಧರ್ಮಸ್ಯ ಪ್ರತಿಭೂಃ ಸ್ಮೃತಃ || ೧೭

ಆ ದಂಡವು ರಾಜನು, ಗಂಡು, ನಾಯಕ, ಶಾಸಕ, ಸಕಲಧರ್ಮಗಳಿಗೂ ಹೊಣೆ ಆಗಿದೆ. ದಂಡವಿಲ್ಲದೆ ಹೋದರೆ ರಾಜನು ರಾಜನಲ್ಲ. ಇತರ ಅವನ ಪರಿಕರವೂ ವ್ಯರ್ಥ.

ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ |
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ || ೧೮

ರಕ್ಷಣೆ, ಶಾಸನೆ, ಎಚ್ಚರ, ಧರ್ಮ ಎಲ್ಲವೂ ದಂಡವೇ. ಸಾಮಾನ್ಯರು ದಂಡಭಯದಿಂದ ಅಧರ್ಮವನ್ನು ಬಿಡುತ್ತಾರೆ. ಶಾಸಕನು ನಿದ್ರಿಸಿದರೂ ಅದು ನಾಳಿನ ಭಯದಿಂದ ಕುಕರ್ಮನಿವಾರಣೆ ಮಾಡುತ್ತದೆ.

ಸಮೀಕ್ಷ್ಯ ಸ ಧೃತಃ ಸಮ್ಯಕ್ ಸರ್ವಾ ರಂಜಯತಿ ಪ್ರಜಾಃ |
ಅಸಮೀಕ್ಷ್ಯ ಪ್ರಣೀತಸ್ತು ವಿನಾಶಯತಿ ಸರ್ವತಃ || ೧೯

ದಂಡನೆಯು ಪ್ರಮಾಣ ಮೀರಿದರೆ, ಅದಂಡ್ಯರಿಗೆ ದಂಡನೆಯಾದರೆ, ರಾಜನನ್ನು ವ್ಯವಸ್ಥೆಯನ್ನು ದೇಶವನ್ನು ಕ್ರಮೇಣ ಕೆಡಿಸುವುದು.

ಯದಿ ನ ಪ್ರಣಯೇದ್ರಾಜಾ ದಂಡಂ ದಂಡ್ಯೇಷ್ವತಂದ್ರಿತಃ |
ಶೂಲೇ ಮತ್ಸ್ಯಾನಿವಾಪಕ್ಷ್ಯನ್ ದುರ್ಬಲಾನ್ ಬಲವತ್ತರಾಃ || ೨೦

ಅಪರಾಧವನ್ನು ಹುಡುಕಿ ದಂಡನೆ ವಿಧಿಸದೆ ಇದ್ದರೆ ಬಲಿಷ್ಠರು ಬಲಹೀನರನ್ನು ಪೀಡಿಸಿಯಾರು. ಮೀನನ್ನು ಕಣೆಯಲ್ಲಿ ಚುಚ್ಚಿ ಬೆಂಕಿಯಲ್ಲಿ ಸುಡುವಂತೆ.

ಅದ್ಯಾತ್ಕಾಕಃ ಪುರೋಡಾಶಂ ಶ್ವಾ ಚ ಲಿಹ್ಯಾದ್ಧವಿಸ್ತಥಾ ।
ಸ್ವಾಮ್ಯಂ ಚ ನ ಸ್ಯಾತ್ಕಸ್ಮಿಂಶ್ಚಿತ್ಪ್ರವರ್ತೇತಾಧರೋತ್ತರಂ ॥ ೨೧

ಯಾವುದು ಯಾರ ಸೊತ್ತು. ಯಾವುದಕ್ಕೆ ಯಾರು ಅಧಿಕಾರಿ. ಯಾವುದು ಯಾರಿಗೆ ಸೇರಬೇಕು. ಎಂಬ ಸ್ವಸ್ವಾಮಿ ಭಾವವು ಜಗತ್ತಿನಲ್ಲಿ ತಪ್ಪಿ ಉತ್ಪಾದನೆ, ಅರ್ಜನೆ, ರಕ್ಷಣೆ, ದಾನ, ಪ್ರತಿಗ್ರಹಗಳು ಇಲ್ಲದಾಗುವುವು. ಮಾಡುವುದು ಕಾಯುವುದು ಯಾಕೆ ? ತನಗೆ ಅದು ಸಂಶಯಾಸ್ಪದವಾದರೆ ಪ್ರವೃತ್ತಿಯಿಲ್ಲ ಊರು ಬೆಂಗಾಡು ಜನ ನಾಯುವುದು ಲೇಸು ಬದುಕಲು ಸಾಧ್ಯವಿಲ್ಲ. ಜೀವಕ್ಕೆ ಭದ್ರತೆಯೂ ಇಲ್ಲ. ಹರಿಯುವ ನೀರಲ್ಲಿ ಕೆಳಗೆ ನೀರು ಕುಡಿಯುವ ಕುರಿಯನ್ನು, ಮೇಲೆ ನೀರು ಕುಡಿಯುವ ಹುಲಿ ನನ್ನ ನೀರನ್ನು ಎಂಜಲು ಮಾಡುತ್ತೀ ಎಂದು ಗದರಿದಂತೆ ಲೋಕವ್ಯವಸ್ಥೆಯಾಗುವುದು. ಯಜ್ಞದಲ್ಲಿ ಕಾಗೆ ನಾಯಿಗಳಿಗೂ ಹವಿರ್ಭಾಗ ಕೊಡಬೇಕಾಗಬಹುದು.

ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ ।
ದಂಡಸ್ಯ ಹಿ ಭಯಾತ್ಸರ್ವಂ ಜಗದ್ಭೋಗಾಯ ಕಲ್ಪತೇ ॥ ೨೨

ಒಬ್ಬನೂ ಸನ್ಮಾರ್ಗದ ಜನವಿಲ್ಲ. ಅದನ್ನೆಲ್ಲ ದಂಡವೇ ಸಾಧಿಸುವುದು. ಒಬ್ಬನು ಅನ್ನಕ್ಕೆ ಅಕ್ಕಿ ಇಟ್ಟು ಬೆಂದು ಉಣ್ಣುವುದಾದರೂ ದಂಡದಿಂದ. ಇಲ್ಲವಾದರೆ ಅದನ್ನು ಬೇರೆಯುವನು ಉಣ್ಣಬಹುದು.

ದೇವದಾನವಗಂಧರ್ವಾ ರಕ್ಷಾಂಸಿ ಪತಗೋರಗಾಃ ।
ತೇಽಪಿ ಭೋಗಾಯ ಕಲ್ಪಂತೇ ದಂಡೇನೈವ ನಿಪೀಡಿತಾಃ ॥ ೨೩

ಜಗನ್ಮೂಲವಾದ ಬ್ರಹ್ಮನ ಭಯದಿಂದ ಚಂದ್ರ, ಸೂರ್ಯ, ಇಂದ್ರಾದಿಗಳು ಸ್ವಕರ್ಮನಿರತರು. ನಾಯಕತ್ವ, ನಿಯಂತೃತ್ವ, ನಿಯಾಮಕತ್ವ, ವ್ಯವ

ಸ್ಥಾಪಕತ್ವ, ವಿಧೇಯತ್ವಗಳಿಗೆ ಸ್ವಾವ್ಯತಿರಿಕ್ತತ್ವ ಒಳಗಾಗಿರುವುದು ಭಯವು. ಬೇರೆಯಲ್ಲ.

ದುಷ್ಯೇಯುಃ ಸರ್ವವರ್ಣಾಶ್ಚ ಭಿದ್ಯೇರನ್ ಸರ್ವಸೇತವಃ ।
ಸರ್ವಲೋಕಪ್ರಕೋಪಶ್ಚ ಭವೇದ್ದಂಡಸ್ಯ ವಿಭ್ರಮಾತ್ ॥ ೨೪

ಎಲ್ಲ ವರ್ಣಗಳು ವರ್ಣಸಾಂಕರ್ಯದಿಂದ ದೂಷಿತವಾಗುವವು, ಯಾವ ಕಟ್ಟುಪಾಡುಗಳೂ ಉಳಿಯುವುದಿಲ್ಲ. ( ಹರಿದು ಹೋಗುವವು ) ದಂಡ ವಿಭ್ರಮದಿಂದ ಎಲ್ಲ ಜನರೂ ಕೋಪಿಷ್ಟರಾಗುವರು.

ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಪಾಪಹಾ ।
ಪ್ರಜಾಸ್ತತ್ರ ನ ಮುಹ್ಯಂತಿ ನೇತಾ ಚೇತ್ಸಾಧು ಪಶ್ಯತಿ ॥ ೨೫

ಧ್ವಜಪತಾಕೆಗೆ ಒಂದು ಬಣ್ಣ ಆಕೃತಿಯಿರುವಂತೆ ದಂಡಕ್ಕೂ ಒಂದು ರೂಪವನ್ನು ಕೊಡಲಾಗಿದೆ. ಕರಿಮೈ ಕೆಂಪು ಕಣ್ಣು ಅದರ ಪಾಪನಾಶಕ ರೂಪವು. ಅಂತಹ ದಂಡಪ್ರಯೋಗವು ಸರಿಯಾಗಿದ್ದರೆ ಪ್ರಜೆಗಳು ಸಂತೋಷದಲ್ಲಿರುವರು.

ತಸ್ಯಾಹುಃ ಸಂಪ್ರಣೇತಾರಂ ರಾಜಾನಂ ಸತ್ಯವಾದಿನಂ ।
ಸಮೀಕ್ಷ್ಯಕಾರಿಣಂ ಪ್ರಾಜ್ಞಂ ಧರ್ಮಕಾಮಾರ್ಥಕೋವಿದಂ ॥ ೨೬

ವಿಚಾರಪೂರ್ವಕ ಕೆಲಸಮಾಡುವ ಪ್ರಜ್ಞೆಯಿರುವ ಧರ್ಮ, ಅರ್ಥ, ಕಾಮಗಳ ಸಾಧನೆಗೆ ನಿಪುಣನಾದ ರಾಜನು ಅಂತಹ ದಂಡವನ್ನು ಪ್ರಯೋಗಿಸಬೇಕು. ಎಂದು ಮನು ಮುಂತಾದ ಧರ್ಮಜ್ಞರು ಹೇಳುತ್ತಾರೆ.

ತಂ ರಾಜಾ ಪ್ರಣಯನ್ ಸಮ್ಯಕ್ ತ್ರಿವರ್ಗೇಣಾಭಿವರ್ಧತೇ ।
ಕಾಮಾತ್ಮಾ ವಿಷಮಃ ಕ್ಷುದ್ರೋ ದಂಡೇನೈವ ನಿಹನ್ಯತೇ ॥ ೨೭

ರಾಜನು ದಂಡವನ್ನು ಸರಿಯಾಗಿ ವಿನಿಯೋಗಿಸಿದರೆ ತನ್ನ ಮತ್ತು ಪ್ರಜೆಗಳ ಧರ್ಮ ಅರ್ಥಕಾಮಗಳ ವೃದ್ಧಿಗೆ ಕಾರಣನಾಗುವನು. ಇಲ್ಲವಾದರೆ ಅದು ಅವನಿಗೆ ತಿರುಗಿ ಎದುರಾಗುವುದು.

ದಂಡೋ ಹಿ ಸುಮಹತ್ತೇಜೋ ದುರ್ಧರಶ್ಚಾಕೃತಾತ್ಮಭಿಃ ।
ಧರ್ಮಾದ್ವಿಚಲಿತಂ ಹಂತಿ ನೃಪಮೇವ ಸಬಾಂಧವಂ ॥ ೨೮

ಈ ದಂಡಾಧಿಕಾರವು ದೊಡ್ಡ ತೇಜಸ್ಸು. ಅಸಂಸ್ಕೃತ ಮತಿಯಾದವನು ಅದನ್ನು ಧರಿಸಲಾರನು. ಅದರ ಪ್ರಯೋಗ ಧರ್ಮವು ತಪ್ಪಿದರೆ ರಾಜನ ಸರ್ವನಾಶವೂ ಒದಗುವುದು. ಹರಿತವಾದ ಕತ್ತಿಯನ್ನು ಮಗು ಹಿಡಿದರೆ ಒಳ್ಳೆ ಕೆಲಸ ಒಂದೂ ಆಗದೆ ಕೈ-ಮೈ ಕೊಯ್ದುಕೊಳ್ಳುವುದು. ಉದಾಹರಣೆ.

ತತೋ ದುರ್ಗಂ ಚ ರಾಷ್ಟ್ರಂ ಚ ಲೋಕಂ ಚ ಸಚರಾಚರಂ ।
ಅಂತರಿಕ್ಷಗತಾಂಶ್ಚೈವ ಮುನೀನ್ದೇವಾಂಶ್ಚ ಪೀಡಯೇತ್ ॥ ೨೯

ಸರಿಯಾದ ದಂಡ ಪ್ರಯೋಗದಿಂದ ಪ್ರಜೆಗಳನ್ನು ಒಲಿಸಿಕೊಳ್ಳಲು, ಶತ್ರುದಮನವೂ ಎರಡೂ ಅಸಾಧ್ಯವಾದರೆ ತನ್ನ ಕೋಟೆ-ಕೊತ್ತಲ ಊರು-ಕೇರಿ ಹಾಳಾಗುವುದಲ್ಲದೆ ಪರಲೋಕದ ದೇವಮುನಿಗಳೂ ಅಶಾಂತರಾಗುವರು.

ಸೋಽಸಹಾಯೇನ ಮೂಢೇನ ಲುಬ್ಧೇನಾಕೃತಬುದ್ಧಿನಾ ।
ನ ಶಕ್ಯೋ ನ್ಯಾಯತೋ ನೇತುಂ ಸಕ್ತೇನ ವಿಷಯೇಷು ಚ ॥ ೩೦

ಅನ್ಯಾಯ, ಅತಿವಿಷಯಾಭಿಲಾಷೆ, ಬುದ್ಧಿಹೀನತೆ, ಇರುವ ಮೂಢನು ಅನುಯಾಯಿಗಳಾದ ಮಂತ್ರಿ-ಸೇನಾಪತಿಗಳ ವಿಶ್ವಾಸ ಸಹಾಯಗಳನ್ನು ಕಳೆದುಕೊಳ್ಳುವನು.

ಶುಚಿನಾ ಸತ್ಯಸಂಧೇನ ಯಥಾಶಾಸ್ತ್ರಾನುಸಾರಿಣಾ ।
ಪ್ರಣೇತುಂ ಶಕ್ಯತೇ ದಂಡಃ ಸುಸಹಾಯೇನ ಧೀಮತಾ ॥ ೩೧

ಸ್ವಜನ ಪಕ್ಷಪಾತ, ಅನ್ಯಾಯ ಧನಲೋಭ ಇಲ್ಲದೆ ಶಾಸ್ತ್ರಾನುಸಾರ ಪರಿಶುದ್ಧನಾಗಿದ್ದರೆ ದೇಶದ ಸಕಲರೂ ಅನುಕೂಲರಾಗಿ ದುಷ್ಟ, ಪಾಪಿಷ್ಠ, ಶತ್ರುದಮನವು ಸುಲಭ ಸಾಧ್ಯವಾಗಿ ದಂಡಾಧಿಕಾರವು ಸಫಲವಾಗಿ ಸತ್ಪರಿಣಾಮಕಾರಿಯಾಗುವುದು. ಈ ಕಾಲದ ಶಾಸಕರು ಪ್ರತ್ಯುದಾಹರಣೆಯಾಗುವರು.

ಸ್ವರಾಷ್ಟ್ರೇ ನ್ಯಾಯವೃತ್ತಿಃ ಸ್ಯಾದ್ಭೃಶದಂಡಶ್ಚ ಶತ್ರುಷು ।
ಸುಹೃತ್ಸ್ವಜಿಹ್ಮಃ ಸ್ನಿಗ್ಧೇಷು ಬ್ರಾಹ್ಮಣೇಷು ಕ್ಷಮಾನ್ವಿತಃ ॥ ೩೨

ನ್ಯಾಯ, ಮಿತ್ರರಲ್ಲಿ ಅಕವಟ, ಸ್ನೇಹಿತರಲ್ಲಿ ಕ್ಷಮೆ ಇದ್ದರೆ ಎಂದೂ ಸೋಲು ಬರಲಾರದು. ಸ್ವಯೂಥ ಕಲಹವು ಏಳಲಾರದು.

ಏವಂವೃತ್ತಸ್ಯ ನೃಪತೇಃ ಶಿಲೋಂಛೇನಾಪಿ ಜೀವತಃ ।
ವಿಸ್ತೀರ್ಯತೇ ಯಶೋ ಲೋಕೇ ತೈಲಬಿಂದುರಿವಾಂಭಸಿ ॥ ೩೩

ಇಂತಹ ನ್ಯಾಯನಿಷ್ಠುರ ರಾಜನು ಕೋಶ ಬರಿದಾದರೂ ಜನಪ್ರಿಯನಾಗಿ ಪಿತೃಭಾವ ಪಾತ್ರನಾಗುವನು.

ಅತಸ್ತು ವಿಪರೀತಸ್ಯ ನೃಪತೇರಜಿತಾತ್ಮನಃ ।
ಸಂಕ್ಷಿಪ್ಯತೇ ಯಶೋ ಲೋಕೇ ಘೃತಬಿಂದುರಿವಾಂಭಸಿ ॥ ೩೪

ಮೂರ್ಖ ರಾಜನು ಕೀರ್ತಿಶೂನ್ಯನಾಗುವನು. ನೀರಿನಲ್ಲಿ ತುಪ್ಪದ ಹನಿಯು ಅಡಗುವುದು. ಹರಡುವುದಿಲ್ಲ. ಅದರಂತೆ.

ಸ್ವೇ ಸ್ವೇ ಧರ್ಮೇ ನಿವಿಷ್ಟಾನಾಂ ಸರ್ವೇಷಾಮನುಪೂರ್ವಶಃ ।
ವರ್ಣಾನಾಮಾಶ್ರಮಾಣಾಂ ಚ ರಾಜಾ ಸೃಷ್ಟೋಽಭಿರಕ್ಷಿತಾ ॥ ೩೫

ಪ್ರಜೆಗಳ ಆಯಾ ಧರ್ಮಗಳ ನಾಶವನ್ನು ಬಯಸದೆ ಸಾಧ್ಯವಾದ ಪ್ರೋತ್ಸಾಹದಿಂದ ರಕ್ಷಣೆ ಕೊಡಬೇಕು. ಪರಸ್ಪರ ಕಲಹವನ್ನು ದೂರ ವಿಶಾಲ ನಿರ್ಮತ್ಸರ ವಿಮರ್ಶೆಯಿಂದ ನಿವಾರಿಸಬೇಕು. ತಿಳಿಯುವ ತಿಳಿಸುವ ಸನ್ನಿವೇಶವನ್ನು ಪೂರ್ವೇತಿಹಾಸದ ಉದಾಹರಣೆ ಯುಕ್ತಿಗಳಿಂದ ನಿರ್ಮಿಸಿಕೊಳ್ಳಬೇಕು.

ತೇನ ಯದ್ಯತ್ಸಭೃತ್ಯೇನ ಕರ್ತವ್ಯಂ ರಕ್ಷತಾ ಪ್ರಜಾಃ ।
ತತ್ತದ್ವೋಽಹಂ ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ ॥ ೩೬

ಹೀಗೆ ದಂಡಪ್ರಯೋಗವು ಯುಕ್ತಿ ಸಾಧ್ಯವಾಗಿರುವುದರಿಂದ ಪರಿವಾರ ಸಹಿತ ರಾಜನ ಕ್ಷೇಮಕ್ಕೂ ಪ್ರಜಾಕ್ಷೇಮಕ್ಕೂ ಬೇಕಾದ ಕರ್ತವ್ಯವನ್ನು ತಿಳಿಸುತ್ತೇನೆ.

ಬ್ರಾಹ್ಮಣಾನ್ ಪರ್ಯುಪಾಸೀತ ಪ್ರಾತರುತ್ಥಾಯ ಪಾರ್ಥಿವಃ ।
ತ್ರೈವಿದ್ಯವೃದ್ಧಾನ್ ವಿದುಷಸ್ತಿಷ್ಠೇತ್ತೇಷಾಂ ಚ ಶಾಸನೇ ॥ ೩೭

ಬೆಳಿಗ್ಗೆ ಎದ್ದು ರಾಜನು ನೀತಿಶಾಸ್ತ್ರ, ವೇದವಿದ್ಯೆ ಮುಂತಾದ ಜ್ಞಾನ ಸಂಪನ್ನರನ್ನು ಕಂಡು ತನ್ನ ದೇಶದ ಹಿತಚಿಂತನೆಯನ್ನು ಮಾಡಿ ಅವರ ಆಜ್ಞಾ ಧಾರಕನಾಗಬೇಕು. ಅಂತರಂಗದಲ್ಲಿ ತಾನು ಬಹುವಿಧ ಶುಚಿಸಂಪನ್ನರ ಶಾಸನ ವಿಧೇಯನಾಗಿದ್ದರೂ ಬಹಿರಂಗದಲ್ಲಿ ಸಕಲ ಪ್ರಜೆಗಳ ನಿರಂಕುಶ ಮಹೋನ್ನತ ದಂಡಾಧಿಕಾರಿಯಾಗಿರಬೇಕು.

ವೃದ್ಧಾಂಶ್ಚ ನಿತ್ಯಂ ಸೇವೇತ ವಿಪ್ರಾನ್ ವೇದವಿದಃ ಶುಚೀನ್ ।
ವೃದ್ಧಸೇವೀ ಹಿ ಸತತಂ ರಕ್ಷೋಭಿರಪಿ ಪೂಜ್ಯತೇ ॥ ೩೮

ಜ್ಞಾನವಿದ್ಯಾವಯಸ್ತಪಸ್ಸುಗಳಿಂದ ಹಿರಿಯರಾದವರನ್ನು ಪೂಜಿಸುವ ವನಿಗೆ ಅಶುಭವು ಇಣುಕಲಾರದು. ಕೇವಲ ಮಾರಕಾಸ್ತ್ರಗಳನ್ನು ನಿರ್ಮಿಸ ಬಲ್ಲವರಾದ ಶಾಸಕೋತ್ತಮರು ಜಡವಿಜ್ಞಾನಿಗಳನ್ನು ಅಹೋರಾತ್ರ ಸೇವಿಸಿದ ರಾಷ್ಟ್ರವರಿಷ್ಠರು ಚಿರಕಾಲ ಚಿರಸುಖ ಬಹುಜನಪ್ರಿಯರಾದುದು ಪ್ರತ್ಯಕ್ಷ ವಾಗಿಲ್ಲ. ಆದುದರಿಂದ ಸತ್ಯ ಶಾಂತಿ ದಯೆ ಅಹಿಂಸೆ ಆರ್ಜವ ಗುಣಗಣ ಮಂಡಿತರಾದ ವೈದಿಕ ವಿಜ್ಞಾನಿಗಳು ರಾಜನಿಗೆ ಉಪಾಸ್ಯರಲ್ಲವೆಂದು ಸಾಧಿಸ ಲಾಗುವುದಿಲ್ಲ. ಕತ್ತಿಯಿಂದ ಸಾಧಿಸಲಾಗದುದನ್ನು ಗುಣದಿಂದ ಗೆದ್ದ ಉದಾಹರಣೆ ತುಂಬ ಇವೆ. ಗುಣವು ದೇವಾಂಶ-ದೇವಪ್ರಿಯ. ಅದಕ್ಕೆ ಅಪಜಯವು ಸತ್ಯವಾಗಿ ಸುಳ್ಳು.

ತೇಭ್ಯೋಽಧಿಗಚ್ಛೇದ್ವಿನಯಂ ವಿನೀತಾತ್ಮಾಪಿ ನಿತ್ಯಶಃ ।
ವಿನೀತಾತ್ಮಾ ಹಿ ನೃಪತಿರ್ನ ವಿನಶ್ಯತಿ ಕರ್ಹಿಚಿತ್ ॥ ೩೯

ರಾಜನು ಸ್ವಯಂ ಅರ್ಥಶಾಸ್ತ್ರ ನೀತಿಶಾಸ್ತ್ರ ಧರ್ಮಶಾಸ್ತ್ರ ಕೋವಿದ ನಾದರೂ ಅಂತಹ ಜ್ಞಾನಿಗಳ ವಿನಯವನ್ನು ದಿನಾ ಪಡೆಯುತ್ತಿರಲು ತಪ್ಪ ಬಾರದು. ಒಳ್ಳೆಯದರಿಂದ ಎಂದೂ ಕೆಡುಕಾಗದು. ತೋರಿಕೆಯಲ್ಲಿ ಕೆಡು ಕಾದರೂ ಅದು ಅದರಿಂದಲ್ಲ. ಪರಿಣಾಮದಲ್ಲಿ ಜಯವಿದೆ.

ಬಹವೋಽವಿನಯಾನ್ನಷ್ಟಾ ರಾಜಾನಃ ಸಪರಿಚ್ಛದಾಃ ।
ವನಸ್ಥಾ ಅಪಿ ರಾಜ್ಯಾನಿ ವಿನಯಾತ್ಪ್ರತಿಪೇದಿರೇ ॥ ೪೦

ವಿನಯ ಹೀನರಾಜರು ಬಹುಮಂದಿ ಸಮೃದ್ಧ ರಾಜ್ಯಕೋಶ ಸೇನಾಬಲ

ಉಳ್ಳವರಾದರೂ ಕಾಡಾಡಿಗಳಾಗಿದ್ದಾರೆ. ವಿನೀತರಾದ ಕಾಡಾಡಿಗಳು ರಾಜ್ಯ ಪ್ರಾಪ್ತಿಯನ್ನು ಹೊಂದಿದ್ದಾರೆ.

ವೇನೋ ವಿನಷ್ಟೋಽವಿನಯಾನ್ನಹುಷಶ್ಚೈವ ಪಾರ್ಥಿವಃ ।
ಸುಧಾಃ ಪೈಜವನಶ್ಚೈವ ಸುಮುಖೋ ನಿಮಿರೇವ ಚ ॥ ೪೧

ವೇನ, ನಹುಷ, ಸುದ, ನಿಮಿ ಎಂಬ ಪೂರ್ವಕಾಲದ ಮಹಾರಾಜರು ರಾಜ್ಯಭ್ರಂಶವುಳ್ಳವರಾಗಿದ್ದಾರೆ

ಪೃಥುಸ್ತು ವಿನಯಾದ್ರಾಜ್ಯಂ ಪ್ರಾಪ್ತವಾನ್ಮನುರೇವ ಚ ।
ಕುಬೇರಶ್ಚ ಧನೈಶ್ವರ್ಯಂ ಬ್ರಾಹ್ಮಣ್ಯಂ ಚೈವ ಗಾಧಿಜಃ ॥ ೪೨

ಶಾಸ್ತ್ರಾನುಲ್ಲಂಘನವೆಂಬ ವಿನಯದಿಂದ ಪೃಥು, ಮನುಗಳು ಸಾಮ್ರಾಜ್ಯ ಪಡೆದರು. ಕುಬೇರನು ಧನಪತಿಯಾದನು. ವಿಶ್ವಾಮಿತ್ರನು ಬ್ರಾಹ್ಮಣನಾದನು.

ತ್ರೈವಿದ್ಯೇಭ್ಯಸ್ತ್ರಯೀಂ ವಿದ್ಯಾಂ ದಂಡನೀತಿಂ ಚ ಶಾಶ್ವತೀಂ ।
ಆನ್ವೀಕ್ಷಿಕೀಂ ಚಾತ್ಮವಿದ್ಯಾಂ ವಾರ್ತಾರಂಭಾಂಶ್ಚ ಲೋಕತಃ ॥ ೪೩

ಮೂರು ವೇದ, ಅರ್ಥಶಾಸ್ತ್ರ, ನ್ಯಾಯಶಾಸ್ತ್ರ, ಆತ್ಮವಿದ್ಯೆ, ಕೃಷಿ ಮುಂತಾದ ಎಲ್ಲ ವಿದ್ಯೆಗಳನ್ನು ತಿಳಿಯಬೇಕು. ಇಲ್ಲವಾದರೆ ಹುಟ್ಟು ಖರ್ಚುಗಳ ಗುಟ್ಟು ತಿಳಿಯದು.

ಇಂದ್ರಿಯಾಣಾಂ ಜಯೇ ಯೋಗಂ ಸಮಾತಿಷ್ಠೇದ್ದಿವಾನಿಶಂ ।
ಜಿತೇಂದ್ರಿಯೋ ಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ ॥ ೪೪

ತನ್ನ ಇಂದ್ರಿಯಗಳನ್ನು ತನ್ನ ವಶ ಮಾಡದವನು ಪ್ರಜೆಗಳನ್ನು ವಶೀಕರಿಸುವುದು ಹೇಗೆ. ಇನ್ನೇನನ್ನು ಮಾಡುವನು, ಅಂತಹವನು.

ದಶ ಕಾಮಸಮುತ್ಥಾನಿ ತಥಾಷ್ಟೌ ಕ್ರೋಧಜಾನಿ ಚ ।
ವ್ಯಸನಾನಿ ದುರಂತಾನಿ ಪ್ರಯತ್ನೇನ ವಿವರ್ಜಯೇತ್ ॥ ೪೫

ವ್ಯಸನಗಳು ದುಃಖಾಂತಗಳು ಪರಿಣಾಮದಲ್ಲಿ ಸುಖದಾಯಕಗಳಲ್ಲ.

ಹತ್ತು ಕಾಮಜನ್ಯ ವ್ಯಸನಗಳು. ಎಂಟು ಕ್ರೋಧಜನ್ಯ ವ್ಯಸನಗಳು. ಮುಂದೆ ಅದರ ವಿಭಾಗವಿದೆ.

ಕಾಮಜೇಷು ಪ್ರಸಕ್ತೋ ಹಿ ವ್ಯಸನೇಷು ಮಹೀಪತಿಃ ।
ವಿಯುಜ್ಯತೇಽರ್ಥಧರ್ಮಾಭ್ಯಾಂ ಕ್ರೋಧಜೇಷ್ವಾತ್ಮನೈವ ತು ॥ ೪೬

ಕಾಮಜನ್ಯ ವ್ಯಸನದಿಂದ ಧರ್ಮ, ಹಣಗಳು ನಶಿಸುವುವು. ಕೋಪದಿಂದ ಆತ್ಮನಾಶವು.

ಮೃಗಯಾಕ್ಷೋ ದಿವಾಸ್ವಪ್ನಃ ಪರಿವಾದಃ ಸ್ತ್ರಿಯೋ ಮದಃ ।
ತೌರ್ಯತ್ರಿಕಂ ವೃಥಾಟ್ಯಾ ಚ ಕಾಮಜೋ ದಶಕೋ ಗಣಃ ॥ ೪೭

ಬೇಟೆ, ಜೂಜು, ಹಗಲು ನಿದ್ದೆ, ಪರನಿಂದೆ, ಸ್ತ್ರೀಲೋಲುಪತೆ, ಮದ್ಯ ನೃತ್ಯ, ಗೀತ, ವಾದ್ಯಗಳು, ಅಲೆಯುತ್ತಿರುವುದು—ಇವು ಅತಿವಿನೋದಪರತೆಯ ದುರ್ಲಕ್ಷಣಗಳು.

ಪೈಶುನ್ಯಂ ಸಾಹಸಂ ದ್ರೋಹ ಈರ್ಷ್ಯಾಸೂಯಾರ್ಥದೂಷಣಂ ।
ವಾಗ್ದಂಡಜಂ ಚ ಪಾರುಷ್ಯಂ ಕ್ರೋಧಜೋಽಪಿ ಗಣೋಽಷ್ಟಕಃ ॥ ೪೮

ಸುಳ್ಳು, ದೋಷಾರೋಪಣೆ, ಒಳ್ಳೆಯವನನ್ನು ಬಂಧಿಸುವುದು, ಅಡಗಿ ಕೊಲ್ಲುವುದು, ಪರಗುಣಾಸಹನೆ, ಪರಗುಣದಲ್ಲಿ ದೋಷಾರೋಪಣೆ, ಹಣ ಕದಿಯುವುದು, ಕೊಡದಿರುವುದು, ಬೈಯುವುದು, ಹೊಡೆಯುವುದು—ಇವು ಎಂಟು ಸಿಟ್ಟಿನ ಅನರ್ಥಗಳು.

ದ್ವಯೋರಪ್ಯೇತಯೋರ್ಮೂಲಂ ಯಂ ಸರ್ವೇ ಕವಯೋ ವಿದುಃ ।
ತಂ ಯತ್ನೇನ ಜಯೇಲ್ಲೋಭಂ ತಜ್ಜಾವೇತಾವುಭೌ ಗಣೌ ॥ ೪೯

ಈ ಹದಿನೆಂಟರಲ್ಲಿ ಮೂಲ ದೋಷವೊಂದೇ. ಅದು ಆಸೆ. ಅದನ್ನು ಜಯಿಸಿದರೆ ಎಲ್ಲವನ್ನು ಜಯಿಸಿದಂತೆ.

ಪಾನಮಕ್ಷಾಃ ಸ್ತ್ರಿಯಶ್ಚೈವ ಮೃಗಯಾ ಚ ಯಥಾಕ್ರಮಂ ।
ಏತತ್ಕಷ್ಟತಮಂ ವಿದ್ಯಾಚ್ಚತುಷ್ಕಂ ಕಾಮಜೇ ಗಣೇ ॥ ೫೦

ಕಾಮಜನ್ಯ ವ್ಯಸನಗಳಲ್ಲಿ ಪಾನ, ದ್ಯೂತ, ಸ್ತ್ರೀ, ಬೇಟೆಗಳು ಈ ನಾಲ್ಕು ಮತ್ತೂ ಕಠಿನ ಶೀಲಗಳು. ಅತ್ಯಂತ ದುಃಖಕರಗಳು.

ದಂಡಸ್ಯ ಪಾತನಂ ಚೈವ ವಾಕ್ಪಾರುಷ್ಯಾರ್ಥದೂಷಣೇ ।
ಕ್ರೋಧಜೇಽಪಿ ಗಣೇ ವಿದ್ಯಾತ್ಕಷ್ಟಮೇತತ್ತ್ರಿಕಂ ಸದಾ ॥ ೫೧

ಹೊಡೆಯುವುದು, ಬೈಯುವುದು, ಕೊಂಡದ್ದನ್ನು ಕೊಡದಿರುವುದು, ಕದಿಯುವುದು ಈ ಮೂರು ಕ್ರೋಧಜನ್ಯಗಳಲ್ಲಿ ಅತ್ಯಂತ ಕಷ್ಟಗಳು.

ಸಪ್ತಕಸ್ಯಾಸ್ಯ ವರ್ಗಸ್ಯ ಸರ್ವತ್ರೈವಾನುಷಂಗಿಣಃ ।
ಪೂರ್ವಂ ಪೂರ್ವಂ ಗುರುತರಂ ವಿದ್ಯಾದ್ವ್ಯಸನಮಾತ್ಮವಾನ್ ॥ ೫೨

ಹಿಂದೆ ಹೇಳಿದ ಪ್ರಧಾನ ಏಳರಲ್ಲಿ ಇನ್ನು ಹೇಳುವುದಾದರೆ ಮೊದಲು ಮೊದಲಿನದು ಅತ್ಯಂತ ಕಷ್ಟಮಯಗಳು. ಕೆಡಿಸುವುದರಲ್ಲಿ ಬಲಿಷ್ಠಗಳು. ವಿವರವು ಪ್ರಸಿದ್ಧ. ಇದನ್ನು ರಾಜನು ಅವಶ್ಯ ತಿಳಿಯಬೇಕು.

ವ್ಯಸನಸ್ಯ ಚ ಮೃತ್ಯೋಶ್ಚ ವ್ಯಸನಂ ಕಷ್ಟಮುಚ್ಯತೇ ।
ವ್ಯಸನ್ಯಧೋಽಧೋ ವ್ರಜತಿ ಸ್ವರ್ಯಾತ್ಯವ್ಯಸನೀ ಮೃತಃ ॥ ೫೩

ವ್ಯಸನವನ್ನು ಮರಣವನ್ನು ತುಲನೆ ಮಾಡುವುದಾದರೆ ವ್ಯಸನವೇ ದೋಷಬಹುಲವು. ಮರಣ-ದುಃಖವು ತಾತ್ಕಾಲಿಕ ವ್ಯಸನವಿಲ್ಲದವನಿಗೆ ಸುಖ ಸ್ವರ್ಗವಿದೆ. ದುರ್ವ್ಯಸನಿಯು ಚಿತ್ರಹಿಂಸೆಯನ್ನು ಬದುಕಿದ್ದು ನರಳುತ್ತಾ ಅನುಭವಿಸುವನು. ಮಿತಸೇವನೆಯು ವ್ಯಸನದ ಮಟ್ಟಕ್ಕೆ ಬರುವುದಿಲ್ಲ.

ಮೌಲಾನ್ ಶಾಸ್ತ್ರವಿದಃ ಶೂರಾನ್ ಲಬ್ಧಲಕ್ಷಾನ್ ಕುಲೋದ್ಭವಾನ್ ।
ಸಚಿವಾನ್ ಸಪ್ತ ಚಾಷ್ಟೌ ವಾ ಪ್ರಕುರ್ವೀತ ಪರೀಕ್ಷಿತಾನ್ ॥ ೫೪

ಅಜ್ಜ ಮುತ್ತಜ್ಜರಾದಿಯಾಗಿ ಹಿತಚಿಂತಕರಾದವರು ಶಾಸ್ತ್ರಜ್ಞರು ಶೂರರು ಶಸ್ತ್ರಾಸ್ತ್ರ ನಿಪುಣರು ಸತ್ಕುಲ ಪ್ರಸೂತರು ಆದವರನ್ನು ಯೋಗ್ಯರೆಂದು ಕಂಡುಕೊಂಡು ಏಳುಮಂದಿ ಮಂತ್ರಿಗಳನ್ನು ನಿಯಮಿಸಬೇಕು.

ಅಪಿ ಯತ್ಸುಕರಂ ಕರ್ಮ ತದಪ್ಯೇಕೇನ ದುಷ್ಕರಂ ।
ವಿಶೇಷತೋಽಸಹಾಯೇನ ಕಿಂತು ರಾಜ್ಯಂ ಮಹೋದಯಂ ॥ ೫೫

ಸುಲಭಸಾಧ್ಯವಾದ ಕೆಲಸವನ್ನಾದರೂ ಒಬ್ಬನು ಮಾಡುವುದು ಕಷ್ಟ. ಬಹುಫಲ ಬಹುಪ್ರಯಾಸ ಸಾಧ್ಯವಾದ ರಾಜ್ಯಭಾರವಂತೂ ಸರ್ವಥಾ ಒಬ್ಬನು ಮಾಡಬಾರದ ಕೆಲಸ.

ತೈಃ ಸಾರ್ಧಂ ಚಿಂತಯೇನ್ನಿತ್ಯಂ ಸಾಮಾನ್ಯಂ ಸಂಧಿವಿಗ್ರಹಂ ।
ಸ್ಥಾನಂ ಸಮುದಯಂ ಗುಪ್ತಿಂ ಲಬ್ಧಪ್ರಶಮನಾನಿ ಚ ॥ ೫೬

ಅಂತಹ ಆಪ್ತಮಂತ್ರಿಗಳೊಡನೆ ವಿಚಾರಮಾಡುವಂತಹ ಎಲ್ಲ ವಿಷಯಗಳನ್ನು ವಿಮರ್ಶಿಸಬೇಕು. ಸಾಮಾನ್ಯವಾಗಿ ಸಂಧಿ, ಯುದ್ಧ, ರಾಷ್ಟ್ರ ಸ್ಥಿತಿ ಕಾರಣ ಉತ್ಪತ್ತಿ ಮೂಲಗಳಾದ ಖನಿ, ತನ್ನ ಮತ್ತು ರಾಜ್ಯದ ರಕ್ಷಣೆ, ಸತ್ಪಾತ್ರ ವಿನಿಯೋಗ ಮುಂತಾದ ವಿಷಯಗಳು ಚರ್ಚಿಸಲ್ಪಡತಕ್ಕವುಗಳು.

ತೇಷಾಂ ಸ್ವಂ ಸ್ವಮಭಿಪ್ರಾಯಂ ಉಪಲಭ್ಯ ಪೃಥಕ್ ಪೃಥಕ್ ।
ಸಮಸ್ತಾನಾಂ ಚ ಕಾರ್ಯೇಷು ವಿದಧ್ಯಾದ್ಧಿತಮಾತ್ಮನಃ ॥ ೫೭

ಆ ಮಂತ್ರಿಗಳನ್ನು ಬೇರೆ ಬೇರೆಯಾಗಿಯೂ ಒಟ್ಟಿಗೂ ಕರೆದು ಸಮಾಲೋಚನೆ ನಡೆಸಬೇಕು. ಪ್ರತ್ಯೇಕ ವಿಚಾರದಲ್ಲಿ ಅಭಿಪ್ರಾಯವೂ, ಅವರೆಲ್ಲರ ಸಮ್ಮೇಲನದಲ್ಲಿ ವಿಮರ್ಶೆ ಸಾರಾಸಾರ ಗೌರವಲಾಘವಗಳೂ ತಿಳಿದುಬರುವುವು. ಈ ರೀತಿ ತನ್ನ ಮತ್ತು ರಾಷ್ಟ್ರದ ಹಿತವನ್ನು ದೂರವಾಗಿ ಆಲೋಚಿಸಬೇಕು.

ಸರ್ವೇಷಾಂ ತು ವಿಶಿಷ್ಟೇನ ಬ್ರಾಹ್ಮಣೇನ ವಿಪಶ್ಚಿತಾ ।
ಮಂತ್ರಯೇತ್ಪರಮಂ ಮಂತ್ರಂ ರಾಜಾ ಷಾಡ್ಗುಣ್ಯಸಂಯುತಂ ॥ ೫೮

ನಿಪುಣಮತಿಯಾದ ಪರಮಾಪ್ತನೊಬ್ಬನಿಂದ ಪ್ರಕೃತೋಪಯೋಗಿಯಾದಂತೆ ಆರು ಅಂಶವನ್ನು ಚರ್ಚಿಸಬೇಕು.

ನಿತ್ಯಂ ತಸ್ಮಿನ್ಸಮಾಶ್ವಸ್ತಃ ಸರ್ವಕಾರ್ಯಾಣಿ ನಿಃಕ್ಷಿಪೇತ್ ।
ತೇನ ಸಾರ್ಧಂ ವಿನಿಶ್ಚಿತ್ಯ ತತಃ ಕರ್ಮ ಸಮಾರಂಭೇತ್ ॥ ೫೯

ಅಂತಹ ಪರಮಾಪ್ತನಲ್ಲಿ ವಿಶ್ವಾಸದಿಂದ ಕರ್ತವ್ಯವನ್ನು ಸಮರ್ಪಿಸಿ ನಿಶ್ಚಯದಂತೆ ಕಾರ್ಯಗತಗೊಳಿಸಬೇಕು.

ಅನ್ಯಾನಪಿ ಪ್ರಕುರ್ವೀತ ಶುಚೀನ್ ಪ್ರಾಜ್ಞಾನವಸ್ಥಿತಾನ್ |
ಸಮ್ಯಗರ್ಥಸಮಾಹರ್ತ್ರೂನಮಾತ್ಯಾನ್ಸುಪರೀಕ್ಷಿತಾನ್ || ೬೦

ಇದಲ್ಲದೆ ಇನ್ನೊಂದು ಮಂತ್ರಿಮಂಡಲವಿರಬೇಕು. ಅದು ಸಹ ಅಂತಹ ಚತುರಮತಿಗಳಾದ, ಸರ್ವವಿಚಾರ ಸಮರ್ಥರಾದ, ಬಹುವಿಧಪರೀಕ್ಷೆಗೆ ಗುರಿಯಾದ, ಪರಿಶುದ್ಧಾಂತಃಕರಣವುಳ್ಳವರಿಂದ ಸಂಯೋಜಿಸಲ್ಪಡಬೇಕು.

ನಿರ್ವರ್ತೇತಾಸ್ಯ ಯಾವದ್ಭಿರಿತಿಕರ್ತವ್ಯತಾ ನೃಭಿಃ|
ತಾವತೋಽತಂದ್ರಿತಾನ್ದಕ್ಷಾನ್ಪ್ರಕುರ್ವೀತ ವಿಚಕ್ಷಣಾನ್ || ೬೧

ರಾಜಕಾರ್ಯವು ಎಷ್ಟು ಜನರಿಂದ ಮಾಡಿ ಮುಗಿಸಲಾಗುವುದೋ ಅಷ್ಟು ಆಲಸ್ಯ ಇಲ್ಲದೆ ಉತ್ಸಾಹ ಸ್ವಾಮಿನಿಷ್ಠೆ ವಿಚಕ್ಷಣತೆಯಿರುವ ಯೋಗ್ಯ ಜನರನ್ನು ಆಯಾ ಕೆಲಸಕ್ಕೆ ನಿಯಮಿಸಬೇಕು. ಅನುಭವಶಾಲಿಗಳು ಚೆನ್ನಾಗಿ ಕೆಲಸ ಮಾಡುವರು.

ತೇಷಾಮರ್ಥೇ ನಿಯುಂಜೀತ ಶೂರಾನ್ ದಕ್ಷಾನ್ ಕುಲೋದ್ಭವಾನ್ |
ಶುಚೀನಾಕರಕರ್ಮಾಂತೇ ಭೀರೂನಂತರ್ನಿವೇಶನೇ || ೬೨

ಚಿನ್ನ, ಬೆಳ್ಳಿ, ರತ್ನ, ಮಾಣಿಕ್ಯ, ವಜ್ರದ ಗನಿಗಳ ಕೆಲಸಕ್ಕೆ ಇಂತಹರನ್ನು ನಿಯಮಿಸಬೇಕು. ಅರ್ಥಶುದ್ಧಿ ಕುಲಮರ್ಯಾದಾ ಮೀರದ ಆಯಾ ಕೆಲಸದ ಅನುಭವ ಉಳ್ಳ ಸಮರ್ಥರು, ಗಣಿ ಅಧಿಕಾರಿಗಳು, ಧಾನ್ಯ ವ್ಯವಸ್ಥೆಗೂ ಅಂತಹರು. ಮನೆ ಒಳಗಿನ ಕೆಲಸಕ್ಕೆ ಶೂರರು ಬೇಡ. ಅಂಜುಬುರುಕರು ಬೇಕು. ಮನೆಯೊಳಗೆ ಅಪಾಯವಿಲ್ಲ. ಏಕಾಕಿಯಾಗಿ ವಿಶ್ರಾಂತಿಗೆ ಶಯನಾಸನ ದಲ್ಲಿರುವಾಗ ಬಳಿಯಲ್ಲಿ ಶೂರರು ಇರಬಾರದು.

ದೂತಂ ಚೈವ ಪ್ರಕುರ್ವೀತ ಸರ್ವಶಾಸ್ತ್ರವಿಶಾರದಂ |
ಇಂಗಿತಾಕಾರಚೇಷ್ಟಜ್ಞಂ ಶುಚಿಂ ದಕ್ಷಂ ಕುಲೋದ್ಗತಂ || ೬೩

ದೂತನು, ಸರ್ವಶಾಸ್ತ್ರಜ್ಞನು ಸೂಕ್ಷ್ಮಗ್ರಾಹಿಯಾಗಿ ವಚನ ಸ್ವರವರ್ಣ ಚೇಷ್ಟೆಗಳಿಂದ ಪರೇಂಗಿತ ಜ್ಞಾನಚತುರನು ಕುಲೀನನು ನಿರ್ವಂಚನೆ ದಕ್ಷತೆ ಇರುವವನು ಆಗಬೇಕು.

ಅನುರಕ್ತಃ ಶುಚಿರ್ದಕ್ಷಃ ಸ್ಮೃತಿಮಾನ್ ದೇಶಕಾಲವಿತ್ ।
ವಪುಷ್ಮಾನ್ ವೀತಭೀರ್ವಾಗ್ಮೀ ದೂತೋ ರಾಜ್ಞಃ ಪ್ರಶಸ್ಯತೇ ॥ ೬೪

ಅರ್ಥಸ್ತ್ರೀಶುಚಿ, ಅನುರಂಜನ ಶೀಲ, ಸ್ಮರಣ, ದೇಶಕಾಲ ಪರಿಜ್ಞಾನ, ದೇಹಸೌಂದರ್ಯ, ನಿರ್ಭೀತಿ, ವಾಗ್ಮಿತ್ವ, ಉಳ್ಳವನು ರಾಜಕಾರ್ಯಕ್ಕೆ ತಕ್ಕ ದೂತನು.

ಅಮಾತ್ಯೇ ದಂಡ ಆಯತ್ತೋ ದಂಡೇ ವೈನಯಿಕೀ ಕ್ರಿಯಾ ।
ನೃಪತೌ ಕೋಶರಾಷ್ಟ್ರೇ ಚ ದೂತೇ ಸಂಧಿವಿಪರ್ಯಯೌ ॥ ೬೫

ವಿಶ್ವಾಸಿಯಾಗಿ ಒಡನಾಡಿಯಾದವನಲ್ಲಿ ಸೇನಾಪತ್ಯವಿರಬೇಕು. ಅಧಿಕಾರದಲ್ಲಿ ವಿನಯವು ಇರಬೇಕು. ಧನಾಧಿಕಾರವು ರಾಜನಲ್ಲಿರಬೇಕು ಸಂಧಿ ವಿಗ್ರಹವು ದೂತನನ್ನು ಆಧರಿಸಿರಬೇಕು.

ದೂತ ಏವ ಹಿ ಸಂಧತ್ತೇ ಭಿನತ್ತ್ಯೇವ ಚ ಸಂಹತಾನ್ ।
ದೂತಸ್ತತ್ಕುರುತೇ ಕರ್ಮ ಭಿದ್ಯಂತೇ ಯೇನ ಮಾನವಾಃ ॥ ೬೬

ಸಂಧಿಗೆ ಯೋಗ್ಯಕಾಲ ನಿಶ್ಚಯ, ಶತ್ರುವನ್ನು ಸಂಧಿಗೆ ಅವನನ್ನು ಒಲಿಸುವುದು, ದೂತನ ಯಥಾರ್ಥ ಜ್ಞಾನಚಾತುರ್ಯವನ್ನು ಅವಲಂಬಿಸಿದೆ. ಭೇದ ವಿಗ್ರಹ ನಿಶ್ಚಯ ರಚನೆಗಳೂ ದೂತನಿಂದಲೇ.

ಸ ವಿದ್ಯಾದಸ್ಯ ಕೃತ್ಯೇಷು ನಿಗೂಢೇಂಗಿತಚೇಷ್ಟಿತೈಃ ।
ಆಕಾರಮಿಂಗಿತಂ ಚೇಷ್ಟಾಂ ಭೃತ್ಯೇಷು ಚ ಚಿಕೀರ್ಷಿತಂ ॥ ೬೭

ಶತ್ರುರಾಜನು ಅವನ ಪಕ್ಷದವರು ಇವರ ಗುಟ್ಟನ್ನು ಲಕ್ಷಣಗಳಿಂದ ಊಹಿಸಿ ತಿಳಿದು ಅವನ ಇನ್ನು ಮೇಲಿನ ಪ್ರತಿಕ್ರಿಯೆಯನ್ನು ಪರೀಕ್ಷಿಸಬೇಕು.

ಬುಧ್ವಾ ಚ ಸರ್ವಂ ತತ್ತ್ವೇನ ಪರರಾಜಚಿಕೀರ್ಷಿತಂ ।
ತಥಾ ಪ್ರಯತ್ನಮಾತಿಷ್ಠೇದ್ಯಥಾತ್ಮಾನಂ ನ ಪೀಡಯೇತ್ ॥ ೬೮

ದೂತನು ಪರರಾಜನಿಗೆ ತನ್ನ ಗುರುತು ತಿಳಿಯದಂತೆ ಅವರ ಉದ್ದೇಶ ಸಾಧನೆಗಳನ್ನು ತಿಳಿಕೊಂಡು ತನ್ನ ರಕ್ಷಣೆಯನ್ನು ಉಪಾಯದಿಂದ ಮಾಡಿ

ಕೊಳ್ಳಬೇಕು. ಗುಪ್ತಚಾರನೆಂದು ತಿಳಿದರೆ ಸೆರೆಹಿಡಿದು ಬಂಧಿಸಿ ವಧಿಸಬಹುದು.

ಜಾಂಗಲಂ ಸಸ್ಯಸಂಪನ್ನಮಾರ್ಯಪ್ರಾಯಮನಾವಿಲಂ ।
ರಮ್ಯಮಾನತಸಾಮಂತಂ ಸ್ವಾಜೀವ್ಯಂ ದೇಶಮಾವಸೇತ್ ॥ ೬೯

ರಾಜನು ದೇಶದಲ್ಲಿ ಒಳ್ಳೆ ಗಾಳಿ ಬಿಸಲು ಇರುವ ಸಂಪತ್ಸಮೃದ್ಧ ಪ್ರದೇಶದಲ್ಲಿ ಬಿಡಾರ (ನಗರ) ಮಾಡಬೇಕು. ಒಳ್ಳೆ ಜನರು ಇರುವ ಸಾಂಕ್ರಾಮಿಕ ರೋಗವಿಲ್ಲದ, ಬಳಿಯಲ್ಲಿ ಬಹುವಿಧ ಜನರು ಕಾರಣಾಂತರದಿಂದ ಬಂದು ಸೇರುವ ದೇಶದಲ್ಲಿ ವ್ಯವಹರಿಸಬೇಕು.

ಧನ್ವದುರ್ಗಂ ಮಹೀದುರ್ಗಂ ಮಬ್ದುಗಂ ವಾರ್ಕ್ಷಮೇವ ವಾ ।
ನೃದುರ್ಗಂ ಗಿರಿದುರ್ಗಂ ವಾ ಸಮಾಶ್ರಿತ್ಯ ವಸೇತ್ಪುರಂ ॥ ೭೦

ಮರುಭೂಮಿ, ಶಿಲಾಪ್ರಾಕಾರ, ಅಗಾಧ ಜಲಾವರಣ, ದುರ್ಗಮಾರಣ್ಯ, ಚತುರಂಗಸೇನೆ, ಕಡಿದಾದ ಗುಡ್ಡದ ತುದಿ ಇಂತಹ ಪ್ರದೇಶದಲ್ಲಿ ನಗರ ರಚನೆ ಮಾಡಬಹುದು.

ಸರ್ವೇಣ ತು ಪ್ರಯತ್ನೇನ ಗಿರಿದುರ್ಗಂ ಸಮಾಶ್ರಯೇತ್ ।
ಏಷಾಂ ಹಿ ಬಾಹುಗುಣ್ಯೇನ ಗಿರಿದುರ್ಗಂ ವಿಶಿಷ್ಯತೇ ॥ ೭೧

ಪೂರ್ವದಲ್ಲಿ ಜನಸಂಖ್ಯೆ ಕಡಿಮೆ. ವಾಹನ ಸೌಕರ್ಯವಿಲ್ಲ. ಆಗ ಗಿರಿದುರ್ಗವು ಬಹುಗುಣವಿತ್ತು. ಈಗ ಭೂಗರ್ಭ ಗಮನವೂ ಇದೆ.

ತ್ರೀಣ್ಯಾದ್ಯಾನ್ಯಾಶ್ರಿತಾಸ್ತ್ವೇಷಾಂ ಮೃಗಗರ್ತಾಶ್ರಯಾಪ್ಸರಾಃ ।
ತ್ರೀಣ್ಯುತ್ತರಾಣಿ ಕ್ರಮಶಃ ಪ್ಲವಂಗಮನರಾಮರಾಃ ॥ ೭೨

ಆ ನೈಸರ್ಗಿಕ ದುರ್ಗಗಳಲ್ಲಿ ಆಶ್ರಯ ಹೊಂದಿದವರು ಸುರಕ್ಷಿತವಾಗಿರುತ್ತಾರೆ.

ಯಥಾ ದುರ್ಗಾಶ್ರಿತಾನೇತಾನ್ನೋಪಹಿಂಸಂತಿ ಶತ್ರವಃ ।
ತಥಾರಯೋ ನ ಹಿಂಸಂತಿ ನೃಪಂ ದುರ್ಗಸಮಾಶ್ರಿತಂ ॥ ೭೩

ದುರ್ಗದಲ್ಲಿ ಮೃಗಾದಿಯೂ ಸುರಕ್ಷಿತವಾದಂತೆ ರಾಜನಿಗೂ ಭಯ ಕಡಿಮೆ.

ಏಕಃ ಶತಂ ಯೋಧಯತಿ ಪ್ರಾಕಾರಸ್ಥೋ ಧನುರ್ಧರಃ ।
ಶತಂ ದಶಸಹಸ್ರಾಣಿ ತಸ್ಮಾದ್ದುರ್ಗಂ ವಿಧೀಯತೇ ॥ ೭೪

ಧನುರ್ಯುದ್ಧಕ್ಕೆ ಕೋಟೆಯು ಸಹಾಯವಾಗುವುದರಿಂದ ಈ ದುರ್ಗವು ಉತ್ತಮ. ಈಗಿನ ವಿಮಾನ ಯುದ್ಧಕ್ಕೆ ಭೂಗರ್ಭವೇ ಉತ್ತಮವೇನೋ.

ತತ್ಸ್ಯಾದಾಯುಧಸಂಪನ್ನಂ ಧನಧಾನ್ಯೇನ ವಾಹನೈಃ ।
ಬ್ರಾಹ್ಮಣೈಃ ಶಿಲ್ಪಿಭಿರ್ಯಂತ್ರೈರ್ಯವಸೇನೋದಕೇನ ಚ ॥ ೭೫

ಅಂತು ಆಯಾ ಕಾಲದ ಶಸ್ತ್ರಾಸ್ತ್ರಗಳು, ಧನಧಾನ್ಯ, ಸರ್ವವಿಧವಾಹನಗಳು, ಶಿಲ್ಪಿಗಳು, ಇಷ್ಟರು, ಆಪ್ತರು, ಯಂತ್ರಗಳು, ರಾಜಸನ್ನಿಧಿಯಲ್ಲಿ ತುಂಬಿರಬೇಕು.

ತಸ್ಯ ಮಧ್ಯೇ ಸುಪರ್ಯಾಪ್ತಂ ಕಾರಯೇದ್ಗೃಹಮಾತ್ಮನಃ ।
ಗುಪ್ತಂ ಸರ್ವರ್ತುಕಂ ಶುಭ್ರಂ ಜಲವೃಕ್ಷಸಮನ್ವಿತಂ ॥ ೭೬

ಆ ದುರ್ಗದಲ್ಲಿ ಎಲ್ಲ ಹವಾಮಾನಕ್ಕು ತಕ್ಕುದಾದ ರಕ್ಷಣೆ ಒದಗಿಸಬಲ್ಲ ಸರ್ವವಿಧ ಸೌಕರ್ಯವುಳ್ಳ ಮನೆ ಮಾಡಬೇಕು.

ತದಧ್ಯಾಸ್ಯೋದ್ವಹೇದ್ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಂ ।
ಕುಲೇ ಮಹತಿ ಸಂಭೂತಾಂ ಹೃದ್ಯಾಂ ರೂಪಗುಣಾನ್ವಿತಾಂ ॥ ೭೭

ಮನೆ ಸಿದ್ಧವಾದ ಮೇಲೆ ಶುಭಲಕ್ಷಣಗಳುಳ್ಳ ಸತ್ಕುಲಪ್ರಸೂತಳಾದ ಸೌಂದರ್ಯವತಿಯಾದ ಸ್ವಜಾತಿ ಸ್ತ್ರೀಯನ್ನು ವರಿಸಬೇಕು.

ಪುರೋಹಿತಂ ಚ ಕುರ್ವೀತ ವೃಣುಯಾದೇವ ಚರ್ತ್ವಿಜಃ ।
ತೇಽಸ್ಯ ಗೃಹ್ಯಾಣಿ ಕರ್ಮಾಣಿ ಕುರ್ಯುರ್ವೈತಾನಿಕಾನಿ ಚ ॥ ೭೮

ಪುರೋಹಿತನನ್ನು ಋತ್ವಿಕ್ಕುಗಳನ್ನು ಬರಮಾಡಿ ಶ್ರೌತಸ್ಮಾರ್ತ ಕರ್ಮಗಳನ್ನು ನಡೆಸಬೇಕು.

ಯಜೇತ ರಾಜಾ ಕ್ರತುಭಿರ್ವಿವಿಧೈರಾಪ್ತದಕ್ಷಿಣೈಃ ।
ಧರ್ಮಾರ್ಥಂ ಚೈವ ವಿಪ್ರೇಭ್ಯೋ ದದ್ಯಾದ್ಭೋಗಾನ್ಧನಾನಿ ಚ ॥ ೭೯

ಯಾಗದಿಂದ ದೇವತೆಗಳನ್ನು ಪೂಜಿಸಬೇಕು. ಸಜ್ಜನರಾದ ಬ್ರಾಹ್ಮಣರು ಅಲ್ಪತೃಪ್ತಿಯುವರಾದುದರಿಂದ ಅವರ ಜೀವನ ಕಲ್ಪನೆಯು ಧರ್ಮನಾಶಕವಲ್ಲ. ದೀನದಲಿತರ ಕ್ಷೇಮದಿಂದ ಅಪಚಾರವಾಗಲಾರದು.

ಸಾಂವತ್ಸರಿಕಮಾಪ್ತೈಶ್ಚ ರಾಷ್ಟ್ರಾದಾಹಾರಯೇದ್ಬಲಿಂ ।
ಸ್ಯಾಚ್ಚಾಮ್ನಾಯಪರೋ ಲೋಕೇ ವರ್ತೇತ ಪಿತೃವನ್ನೃಷು ॥ ೮೦

ಪ್ರಜೆಗಳನ್ನು ತನ್ನ ಮಕ್ಕಳಂತೆ ಪ್ರೀತಿಯಿಂದ ಕಾಣಬೇಕು. ಪ್ರತಿ ವರ್ಷಕ್ಕೆ ನಿಯಮಿಸಿದ ರಾಜಭಾಗವನ್ನು ಪ್ರಜೆಗಳಿಂದ ಬರಮಾಡಬೇಕು. ದೂರಾಲೋಚನೆಯ ಶಾಸ್ತ್ರಮರ್ಯಾದೆಯನ್ನಲ್ಲದೆ ತಾತ್ಕಾಲಿಕ ವಿಚಾರದಿಂದ ಯಾವ ಅವಿವೇಕವನ್ನು ಶೀಘ್ರ ಕೈಕೊಳ್ಳಬಾರದು.

ಅಧ್ಯಕ್ಷಾನ್ವಿವಿಧಾನ್ಕುರ್ಯಾತ್ತತ್ರ ತತ್ರ ವಿಪಶ್ಚಿತಃ ।
ತೇಽಸ್ಯ ಸರ್ವಾಣ್ಯವೇಕ್ಷೇರನ್ನೃಣಾಂ ಕಾರ್ಯಾಣಿ ಕುರ್ವತಾಂ ॥ ೮೧

ಬುದ್ಧಿಸಂಪನ್ನರಾದ ಅಧಿಕಾರಿಗಳನ್ನು ಆಯಾ ವಿಭಾಗದ ಮೇಲ್ತನಿಕೆಗೆ ನಿಯಮಿಸಬೇಕು.

ಆವೃತ್ತಾನಾಂ ಗುರುಕುಲಾದ್ವಿಪ್ರಾಣಾಂ ಪೂಜಕೋ ಭವೇತ್ ।
ನೃಪಾಣಾಮಕ್ಷಯೋ ಹ್ಯೇಷ ಸಿಧಿರ್ಬ್ರಾಹ್ಮೋಽಭಿಧೀಯತೇ ॥ ೮೨

ವಿದ್ಯಾಭ್ಯಾಸ ಮುಗಿಸಿ ಗುರುಕುಲದಿಂದ ಬಂದ ವಿದ್ಯಾಸಂಪನ್ನರನ್ನು ಅವರಿಗುಚಿತ ದಾನದಿಂದ ಸ್ವಕರ್ಮ ನಿರತರಾಗುವಂತೆ ಮಾಡಬೇಕು. ಅದು ರಾಜನ ಅಕ್ಷಯನಿಧಿಯಂತೆ ಬಹುಫಲವುಳ್ಳದ್ದು. ಎಂದೂ ವಿದ್ಯಾವಂತರು, ದೇಶದಲ್ಲಿರುವುದು ಬೇಡವೆಂದು ಯಾರೂ ಅಪೇಕ್ಷಿಸುವುದಿಲ್ಲ. ಬ್ರಹ್ಮನಿಷ್ಠರು ಬೇಡವಾದರೆ ಬೇಕಾದುದೇನು ? ಕ್ರೂರಪಾಪಿಷ್ಠ ಸೇನೆಯು ಮತ್ತೇನನ್ನು ಸಾಧಿಸುವುದು.

ನ ತಂ ಸ್ತೇನಾ ನ ಚಾಮಿತ್ರಾ ಹರಂತಿ ನ ಚ ನಶ್ಯತಿ ।
ತಸ್ಮಾದ್ರಾಜ್ಞಾ ನಿಧಾತವ್ಯೋ ಬ್ರಾಹ್ಮಣೇಷ್ವಕ್ಷಯೋ ನಿಧಿಃ ॥ ೮೩

ಜ್ಞಾನಧನವನ್ನು ಕಳ್ಳಕಾಕರು ಶತ್ರುಗಳು ಅಪಹರಿಸಲಾರರಾದುದರಿಂದ ಜ್ಞಾನೋಪಾಸಕ ರಕ್ಷಣೆಯು ಆಪದ್ಧನ.

ನ ಸ್ಕಂದತೇ ನ ವ್ಯಥತೇ ನ ವಿನಶ್ಯತಿ ಕರ್ಹಿಚಿತ್ ।
ವರಿಷ್ಠಮಗ್ನಿಹೋತ್ರೇಭ್ಯೋ ಬ್ರಾಹ್ಮಣಸ್ಯ ಮುಖೇ ಹುತಂ ॥ ೮೪

ಬ್ರಾಹ್ಮಣನ ಮುಖಸೇವನೆಯು ಅಗ್ನಿಹೋತ್ರಕ್ಕಿಂತಲೂ ಅಧಿಕ ಫಲವುಳ್ಳಹೋಮವು. ಭೂತವಿಜ್ಞಾನದ ಪರಮಸಾಧನೆಗಳಿಂದ ಇಂದಿಗೂ ಯಾರೂ ಚಿರಂಜೀವಿಗಳೂ ಚಿರಸುಖಿಗಳೂ ಆಗಿಲ್ಲ. ಆದರಿಂದ ಜ್ಞಾನನಿಧಿ ರಕ್ಷಣೆಯು ವೃಥಾಕಾರ್ಯವಲ್ಲ.

ಸಮಮಬ್ರಾಹ್ಮಣೇ ದಾನಂ ದ್ವಿಗುಣಂ ಬ್ರಾಹ್ಮಣಬ್ರುವೇ ।
ಪ್ರಾಧೀತೇ ಶತಸಾಹಸ್ರಮನಂತಂ ವೇದಪಾರಗೇ ॥ ೮೫

ಯಾರಿಗೆ ದಾನಮಾಡಿದರೂ ಫಲವಿದೆ. ಆದರೆ ಜ್ಞಾನಸಾಧಕನ ದಾನವು ಅನಂತ ಫಲವುಳ್ಳದ್ದು.

ಪಾತ್ರಸ್ಯ ಹಿ ವಿಶೇಷೇಣ ಶ್ರದ್ಧಧಾನತಯೈವ ಚ ।
ಅಲ್ಪಂ ವಾ ಬಹು ವಾ ಪ್ರೇತ್ಯ ದಾನಸ್ಯ ಫಲಮಶ್ನುತೇ ॥ ೮೬

ದಾನಸ್ವೀಕರಿಸಿದವನ ಯೋಗ್ಯತೆಯ ತೂಕಕ್ಕೆ ಸರಿಯಾಗಿ ದಾತೃವಿಗೆ ಫಲಪ್ರಾಪ್ತಿಯಾಗುವುದು.

ಸಮೋತ್ತಮಾಧಮೈ ರಾಜಾ ತ್ವಾಹೂತಃ ಪಾಲಯನ್ ಪ್ರಜಾಃ ।
ನ ನಿವರ್ತೇತ ಸಂಗ್ರಾಮಾತ್ ಕ್ಷಾತ್ರಂ ಧರ್ಮಮನುಸ್ಮರನ್ ॥ ೮೭

ಪ್ರಜಾಪಾಲಕನಾದ ರಾಜನನ್ನು ಎಂತವನು ಯುದ್ಧಕ್ಕೆ ಕರೆದರೂ ನಿರಾಕರಿಸಬಾರದು. ಮರಣ ಭಯವು ಕ್ಷತ್ರಿಯ ಧರ್ಮವಲ್ಲ. ಜಯಾಪಜಯವೇ ನ್ಯಾಯ ಧರ್ಮಗಳನ್ನು ನಿರ್ಣಯಿಸುವುವೆಂದು ಪುರಾತನ ಮತ. ಯುದ್ಧಾಭಿಲಾಷಿಯಾದ ದುರ್ಯೋಧನನನ್ನು ಯಾವ ಶೂರ ಮೇಧಾವಿ ವರಿಷ್ಠ ಶ್ರೀಕೃಷ್ಣ ಭೀಷ್ಮಾದಿಗಳೂ ಬಂಧಿಸಲಿಲ್ಲ. ಯತೋಧರ್ಮಸ್ತತೋ ಜಯಃ.

ಸಂಗ್ರಾಮೇಷ್ವನುವರ್ತಿತ್ವಂ ಪ್ರಜಾನಾಂ ಚೈವ ಪಾಲನಂ ।
ಶುಶ್ರೂಷಾ ಬ್ರಾಹ್ಮಣಾನಾಂ ಚ ರಾಜ್ಞಾಂ ಶ್ರೇಯಸ್ಕರಂ ಪರಂ ॥ ೮೮

ಯುದ್ಧಾಗ್ರೇಸರತ್ವ, ಪ್ರಜಾಪಾಲನ, ಬ್ರಾಹ್ಮಣ ಪೂಜನಗಳು ರಾಜನ ಕರ್ತವ್ಯಗಳು. ಅಲ್ಪತೃಪ್ತಿಯ ಬ್ರಾಹ್ಮಣರು ರಾಜಕಾರ್ಯವನ್ನು ಸಮುಚಿತವಾಗಿ ನಿರ್ವಹಿಸುವಾಗ ಪರಕೀಯರ ದುರಾಗ್ರಹಕ್ಕೆ ತುತ್ತಾಗುವುದಿಲ್ಲ. ಅಂತಹ ದಕ್ಷತೆ ಇನ್ನಾರಿಗೂ ಇಲ್ಲ.

ಆಹವೇಷು ಮಿಥೋಽನ್ಯೋಽನ್ಯಂ ಜಿಘಾಂಸಂತೋ ಮಹೀಕ್ಷಿತಃ ।
ಯುಧ್ಯಮಾನಾಃ ಪರಂ ಶಕ್ತ್ಯಾ ಸ್ವರ್ಗಂ ಯಾಂತ್ಯಪರಾಙ್ಮುಖಾಃ ॥ ೮೯

ತನ್ನ ಕರ್ತವ್ಯ ನಿರ್ವಹಣೆಯನ್ನು ಮಾಡುವಾಗ ರಾಜನು ದೇಹಪಾತವನ್ನು ಹೊಂದಿದರೆ ಅಶ್ರೇಯಸ್ಸು ಆಗಲಾರದು.

ನ ಕೂಟೈರಾಯುಧೈರ್ಹನ್ಯಾದ್ಯುಧ್ಯಮಾನೋ ರಣೇ ರಿಪೂನ್ ।
ನ ಕರ್ಣಿಭಿರ್ನಾಪಿ ದಿಗ್ಧೈರ್ನಾಗ್ನಿಜ್ವಲಿತತೇಜನೈಃ ॥ ೯೦

ಶತ್ರುವನ್ನು ಬೆಂಕಿ, ವಿಷ, ಕವಲುಕಣೆ, ಕಪಟಗಳಿಂದ ಕೊಲ್ಲುವ ಇಚ್ಛೆಯನ್ನು ಮಾಡಬಾರದು.

ನ ಚ ಹನ್ಯಾತ್ ಸ್ಥಲಾರೂಢಂ ನ ಕ್ಲೀಬಂ ನ ಕೃತಾಂಜಲಿಂ ।
ನ ಮುಕ್ತಕೇಶಂ ನಾಸೀನಂ ನ ತವಾಸ್ಮೀತಿ ವಾದಿನಂ ॥ ೯೧

ವಾಹನದಿಂದಿಳಿದು ನೆಲದಲ್ಲಿ ನಿಂತವನು, ನಪುಂಸಕ, ನಮಸ್ಕರಿಸಿದವ, ಕೂದಲು ಹರಡಿದವ, ಕುಳಿತವ, ಶರಣಾಗತ ಇವರನ್ನು ಕೊಲ್ಲಬಾರದು. ಇವರಿಗೆ ಹಿಂಸೇಚ್ಛೆಯಿಲ್ಲ.

ನ ಸುಪ್ತಂ ನ ವಿಸನ್ನಾಹಂ ನ ನಗ್ನಂ ನ ನಿರಾಯುಧಂ ।
ನಾಯುಧ್ಯಮಾನಂ ಪಶ್ಯಂತಂ ನ ಪರೇಣ ಸಮಾಗತಂ ॥ ೯೨

ನಿದ್ರಿಸಿದವನು, ತಯಾರಿಲ್ಲದವನು, ನಿರ್ವಸ್ತ್ರನು, ಆಯುಧಹೀನನು, ಯುದ್ಧ ಮಾಡದವನು, ನೋಡುವವನು, ಇನ್ನೊಬ್ಬನೊಡನೆ ಯುದ್ಧ ಮಾಡುವವನು ಇವರನ್ನು ಕೊಲ್ಲಬಾರದು.

ನಾಯುಧವ್ಯಸನಪ್ರಾಪ್ತಂ ನಾರ್ತಂ ನಾತಿಪರಿಕ್ಷತಂ ।
ನ ಭೀತಂ ನ ಪರಾವೃತ್ತಂ ಸತಾಂ ಧರ್ಮಮನುಸ್ಮರನ್ ॥ ೯೩

ಆಯುಧ ಕೆಟ್ಟುಹೋದವನು, ದುಃಖಿತನು, ತುಂಬಹೊಡೆತ ತಿಂದವನು, ಹೆದರಿದವನು, ಯುದ್ಧದಿಂದ ಓಡಿಹೋಗುವವನು ಇವರನ್ನು ಕೊಲ್ಲಬಾರದು. ಇದು ಸಜ್ಜನರ ಧರ್ಮ.

ಯಸ್ತು ಭೀತಃ ಪರಾವೃತ್ತಃ ಸಂಗ್ರಾಮೇ ಹನ್ಯತೇ ಪರೈಃ ।
ಭರ್ತುರ್ಯದ್ದುಷ್ಕೃತಂ ಕಿಂಚಿತ್ತತ್ಸರ್ವಂ ಪ್ರತಿಪದ್ಯತೇ ॥ ೯೪

ಪಾಪ ಪುಣ್ಯವು ತಿಳಿಯುವುದು ಶಾಸ್ತ್ರದಿಂದ. ಅದು ಯಾರಿಂದ ಯಾರನ್ನು ಸೇರುವುದೆನ್ನುವುದೂ ಶಾಸ್ತ್ರಮಾತ್ರ ಗಮ್ಯವು. ಅದು ಇಲ್ಲವೆಂಬು ನಿರಾಕರಿಸಿ ಉಚ್ಛೃಂಖಲನಾದವನನ್ನು ಅದು ಬಿಡುವುದಿಲ್ಲ. ಅದರ ಜ್ಞಾನವನ್ನು ಅದು ಉಂಟು ಮಾಡಿಯೇ ತೀರುವುದು. ಆದುದರಿಂದ (ಹಿಂದೆ ಹೇಳಿದ ಧರ್ಮವನ್ನು ಮೀರಿ ಕೊಂದರೆ ಯೋಧನ ಸ್ವಾಮಿಯ ಪಾಪವನ್ನು ಕೊಂದ ಯೋಧನು ತಪ್ಪದೆ ಅನುಭವಿಸುವನು.) ಯುದ್ಧಕ್ಕೆ ಬಂದ ಯೋಧನು ಎಂದೂ ಹೆದರಿ ಓಡಿ ಹೋಗಬಾರದು. ಹಾಗೇ ಹೋದರೆ ತನ್ನ ಸ್ವಾಮಿಯ ಪಾಪಕ್ಕೆ ತಾನು ಆಶ್ರಯ ಆಗುವನು.

ಯಚ್ಚಾಸ್ಯ ಸುಕೃತಂ ಕಿಂಚಿದಮುತ್ರಾರ್ಥಮುಪಾರ್ಜಿತಂ ।
ಭರ್ತಾ ತತ್ಸರ್ವಮಾದತ್ತೇ ಪರಾವೃತ್ತಹತಸ್ಯ ತು ॥ ೯೫

ಹೇಡಿಯಾದ ಯೋಧನು ಕೊಲ್ಲಲ್ಪಟ್ಟಾಗ ಇದ್ದ ಅವನ ಪುಣ್ಯವು ಸ್ವಾಮಿಯಾದ ರಾಜನಿಗೆ ಸೇರುವುದು.

ರಥಾಶ್ವಂ ಹಸ್ತಿನಂ ಛತ್ರಂ ಧನಂ ಧಾನ್ಯಂ ಪಶೂನ್ ಸ್ತ್ರಿಯಃ ।
ಸರ್ವದ್ರವ್ಯಾಣಿ ಕುಪ್ಯಂ ಚ ಯೋ ಯಜ್ಜಯತಿ ತಸ್ಯ ತತ್ ॥ ೯೬

ಯುದ್ಧಕಾಲದಲ್ಲಿ ಪ್ರತಿಯೋಧನು ಗೆದ್ದ ಕೆಳಗಿನ ಸಾಮಗ್ರಿಗಳು ಅವನ ಸೊತ್ತಾಗಬೇಕಾದವು. ರಾಜನ ಸೊತ್ತಲ್ಲ. ರಥ, ಕುದುರೆ, ಆನೆ, ಕೊಡೆ, ಹಣ, ಧಾನ್ಯ, ಪಶು, ಸ್ತ್ರೀ, ಚಿನ್ನ, ಬೆಳ್ಳಿ, ಹೊರತಾದ, ಲೋಹಮಯ ಇನ್ನೂ ಕಡಿಮೆ ಬೆಲೆಯ ವಸ್ತು ಇವೆಲ್ಲ.

ರಾಜ್ಞಶ್ಚ ದದ್ಯುರುದ್ಧಾರಮಿತ್ಯೇಷಾ ವೈದಿಕೀ ಶ್ರುತಿಃ ।
ರಾಜ್ಞಾ ಚ ಸರ್ವಯೋಧೇಭ್ಯೋ ದಾತವ್ಯಮಪೃಥಗ್ಜಿತಂ ॥ ೯೭

ಯೋಧರು ಜಯಿಸಿದ ಸಾಮಗ್ರಿಗಳಲ್ಲಿ ಉತ್ತಮ ವಸ್ತುವನ್ನು ಉದ್ಧಾರವಾಗಿ ರಾಜನಿಗೆ ಕೊಡಬೇಕೆಂದು ವೇದವು ಹೇಳುತ್ತದೆ. ಮತ್ತು ಯೋಧರು ಸಾಮೂಹಿಕವಾಗಿ ಗೆದ್ದ ವಸ್ತುವನ್ನು ರಾಜನು ಯೋಧರಿಗೆ ಕೊಡಬೇಕು.

ಏಷೋಽನುಪಸ್ಕೃತಃ ಪ್ರೋಕ್ತೋ ಯೋಧಧರ್ಮಃ ಸನಾತನಃ ।
ಅಸ್ಮಾದ್ಧರ್ಮಾನ್ನ ಚ್ಯವೇತ ಕ್ಷತ್ರಿಯೋ ಘ್ನನ್ರಣೇ ರಿಪೂನ್ ॥ ೯೮

ಇದು ಯೋಧರ ಕುರಿತು ಇರುವ ಪುರಾತನ ಧರ್ಮವು. ಯಾವ ರಾಜನೂ ಇದಕ್ಕೆ ತಪ್ಪಬಾರದು.

ಅಲಬ್ಧಂ ಚೈವ ಲಿಪ್ಸೇತ ಲಬ್ಧಂ ರಕ್ಷೇತ್ಪ್ರಯತ್ನತಃ ।
ರಕ್ಷಿತಂ ವರ್ಧಯೇಚ್ಚೈವ ವೃದ್ಧಂ ಪಾತ್ರೇಷು ನಿಕ್ಷಿಪೇತ್ ॥ ೯೯

ಪರರಾಜರನ್ನು ಗೆದ್ದು ತನ್ನ ರಾಜ್ಯಕೋಶವನ್ನು ತುಂಬಬೇಕು. ಅದನ್ನು ರಕ್ಷಿಸಬೇಕು. ಅದನ್ನು ಹೆಚ್ಚಿಸಬೇಕು. ಅದನ್ನು ಸತ್ಪಾತ್ರದಲ್ಲಿ ದಾನ ಮಾಡಬೇಕು. ಇದು ರಾಜಕಾರ್ಯವು.

ಏತಚ್ಚತುರ್ವಿಧಂ ವಿದ್ಯಾತ್ಪುರುಷಾರ್ಥಪ್ರಯೋಜನಂ ।
ಅಸ್ಯ ನಿತ್ಯಮನುಷ್ಠಾನಂ ಸಮ್ಯಕ್ಕುರ್ಯಾದತಂದ್ರಿತಃ ॥ ೧೦೦

ಹಿಂದೆ ಹೇಳಿದುದು ರಾಜನ ಪುರುಷಾರ್ಥ. ಅಜಾಗರೂಕತೆಯಿಲ್ಲದೆ, ಅದನ್ನು ಸಾಧಿಸಬೇಕು.

ಅಲಬ್ಧಮಿಚ್ಛೇದ್ದಂಡೇನ ಲಬ್ಧಂ ರಕ್ಷೇದವೇಕ್ಷಯಾ ।
ರಕ್ಷಿತಂ ವರ್ಧಯೇದ್ವೃದ್ಧ್ಯಾ ವೃದ್ಧಂ ಪಾತ್ರೇಷು ನಿಕ್ಷಿಪೇತ್ ॥ ೧೦೧

ದಂಡಬಲದಿಂದ ಹೊಸ ಸಂಪಾದನೆ, ಅದನ್ನು ಜಾಗರೂಕತೆಯಿಂದ ರಕ್ಷಿಸುವುದು, ರಕ್ಷಿಸಿದ್ದನ್ನು ವೃದ್ಧಿಯ ಉಪಾಯಗಳಿಂದ ಹೆಚ್ಚಿಸುವುದು, ವರ್ಧಿಸಿದ್ದನ್ನು ವಿನಿಯೋಗಿಸುವುದು ಶಾಸ್ತ್ರಜ್ಞಾನದಿಂದ.

ನಿತ್ಯಮುದ್ಯತದಂಡಃ ಸ್ಯಾನ್ನಿತ್ಯಂ ವಿವೃತಪೌರುಷಃ ।
ನಿತ್ಯಂ ಸಂವೃತಸಂವಾರ್ಯೋ ನಿತ್ಯಂ ಛಿದ್ರಾನುಸಾರ್ಯರೇಃ ॥ ೧೦೨

ನಿತ್ಯವೂ, ಪರಾಕ್ರಮವೂ, ಸೇನಾಬಲವೂ ಸಿದ್ಧವಾಗಿರಬೇಕು. ತನ್ನ ಗುಟ್ಟನ್ನು ಎಂದೂ ರಟ್ಟಾಗಗೊಡಬಾರದು. ಶತ್ರುವಿನ ಸೋಲು ದೌರ್ಬಲ್ಯ ಕಲಹ ಅಂತ ಶತ್ರುಗಳನ್ನು ಗುರುತಿಸುತ್ತ ಇರಬೇಕು. ಇಲ್ಲವಾದರೆ ತನ್ನ ಅಪಾಯದ ನಿವಾರಣೆಯು ಕಷ್ಟವಾಗುವುದು.

ನಿತ್ಯಮುದ್ಯತದಂಡಸ್ಯ ಕೃತ್ಸ್ನಮುದ್ವಿಜತೇ ಜಗತ್ ।
ತಸ್ಮಾತ್ಸರ್ವಾಣಿ ಭೂತಾನಿ ದಂಡೇನೈವ ಪ್ರಸಾಧಯೇತ್ ॥ ೧೦೩

ತನ್ನ ದಂಡರೂಪ ಅಧಿಕಾರಕ್ಕೆ ಜನರು ಭಯಪಡದೆ ತನಗೆ ಅನುಕೂಲರಾಗುವಂತೆ ಹೊಂದಿಸಬೇಕು.

ಅಮಾಯಯೈವ ವರ್ತೇತ ನ ಕಥಂಚನ ಮಾಯಯಾ ।
ಬುಧ್ಯೇತಾರಿಪ್ರಯುಕ್ತಾಂ ಚ ಮಾಯಾಂ ನಿತ್ಯಂ ಸ್ವಸಂವೃತಃ ॥ ೧೦೪

ತಾನು ಅವಶ್ಯವಿಲ್ಲದೆ ಕಪಟ ಮಾಡಬಾರದು. ಆದರೆ ಶತ್ರುವಿನ ಎಲ್ಲ ಕಪಟವನ್ನು ತಿಳಿದು ತನ್ನ ರಕ್ಷಣೆ ಮಾಡಿಕೊಳ್ಳಲು ತಪ್ಪಬಾರದು.

ನಾಸ್ಯ ಛಿದ್ರಂ ಪರೋ ವಿದ್ಯಾದ್ವಿದ್ಯಾಚ್ಛಿದ್ರಂ ಪರಸ್ಯ ತು ।
ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ ॥ ೧೦೫

ತನ್ನ ದೌರ್ಬಲ್ಯದೋಷಗಳನ್ನು ಅಡಗಿಸಬೇಕು. ಶತ್ರುವಿನದನ್ನು ತಿಳಿಯಲೇಬೇಕು. ಆಮೆಯಂತೆ ತನ್ನ ರಕ್ಷಣೆಗೆ ಅಡಗಬೇಕು. ರಾಜ್ಯಾಂಗವಾದ ಮಂತ್ರಿ ಸೇನಾಪತಿಗಳ ವಿಶ್ವಾಸ ಕಾಪಾಡಬೇಕು.

ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತ್ ।
ವೃಕವಚ್ಚಾವಲುಂಪೇತ ಶಶವಚ್ಚ ವಿನಿಷ್ಪತೇತ್ ॥ ೧೦೬

ಮೀನು ತಿನ್ನಲು ಕೊಕ್ಕರೆ ಕಾದಿರುವಂತೆ ವಿಷಯವನ್ನು ಚಿಂತಿಸಿ ಹೊಂಚು ಹಾಕಬೇಕು. ಸಮಯ ಬಂದಾಗ ಸಿಂಹದಂತೆ ನೂರಾರು ಆನೆ

ಬಂದರೂ ಹೆದರದೆ ಹಾರುವಂತೆ ಶೌರ್ಯವಂತನಾಗಬೇಕು. ತೋಳದಂತೆ, ಕಾಯುತ್ತಿದ್ದರೂ ಶತ್ರುವಿನ ಅಜಾಗ್ರತೆ ನೋಡಿ ಕೊಳ್ಳೆ ಹೊಡೆಯಬೇಕು. ದುರ್ಬಲ ಮೊಲವು ಶತ್ರುಮಧ್ಯದಿಂದ ಡೊಂಕಾಗಿ ಹಾರಿ ಓಡಿ ತಪ್ಪಿಸಿಕೊಳ್ಳುವಂತೆ ಆಪತ್ತಿನಿಂದ ಪಾರಾಗಬೇಕು.

ಏವಂ ವಿಜಯಮಾನಸ್ಯ ಯೇಽಸ್ಯ ಸ್ಯುಃ ಪರಿಪಂಥಿನಃ ।
ತಾನಾನಯೇದ್ವಶಂ ಸರ್ವಾನ್ ಸಾಮಾದಿಭಿರುಪಕ್ರಮೈಃ ॥ ೧೦೭

ಹೀಗೆ ಸುಖಸಾಮ್ರಾಜ್ಯದಲ್ಲಿರುವಾಗ ಇದ್ದ ಶತ್ರುಗಳನ್ನು ಸಾಮದಾನಾದಿ ಉಪಾಯಗಳಿಂದ ವಶೀಕರಿಸಿ ಸ್ವಾಧೀನಪಡಿಸಬೇಕು.

ಯದಿ ತೇ ತು ನ ತಿಷ್ಠೇಯುರುಪಾಯೈಃ ಪ್ರಥಮೈಸ್ತ್ರಿಭಿಃ ।
ದಂಡೇನೈವ ಪ್ರಸಹ್ಯೈತಾನ್ ಶನಕೈರ್ವಶಮಾನಯೇತ್ ॥ ೧೦೮

ಸಾಮ, ದಾನ, ಭೇದಗಳೆಂಬ ಮೂರು ಉಪಾಯಗಳಿಗೆ ಅವರು ವಶರಾಗದಿದ್ದರೆ ಸೇನಾಬಲದಿಂದ ಮರ್ದಿಸಿ ಮೆಲ್ಲಗೆ ಹದಮಾಡಬೇಕು.

ಸಾಮಾದೀನಾಮುಪಾಯಾನಾಂ ಚತುರ್ಣಾಮಪಿ ಪಂಡಿತಾಃ ।
ಸಾಮದಂಡೌ ಪ್ರಶಂಸಂತಿ ನಿತ್ಯಂ ರಾಷ್ಟ್ರಾಭಿವೃದ್ಧಯೇ ॥ ೧೦೯

ಆ ನಾಲ್ಕು ಉಪಾಯಗಳಲ್ಲಿ ರಾಷ್ಟ್ರ ವೃದ್ಧಿಗೆ ಸಾಮ ದಂಡಗಳೇ ಉಪಕಾರಗಳೆಂದು ಬಲ್ಲವರು ಹೇಳುತ್ತಾರೆ.

ಯಥೋದ್ಧರತಿ ನಿರ್ದಾತಾ ಕಕ್ಷಂ ಧಾನ್ಯಂ ಚ ರಕ್ಷತಿ ।
ತಥಾ ರಕ್ಷೇನ್ನೃಪೋ ರಾಷ್ಟ್ರಂ ಹನ್ಯಾಚ್ಚ ಪರಿಪಂಥಿನಃ ॥ ೧೧೦

ಕೃಷಿಕನು ಕಳೆಕಿತ್ತು ಸಸಿ ಬೆಳೆಸಿ ಕಾಳು ಪಡೆಯುವಂತೆ ಶತ್ರುವನ್ನು ತುಳಿದು ಒಳ್ಳೆಯವರನ್ನು ಕಾಯಬೇಕು. ಆಗ ದೇಶ ಸುಭಿಕ್ಷ ಆಗುವುದು.

ಮೋಹಾದ್ರಾಜಾ ಸ್ವರಾಷ್ಟ್ರಂ ಯಃ ಕರ್ಷಯತ್ಯನವೇಕ್ಷಯಾ ।
ಸೋಽಚಿರಾದ್ಭ್ರಶ್ಯತೇ ರಾಜ್ಯಾಜ್ಜೀವಿತಾಚ್ಚ ಸಬಾಂಧವಃ ॥ ೧೧೧

ಸಜ್ಜನ, ದುರ್ಜನ, ಜ್ಞಾನವಿಲ್ಲದೆ ರಾಜನು ರಾಜ್ಯವನ್ನು ಪೀಡಿಸಿದರೆ ರಾಜ್ಯ, ಪ್ರಾಣ, ಜೀವ ಎರಡರಿಂದಲೂ ಭ್ರಂಶ ಹೊಂದುವನು.

ಶರೀರಕರ್ಷಣಾತ್ಪ್ರಾಣಾಃ ಕ್ಷೀಯಂತೇ ಪ್ರಾಣಿನಾಂ ಯಥಾ ।
ತಥಾ ರಾಜ್ಞಾಮಪಿ ಪ್ರಾಣಾಃ ಕ್ಷೀಯಂತೇ ರಾಷ್ಟ್ರಕರ್ಷಣಾತ್ ॥ ೧೧೨

ಶರೀರವು ಶೋಷಣೆಗೊಳಗಾದರೆ ಪ್ರಾಣ ಹಾರುವುದು. ಅಂತೆಯೆ ರಾಷ್ಟ್ರದ ಜನರ ಶೋಷಣೆಯಿಂದ ರಾಜನ ರಾಜ್ಯ ಉಳಿಯದು. ಪ್ರಾಣ ಜೀವ ಬಾಂಧವರು ಯಾರೂ ಉಳಿಯರು,

ರಾಷ್ಟ್ರಸ್ಯ ಸಂಗ್ರಹೇ ನಿತ್ಯಂ ವಿಧಾನಮಿದಮಾಚರೇತ್ ।
ಸುಸಂಗೃಹೀತರಾಷ್ಟ್ರೋ ಹಿ ಪಾರ್ಥಿವಃ ಸುಖಮೇಧತೇ ॥ ೧೧೩

ರಾಷ್ಟ್ರದ ವಿಪ್ಲವ ನಿವಾರಣೆ ಮಾಡಿ ಕ್ಷೇಮಸಾಧನೆಗೆ ಈ ಉಪಾಯವನ್ನು ಕೈಗೊಳ್ಳಬೇಕು. ಆದರಿಂದ ಸಕಲರ ಸುಖ ಸಮೃದ್ಧಿಯಾಗುವುದು. ಆಗ ರಾಜನದೂ ಆಗುವುದು.

ದ್ವಯೋಸ್ತ್ರಯಾಣಾಂ ಪಂಚಾನಾಂ ಮಧ್ಯೇ ಗುಲ್ಮಮಧಿಷ್ಠಿತಂ ।
ತಥಾ ಗ್ರಾಮಶತಾನಾಂ ಚ ಕುರ್ಯಾದ್ರಾಷ್ಟ್ರಸ್ಯ ಸಂಗ್ರಹಂ ॥ ೧೧೪

ಎರಡು, ಮೂರು, ಐದು ಗ್ರಾಮಗಳಿಗೆ ಅವಶ್ಯವಿದ್ದಂತೆ ಸತ್ಯಪ್ರಿಯತೆ ಪ್ರಾಮಾಣಿಕತೆ ಇರುವ ರಕ್ಷಕ ಸಮಿತಿಯನ್ನು ನಿಯಮಿಸಬೇಕು. ನೂರು ಗ್ರಾಮಗಳಿಗೆ ಅಂತಹ ಇನ್ನೊಂದು ರಕ್ಷಾಸಮಿತಿಯಿರಬೇಕು.

ಗ್ರಾಮಸ್ಯಾಧಿಪತಿಂ ಕುರ್ಯಾದ್ದಶಗ್ರಾಮಪತಿಂ ತಥಾ ।
ವಿಂಶತೀಶಂ ಶತೇಶಂ ಚ ಸಹಸ್ರಪತಿಮೇವ ಚ ॥ ೧೧೫

ಒಂದು, ಹತ್ತು, ಇಪ್ಪತ್ತು, ನೂರು, ಸಾವಿರ ಎಂದು ಬೇರೆ ಬೇರೆಯಾಗಿ ಗ್ರಾಮಗಳಿಗೆ ಅಧಿಪತಿಯನ್ನು ನಿಯಮಿಸಬೇಕು.

ಗ್ರಾಮದೋಷಾನ್ಸಮುತ್ಪನ್ನಾನ್ಗ್ರಾಮಿಕಃ ಶನಕೈಃ ಸ್ವಯಂ ।
ಶಂಸೇದ್ಗ್ರಾಮದಶೇಶಾಯ ದಶೇಶೋ ವಿಂಶತೀಶಿನೇ ॥ ೧೧೬

ವಿಂಶತೀಶಸ್ತು ತತ್ಸರ್ವಂ ಶತೇಶಾಯ ನಿವೇದಯೇತ್ ।
ಶಂಸೇದ್ಗ್ರಾಮಶತೇಶಸ್ತು ಸಹಸ್ರಪತಯೇ ಸ್ವಯಂ ॥ ೧೧೭

ಕ್ರಮದಂತೆ ಮೇಲಧಿಕಾರಿಗಳಿಗೆ ಆಯಾ ಅಧಿಪತಿಗಳು ತಂತಮ್ಮ

ಪ್ರದೇಶದ ಸಂಕಷ್ಟಗಳನ್ನು ನಿವೇದಿಸಬೇಕು. ಗ್ರಾಮಪಿರ್ಕ, ಹೋಬಳಿ, ರೇಂಜ್, ತಾಲೂಕು, ಜಿಲ್ಲೆ ಇತ್ಯಾದಿ ವಿಭಾಗಗಳ ಅಧಿಕಾರಿಗಳ ರಿಪೋರ್ಟು ಇರುವಂತೆ ವ್ಯವಸ್ಥೆಯನ್ನು ಅಂದು ಮಾಡುತ್ತಿದ್ದರು.

ಯಾನಿ ರಾಜಪ್ರದೇಯಾನಿ ಪ್ರತ್ಯಹಂ ಗ್ರಾಮವಾಸಿಭಿಃ ।
ಅನ್ನಪಾನೇಂಧನಾದೀನಿ ಗ್ರಾಮಿಕಸ್ತಾನ್ಯವಾಪ್ನುಯಾತ್ ॥ ೧೧೮

ಗ್ರಾಮವಾಸಿಗಳು ಪ್ರತಿದಿನ ಕೊಡಬೇಕಾದ ರಾಜಭಾಗವಾದ ಅನ್ನ, ಪಾನ, ಕಟ್ಟಿಗೆ ಇತ್ಯಾದಿಗಳನ್ನು ಗ್ರಾಮಾಧಿಪನು ಸಂಗ್ರಹಿಸಿ ತನ್ನ ಜೀವನಕ್ಕೆ ವಿನಿಯೋಗಿಸಬೇಕು.

ದಶೀ ಕುಲಂ ತು ಭುಂಜೀತ ವಿಂಶೀ ಪಂಚ ಕುಲಾನಿ ಚ ।
ಗ್ರಾಮಂ ಗ್ರಾಮ ಶತಾಧ್ಯಕ್ಷಃ ಸಹಸ್ರಾಧಿಪತಿಃ ಪುರಂ ॥ ೧೧೯

ದಶಗ್ರಾಮಪತಿಯು ಹನ್ನೆರಡು ಜೋಡೆತ್ತುಗಳಿಂದ ಉತ್ತು ಸಾಗುವಳಿ ಮಾಡಬಹುದಾದ ಹೊಲವನ್ನು ತನ್ನ ಜೀವನಕ್ಕೆ ವೃತ್ತಿವೇತನವಾಗಿ ಪಡೆಯುವನು. ಅದರಿಂದ ಅವನು ಜೀವಿಸುತ್ತ ಕರ್ತವ್ಯ ನಿರ್ವಹಿಸಬೇಕು. ಇಪ್ಪತ್ತು ಗ್ರಾಮಪತಿಯು ಅದರ ಐದರಷ್ಟು ವೇತನವಾದ ಭೂಮಿಯನ್ನು ನೂರು ಗ್ರಾಮಪತಿಯು ಒಂದು ಗ್ರಾಮವನ್ನು ವೇತನವಾಗಿ, ಸಾವಿರ ಗ್ರಾಮಪತಿಯು ಒಂದು ಪುರವನ್ನು ಉಂಬಳಿಯಾಗಿ ಹೊಂದಿ, ಕಾರ್ಯವ್ಯಾಪೃತನಾಗಬೇಕು.

ತೇಷಾಂ ಗ್ರಾಮ್ಯಾಣಿ ಕಾರ್ಯಾಣಿ ಪೃಥಕ್ಕಾರ್ಯಾಣಿ ಚೈವ ಹಿ ।
ರಾಜ್ಞೋಽನ್ಯಃ ಸಚಿವಃ ಸ್ನಿಗ್ಧಸ್ತಾನಿ ಪಶ್ಯೇದತಂದ್ರಿತಃ ॥ ೧೨೦

ಆ ಸಾವಿರ ಗ್ರಾಮಗಳ ಎಲ್ಲ ವಿಚಾರವನ್ನು ರಾಜನ ಒಬ್ಬ ಆಪ್ತ ಸಚಿವನು ಜಾಗರೂಕತೆಯಿಂದ ಚಿಂತಿಸಿ ಪರಿಹರಿಸುತ್ತಿರಬೇಕು.

ನಗರೇ ನಗರೇ ಚೈಕಂ ಕುರ್ಯಾತ್ಸರ್ವಾರ್ಥಚಿಂತಕಂ ।
ಉಚ್ಚೈಃಸ್ಥಾನಂ ಘೋರರೂಪಂ ನಕ್ಷತ್ರಾಣಾಮಿವ ಗ್ರಹಂ ॥ ೧೨೧

ಪ್ರತಿನಗರದಲ್ಲಿ ನಗರಾಧಿಪತಿಯಿರಬೇಕು. ಅಂತಹ ಉಚ್ಚ ಸ್ಥಾನಕ್ಕೆ

ತಕ್ಕ ಸೇನಾಬಲವನ್ನು ಒದಗಿಸಬೇಕು. ಕೆಲವು ನಕ್ಷತ್ರಗಳಿಗೆ ಒಂದು ಪ್ರಖರ ಗ್ರಹವಿದ್ದಂತೆ.

ಸ ತಾನನುಪರಿಕ್ರಾಮೇತ್ ಸರ್ವಾನೇವ ಸದಾ ಸ್ವಯಂ ।
ತೇಷಾಂ ವೃತ್ತಂ ಪರಿಣಯೇತ್ಸಮ್ಯಗ್ರಾಷ್ಟ್ರೇಷು ತಚ್ಚರೈಃ ॥ ೧೨೨

ಅಂತಹ ನಗರಪತಿಯು ಇತರ ಎಲ್ಲ ಮಟ್ಟದ ಗ್ರಾಮಪತಿಗಳ ಕಾರ್ಯ ವನ್ನು ಪರೀಕ್ಷಿಸಲು ಗೂಢಚಾರರನ್ನು ನಿಯಮಿಸಬೇಕು. ಮತ್ತು ಅವರ ಕರ್ತವ್ಯಪಾಲನೆಯನ್ನು ಜಾಗೃತಗೊಳಿಸಬೇಕು.

ರಾಜ್ಞೋ ಹಿ ರಕ್ಷಾಧಿಕೃತಾಃ ಪರಸ್ವಾದಾಯಿನಃ ಶಠಾಃ ।
ಭೃತ್ಯಾ ಭವಂತಿ ಪ್ರಾಯೇಣ ತೇಭ್ಯೋ ರಕ್ಷೇದಿಮಾಃ ಪ್ರಜಾಃ ॥ ೧೨೩

ರಾಜನ ರಕ್ಷಣಾಧಿಕಾರಿಗಳು ಹೆಚ್ಚಾಗಿ ಪರದ್ರವ್ಯ ಲೋಭಿಗಳು ಶಠರು ಆದುದರಿಂದ ಅವರ ಹಿಂಸೆಯನ್ನು ಪ್ರಜೆಗಳಿಗೆ ತಪ್ಪಿಸಬೇಕು.

ಯೇ ಕಾರ್ಯಿಕೇಭ್ಯೋಽರ್ಥಮೇವ ಗೃಹ್ಣೀಯುಃ ಪಾಪಚೇತಸಃ ।
ತೇಷಾಂ ಸರ್ವಸ್ವಮಾದಾಯ ರಾಜಾ ಕುರ್ಯಾತ್ಪ್ರವಾಸನಂ ॥ ೧೨೪

ನೌಕರರು ಕಾರ್ಯಾರ್ಥಿಗಳಿಂದ ಹಣ ಸುಲಿಯುವರಾದರೆ ಅಂತಹ ಪಾಪಿಷ್ಠರನ್ನು ಅವರ ಸರ್ವಸ್ವವನ್ನು ಸ್ವಾಧೀನ ಪಡಿಸಿ ಆ ಊರಿನಿಂದ ಓಡಿಸಿ ಬಿಡಬೇಕು. ಪರರಾಜ್ಯಕ್ಕಲ್ಲ. ತನ್ನ ರಾಜ್ಯದೊಳಗೆ ಬೇರೆ ಊರಿಗೆ. ಪರಿಚಯ, ಅಧಿಕಾರ, ಹಣ ಇಲ್ಲದ ಒಂಟಿಯಾಗಿ ಕಷ್ಟ ಜೀವನಕ್ಕೆ ಒಳಗಾಗುವುದೇ ಅವನಿಗೆ ಯೋಗ್ಯ ದಂಡನೆಯು. ಬಂಧಿಸುವುದು ಬೇಡ. ಹೊಡೆಯುವುದು ಕೊಲ್ಲುವುದು ಬೇಡ. ಇದು ತುಂಬ ಒಳ್ಳೆಯ ಪ್ರತಿಕ್ರಿಯೆ ಉತ್ತಮನಾಗುವ ಅವಕಾಶ—ರಾಜಧನದ ವ್ಯಯವಿಲ್ಲ. ಒಂಟಿಯಾದ ಅವನು ವಿರೋಧವೇನನ್ನು ಮಾಡಲಾರನು. ದೇಹದಂಡನೆ ನಿರ್ಬಂಧ ಇಲ್ಲದಿರುವುದರಿಂದ ಶತ್ರುಪಕ್ಷವನ್ನು ಸೇರುವ ಇಚ್ಛೆ ಹುಟ್ಟುವುದಿಲ್ಲ. ಶ್ರಮಉತ್ಪಾದನೆಗೆ ಅವಕಾಶವಿದೆ. ಮಾನಸಿಕ ವಿಪರಿಣಾಮಕ್ಕೆ ಅನುಕೂಲ. ಹಲ್ಲು ತೆಗೆದ ಹಾವಿನಂತೆ ನಿರಪಾಯ. ಈ ಕಾಲದ ಭ್ರಷ್ಟಾಚಾರ ತಾಂಡವವು ಇದರಿಂದ ನಿಲ್ಲುವುದು. ಸಂಶಯಾಸ್ಪದರಿಗೆ ಅಪರಾಧ ನಿಶ್ಚಯವಿಲ್ಲದೆಯೂ ಇದನ್ನು ಪ್ರಯೋಗಿಸಬೇಕು. ಅದರ ಭಯ

ದಿಂದ ಇತರರು ದಾರಿಗೆ ಬರುತ್ತಾರೆ. ಅಪರಾಧವನ್ನು ಅಡಗಿಸುವ ಚಾತುರ್ಯಕ್ಕೆ ಬೇರೆ ಪರಿಹಾರವಿಲ್ಲ. ಎಂತಹ ರಾಜನೀತಿ! ಅತಿ ಪುರಾತನ ಅನುಭವವೂ ನಿತ್ಯನೂತನವಾಗಿದೆ. ಭಾರತೀಯ ಧರ್ಮಶಾಸ್ತ್ರವು ಗೊಡ್ಡು ಪುರಾಣವೆನ್ನುವವರು ಈ ಭಾಗವನ್ನು ಪರಾಮರ್ಶಿಸಬೇಕು. ಅಮೇರಿಕ-ಇಂಗ್ಲೆಂಡ್-ರಶ್ಯ ಅನುಕರಣೆಯ ಭಾರತದ ಈಗಿನ ಅತಿಪರಿಷ್ಕೃತ ಆಡಳಿತವು ಇದರಿಂದ ಬಹಳ ಉತ್ತಮವೂ, ಗುಣಯುತವೂ, ಆಶ್ಚರ್ಯಕರವೂ ಆಗಿಲ್ಲ. ನೋಡಬೇಕು ಧರ್ಮಜ್ಞರ ಮೇಧಾವೈಭವ! ಇದನ್ನು ನೋಡದೆ ಬ್ರಾಹ್ಮಣರಿಗೆ ತಿಳಿಯದು ಮುನಿಗಳಿಗೆ ತಿಳಿಯದು ಎಂದರೆ ಹುಟ್ಟು ಕುರುಡನಿಗೆ ಸೂರ್ಯನಿಲ್ಲದಂತೆ.

ರಾಜಾ ಕರ್ಮಸು ಯುಕ್ತಾನಾಂ ಸ್ತ್ರೀಣಾಂ ಪ್ರೇಷ್ಯಜನಸ್ಯ ಚ ।
ಪ್ರತ್ಯಹಂ ಕಲ್ಪಯೇದ್ವೃತ್ತಿಂ ಸ್ಥಾನಂ ಕರ್ಮಾನುರೂಪತಃ ॥ ೧೨೫

ಹೆಂಗಸು, ಸೇವಕರು, ಕಾರ್ಯನಿಯುಕ್ತ ಇವರಿಗೆ ಕೆಲಸದ ಯೋಗ್ಯತೆಯಂತೆ ಸ್ಥಾನಮಾನ ವೇತನಗಳನ್ನು ಕಲ್ಪಿಸಬೇಕು.

ಪಣೋ ದೇಯೋಽವಕೃಷ್ಟಸ್ಯ ಷಡುತ್ಕೃಷ್ಟಸ್ಯ ವೇತನಂ ।
ಷಾಣ್ಮಾಸಿಕಸ್ತಥಾಚ್ಛಾದೋ ಧಾನ್ಯದ್ರೋಣಸ್ತು ಮಾಸಿಕಃ ॥ ೧೨೬

ಕಡಿಮೆ ಸಂಬಳ ಒಂದು ಹಣ. ಹೆಚ್ಚು ಆರು ಹಣ. ತಿಂಗಳಿಗೊಮ್ಮೆ ಆಹಾರ ಧಾನ್ಯ, ಆರು ತಿಂಗಳಿಗೊಮ್ಮೆ ಬಟ್ಟೆ ಹೀಗೆ ವೇತನ ನಿಯಮವು.

ಕ್ರಯವಿಕ್ರಯಮಧ್ವಾನಂ ಭಕ್ತಂ ಚ ಸಪರಿವ್ಯಯಂ ।
ಯೋಗಕ್ಷೇಮಂ ಚ ಸಂಪ್ರೇಕ್ಷ್ಯ ವಣಿಜೋ ದಾಪಯೇತ್ಕರಾನ್ ॥ ೧೨೭

ಸರಕುಗಳ ಮೂಲ ಬೆಲೆ, ದೂರ ಸಾಗಾಟದ ತರುವ ಕೂಲಿ, ಖರ್ಚು ಕಳ್ಳಕಾಕರ ರಕ್ಷಣೆ ವ್ಯಯ, ವಣಿಜನ ಲಾಭದ ಮಿತಿ, ಎಲ್ಲ ನೋಡಿ ಕರನಿರ್ಣಯ ಮಾಡಬೇಕು.

ಯಥಾ ಫಲೇನ ಯುಜ್ಯೇತ ರಾಜಾ ಕರ್ತಾ ಚ ಕರ್ಮಣಾಂ ।
ತಥಾವೇಕ್ಷ್ಯ ನೃಪೋ ರಾಷ್ಟ್ರೇ ಕಲ್ಪಯೇತ್ಸತತಂ ಕರಾನ್ ॥ ೧೨೮

ಯಥಾಲ್ಪಾಲ್ಪಮದಂತ್ಯಾದ್ಯಂ ವಾರ್ಯೋಕೋವತ್ಸಷಟ್ಪದಾಃ ।
ತಥಾಲ್ಪಾಲ್ಪೋ ಗ್ರಹೀತವ್ಯೋ ರಾಷ್ಟ್ರಾದ್ರಾಜ್ಞಾಬ್ದಿಕಃ ಕರಃ ॥ ೧೨೯

ಜಿಗಳೆ ರಕ್ತವನ್ನು, ಕರು ಹಾಲನ್ನು, ತುಂಬಿ ಪರಾಗಮಕರಂದಗಳನ್ನು ಸ್ವಲ್ಪ ಸ್ವಲ್ಪವಾಗಿ ಸಂಗ್ರಹಿಸಿ ಕ್ರೋಡೀಕರಿಸುವಂತೆ ವಾರ್ಷಿಕ ಧನದಿಂದ ಚೂರುಚೂರು ಪ್ರಜೆಗಳಿಂದ ಎತ್ತಿ ಹನಿ ಕೂಡಿ ಹಳ್ಳವಾಗುವಂತೆ ರಾಜನು ತನ್ನ ಕೋಶವನ್ನು ತುಂಬಬೇಕು.

ಪಂಚಾಶದ್ಭಾಗ ಆದೇಯೋ ರಾಜ್ಞಾ ಪಶುಹಿರಣ್ಯಯೋಃ ।
ಧಾನ್ಯಾನಾಮಷ್ಟಮೋ ಭಾಗಃ ಷಷ್ಠೋ ದ್ವಾದಶ ಏವ ವಾ ॥ ೧೩೦

ಉತ್ಪಾದನಾ ಶ್ರಮತಾರತಮ್ಯದಿಂದ ಆಯಾ ಧಾನ್ಯಗಳಿಗೆ ಆರನೆ ಎಂಟನೆ ಹನ್ನೆರಡನೆ ಒಂದಂಶವನ್ನು ರಾಜಾದಾಯವೆಂದು ಪರಿಗಣಿಸಬಹುದು. ಚಿನ್ನ, ಪಶುಗಳಿಗೆ ಐವತ್ತನೆ ಒಂದಂಶವು ಕರವು.

ಆದದೀತಾಥ ಷಡ್ಭಾಗಂ ದ್ರುಮಾಂಸಮಧುಸರ್ಪಿಷಾಂ ।
ಗಂಧೌಷಧಿರಸಾನಾಂ ಚ ಪುಷ್ಪಮೂಲಫಲಸ್ಯ ಚ ॥ ೧೩೧

ಪತ್ರಶಾಕತೃಣಾನಾಂ ಚ ಚರ್ಮಣಾಂ ವೈದಲಸ್ಯ ಚ ।
ಮೃಣ್ಮಯಾನಾಂ ಚ ಭಾಂಡಾನಾಂ ಸರ್ವಸ್ಯಾಶ್ಮಮಯಸ್ಯ ಚ ೧೩೨

ಮರ, ಮಾಂಸ, ತುಪ್ಪ, ಗಂಧ, ಓಷಧಿ ರಸ, ಹೂ-ಬೇರು, ಹಣ್ಣು, ಸಪ್ಪು, ಕಾಯಿ, ಹುಲ್ಲು, ಚರ್ಮ, ಸಿಗುಳು, ಮಣ್ಣಿನ ಪಾತ್ರೆ, ಕಲ್ಲಿನಸಾಮಗ್ರಿ ಇವುಗಳಿಗೆ ಆರನೆ ಒಂದಂಶ ಕರವು.

ಮ್ರಿಯಮಾಣೋಽಪ್ಯಾದದೀತ ನ ರಾಜಾ ಶ್ರೋತ್ರಿಯಾತ್ಕರಂ ।
ನ ಚ ಕ್ಷುಧಾಸ್ಯ ಸಂಸೀದೇತ್ ಶ್ರೋತ್ರಿಯೋ ವಿಷಯೇ ವಸನ್ ॥ ೧೩೩

ಎಂತಹ ಆಪತ್ಕಾಲದಲ್ಲಿಯೂ ರಾಜನು ಶ್ರೋತ್ರಿಯನಿಂದ ಧನಕರವನ್ನು ಪಡೆಯಬಾರದು. ಪುಣ್ಯ ಭಾಗವು ತನಗೆ ಬಂದು ಸೇರಿಯೇ ತೀರುತ್ತದೆ. ಶ್ರೋತ್ರಿಯನು ಹಸಿವಿನಿಂದ ನರಳುವುದು ತನ್ನ ರಾಜ್ಯದಲ್ಲಿ ತನಗೆ ಕ್ಷೇಮಕರವಲ್ಲ.

ಯಸ್ಯ ರಾಜ್ಞಸ್ತು ವಿಷಯೇ ಶ್ರೋತ್ರಿಯಃ ಸೀದತಿ ಕ್ಷುಧಾ ।
ತಸ್ಯಾಪಿ ತತ್ಕ್ಷುಧಾ ರಾಷ್ಟ್ರಮಚಿರೇಣೈವ ಸೀದತಿ ॥ ೧೩೪

ಶ್ರೋತ್ರಿಯನ ಹಸಿವಿನಿಂದ ರಾಷ್ಟ್ರವು ಕೆಡುವುದು. ಬಾಳದು.

ಶ್ರುತವೃತ್ತೇ ವಿದಿತ್ವಾಸ್ಯ ವೃತ್ತಿಂ ಧರ್ಮ್ಯಾಂ ಪ್ರಕಲ್ಪಯೇತ್ ।
ಸಂರಕ್ಷೇತ್ಸರ್ವತಶ್ಚೈನಂ ಪಿತಾ ಪುತ್ರಮಿವೌರಸಂ ॥ ೧೩೫

ಶ್ರೋತ್ರಿಯನ ಶಾಸ್ತ್ರ, ಸದಾಚಾರಗಳನ್ನು ನೋಡಿ ತಂದೆ ಮಗನನ್ನು ಸಾಕುವಂತೆ ಸಂರಕ್ಷಿಸಬೇಕು.

ಸಂರಕ್ಷ್ಯಮಾಣೋ ರಾಜ್ಞಾ ಯಂ ಕುರುತೇ ಧರ್ಮಮನ್ವಹಂ ।
ತೇನಾಯುರ್ವರ್ಧತೇ ರಾಜ್ಞೋ ದ್ರವಿಣಂ ರಾಷ್ಟ್ರಮೇವ ಚ ॥ ೧೩೬

ರಾಜನ ಕೋಶ (ಖಜಾನೆ) ರಾಜ್ಯ, ಆಯುಸ್ಸು ಎಲ್ಲವೂ ಶ್ರೋತ್ರಿಯನ ಧರ್ಮಾಚರಣೆಯಿಂದ ಪ್ರವೃದ್ಧವಾಗುವುದು.

ಯತ್ಕಿಂಚಿದಪಿ ವರ್ಷಸ್ಯ ದಾಪಯೇತ್ಕರಸಂಜ್ಞಿತಂ ।
ವ್ಯವಹಾರೇಣ ಜೀವಂತಂ ರಾಜಾ ರಾಷ್ಟ್ರೇ ಪೃಥಗ್ಜನಂ ॥ ೧೩೭

ಶುಂಠಿ, ತರಕಾರಿ ಮಾರಿ ಬದುಕುವ ಬಡವನಿಗೆ ಅತಿ ಸ್ವಲ್ಪವನ್ನು ಕರವೆಂದು ವಿಧಿಸಬೇಕು.

ಕಾರುಕಾನ್ ಶಿಲ್ಪಿನಶ್ಚೈವ ಶೂದ್ರಾಂಶ್ಚಾತ್ಮೋಪಜೀವಿನಃ ।
ಏಕೈಕಂ ಕಾರಯೇತ್ಕರ್ಮ ಮಾಸಿ ಮಾಸಿ ಮಹೀಪತಿಃ ॥ ೧೩೮

ಶಿಲ್ಪಿ, ಬಡಗಿ, ಕಮ್ಮಾರ, ಕಸುಬು, ಕೂಲಿ ಮಾಡುವವರನ್ನು ತಿಂಗಳಿನಲ್ಲಿ ಒಂದು ದಿನ ರಾಜನು ತನ್ನ ಕೆಲಸ ಮಾಡಿಸಿ ಕರಪಡೆಯಬಹುದು.

ನೋಚ್ಛಿಂದ್ಯಾದಾತ್ಮನೋ ಮೂಲಂ ಪರೇಷಾಂ ಚಾತಿತೃಷ್ಣಯಾ ।
ಉಚ್ಛಿಂದನ್ ಹ್ಯಾತ್ಮನೋ ಮೂಲಮಾತ್ಮಾನಂ ತಾಂಶ್ಚ ಪೀಡಯೇತ್ ॥ ೧೩೯

ರಾಜದಾಯವಾದ ತನ್ನ ಮೂಲವನ್ನು ನಿರಾಕರಿಸಬಾರದು. ಅಧಿಕ

ಕರದಿಂದ ಪ್ರಜಾ ಮೂಲವನ್ನು ಕಡಿಯಬಾರದು. ತನ್ನ ಮೂಲ ನಾಶದಿಂದ ತನ್ನ ನಾಶ ಪ್ರಜಾ ಮೂಲನಾಶದಿಂದ ಪ್ರಜಾನಾಶ. ಎರಡನ್ನೂ ಸರಿ ತೂಗಿಸಿಕೊಂಡಿರಬೇಕು.

ತೀಕ್ಷ್ಣಶ್ಚೈವ ಮೃದುಶ್ಚ ಸ್ಯಾತ್ಕಾರ್ಯಂ ವೀಕ್ಷ್ಯ ಮಹೀಪತಿಃ ।
ತೀಕ್ಷ್ಣಶ್ಚೈವ ಮೃದುಶ್ಚೈವ ರಾಜಾ ಭವತಿ ಸಮ್ಮತಃ ॥ ೧೪೦

ಕಾರ್ಯಸಾಧನೆಗಾಗಿ ಮೃದುವೂ ಕ್ರೂರನೂ ಆಗಬೇಕು. ಆಗ ಸರ್ವಜನಪ್ರಿಯನಾಗುವನು.

ಅಮಾತ್ಯಮುಖ್ಯಂ ಧರ್ಮಜ್ಞಂ ಪ್ರಾಜ್ಞಂ ದಾಂತಂ ಕುಲೋದ್ಗತಂ ।
ಸ್ಥಾಪಯೇದಾಸನೇ ತಸ್ಮಿನ್ ಖಿನ್ನಃ ಕಾರ್ಯೇಕ್ಷಣೇ ನೃಣಾಂ ॥ ೧೪೧

ನ್ಯಾಯದಾನ ವಿಚಾರಗಳಿಗೆ ತಾನು ದಣಿದಾಗ ಧರ್ಮಜ್ಞನಾದ ಬಹು ವಿಷಯ ಬಲ್ಲವನಾದ ನಿರ್ಮತ್ಸರ ಕುಲೀನ ಮುಖ್ಯಾಮಾತ್ಯನನ್ನು ಅಲ್ಲಿ ಕುಳ್ಳಿರಿಸಬೇಕು.

ಏವಂ ಸರ್ವಂ ವಿಧಾಯೇದಮಿತಿಕರ್ತವ್ಯಮಾತ್ಮನಃ ।
ಯುಕ್ತಶ್ಚೈವಾಪ್ರಮತ್ತಶ್ಚ ಪರಿರಕ್ಷೇದಿಮಾಃ ಪ್ರಜಾಃ ॥ ೧೪೨

ತನ್ನ ಇತಿಕರ್ತವ್ಯವನ್ನು ಈ ರೀತಿ ಪೂರೈಸುತ್ತಾ ಅಪ್ರಮತ್ತನಾಗಿ ಉಪಾಯದಿಂದ ಪ್ರಜಾರಕ್ಷಣ ವ್ಯಾಪೃತನಾಗಬೇಕು.

ವಿಕ್ರೋಶಂತ್ಯೋ ಯಸ್ಯ ರಾಷ್ಟ್ರಾದ್ಧ್ರಿಯಂತೇ ದಸ್ಯುಭಿಃ ಪ್ರಜಾಃ ।
ಸಂಪಶ್ಯತಃ ಸಭೃತ್ಯಸ್ಯ ಮೃತಃ ಸ ನ ತು ಜೀವತಿ ॥ ೧೪೩

ಕಳ್ಳರು ಊರನ್ನು ದರೋಡೆ ಮಾಡುವ ರಾಜ್ಯದಲ್ಲಿ ರಾಜನು ಇದ್ದರೂ ಸತ್ತಂತೆ.

ಕ್ಷತ್ರಿಯಸ್ಯ ಪರೋ ಧರ್ಮಃ ಪ್ರಜಾನಾಮೇವ ಪಾಲನಂ ।
ನಿರ್ದಿಷ್ಟಫಲಭೋಕ್ತಾ ಹಿ ರಾಜಾ ಧರ್ಮೇಣ ಯುಜ್ಯತೇ ॥ ೧೪೪

ಕ್ಷತ್ರಿಯನಿಗೆ ಪ್ರಜಾಪಾಲನೆಯು ಒಂದನೆ ಧರ್ಮವು. ಕರವನ್ನು ಭುಂಜಿಸುವ ರಾಜನಿಗೊಂದು ಧರ್ಮವಿರಲೇ ಬೇಕು.

ಉತ್ಥಾಯ ಪಶ್ಚಿಮೇ ಯಾಮೇ ಕೃತಶೌಚಃ ಸಮಾಹಿತಃ ।
ಹುತಾಗ್ನಿರ್ಬ್ರಾಹ್ಮಣಾಂಶ್ಚಾರ್ಚ್ಯ ಪ್ರವಿಶೇತ್ಸ ಶುಭಾಂ ಸಭಾಂ ॥ ೧೪೫

ಮುಂಜಾನೆ ರಾಜನು ಎಚ್ಚತ್ತು ಶುದ್ಧ ಶರೀರನಾಗಿ ಅಗ್ನಿಕಾರ್ಯ ಮಾಡಿ ಬ್ರಾಹ್ಮಣಾರ್ಚನೆ ಮಾಡಿ ಸಭಾಸೀನನಾಗಬೇಕು.

ತತ್ರ ಸ್ಥಿತಃ ಪ್ರಜಾಃ ಸರ್ವಾಃ ಪ್ರತಿನಂದ್ಯ ವಿಸರ್ಜಯೇತ್ ।
ವಿಸೃಜ್ಯ ಚ ಪ್ರಜಾಃ ಸರ್ವಾ ಮಂತ್ರಯೇತ್ಸಹ ಮಂತ್ರಿಭಿಃ ॥ ೧೪೬

ಸಭೆಯಲ್ಲಿ ಸಂದರ್ಶನಕ್ಕಾಗಿ ಬಂದ ಪ್ರಜೆಗಳನ್ನು ದರ್ಶನ ಸಂಭಾಷಣ ಮಾಡಿ ಸಂತೋಷಿಸಿ ಕಳಿಸಬೇಕು. ಪ್ರಜೆಗಳು ಹೋದ ಮೇಲೆ ಮಂತ್ರಿಗಳೊಡನೆ ದೇಶಹಿತವನ್ನು ಚಿಂತಿಸಬೇಕು.

ಗಿರಿಪೃಷ್ಠಂ ಸಮಾರುಹ್ಯ ಪ್ರಾಸಾದಂ ವಾ ರಹೋಗತಃ ।
ಅರಣ್ಯೇ ನಿಃಶಲಾಕೇ ವಾ ಮಂತ್ರಯೇದವಿಭಾವಿತಃ ॥ ೧೪೭

ಬೆಟ್ಟದ ತುದಿ, ಉಪ್ಪರಿಗೆ, ದಟ್ಟಕಾಡು—ಮುಂತಾದ ಗುಟ್ಟು ಬಯಲಾಗದ ವ್ಯವಸ್ಥೆಯುಳ್ಳ ಸ್ಥಳದಲ್ಲಿ ಪಂಚಾಂಗ ವಿಚಾರ ಮಾಡಬೇಕು.

ಯಸ್ಯ ಮಂತ್ರಂ ನ ಜಾನಂತಿ ಸಮಾಗಮ್ಯ ಪೃಥಗ್ಜನಾಃ ।
ಸ ಕೃತ್ಸ್ನಾಂ ಪೃಥಿವೀಂ ಭುಂಕ್ತೇ ಕೋಶಹೀನೋಽಪಿ ಪಾರ್ಥಿವಃ ॥ ೧೪೮

ತನ್ನ ಹಿತಚಿಂತಕರಲ್ಲದವರು ತನ್ನ ಗುಟ್ಟನ್ನು ತಿಳಿಯದಂತೆ ಮಂತ್ರರಕ್ಷಣೆ ಮಾಡಿದರೆ ಕ್ಷೀಣಕೋಶನಾದ ರಾಜನೂ ರಾಜ್ಯವನ್ನು ಕಳೆದುಕೊಳ್ಳಲಾರನು.

ಜಡಮೂಕಾಂಧಬಧಿರಾನ್ ತೈರ್ಯಗ್ಯೋನಾನ್ ವಯೋತಿಗಾನ್ ।
ಸ್ತ್ರೀಮ್ಲೇಚ್ಛವ್ಯಾಧಿತವ್ಯಂಗಾನ್ ಮಂತ್ರಕಾಲೇಽಪಸಾರಯೇತ್ ॥ ೧೪೯

ಮಂತ್ರಾಲೋಚನೆಯ ಕಾಲದಲ್ಲಿ ಹೆಡ್ಡ, ಮೂಕ, ಕುರುಡ, ಕಿವುಡ,

ಗಿಳಿ, ಮುದುಕ, ಹೆಂಗಸು, ಪರಕೀಯ, ರೋಗಿ, ಅಂಗಹೀನ ಇವರನ್ನು ಹೊರ ಗಿಡಬೇಕು.

ಭಿಂದಂತ್ಯವಮತಾ ಮಂತ್ರಂ ತೈರ್ಯಗ್ಯೋನಾಸ್ತಥೈವ ಚ ।
ಸ್ತ್ರಿಯಶ್ಚೈವ ವಿಶೇಷೇಣ ತಸ್ಮಾತ್ತತ್ರಾದೃತೋ ಭವೇತ್ ॥ ೧೫೦

ಅದೃಷ್ಟವಂಚಿತರಾದ ಮೂಕಾದಿಗಳು ಮಂತ್ರರಕ್ಷಣೆ ಮಾಡಲಾರರು. ಆದುದರಿಂದ ಜಾಗ್ರತೆ ವಹಿಸಬೇಕು.

ಮಧ್ಯಂದಿನೇsರ್ಧರಾತ್ರೇ ವಾ ವಿಶ್ರಾಂತೋ ವಿಗತಕ್ಲಮಃ ।
ಚಿಂತಯೇದ್ಧರ್ಮಕಾಮಾರ್ಥಾನ್ ಸಾರ್ಧಂ ತೈರೇಕ ಏವ ವಾ ॥ ೧೫೧

ತಾನು ಸಾಧಿಸಿದ ಸಾಧಿಸಬೇಕಾದ ಧರ್ಮ, ಅರ್ಥ, ಕಾಮಗಳನ್ನು ಮಧ್ಯಾಹ್ನ ಮಧ್ಯರಾತ್ರ ವಿಶ್ರಾಂತನಾಗಿರುವಾಗ ಮಂತ್ರಿಗಳೊಡನೆ ಒಂಟಿ ಯಾಗಿ ಚಿಂತಿಸಬೇಕು.

ಪರಸ್ಪರವಿರುದ್ಧಾನಾಂ ತೇಷಾಂ ಚ ಸಮುಪಾರ್ಜನಂ ।
ಕನ್ಯಾನಾಂ ಸಂಪ್ರದಾನಂ ಚ ಕುಮಾರಾಣಾಂ ಚ ರಕ್ಷಣಂ ॥ ೧೫೨

ಧರ್ಮ, ಅರ್ಥ, ಕಾಮಗಳು ಪರಸ್ಪರ ವಿರುದ್ಧಗಳು. ಅದರ ಸಾಧನೆ ಯನ್ನು ಸೂಕ್ಷ್ಮವಾಗಿ ಆಲೋಚಿಸಬೇಕು. ತನ್ನ ಹುಡುಗಿಯರ ದಾನ, ಗಂಡುಮಕ್ಕಳ ವಿದ್ಯಾವಿನಯ ರಕ್ಷಣೆಗಳನ್ನು ಚಿಂತಿಸಬೇಕು.

ದೂತಸಂಪ್ರೇಷಣಂ ಚೈವ ಕಾರ್ಯಶೇಷಂ ತಥೈವ ಚ ।
ಅಂತಃಪುರಪ್ರಚಾರಂ ಚ ಪ್ರಣಿಧೀನಾಂ ಚ ಚೇಷ್ಟಿತಂ ॥ ೧೫೩

ಪರದೇಶಕ್ಕೆ ದೂತರನ್ನು ಕಳುಹಿಸುವುದು ಮಾಡಿ ಉಳಿದ ಕೆಲಸ, ಸ್ತ್ರೀ ಯರ (ಅಂತಃಪುರ) ವಿಚಾರ ಕಾರ್ಯಗಳು, ಗುಪ್ತಚಾರರು ತರುವ ಸಮಾ ಚಾರ ಇವುಗಳನ್ನು ಪರಿಶೀಲಿಸಬೇಕು.

ಕೃತ್ಸ್ನಂ ಚಾಷ್ಟವಿಧಂ ಕರ್ಮ ಪಂಚವರ್ಗಂ ಚ ತತ್ವತಃ ।
ಅನುರಾಗಾಪರಾಗೌ ಚ ಪ್ರಚಾರಂ ಮಂಡಲಸ್ಯ ಚ ॥ ೧೫೪

ವಸೂಲು, ಪಾವತಿ, ಆಜ್ಞೆ, ನಿಷೇಧ, ವ್ಯವಸ್ಥೆ, ಪ್ರಜಾ–ವಿವಾದ, ಸೋತವರ ಸ್ವಾಧೀನ ಮುಂತಾದ ವಿಷಯ, ಐದು ವಿಧ ಗುಪ್ತಚಾರ ದಲದ ವಿಚಾರ, ಯಾರಿಗೆ ಪ್ರೀತಿ ದೋಷಗಳು ಉಂಟಾಗಿವೆ, ಇತ್ಯಾದಿ ಚಿಂತಿಸಬೇಕು.

ಮಧ್ಯಮಸ್ಯ ಪ್ರಚಾರಂ ಚ ವಿಜಿಗೀಷೋಶ್ಚ ಚೇಷ್ಟಿತಂ |
ಉದಾಸೀನಪ್ರಚಾರಂ ಚ ಶತ್ರೋಶ್ಚೈವ ಪ್ರಯತ್ನತಃ || ೧೫೫

ಕಾಪಟಿಕ, ಉದಾಸ್ಥಿತ, ಗೃಹಪತಿ, ವೈದೇಹಿಕ, ತಾಪಸ ವ್ಯಂಜನ ಎಂದು ಐದು ವರ್ಗದ ಗೂಢಚಾರರು ಪಂಚವರ್ಗ ಎನ್ನಲ್ಪಡುತ್ತಾರೆ. ಇನ್ನೊಬ್ಬರ ಗುಟ್ಟು ತಿಳಿಯುವುದರಲ್ಲಿ ಚತುರನಾದ ಸಮರ್ಥನು ತನಗೆ ಹಿತಕರನಾದರೂ ಕಪಟವಾಗಿ ಕೆಲಸ ಮಾಡುವುದರಿಂದ ಕಾಪಟಿಕನು. ಯಾರು ಕೆಟ್ಟ ಕೆಲಸ ಮಾಡುವನೋ ಅದನ್ನು ಆ ಕೂಡಲೆ ನನಗೆ ತಿಳಿಸಬೇಕು, ಎಂದು ನೇಮಿಸಿ ಕೆಲಸದಲ್ಲಿರುವ ಚಾರವರ್ಗ ಒಂದನೆಯದು. ಇಲ್ಲದ ಅಪರಾಧವನ್ನು ಪ್ರಚಾರ ಮಾಡಿ ಒಳ್ಳೆಯ ಜನವನ್ನು ಜೀವನಕ್ಕೆ ಕೊಟ್ಟು ಗುಟ್ಟಾಗಿ ಹೇಳಬೇಕು– ಅಪರಾಧಿಗಳನ್ನು ತಿಳಿಸು ಎಂದು. ಅಂತಹವನು ಉದಾಸ್ಥಿತನು. ಒಳ್ಳೆಮನೆ ಹೊಲಗದ್ದೆ ಕಾಳುಕಡಿ ಅವನಿಗೆ ಕೊಡಬೇಕು. ತನ್ನ ಅನುಯಾಯಿಗಳನ್ನು ಸಾಕಬೇಕು. ಗೃಹಪತಿಯೆಂದರೆ ಸದ್ಗೃಹಸ್ಥ. ಅಂತಹ ಗುಣವಂತನನ್ನು ಕರೆದು ಗುಟ್ಟಾಗಿ ಮೊದಲಿನಂತೆ ಹೇಳಬೇಕು. ಅವನು ತೋರಿಕೆಗೆ ಎಲ್ಲರಂತೆ ಸ್ವಕಾರ್ಯ ನಿರತನಾಗಿದ್ದು ರಾಜನಿಗೆ ಚಾರನಾಗಿರುವನು. ವ್ಯಾಪಾರಿಯು ರಾಜಧನವನ್ನು ಹೊಂದಿ ವಾಣಿಜ್ಯ ವೃತ್ತಿಯವನಾದರೂ ಅಪರಾಧಿಗಳ ಸುದ್ದಿ ಯನ್ನು ತಿಳಿಸಬೇಕು. ಅವನು ವಾಣಿಜ್ಯಕವ್ಯಂಜನ ಚಾರನು. ಜಡೆ ಬೆಳೆಸಿ ಕೊಂಡು ಇಲ್ಲವೇ ಬೋಳಿಸಿಕೊಂಡು ಬೈರಾಗಿಯಂತೆ ಆಶ್ರಮದಲ್ಲಿದ್ದುಕೊಂಡು ಅಂತಹ ಶಿಷ್ಯಮಂಡಲವುಳ್ಳವನಾಗಿ ರಾಜಧನದಿಂದ ಬದುಕುತ್ತ ತಪಸ್ಸನ್ನು ನಟಿಸಬೇಕು. ಒಂದು ತಿಂಗಳು ಎರಡು ತಿಂಗಳಿಗೊಮ್ಮೆ ಫಲಾಹಾರ ಮಾಡ ಬೇಕು. ಶಿಷ್ಯರು ಸರ್ವಜ್ಞನೆಂದು ಪ್ರಕಟಿಸಬೇಕು. ವಿಶ್ವಾಸ್ಯರಾದುದರಿಂದ ಕುಕರ್ಮ ತಿಳಿಯಲು ಒಳ್ಳೆ ಉಪಾಯ. ನೆರೆರಾಜ್ಯದ ರಾಜನು ಒಗ್ಗಟ್ಟಿನಿಂದ ಒಳಿತು ಮಾಡುವವನೂ ತನ್ನ ಮಿತ್ರತ್ವ ಬಿಟ್ಟರೆ ತನ್ನನ್ನು ಸಂಹರಿಸಬಲ್ಲವನೂ ಆದರೆ ಅವನು ಮಧ್ಯಮ ಶತ್ರುವು. ಪ್ರಜ್ಞಾ ಉತ್ಸಾಹ ಗುಣಪ್ರಕೃತ

ಸಮರ್ಥನಾದವನು ವಿಜಿಗೀಷು ಶತ್ರುವು. ಅಂತಹವನ ವಿಚಾರವೂ ತನಗೆ ಬೇಕು. ಅಂತಹ ವಿಜಿಗೀಷು ಮಧ್ಯಮ ಎಂಬ ಇಬ್ಬರು ಒಟ್ಟಾದರೆ ಅವರನ್ನು ಮಿತ್ರರಾಗಬಯಸುವ, ಬೇರೆ ಬೇರೆಯಾದರೆ ದಮನಿಸುವ, ಸಾಮರ್ಥ್ಯವುಳ್ಳವನು ಉದಾಸೀನನು ಅಂತಹವನ ವಿಚಾರವನ್ನು ತಿಳಿಯಬೇಕು. ಇಂತಹವರು ರಾಜ್ಯದ ಒಳಗಿನವರೂ. ಹೊರಗಿನವರೂ ಆಗಿರಬಹುದು. ಇವರ ಬಲ ಸಂಚಯ ಪ್ರಯತ್ನಗಳ ಪರಿಜ್ಞಾನವು ಸದಾ ಇರಬೇಕು.

ಏತಾಃ ಪ್ರಕೃತಯೋ ಮೂಲಂ ಮಂಡಲಸ್ಯ ಸಮಾಸತಃ ।
ಅಷ್ಟೌ ಚಾನ್ಯಾಃ ಸಮಾಖ್ಯಾತಾ ದ್ವಾದಶೈವ ತು ತಾಃ ಸ್ಮೃತಾಃ ॥ ೧೫೬

ಹಿಂದೆ ಹೇಳಿದ ಮಧ್ಯಮ, ವಿಜಿಗೀಷು, ಉದಾಸೀನ, ಶತ್ರು ಎಂಬ ನಾಲ್ವರು ಮೂಲ ಪ್ರಕೃತಿ. ಇನ್ನೆಂಟು ಮುಂದೆ ಹೇಳಲಾಗುವುದು. ಒಟ್ಟು ಹನ್ನೆರಡು ಪ್ರಕೃತಿಗಳು.

ಅಮಾತ್ಯರಾಷ್ಟ್ರದುರ್ಗಾರ್ಥದಂಡಾಖ್ಯಾಃ ಪಂಚ ಚಾಪರಾಃ ।
ಪ್ರತ್ಯೇಕಂ ಕಥಿತಾ ಹ್ಯೇತಾಃ ಸಂಕ್ಷೇಪೇಣ ದ್ವಿಸಪ್ತತಿಃ ॥ ೧೫೭

ಮಂತ್ರಿ, ದೇಶ, ಕೋಟೆ, ಹಣ, ಸೇನೆ ಎಂದು ಐದು ದ್ರವ್ಯಪ್ರಕೃತಿಗಳು, ನಾಲ್ಕು ಮೂಲ ಪ್ರಕೃತಿಗಳು, ಎಂಟು ಶಾಖಾಪ್ರಕೃತಿಗಳು ಹಾಗೂ ಪ್ರತಿ ಹನ್ನೆರಡಕ್ಕೆ ಐದರಂತೆ ಅರುವತ್ತು. ಅದು ಹನ್ನೆರಡು ಕೂಡಿ ಎಪ್ಪತ್ತೆರಡು.

ಅನಂತರಮರಿಂ ವಿದ್ಯಾದರಿಸೇವಿನಮೇವ ಚ ।
ಅರೇರನಂತರಂ ಮಿತ್ರಂ ಉದಾಸೀನಂ ತಯೋಃ ಪರಂ ॥ ೧೫೮

ತನ್ನ ದೇಶದ (ಹೊರಗೆ) ·ಬಳಿಯುವನು ಶತ್ರು. ಅವನ ಮಿತ್ರನು ಶತ್ರು. ಶತ್ರುವಿನ ಬಳಿಯುವನು ತನಗೆ ಮಿತ್ರನಾಗುವನು. ಬೇರೆಯುವನು ಉದಾಸೀನನು.

ತಾನ್ಸರ್ವಾನಭಿಸಂದಧ್ಯಾತ್ಸಾಮಾದಿಭಿರುಪಕ್ರಮೈಃ ।
ವ್ಯಸ್ತೈಶ್ಚೈವ ಸಮಸ್ತೈಶ್ಚ ಪೌರುಷೇಣ ನಯೇನ ಚ ॥ ೧೫೯

ಅಂತಹ ಶತ್ರುಗಳನ್ನು ಸಾಮಾದಿ ಉಪಾಯಗಳಿಂದ ವಶೀಕರಿಸಬೇಕು. ಇಲ್ಲವಾದರೆ ದಂಡಪ್ರಯೋಗ ಮಾಡಬೇಕು.

ಸಂಧಿಂ ಚ ವಿಗ್ರಹಂ ಚೈವ ಯಾನಮಾಸನಮೇವ ಚ ।
ದ್ವೈಧೀಭಾವಂ ಸಂಶ್ರಯಂ ಚ ಷಡ್ಗುಣಾಂಶ್ಚಿಂತಯೇತ್ಸದಾ ॥ ೧೬೦

ಪರಸ್ಪರ ಸಹಾಯ ಮುಂತಾದ ಒಡಂಬಡಿಕೆ ಸಂಧಿ. ಯುದ್ಧ. ಯುದ್ಧಕ್ಕಾಗಿ ಪ್ರಯಾಣ, ತಾಟಸ್ಥ್ಯ, ಸೇನಾವಿಭಾಗ, ಪ್ರಬಲಾಶ್ರಯ ಇತ್ಯಾದಿಯಾಗಿ ತನ್ನ ಅಭಿವೃದ್ಧಿ ಶತ್ರು ಕ್ಷೀಣತೆಗಳನ್ನು ಮಾಡಿಕೊಳ್ಳಬೇಕು.

ಆಸನಂ ಚೈವ ಯಾನಂ ಚ ಸಂಧಿಂ ವಿಗ್ರಹಮೇವ ಚ ।
ಕಾರ್ಯಂ ವೀಕ್ಷ್ಯ ಪ್ರಯುಂಜೀತ ದ್ವೈಧಂ ಸಂಶ್ರಯಮೇವ ಚ ॥ ೧೬೧

ತನ್ನ ಲಾಭವನ್ನು ನೋಡಿಕೊಂಡು ಮಿತ್ರತ್ವ ಶತ್ರುಗಳನ್ನು ಆಚರಿಸಬೇಕು. ಸಮಯ ಸಂದರ್ಭಗಳ ತುಲನೆಯೇ ಮುಖ್ಯ.

ಸಂಧಿಂ ತು ದ್ವಿವಿಧಂ ವಿದ್ಯಾದ್ರಾಜಾ ವಿಗ್ರಹಮೇವ ಚ ।
ಉಭೇ ಯಾನಾಸನೇ ಚೈವ ದ್ವಿವಿಧಃ ಸಂಶ್ರಯಃ ಸ್ಮೃತಃ ॥ ೧೬೨

ಸಂಧಿ, ವಿಗ್ರಹ, ಯಾನ, ಆಸನ ತನ್ನ ಪರ ಮತ್ತು ಶತ್ರುಪರ ಎಂದು ಎರಡು ವಿಧವು.

ಸಮಾನಯಾನಕರ್ಮಾ ಚ ವಿಪರೀತಸ್ತಥೈವ ಚ ।
ತದಾತ್ವಾಯತಿಸಂಯುಕ್ತಃ ಸಂಧಿರ್ಜ್ಞೇಯೋ ದ್ವಿಲಕ್ಷಣಃ ॥ ೧೬೩

ತಾತ್ಕಾಲಿಕ ಲಾಭ ದೃಷ್ಟಿಯಿಂದ ಮಾಡುವ ಸಂಧಿ ಒಂದು, ದೀರ್ಘ ದೃಷ್ಟಿಯ ಸಂಧಿ ಇನ್ನೊಂದು, ಸಮಾನ ಯಾನ ಕರ್ಮ ಅಸಮಾನಯಾನ ಕರ್ಮ ಎಂದು ಎರಡು ಹೆಸರು.

ಸ್ವಯಂಕೃತಶ್ಚ ಕಾರ್ಯಾರ್ಥಮಕಾಲೇ ಕಾಲ ಏವ ವಾ ।
ಮಿತ್ರಸ್ಯ ಚೈವಾಪಕೃತೇ ದ್ವಿವಿಧೋ ವಿಗ್ರಹಃ ಸ್ಮೃತಃ ॥ ೧೬೪

ಏಕಾಕಿನಶ್ಚಾತ್ಯಯಿಕೇ ಕಾರ್ಯೇ ಪ್ರಾಪ್ತೇ ಯದೃಚ್ಛಯಾ ।
ಸಂಹತಸ್ಯ ಚ ಮಿತ್ರೇಣ ದ್ವಿವಿಧಂ ಯಾನಮುಚ್ಯತೇ ॥ ೧೬೫

ಯಾನವೂ ತಾನೊಬ್ಬನೇ ಮಾಡುವುದು, ಮಿತ್ರಸಹಿತವಾದುದು, ಎಂದು ಎರಡು ತೆರನಾದುದು.

ಕ್ಷೀಣಸ್ಯ ಚೈವ ಕ್ರಮಶೋ ದೈವಾತ್ಪೂರ್ವಕೃತೇನ ವಾ ।
ಮಿತ್ರಸ್ಯ ಚಾನುರೋಧೇನ ದ್ವಿವಿಧಂ ಸ್ಮೃತಮಾಸನಂ ॥ ೧೬೬

ಆಸನವು ತನಗಾಗಿ ಮಿತ್ರನಿಗಾಗಿ ಎಂದು ಎರಡು.

ಬಲಸ್ಯ ಸ್ವಾಮಿನಶ್ಚೈವ ಸ್ಥಿತಿಃ ಕಾರ್ಯಾರ್ಥಸಿದ್ಧಯೇ ।
ದ್ವಿವಿಧಂ ಕೀರ್ತ್ಯತೇ ದ್ವೈಧಂ ಷಾಡ್ಗುಣ್ಯಗುಣವೇದಿಭಿಃ ॥ ೧೬೭

ದ್ವೈಧವು ಸ್ವಕಾರ್ಯ ಪರಕಾರ್ಯಗಳಿಗೆಂದು ಎರಡು

ಅರ್ಥಸಂಪಾದನಾರ್ಥಂ ಚ ಪೀಡ್ಯಮಾನಸ್ಯ ಶತ್ರುಭಿಃ ।
ಸಾಧುಷು ವ್ಯಪದೇಶಾರ್ಥಂ ದ್ವಿವಿಧಃ ಸಂಶ್ರಯಃ ಸ್ಮೃತಃ ॥ ೧೬೮

ಶತ್ರುಪೀಡೆಯ ನಿವೃತ್ತಿಗೆ ಸಾಧುರಕ್ಷಣೆಗೆ ಎಂದು ಸಂಶ್ರಯವೂ ಎರಡು.

ಯದಾವಗಚ್ಛೇದಾಯತ್ಯಾಮಾಧಿಕ್ಯಂ ಧ್ರುವಮಾತ್ಮನಃ ।
ತದಾತ್ವೇ ಚಾಲ್ಪಿಕಾಂ ಪೀಡಾಂ ತದಾ ಸಂಧಿಂ ಸಮಾಶ್ರಯೇತ್ ॥ ೧೬೯

ಭವಿಷ್ಯತ್ತಿನಲ್ಲಿ ತನಗೆ ಅಧಿಕ ಲಾಭವೂ ಈಗ ಸ್ವಲ್ಪ ನಷ್ಟವೂ ಆಗುವುದಾದರೆ ಅದು ಸಂಧಿಕಾಲವು.

ಯದಾ ಪ್ರಕೃಷ್ಟಾ ಮನ್ಯೇತ ಸರ್ವಾಸ್ತು ಪ್ರಕೃತೀರ್ಭೃಶಂ ।
ಅತ್ಯುಚ್ಛ್ರಿತಂ ತಥಾತ್ಮಾನಂ ತದಾ ಕುರ್ವೀತ ವಿಗ್ರಹಂ ॥ ೧೭೦

ತನ್ನ ರಾಜ್ಯಾಂಗಗಳು ದೃಢವಾಗಿ ತಾನು ಬಲಿಷ್ಠನಾದರೆ ಆಗ ವಿಗ್ರಹವು ಕರ್ತವ್ಯವೆಂದು ನಿಶ್ಚಯವು.

ಯದಾ ಮನ್ಯೇತ ಭಾವೇನ ಹೃಷ್ಟಂ ಪುಷ್ಟಂ ಬಲಂ ಸ್ವಕಂ ।
ಪರಸ್ಯ ವಿಪರೀತಂ ಚ ತದಾ ಯಾಯಾದ್ರಿಪುಂ ಪ್ರತಿ ॥ ೧೭೧

ಶತ್ರು ದುರ್ಬಲನಾಗಿ ತಾನು ಬಲಿಷ್ಠನಾದರೆ ಆಗಲೇ ಯುದ್ಧಪ್ರಯಾಣವು.

ಯದಾ ತು ಸ್ಯಾತ್ಪರಿಕ್ಷೀಣೋ ವಾಹನೇನ ಬಲೇನ ಚ ।
ತದಾಸೀತ ಪ್ರಯತ್ನೇನ ಶನಕೈಃ ಸಾಂತ್ವಯನ್ನರೀನ್ ॥ ೧೭೨

ತಾನು ಕ್ಷೀಣನಾದರೆ ಶತ್ರುವನ್ನು ಸಮಾಧಾನ ಪಡಿಸುವುದು.

ಮನ್ಯೇತಾರಿಂ ಯದಾ ರಾಜಾ ಸರ್ವಥಾ ಬಲವತ್ತರಂ ।
ತದಾ ದ್ವಿಧಾ ಬಲಂ ಕೃತ್ವಾ ಸಾಧಯೇತ್ಕಾರ್ಯಮಾತ್ಮನಃ ॥ ೧೭೩

ಶತ್ರು ಬಲಿಷ್ಠನಾದರೆ ತನ್ನ ಸೇನೆಯನ್ನು ಇಬ್ಭಾಗ ಮಾಡಿ ತನ್ನ ರಕ್ಷಣೆಯನ್ನು ಶತ್ರುಕರ್ಷಣವನ್ನು ಮಾಡಿ ಕಾರ್ಯಸಾಧನೆ ಮಾಡುವುದು.

ಯದಾ ಪರಬಲಾನಾಂ ತು ಗಮನೀಯತಮೋ ಭವೇತ್ ।
ತದಾ ತು ಸಂಶ್ರಯೇತ್ಕ್ಷಿಪ್ರಂ ಧಾರ್ಮಿಕಂ ಬಲಿನಂ ನೃಪಂ ॥ ೧೭೪

ಎಷ್ಟು ಪ್ರಯತ್ನಿಸಿದರೂ ಶತ್ರು ಅಜೇಯನಾದರೆ ಧಾರ್ಮಿಕನಾದ ಇತರ ರಾಜನಿಗೆ ಶರಣಾಗಬೇಕು.

ನಿಗ್ರಹಂ ಪ್ರಕೃತೀನಾಂ ಚ ಕುರ್ಯಾದ್ಯೋಽರಿಬಲಸ್ಯ ಚ ।
ಉಪಸೇವೇತ ತಂ ನಿತ್ಯಂ ಸರ್ವಯತ್ನೈರ್ಗುರುಂ ಯಥಾ ॥ ೧೭೫

ಅವನು ಶತ್ರುದಮನಕ್ಕೆ ತಕ್ಕವನಾಗಿದ್ದರೆ ಅವನನ್ನು ಗುರುವಿನಂತೆ ಸರ್ವೋಪಾಯಗಳಿಂದ ಸೇವಿಸಬೇಕು.

ಯದಿ ತತ್ರಾಪಿ ಸಂಪಶ್ಯೇದ್ದೋಷಂ ಸಂಶ್ರಯಕಾರಿತಂ ।
ಸುಯುದ್ಧಮೇವ ತತ್ರಾಪಿ ನಿರ್ವಿಶಂಕಃ ಸಮಾಚರೇತ್ ॥ ೧೭೬

ಸಂಶಯವು ದೋಷವನ್ನು ತರುವುದಾಗಿದ್ದರೆ ಆಗ ಯುದ್ಧವೇ ಕರ್ತವ್ಯವಾಗುವುದು.

ಸರ್ವೋಪಾಯೈಸ್ತಥಾ ಕುರ್ಯಾನ್ನೀತಿಜ್ಞಃ ಪೃಥಿವೀಪತಿಃ ।
ಯಥಾಸ್ಯಾಭ್ಯಧಿಕಾ ನ ಸ್ಯುರ್ಮಿತ್ರೋದಾಸೀನಶತ್ರವಃ ॥ ೧೭೭

ಮಿತ್ರ, ಉದಾಸೀನ, ಶತ್ರುಗಳು ತನಗಿಂತ ಅಧಿಕರಾಗದಂತೆ ಸದಾ ಜಾಗೃತನಾಗಿ ನೀತಿ ಸಂಚಾರ ವ್ಯಾಪೃತನಾಗಬೇಕು.

ಆಯತಿಂ ಸರ್ವಕಾರ್ಯಾಣಾಂ ತದಾತ್ವಂ ಚ ವಿಚಾರಯೇತ್ ।
ಅತೀತಾನಾಂ ಚ ಸರ್ವೇಷಾಂ ಗುಣದೋಷೌ ಚ ತತ್ವತಃ ॥ ೧೭೮

ಎಲ್ಲ ಕಾರ್ಯಗಳ ದೀರ್ಘಕಾಲದ ಪರಿಣಾಮವನ್ನು ವಿಚಾರಿಸುತ್ತ ನೂತನ ಕಾರ್ಯಾರಂಭ ಮಾಡುವಾಗ ಪೂರ್ವಕಾರ್ಯಗಳ ಫಲಾಫಲವನ್ನು ಗಮನಿಸಿಕೊಳ್ಳಬೇಕು.

ಆಯತ್ಯಾಂ ಗುಣದೋಷಜ್ಞಸ್ತದಾತ್ವೇ ಕ್ಷಿಪ್ರನಿಶ್ಚಯಃ ।
ಅತೀತೇ ಕಾರ್ಯಶೇಷಜ್ಞಃ ಶತ್ರುಭಿರ್ನಾಭಿಭೂಯತೇ ॥ ೧೭೯

ಕಾರ್ಯಗಳ ಲಾಭನಷ್ಟಗಳನ್ನು ದೂರಕಾಲದಲ್ಲಿ ಊಹಿಸಲು ಶಕ್ತನಾದರೆ ಈಗ ಮಾಡುವ ಕಾರ್ಯವನ್ನು ಅಂತಹವನು ನಿಶ್ಚಯಿಸಬಹುದು. ಹಾಗಾದರೆ ತಾನು ಶತ್ರುಗಳ ವಶವಾಗಲಾರನು.

ಯಥೈನಂ ನಾಭಿಸಂದಧ್ಯುರ್ಮಿತ್ರೋದಾಸೀನಶತ್ರವಃ ।
ತಥಾ ಸರ್ವಂ ಸಂವಿದಧ್ಯಾದೇಷ ಸಾಮಾಸಿಕೋ ನಯಃ ॥ ೧೮೦

ತನ್ನ ಮಿತ್ರ, ಉದಾಸೀನ, ಶತ್ರುಗಳು ತನ್ನನ್ನು ಮೋಸಗೊಳಿಸದಂತೆ ತಪ್ಪಿಸಿಕೊಂಡು ತನ್ನ ಕಾರ್ಯಸಾಧಿಸಿಕೊಳ್ಳುವುದೇ ರಾಜನೀತಿಯ ಮುಖ್ಯ ಮರ್ಮವು.

ಯದಾ ತು ಯಾನಮಾತಿಷ್ಠೇದರಿರಾಷ್ಟ್ರಂ ಪ್ರತಿ ಪ್ರಭುಃ ।
ತದಾನೇನ ವಿಧಾನೇನ ಯಾಯಾದರಿಪುರಂ ಶನೈಃ ॥ ೧೮೧

ಶತ್ರುವಿನ ಮೇಲೆ ಅಭಿಯಾನವೇ ಕರ್ತವ್ಯವೆಂದು ನಿಶ್ಚಯಿಸಿದ ಮೇಲೆ ಈ ಸೂಕ್ಷ್ಮದಿಂದ ಯಾರಿಂದಲೂ ಮೋಸಹೋಗದಂತೆ ಕಾರ್ಯೋನ್ಮುಖನಾಗಬೇಕು.

ಮಾರ್ಗಶೀರ್ಷೇ ಶುಭೇ ಮಾಸಿ ಯಾಯಾದ್ಯಾತ್ರಾಂ ಮಹೀಪತಿಃ ।
ಫಾಲ್ಗುನಂ ವಾಥ ಚೈತ್ರಂ ವಾ ಮಾಸೌ ಪ್ರತಿ ಯಥಾಬಲಮ್ ॥ ೧೮೨

ಮಾರ್ಗಶಿರ, ಫಾಲ್ಗುನ, ಚೈತ್ರ ಇವು ಮೂರು ತಿಂಗಳುಗಳಲ್ಲಿ ಯುದ್ಧ ಪ್ರಯಾಣ ಕೈಗೊಳ್ಳಬಹುದು.

ಅನ್ಯೇಷ್ವಪಿ ತು ಕಾಲೇಷು ಯದಾ ಪಶ್ಯೇದ್ಧ್ರುವಂ ಜಯಂ ।
ತದಾ ಯಾಯಾದ್ವಿಗೃಹ್ಯೈವ ವ್ಯಸನೇ ಚೋತ್ಥಿತೇ ರಿಪೋಃ ॥ ೧೮೩

ಬೇರೆಯೇ ಸಮಯ ಯೋಗ್ಯವೆಂದು ಕಂಡರೆ ಆಗಲೂ ಹೋಗಬಹುದು. ಶತ್ರುವಿನ ದುಃಖವೇ ಮುಖ್ಯ ಕಾಲವು.

ಕೃತ್ವಾ ವಿಧಾನಂ ಮೂಲೇ ತು ಯಾತ್ರಿಕಂ ಚ ಯಥಾವಿಧಿ ।
ಉಪಗೃಹ್ಯಾಸ್ಪದಂ ಚೈವ ಚಾರಾನ್ ಸಮ್ಯಗ್ವಿಧಾಯ ಚ ॥ ೧೮೪
ಸಂಶೋಧ್ಯ ತ್ರಿವಿಧಂ ಮಾರ್ಗಂ ಷಡ್ವಿಧಂ ಚ ಬಲಂ ಸ್ವಕಂ ।
ಸಾಂಪರಾಯಿಕಕಲ್ಪೇನ ಯಾಯಾದರಿಪುರಂ ಶನೈಃ ॥ ೧೮೫

ತನ್ನ ಮೂಲವಾದ ಪುರ ರಕ್ಷಣೆಗೆ ಸರಿಯಾದ ಬಲವಿಟ್ಟು ಗೂಢಚಾರರಿಂದ ಶತ್ರುವಿನ ವಿದ್ಯಮಾನವನ್ನೆಲ್ಲ ತಿಳಿದುಕೊಂಡು ಪ್ರತಿಕ್ರಿಯೆ ಮಾಡುತ್ತ ಮುತ್ತಿಗೆ ಹಾಕಬೇಕು.

ಶತ್ರುಸೇವಿನಿ ಮಿತ್ರೇ ಚ ಗೂಢೇ ಯುಕ್ತತರೋ ಭವೇತ್ ।
ಗತಪ್ರತ್ಯಾಗತೇ ಚೈವ ಸ ಹಿ ಕಷ್ಟತರೋ ರಿಪುಃ ॥ ೧೮೬

ಶತ್ರುವಿನ ಸಂಬಂಧ ಮಾಡುವ ಮಿತ್ರನು, ಹೊರಗೆ ಹೋಗಿ ಪುನಃ ಬಂದು ಸೇರುವ ಸೇವಕ ಇವರಲ್ಲಿ ಎಚ್ಚರಿಕೆ ಇರಬೇಕು.

ದಂಡವ್ಯೂಹೇನ ತನ್ಮಾರ್ಗಂ ಯಾಯಾತ್ತು ಶಕಟೇನ ವಾ ।
ವರಾಹಮಕರಾಭ್ಯಾಂ ವಾ ಸೂಚ್ಯಾ ವಾ ಗರುಡೇನ ವಾ ॥ ೧೮೭

ದಂಡ, ಶಕಟ, ವರಾಹ, ಮಕರ, ಸೂಚಿ, ಗರುಡ ಎಂಬ ಆಕೃತಿಯಲ್ಲಿ ಸೇನಾರಚನೆಯನ್ನು ಮಾಡಬಹುದು. ಎದುರು ಸೇನಾಧ್ಯಕ್ಷನು. ಮಧ್ಯದಲ್ಲಿ ರಾಜನು, ಹಿಂದೆ ಸೇನಾಪತಿ, ಪಕ್ಕಗಳಲ್ಲಿ ಆನೆ, ಕುದುರೆಗಳು, ಕಾಲಾಳುಗಳು,

ಹೀಗೆ ದೊಣ್ಣೆಯಂತೆ ನಿಲ್ಲಿಸಿ ಮಾಡುವ ವ್ಯೂಹವು ದಂಡವ್ಯೂಹ. ಶತ್ರು ಭಯವು ಸುತ್ತಲಿನಿಂದ ಇದ್ದರೂ ಅದರ ರಕ್ಷಣೆಗೆ ಈ ವ್ಯೂಹವು ಉಪಯೋಗಿಯು. ಸೂಚೀವ್ಯೂಹವು ಹಿಂದೆ ದೊಡ್ಡದಾದರೆ ಅದು ಶಕಟವ್ಯೂಹ. ಅದು ಹಿಂದಿನಿಂದ ಭಯವಿದ್ದರೆ, ಎರಡು ತುದಿ ಕೃಶವಾಗಿ ನಡು ಅಗಲವಾದರೆ ವರಾಹವ್ಯೂಹ. ನಡು ಇನ್ನೂ ದೊಡ್ಡದಾದರೆ ಗರುಡವ್ಯೂಹ. ಪಾರ್ಶ್ವಭಯ ನಿವಾರಕವು. ನಡು ಸಪುರ ತುದಿ ದೊಡ್ಡ ಇದ್ದರೆ ಮಕರ ವ್ಯೂಹ. ಇದು ಹಿಂದೆ ಮುಂದೆ ಭಯವಿದ್ದರೆ ಇರುವೆ ಸಾಲಿನಂತೆ ಪಿಪೀಲಿಕಾ ವ್ಯೂಹ. ಇದು ಎದುರಿನ ಭಯ ಶತ್ರುಸೇನಾಭೇದಗಳಿಗೆ ನಿವಾರಕವು.

ಯತಶ್ಚ ಭಯಮಾಶಂಕೇತ್ತತೋ ವಿಸ್ತಾರಯೇದ್ಬಲಂ |
ಪದ್ಮೇನ ಚೈವ ವ್ಯೂಹೇನ ನಿವಿಶೇತ ಸದಾ ಸ್ವಯಂ || ೧೮೮

ಎಲ್ಲಿ ಭಯವಿದೆಯೋ ಅಲ್ಲಿ ಸೇನೆಯನ್ನು ಹೆಚ್ಚಿಸಬೇಕು. ಪದ್ಮವ್ಯೂಹದಿಂದ ರಕ್ಷಣೆ ಹೊಂದಬೇಕು.

ಸೇನಾಪತಿಬಲಾಧ್ಯಕ್ಷೌ ಸರ್ವದಿಕ್ಷು ನಿವೇಶಯೇತ್ |
ಯತಶ್ಚ ಭಯಮಾಶಂಕೇತ್ಪ್ರಾಚೀಂ ತಾಂ ಕಲ್ಪಯೇದ್ದಿಶಂ || ೧೮೯

ಆನೆ, ಕುದುರೆ, ರಥ, ಪದಾತಿಗಳ ಪತಿಯು ಪತ್ತಿಕನು. ಹತ್ತು ಪತ್ತಿಕರಿಗೆ ಪತಿ ಸೇನಾಪತಿ. ಹತ್ತು ಸೇನಾಪತಿಗಳಿಗೆ ಒಬ್ಬ ಸೇನಾನಾಯಕ. ಅವನೇ ಬಲಾಧ್ಯಕ್ಷ. ಭಯವಿರುವಲ್ಲಿಗೆ ಸೇನಾಪತಿ ಸೇನಾನಾಯಕರನ್ನು ನಿಲ್ಲಿಸಬೇಕು.

ಗುಲ್ಮಾಂಶ್ಚ ಸ್ಥಾಪಯೇದಾಪ್ತಾನ್ ಕೃತಸಂಜ್ಞಾನ್ ಸಮಂತತಃ |
ಸ್ಥಾನೇ ಯುದ್ಧೇ ಚ ಕುಶಲಾನ್ ಅಭೀರೂನವಿಕಾರಿಣಃ || ೧೯೦

ಸೇನೆಯ ಒಂದು ತುಕುಡಿಯನ್ನು ವಿಭಜಿಸಿ ಅದಕ್ಕೆ ವಾದ್ಯಗಳನ್ನು ಕೊಟ್ಟು ಯುದ್ಧಾರಂಭವನ್ನು ಸಾರುವಂತೆ ಸಂಜ್ಞೆ ಕೊಟ್ಟು ಇತರ ಸಂಪೂರ್ಣ ಬಲವನ್ನು ದೂರದಲ್ಲಿ ನಿಲ್ಲಿಸಿ ಶತ್ರು ಮುತ್ತುವುದನ್ನು ಕಾಯುತ್ತಿರಬೇಕು.

ಸಂಹತಾನ್ ಯೋಧಯೇದಲ್ಪಾನ್ ಕಾಮಂ ವಿಸ್ತಾರಯೇದ್ಬಹೂನ್ |
ಸೂಚ್ಯಾ ವಜ್ರೇಣ ಚೈವೈತಾನ್ ವ್ಯೂಹೇನ ವ್ಯೂಹ್ಯ ಯೋಧಯೇತ್ || ೧೯೧

ತನ್ನ ಸೇನೆಯು ಕಡಿಮೆಯಾದರೆ ಹತ್ತಿರ ಹತ್ತಿರ ನಿಲ್ಲಿಸಿ ಕಾದುವುದು. ಸೇನೆ ದೊಡ್ಡದಿದ್ದರೆ ದೂರ ದೂರ ನಿಲ್ಲಿಸಿ ಇನ್ನೂ ದೊಡ್ಡದು ಮಾಡುವುದು. ಸೂಚಿವ್ಯೂಹದಿಂದ ಶತ್ರುಸೇನೆಯನ್ನು ಭೇದಿಸಬೇಕು. ಸಮಯಸ್ಫೂರ್ತಿಯಿಂದ ಕೆಲಸ ಮಾಡಬೇಕು.

ಸ್ಯಂದನಾಶ್ವೈಃ ಸಮೇ ಯುಧ್ಯೇದನೂಪೇ ನೌದ್ವಿಪೈಸ್ತಥಾ ।
ವೃಕ್ಷಗುಲ್ಮಾವೃತೇ ಚಾಪೈರಸಿಚರ್ಮಾಯುಧೈಃ ಸ್ಥಲೇ ॥ ೧೯೨

ಸಮಭೂಭಾಗದಲ್ಲಿ ರಥ, ಕುದುರೆಗಳಿಂದ, ಕೆಸರಿನಲ್ಲಿ ದೋಣಿ, ಆನೆಗಳಿಂದ ಕಾಡಿನಲ್ಲಿ ದನುರ್ಭಾಣಗಳಿಂದ, ಸಮಜಾಗದಲ್ಲಿ ಕತ್ತಿ ಕುಂತಗಳಿಂದ, ಯುದ್ಧಮಾಡಬೇಕು.

ಕುರುಕ್ಷೇತ್ರಾಂಶ್ಚ ಮತ್ಸ್ಯಾಂಶ್ಚ ಪಂಚಾಲಾನ್ ಶೂರಸೇನಜಾನ್ ।
ದೀರ್ಘಾಂಲ್ಲಘೂಂಶ್ಚೈವ ನರಾನಗ್ರಾನೀಕೇಷು ಯೋಜಯೇತ್ ॥ ೧೯೩

ಕುರುಕ್ಷೇತ್ರ, ಮತ್ಸ್ಯ, ಪಂಚಾಲ ಶೂರಸೇನ ದೇಶಗಳ ಎತ್ತರ ತಗ್ಗು ಜನರನ್ನು ಎದುರಿನ ಸೈನ್ಯದಲ್ಲಿ ನಿಲ್ಲಿಸಬೇಕು.

ಪ್ರಹರ್ಷಯೇದ್ಬಲಂ ವ್ಯೂಹ್ಯ ತಾಂಶ್ಚ ಸಮ್ಯಕ್ಪರೀಕ್ಷಯೇತ್ ।
ಚೇಷ್ಟಾಶ್ಚೈವ ವಿಜಾನೀಯಾದರೀನ್ಯೋಧಯತಾಮಪಿ ॥ ೧೯೪

ಸೇನಾರಚನೆ ಮಾಡಿದ ಮೇಲೆ ಪರೀಕ್ಷಿಸಬೇಕು. ಹೊಗಳಿ ಹುರಿದುಂಬಿಸಬೇಕು.

ಉಪರುಧ್ಯಾರಿಮಾಸೀತ ರಾಷ್ಟ್ರಂ ಚಾಸ್ಯೋಪಪೀಡಯೇತ್ ।
ದೂಷಯೇಚ್ಚಾಸ್ಯ ಸತತಂ ಯವಸಾನ್ನೋದಕೇಂಧನಂ ॥ ೧೯೫

ಶತ್ರುವನ್ನು ಸುತ್ತುವರಿಯಬೇಕು, ಪೀಡಿಸಬೇಕು. ನೀರು, ಹುಲ್ಲು, ಆಹಾರ, ಕಟ್ಟಿಗೆಗಳನ್ನು ಶತ್ರುಪಕ್ಷದಲ್ಲಿ ಅಪಹರಿಸಿ ಸುಟ್ಟು ವಿಷಹಾಕಿ ನಾಶಪಡಿಸಬೇಕು.

ಭಿಂದ್ಯಾಚ್ಚೈವ ತಡಾಗಾನಿ ಪ್ರಾಕಾರಪರಿಖಾಸ್ತಥಾ ।
ಸಮವಸ್ಕಂದಯೇಚ್ಚೈನಂ ರಾತ್ರೌ ವಿತ್ರಾಸಯೇತ್ತಥಾ ॥ ೧೯೬

ಕೆರೆ, ಕೋಟೆ, ಕೊತ್ತಲ, ಕಾಲುವೆಗಳನ್ನು ಕಡಿದು ನಿರುಪಯೋಗಿಯಾಗುವಂತೆ ಮಾಡಬೇಕು. ರಾತ್ರಿಯಲ್ಲಿ ಭಯಪಡಿಸಬೇಕು.

ಉಪಜಪ್ಯಾನುಪಜಪೇದ್ಬುಧ್ಯೇತೈವ ಚ ತತ್ಕೃತಂ ।
ಯುಕ್ತೇ ಚ ದೈವೇ ಯುಧ್ಯೇತ ಜಯಪ್ರೇಪ್ಸುರಪೇತಭೀಃ ॥ ೧೯೭

ಲಾಭದ ಆಸೆ ತೋರಿಸಿ ಕೆಲವರನ್ನು ವಶಪಡಿಸಬೇಕು. ಶುಭಯೋಗ ತಾರಾಬಲ ಇರುವಾಗ ನಿಃಶಂಕೆಯಿಂದ ಯುದ್ಧಸಾರಬೇಕು.

ಸಾಮ್ನಾ ದಾನೇನ ಭೇದೇನ ಸಮಸ್ತೈರಥವಾ ಪೃಥಕ್ ।
ವಿಜೇತುಂ ಪ್ರಯತೇತಾರೀನ್ನ ಯುದ್ಧೇನ ಕದಾಚನ ॥ ೧೯೮

ಸಮಾಧಾನ, ದಾನ, ಅನ್ಯೋನ್ಯ ಅಂತಃಕಲಹಗಳಿಂದ ಸಾಧ್ಯವಾದಷ್ಟು ಶತ್ರುವನ್ನು ಕ್ಷೀಣಿಸಿ ಯುದ್ಧವನ್ನು ತಪ್ಪಿಸಬೇಕು.

ಅನಿತ್ಯೋ ವಿಜಯೋ ಯಸ್ಮಾದ್ದೃಶ್ಯತೇ ಯುಧ್ಯಮಾನಯೋಃ ।
ಪರಾಜಯಶ್ಚ ಸಂಗ್ರಾಮೇ ತಸ್ಮಾದ್ಯುದ್ಧಂ ವಿವರ್ಜಯೇತ್ ॥ ೧೯೯

ಯುದ್ಧ ಮಾಡುವವರಿಗೆ ವಿಜಯವು ನಿಶ್ಚಿತವಲ್ಲ. ಆದುದರಿಂದ ಯುದ್ಧವನ್ನು ಅನೇಕ ಸಂದರ್ಭಗಳಲ್ಲಿ ಆಗಗೊಡಬಾರದು. ಸೋಲನ್ನು ನಿಶ್ಚಯಿಸಲಾಗುವುದಿಲ್ಲ.

ತ್ರಯಾಣಾಮಪ್ಯುಪಾಯಾನಾಂ ಪೂರ್ವೋಕ್ತಾನಾಮಸಂಭವೇ ।
ತಥಾ ಯುಧ್ಯೇತ ಸಂಪನ್ನೋ ವಿಜಯೇತ ರಿಪೂನ್ಯಥಾ ॥ ೨೦೦

ಸಾಮ, ದಾನ, ಭೇದ ಎಂಬ ಮೂರು ಉಪಾಯಗಳನ್ನು ಗೂಢಾಲೋಚನೆಯಿಂದ ಪ್ರಯೋಗಿಸಿ ವಿಫಲನಾದಾಗ ಜಯಿಸುವಷ್ಟು ಸಮೃದ್ಧನಾಗಿ ಯುದ್ಧವನ್ನು ಆರಂಭಿಸಬೇಕು,

ಜಿತ್ವಾ ಸಂಪೂಜಯೇದ್ದೇವಾನ್ ಬ್ರಾಹ್ಮಣಾಂಶ್ಚೈವ ಧಾರ್ಮಿಕಾನ್ ।
ಪ್ರದದ್ಯಾತ್ಪರಿಹಾರಾಂಶ್ಚ ಖ್ಯಾಪಯೇದಭಯಾನಿ ಚ ॥ ೨೦೧

ಯುದ್ಧದಲ್ಲಿ ಜಯಿಸಿದ ಮೇಲೆ ದೇವರನ್ನು, ಧಾರ್ಮಿಕರನ್ನು ಪೂಜಿಸಬೇಕು. ಪರಿಹಾರ ಕೊಡಬೇಕು. ಉಪಕಾರ ಮಾಡಿದವರಿಗೆ ಸ್ವಾಮಿಭಕ್ತಿಯ

ಋಣವಾಗಿ ಅಭಯುವನ್ನು ದಾನ ಮಾಡಿ ಇನ್ನು ನೀವು ಶಾಂತರಾಗಿ ಎಂದಿನಂತೆ ಇರಿ ಎಂದು ಸನ್ಮಾನಿಸಬೇಕು.

ಸರ್ವೇಷಾಂ ತು ವಿದಿತ್ವೈಷಾಂ ಸಮಾಸೇನ ಚಿಕೀರ್ಷಿತಂ ।
ಸ್ಥಾಪಯೇತ್ತತ್ರ ತದ್ವಂಶ್ಯಂ ಕುರ್ಯಾಚ್ಚ ಸಮಯಕ್ರಿಯಾಂ ॥ ೨೦೨

ಜಯಿಸಿದ ದೇಶದ ಜನರ ಮನೋವೃತ್ತಿ ಚಟುವಟಿಕೆಗಳನ್ನು ಪರೀಕ್ಷಿಸಿ ಆ ಸೋತ ರಾಜವಂಶದವನೊಬ್ಬನನ್ನು ಕೆಲವು ಶರತದಂತೆ ಆಶ್ರಿತರಾಜನನ್ನಾಗಿ ಅಭಿಷೇಕ ಮಾಡಬೇಕು. ರಾಮನು ವಿಭೀಷಣನಿಗೆ ಲಂಕೆಯಲ್ಲಿ ಪಟ್ಟಕಟ್ಟಿದನು.

ಪ್ರಮಾಣಾನಿ ಚ ಕುರ್ವೀತ ತೇಷಾಂ ಧರ್ಮ್ಯಾನ್ಯಥೋದಿತಾನ್ ।
ರತ್ನೈಶ್ಚ ಪೂಜಯೇದೇನಂ ಪ್ರಧಾನಪುರುಷೈಃ ॥ ೨೦೩

ಧರ್ಮ ಸಮ್ಮತಗಳಾದ ಅವರ ಆಚಾರಗಳನ್ನು ತನಗೆ ಸಮ್ಮತಗಳೆಂದೂ ಸಾರಿ ರತ್ನಾಭರಣಾದಿಗಳಿಂದ ಯಥೋಚಿತವಾಗಿ ಗೌರವಿಸಬೇಕು.

ಆದಾನಮಪ್ರಿಯಕರಂ ದಾನಂ ಚ ಪ್ರಿಯಕಾರಕಂ ।
ಅಭೀಪ್ಸಿತಾನಾಮರ್ಥಾನಾಂ ಕಾಲೇ ಯುಕ್ತಂ ಪ್ರಶಸ್ಯತೇ ॥ ೨೦೪

ಎಲ್ಲರಿಗೂ ಕೊಡುವುದು ಸಂತೋಷ, ತಕ್ಕೊಳ್ಳುವುದು ದುಃಖ ಹಾಗಿದ್ದರೂ ಆದಾನದಾನಗಳು ಒಮ್ಮೊಮ್ಮೆ ಶೋಭಿಸುವುವು. ಅಂತು ಜಯ ಕಾಲದಲ್ಲಿ ಕೊಡಬೇಕು.

ಸರ್ವಂ ಕರ್ಮೇದಮಾಯತ್ತಂ ವಿಧಾನೇ ದೈವಮಾನುಷೇ।
ತಯೋರ್ದೈವಮಚಿಂತ್ಯಂ ತು ಮಾನುಷೇ ವಿದ್ಯತೇ ಕ್ರಿಯಾ ॥ ೨೦೫

ಮನುಷ್ಯರ ಸರ್ವವ್ಯಾಪಾರಗಳು ದೈವಯತ್ನ ಮನುಷ್ಯ, ಯತ್ನಗಳ ಅಧೀನವಾಗಿವೆ. ಅವರಲ್ಲಿ ದೈವಯತ್ನವು ನಮ್ಮ ಜ್ಞಾನಕ್ಕೆ ಸಿಗುವುದಲ್ಲ. ಮನುಷ್ಯ ಪ್ರಯತ್ನವು ಮನುಷ್ಯ ಜ್ಞಾನ ಗೋಚರವಾಗಿದೆ. ಆದುದರಿಂದ ಮನುಷ್ಯ ದೃಷ್ಟಿಯಿಂದ ಸದಾ ಉದ್ಯೋಗಿಸಬೇಕು. ದೈವಯತ್ನಕ್ಕೆ ಪುಣ್ಯ ಪಾಪ ಎಂದೂ ಸುಕೃತ ದುಷ್ಕೃತ ಎಂದೂ ಹೆಸರಿದೆ.

ಸಹ ವಾಪಿ ವ್ರಜೇದ್ಯುಕ್ತಃ ಸಂಧಿಂ ಕೃತ್ವಾ ಪ್ರಯತ್ನತಃ ।
ಮಿತ್ರಂ ಹಿರಣ್ಯಂ ಭೂಮಿಂ ವಾ ಸಂಪಶ್ಯಂಸ್ತ್ರಿವಿಧಂ ಫಲಂ ॥ ೨೦೬

ಯುದ್ಧ ಪ್ರಯಾಣ ಮಾಡಿದ ಮೇಲೆ ಅವನು ಮಿತ್ರತ್ವವನ್ನು ಸ್ವೀಕರಿಸುವವನಾದರೆ ಭೂಮಿ, ಚಿನ್ನ, ಮಿತ್ರತ್ವ ಮೂರೂ ಸಿಗುವ ಲಾಭವಿರುವುದರಿಂದ ಯುದ್ಧವನ್ನು ಬಿಟ್ಟುಬಿಡಬಹುದು.

ಪಾರ್ಷ್ಣಿಗ್ರಾಹಂ ಚ ಸಂಪ್ರೇಕ್ಷ್ಯ ತಥಾಕ್ರಂದಂ ಚ ಮಂಡಲೇ ।
ಮಿತ್ರಾದಥಾಪ್ಯಮಿತ್ರಾದ್ವಾ ಯಾತ್ರಾಫಲಮವಾಪ್ನುಯಾತ್ ॥ ೨೦೭

ಯುದ್ಧಕ್ಕೆ ಹೋಗಿರುವಾಗ ಹಿಂದಿರುವ ರಾಜನು ದೇಶಾಕ್ರಮಣ ಮಾಡಿದರೆ ಅವನು ಪಾರ್ಷ್ಣಿಗ್ರಾಹನು. ಅವನಿಗೆ ಮಾರ್ಗದರ್ಶಕನು ಆಕ್ರಂದನು. ಅಂತಹರ ಮೇಲೂ ಯುದ್ಧಸಾರಿ ಯುದ್ಧ ನಷ್ಟವನ್ನು ತುಂಬಿಕೊಳ್ಳಬೇಕು.

ಹಿರಣ್ಯಭೂಮಿಸಂಪ್ರಾಪ್ತ್ಯಾ ಪಾರ್ಥಿವೋ ನ ತಥೈಧತೇ ।
ಯಥಾ ಮಿತ್ರಂ ಧ್ರುವಂ ಲಬ್ಧ್ವಾ ಕೃಶಮಪ್ಯಾಯತಿಕ್ಷಮಂ ॥ ೨೦೮

ಮಣ್ಣು ಚಿನ್ನಗಳ ಲಾಭವು ರಾಜನಿಗೆ ದೊಡ್ಡ ಅಭಿವೃದ್ಧಿಯಲ್ಲ. ಶಾಶ್ವತ ಮಿತ್ರನು ದೊರಕಿದರೆ ಆ ಮಿತ್ರನು ಕ್ಷೀಣನಾದರೂ ಭವಿಷ್ಯತ್ತಿನಲ್ಲಿ ತುಂಬ ಬೆಲೆಯಿದೆ.

ಧರ್ಮಜ್ಞಂ ಚ ಕೃತಜ್ಞಂ ಚ ತುಷ್ಟಪ್ರಕೃತಿಮೇವ ಚ ।
ಅನುರಕ್ತಂ ಸ್ಥಿರಾರಂಭಂ ಲಘುಮಿತ್ರಂ ಪ್ರಶಸ್ಯತೇ ॥ ೨೦೯

ಧರ್ಮಿಷ್ಠ, ಕೃತಜ್ಞತೆಯುಳ್ಳವನು, ಸಂತೋಷ ಪ್ರಕೃತಿಯು, ಸ್ನೇಹ ಸ್ವಭಾವ, ಕಾರ್ಯಸ್ಥೈರ್ಯ ಉಳ್ಳವನು ದುರ್ಬಲನಾದರೂ ಉತ್ತಮ ಮಿತ್ರನು.

ಪ್ರಾಜ್ಞಂ ಕುಲೀನಂ ಶೂರಂ ಚ ದಕ್ಷಂ ದಾತಾರಮೇವ ಚ।
ಕೃತಜ್ಞಂ ಧೃತಿಮಂತಂ ಚ ಕಷ್ಟಮಾಹುರರಿಂ ಬುಧಾಃ ॥ ೨೧೦

ಅಮೂಲ್ಯ ಗುಣ ಸಂಪನ್ನನು ಶತ್ರುವಾದರೆ ಕಷ್ಟವು.

ಆರ್ಯತಾ ಪುರುಷಜ್ಞಾನಂ ಶೌರ್ಯಂ ಕರುಣವೇದಿತಾ ।
ಸ್ಥೌಲಲಕ್ಷ್ಯಂ ಚ ಸತತಮುದಾಸೀನಗುಣೋದಯಃ ॥ ೨೧೧

ಔದಾರ್ಯ, ಕಾರುಣ್ಯ, ಶೌರ್ಯ, ಪರಾಕ್ರಮ, ಸಾಧುತ್ವಗುಣಗಳುಳ್ಳ ಉದಾಸೀನನು ತನ್ನ ಪಕ್ಷದಲ್ಲಿದ್ದರೆ ಪ್ರಬಲ ವೈರಿಯೊಡನೆಯೂ ಯುದ್ಧ ಮಾಡಬಹುದು.

ಕ್ಷೇಮ್ಯಾಂ ಸಸ್ಯಪ್ರದಾಂ ನಿತ್ಯಂ ಪಶುವೃದ್ಧಿಕರೀಮಪಿ ।
ಪರಿತ್ಯಜೇನ್ನೃಪೋ ಭೂಮಿಮಾತ್ಮಾರ್ಥಮವಿಚಾರಯನ್ ॥ ೨೧೨

ಸೌಭಾಗ್ಯಲಕ್ಷಣ, ಜಲಾಶ್ರಯ, ಗೋಸಮೃದ್ಧಿ ಉಳ್ಳ ಪ್ರದೇಶವು ತನ್ನ ರಕ್ಷಣೆಗೆ ಯೋಗ್ಯವಾಗಿಲ್ಲದಿದ್ದರೆ ಪರಿಗ್ರಾಹ್ಯವಲ್ಲ.

ಆಪದರ್ಥಂ ಧನಂ ರಕ್ಷೇದ್ದಾರಾನ್ ರಕ್ಷೇದ್ಧನೈರಪಿ ।
ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ ॥ ೨೧೩

ಧನವು ಆಪತ್ತಿನ ನಿವಾರಣೆಗಾಗಿ ಬೇಕಾಗಿರುವುದು. ಹೆಂಡತಿಯನ್ನು ಧನವ್ಯಯ ಮಾಡಿಯಾದರೂ ರಕ್ಷಿಸಬೇಕು. ತನ್ನ ರಕ್ಷಣೆಗೆ ಹಣ ಹೆಂಡತಿ ಇಬ್ಬರನ್ನು ಕಳೆದುಕೊಳ್ಳಬೇಕಾಗಿ ಬಂದರೂ ಅಧರ್ಮವಲ್ಲ.

ಸಹ ಸರ್ವಾಃ ಸಮುತ್ಪನ್ನಾಃ ಪ್ರಸಮೀಕ್ಷ್ಯಾಪದೋ ಭೃಶಂ ।
ಸಂಯುಕ್ತಾಂಶ್ಚ ವಿಯುಕ್ತಾಂಶ್ಚ ಸರ್ವೋಪಾಯಾನ್ ಸೃಜೇದ್ಬುಧಃ ॥ ೨೧೪

ಕಷ್ಟಗಳು ಒಂದರ ಮೇಲೊಂದು ಬರುವುದೇ ಹೆಚ್ಚು. ರಾಜನಿಗೆ ಖಜಾನೆ ಖಾಲಿಯಾಗುವುದು, ಪ್ರಜೆಗಳ ಮತ್ತು ಅಧಿಕಾರಿಗಳ ಕೋಪ, ಅಸಂತುಷ್ಟಿ, ತನ್ನ ಮಿತ್ರನ ದುಃಖ ಮುಂತಾದವು ಸಾಲಾಗಿ ಬಂದರೂ ಉಪಾಯಗಳಿಂದ ಜಯಿಸಬೇಕು. ದಿಗ್ಭ್ರಾಂತನಾಗಬಾರದು.

ಉಪೇತಾರಮುಪೇಯಂ ಚ ಸರ್ವೋಪಾಯಾಂಶ್ಚ ಕೃತ್ಸ್ನಶಃ।
ಏತತ್ತ್ರಯಂ ಸಮಾಶ್ರಿತ್ಯ ಪ್ರಯತೇತಾರ್ಥಸಿದ್ಧಯೇ ॥ ೨೧೫

ತಾನು ತನ್ನ ಲಾಭ, ಸಾಮದಾನಾದಿಗಳು ಇವುಗಳನ್ನು ಆಧರಿಸಿ ಪ್ರಯತ್ನಿಸಬೇಕು.

ಏವಂ ಸರ್ವಮಿದಂ ರಾಜಾ ಸಹ ಸಂಮಂತ್ರ್ಯ ಮಂತ್ರಿಭಿಃ ।
ವ್ಯಾಯಮ್ಯಾಪ್ಲುತ್ಯ ಮಧ್ಯಾಹ್ನೇ ಭೋಕ್ತುಮಂತಃಪುರಂ ವಿಶೇತ್ ॥ ೨೧೬

ರಾಜನು ಹಿಂದೆ ಹೇಳಿದ ರೀತಿಯಿಂದ ಮಂತ್ರಿಗಳೊಡನೆ ಸಮಾಲೋಚನ ನಡೆಸಿದ ಮೇಲೆ ನಿಯಮದಂತೆ ವ್ಯಾಯಾಮವನ್ನು ಮಾಡಿ ಮಿಂದು ಊಟಕ್ಕೆ ಹೋಗಬೇಕು.

ತತ್ರಾತ್ಮಭೂತೈಃ ಕಾಲಜ್ಞೈರಹಾರ್ಯೈಃ ಪರಿಚಾರಕೈಃ ।
ಸುಪರೀಕ್ಷಿತಮನ್ನಾದ್ಯಮದ್ಯಾನ್ಮಂತ್ರೈರ್ವಿಷಾಪಹೈಃ ॥ ೨೧೭

ಅಂತಃಪುರದಲ್ಲಿ ಆತ್ಮೀಯರಾದವರಿಂದ ಸಿದ್ಧವಾಗಿ ಪರೀಕ್ಷಿತವಾದ ಅನ್ನವನ್ನು ಸೇವಿಸಬೇಕು. ವಿಷನಾಶಕವಾದ ಮಂತ್ರಗಳನ್ನು ಜಪಿಸಬೇಕು. ಬೆಕ್ಕು, ಚಕೋರ, ಗಿಳಿಗಳಿಂದಲೂ ಆಹಾರದ ವಿಷವನ್ನು ಗುರುತಿಸಬಹುದು.

ವಿಷಘ್ನೈರಗದೈಶ್ಚಾಸ್ಯ ಸರ್ವದ್ರವ್ಯಾಣಿ ಯೋಜಯೇತ್ ।
ವಿಷಘ್ನಾನಿ ಚ ರತ್ನಾನಿ ನಿಯತೋ ಧಾರಯೇತ್ಸದಾ ॥ ೨೧೮

ವಿಷಹರ ಔಷಧಗಳನ್ನು ಎಲ್ಲ ಆಹಾರಕ್ಕೂ ಬೆರೆಸಬೇಕು. ವಿಷಹರ ರತ್ನಗಳನ್ನು ದೇಹದಲ್ಲಿ ಧರಿಸಬೇಕು.

ಪರೀಕ್ಷಿತಾಃ ಸ್ತ್ರಿಯಶ್ಚೈನಂ ವ್ಯಜನೋದಕಧೂಪನೈಃ ।
ವೇಷಾಭರಣಸಂಶುದ್ಧಾಃ ಸ್ಪೃಶೇಯುಃ ಸುಸಮಾಹಿತಾಃ ॥ ೨೧೯

ಗೂಢಚಾರರ ಪರೀಕ್ಷೆಗೆ ಗುರಿಯಾದ ಹೆಂಗಸರು ರಾಜನಿಗೆ ಗಾಳಿ ಬೀಸಬೇಕು. ನೀರು ಕೊಡಬೇಕು. ಧೂಪಹಾಕಬೇಕು. ಸ್ತ್ರೀಯರನ್ನು ಪರೀಕ್ಷಿಸುವಾಗ ಬಟ್ಟೆಬರೆ ಅಲಂಕಾರ ಎಲ್ಲ ತೆಗೆದು ನೋಡಬೇಕು.

ಏವಂ ಪ್ರಯತ್ನಂ ಕುರ್ವೀತ ಯಾನಶಯ್ಯಾಸನಾಶನೇ ।
ಸ್ನಾನೇ ಪ್ರಸಾಧನೇ ಚೈವ ಸರ್ವಾಲಂಕಾರಕೇಷು ಚ ॥ ೨೨೦

ಹಾಸುಗೆ, ಊಟ, ಆಸನ, ಸ್ನಾನ, ಅಲಂಕಾರ ಸಾಮಗ್ರಿಗಳಲ್ಲಿ ಮೋಸ ಹೋಗಬಾರದು.

ಭುಕ್ತವಾನ್ವಿಹರೇಚ್ಚೈವ ಸ್ತ್ರೀಭಿರಂತಃಪುರೇ ಸಹ ।
ವಿಹೃತ್ಯ ತು ಯಥಾಕಾಲಂ ಪುನಃ ಕಾರ್ಯಾಣಿ ಚಿಂತಯೇತ್ ॥ ೨೨೧

ಉಂಡು, ಆಡ್ಡಾಡಿ, ಅಂತಃಪುರ ಸ್ತ್ರೀಯರೊಡನೆ ವಿನೋದಿಸಿ, ಪುನಃ ಕಾರ್ಯಮಗ್ನನಾಗಬೇಕು.

ಅಲಂಕೃತಶ್ಚ ಸಂಪಶ್ಯೇದಾಯುಧೀಯಂ ಪುನರ್ಜನಂ |
ವಾಹನಾನಿ ಚ ಸರ್ವಾಣಿ ಶಸ್ತ್ರಾಣ್ಯಾಭರಣಾನಿ ಚ || ೨೨೨

ಆಯುಧ ಜೀವಿಗಳಾದ ಸೈನಿಕರು, ವಾಹನ, ಆಯುಧಗಳು, ಆಭರಣಗಳು ಇವುಗಳ ಪರಾಮರ್ಶೆಗಳನ್ನು ತೆಗೆದುಕೊಳ್ಳಬೇಕು. ನಯನಾಜೂಕುಗಳನ್ನು ಸಾಧಿಸಬೇಕು.

ಸಂಧ್ಯಾಂ ಚೋಪಾಸ್ಯ ಶೃಣುಯಾದಂತರ್ವೇಶ್ಮನಿ ಶಸ್ತ್ರಭೃತ್ |
ರಹಸ್ಯಾಖ್ಯಾಯಿನಾಂ ಚೈವ ಪ್ರಣಿಧೀನಾಂ ಚ ಚೇಷ್ಟಿತಂ || ೨೨೩

ಗತ್ವಾ ಕಕ್ಷಾಂತರಂ ತ್ವನ್ಯತ್ ಸಮನುಜ್ಞಾಪ್ಯ ತಂ ಜನಂ |
ಪ್ರವಿಶೇದ್ಭೋಜನಾರ್ಥಂ ಚ ಸ್ತ್ರೀವೃತೋಽಂತಃಪುರಂ ಪುನಃ || ೨೨೪

ಸಂಧ್ಯಾವಂದನೆ ಮಾಡಿ ಶಸ್ತ್ರಧಾರಿಯಾಗಿ ಗರ್ಭಗೃಹದಲ್ಲಿ ಗೂಢಚಾರರನ್ನು ವಿಚಾರಿಸಬೇಕು. ಅವರಿಗೆ ಸಮಯೋಚಿತ ಅನುಜ್ಞೆಗಳನ್ನು ಮಾಡಿ ರಾತ್ರಿ ಭೋಜನಕ್ಕೆ ತೆರಳಬೇಕು. ಸ್ತ್ರೀಪರಿಚಾರಕರೇ ರಾಜನಿಗೆ ಹೆಚ್ಚು ಮಂದಿಯಿರಬೇಕು.

ತತ್ರ ಭುಕ್ತ್ವಾ ಪುನಃ ಕಿಂಚಿತ್ತೂರ್ಯಘೋಷೈಃ ಪ್ರಹರ್ಷಿತಃ |
ಸಂವಿಶೇತ್ತು ಯಥಾಕಾಲಮುತ್ತಿಷ್ಠೇಚ್ಚ ಗತಕ್ಲಮಃ || ೨೨೫

ಉಂಡು ಮಂಗಲವಾದ್ಯಗಳನ್ನು ಕೇಳಿ ನಿದ್ರಿಸಿ ಸಮಯಕ್ಕೆ ಎಚ್ಚರಗೊಳ್ಳಬೇಕು. ದಣಿವಾರಿಸಬೇಕು.

ಏತದ್ವಿಧಾನಮಾತಿಷ್ಠೇದರೋಗಃ ಪೃಥಿವೀಪತಿಃ |
ಅಸ್ವಸ್ಥಃ ಸರ್ವಮೇತತ್ತು ಭೃತ್ಯೇಷು ವಿನಿಯೋಜಯೇತ್ || ೨೨೬

ತಾನು ಆರೋಗ್ಯವಂತನಾಗಿರುವಾಗ ರಾಜನು ಎಲ್ಲವನ್ನು ನೋಡಿಕೊಂಡರೂ ಅರಸನು ಅಸ್ವಸ್ಥನಾಗಿದ್ದಾಗ ಪ್ರತಿನಿಧಿಗಳಲ್ಲಿ ಅದರ ಭಾರವನ್ನು ಇಳಿಸಬೇಕು.

# ಅಧ್ಯಾಯಂ ೮.

ವ್ಯವಹಾರಾನ್ ದಿದೃಕ್ಷುಸ್ತು ಬ್ರಾಹ್ಮಣೈಃ ಸಹ ಪಾರ್ಥಿವಃ ।
ಮಂತ್ರಜ್ಞೈರ್ಮಂತ್ರಿಭಿಶ್ಚೈವ ವಿನೀತಃ ಪ್ರವಿಶೇತ್ಸಭಾಂ ॥ ೧

ನಾನಾ ಸಂದೇಹ ನಿವಾರಣೆ, ವ್ಯಾಜ್ಯ, ವಿವಾದವು ವ್ಯವಹಾರ ಪದಾರ್ಥವು. ಪ್ರಜೆಗಳ ಸಾಲ ಮೂಲ ಹಕ್ಕು ಅಪರಾಧಗಳ ಸಂದರ್ಭದಲ್ಲಿ ವಾದಿ ಪ್ರತಿವಾದಿಗಳಿಗೆ ವಿವಾದವು ಬರುವುದು. ಅದಕ್ಕೆ ಯೋಗ್ಯ ಮಂತ್ರಿಗಳು, ಬ್ರಾಹ್ಮಣರು ಇರುವ ಸಭೆಯಲ್ಲಿ ರಾಜನು ವಿಚಾರವನ್ನು ಆರಂಭಿಸಬೇಕು. ಸಾಮಾನ್ಯವಾಗಿ ವಿವಾದವು ಹದಿನೆಂಟು ಎಂದು ಮುಂದೆ ಹೇಳಲಾಗುವುದು.

ತತ್ರಾಸೀನಃ ಸ್ಥಿತೋ ವಾಪಿ ಪಾಣಿಮುದ್ಯಮ್ಯ ದಕ್ಷಿಣಂ ।
ವಿನೀತವೇಷಾಭರಣಃ ಪಶ್ಯೇತ್ಕಾರ್ಯಾಣಿ ಕಾರ್ಯಿಣಾಂ ॥ ೨

ಅಂತಹ ಸಭೆಯಲ್ಲಿ ಕುಳಿತು ಅಥವಾ ನಿಂತುಕೊಂಡು ಬಲಗೈ ಎತ್ತಿ ಸಾಧುವೇಶವುಳ್ಳವನಾಗಿ ಕಾರ್ಯಾರ್ಥಿಗಳ ಕಾರ್ಯವನ್ನು ಕೇಳಬೇಕು.

ಪ್ರತ್ಯಹಂ ದೇಶದೃಷ್ಟೈಶ್ಚ ಶಾಸ್ತ್ರದೃಷ್ಟೈಶ್ಚ ಹೇತುಭಿಃ ।
ಅಷ್ಟಾದಶಸು ಮಾರ್ಗೇಷು ನಿಬದ್ಧಾನಿ ಪೃಥಕ್ ಪೃಥಕ್ ॥ ೩

ದೇಶಪ್ರಸಿದ್ಧ ರೀತಿಯಲ್ಲಿ ಸಾಕ್ಷಿ, ಪುರಾವೆ, ಶಾಸ್ತ್ರ, ಧರ್ಮಗಳ ಸಮನ್ವಯದಿಂದ ವ್ಯವಹಾರ ನಿರ್ಣಯವನ್ನು ಮಾಡಬೇಕು.

ತೇಷಾಮಾದ್ಯಮೃಣಾದಾನಂ ನಿಕ್ಷೇಪೋಽಸ್ವಾಮಿವಿಕ್ರಯಃ ।
ಸಂಭೂಯ ಚ ಸಮುತ್ಥಾನಂ ದತ್ಯಸ್ಯಾನಪಕರ್ಮ ಚ ॥ ೪

ವೇತನಸ್ಯೈವ ಚಾದಾನಂ ಸಂವಿದಶ್ಚ ವ್ಯತಿಕ್ರಮಃ ।
ಕ್ರಯವಿಕ್ರಯಾನುಶಯೋ ವಿವಾದಃ ಸ್ವಾಮಿಪಾಲಯೋಃ ॥ ೫

ಸೀಮಾವಿವಾದಧರ್ಮಶ್ಚ ಪಾರುಷ್ಯೇ ದಂಡವಾಚಿಕೇ ।
ಸ್ತೇಯಂ ಚ ಸಾಹಸಂ ಚೈವ ಸ್ತ್ರೀಸಂಗ್ರಹಣಮೇವ ಚ ॥ ೬

ಸ್ತ್ರೀಪುಂಧರ್ಮೋ ವಿಭಾಗಶ್ಚ ದ್ಯೂತಮಾಹ್ವಯ ಏವ ಚ ।
ಪದಾನ್ಯಷ್ಟಾದಶೈತಾನಿ ವ್ಯವಹಾರಸ್ಥಿತಾವಿಹ ॥ ೭

ಸಾಲ ಒಂದನೆಯದು. ತನ್ನ ಹಣವನ್ನು ಇಡಲು ಕೊಡುವುದು ಇಡುಗಂಟು–ನಿಕ್ಷೇಪ. ತನ್ನದಲ್ಲದ ಸೊತ್ತನ್ನು ಮಾರುವುದು, ಕೆಲವರು ಒಟ್ಟು ಸೇರಿ ಮಾಡಿದ ವಾಣಿಜ್ಯ, ಕೊಟ್ಟದ್ದನ್ನು ಸಿಟ್ಟಿನಿಂದ ಪುನಃ ತಕ್ಕೊಳ್ಳುವುದು, ಕೆಲಸದ ಸಂಬಳ ಕೊಡದಿರುವುದು, ಮಾರಾಟದ ನಂತರ ವಿವಾದ, ದನ ಕಾಯುವವನು ಸ್ವಾಮಿಯ ಒಟ್ಟಿಗೆ ಜಗಳಾಡುವುದು, ಗಡಿ ವಿವಾದವನ್ನೆಬ್ಬಿಸುವುದು, ಬೈಯುವುದು, ಹೊಡೆಯುವುದು, ಕದಿಯುವುದು, ಬಲಾತ್ಕರಿಸಿ ಎಳೆದುಕೊಳ್ಳುವುದು, ಸ್ತ್ರೀವ್ಯಭಿಚಾರ, ಸ್ತ್ರೀಪುರುಷರ ಕರ್ತವ್ಯಬಾಹಿರತೆ, ಪಿತ್ರಾರ್ಜಿತಧನ ವಿಭಾಗ, ಜೂಜು, ಪಶುಪಕ್ಷಿಗಳ ಜೂಜು ಇವು ಹದಿನೆಂಟು ವಿವಾದ ಸಂದರ್ಭಗಳು.

ಏಷು ಸ್ಥಾನೇಷು ಭೂಯಿಷ್ಠಂ ವಿವಾದಂ ಚರತಾಂ ನೃಣಾಂ ।
ಧರ್ಮಂ ಶಾಶ್ವತಮಾಶ್ರಿತ್ಯ ಕುರ್ಯಾತ್ಕಾರ್ಯವಿನಿರ್ಣಯಂ ॥ ೮

ಹೆಚ್ಚಾಗಿ ಜನರಿಗೆ ಇಂತಹಗಳ ಮೇಲೆ ವಿವಾದವುಂಟಾಗುವುದು. ಆಗ ಶಾಶ್ವತ ಧರ್ಮದಂತೆ ನಿರ್ಣಯವನ್ನು ಮಾಡಬೇಕು.

ಯದಾ ಸ್ವಯಂ ನ ಕುರ್ಯಾತ್ತು ನೃಪತಿಃ ಕಾರ್ಯದರ್ಶನಂ ।
ತದಾ ನಿಯುಂಜ್ಯಾದ್ವಿದ್ವಾಂಸಂ ಬ್ರಾಹ್ಮಣಂ ಕಾರ್ಯದರ್ಶನೇ ॥ ೯

ವ್ಯವಹಾರ ವಿಚಾರಕ್ಕೆ ತನಗೆ ಸಾಧ್ಯವಿಲ್ಲವಾದರೆ ಒಳ್ಳೆ ವಿದ್ವಾಂಸನನ್ನು ಆ ಸ್ಥಾನದಲ್ಲಿ ನಿಯಮಿಸಬೇಕು.

ಸೋಽಸ್ಯ ಕಾರ್ಯಾಣಿ ಸಂಪಶ್ಯೇತ್ಸಭ್ಯೈರೇವ ತ್ರಿಭಿರ್ವೃತಃ ।
ಸಭಾಮೇವ ಪ್ರವಿಶ್ಯಾಗ್ರ್ಯಾಮಾಸೀನಃ ಸ್ಥಿತ ಏವ ವಾ ॥ ೧೦

ರಾಜಪ್ರತಿನಿಧಿಯಾದ ಅವನು ಮೂರು ಮಂದಿ ಸಭ್ಯರೊಡನೆ ಸಭೆಯಲ್ಲಿ ರಾಜನಂತೆ ವಿಚಾರಿಸಬೇಕು.

ಯಸ್ಮಿನ್ದೇಶೇ ನಿಷೀದಂತಿ ವಿಪ್ರಾ ವೇದವಿದಃಸ್ತ್ರಯಃ ।
ರಾಜ್ಞಶ್ಚಾಧಿಕೃತೋ ವಿದ್ವಾನ್ ಬ್ರಹ್ಮಣಸ್ತಾಂ ಸಭಾಂ ವಿದುಃ ॥ ೧೧

ಮೂರು ಮಂದಿ ವೇದಶಾಸ್ತ್ರ ಬಲ್ಲವರು ರಾಜಾಧಿಕಾರಿಯೂ ಇರುವ ಸಭೆಯು ಬ್ರಹ್ಮಸಭೆಯೆನ್ನಲ್ಪಡುವುದು.

ಧರ್ಮೋ ವಿದ್ಧಸ್ತ್ವಧರ್ಮೇಣ ಸಭಾಂ ಯತ್ರೋಪತಿಷ್ಠತೇ ।
ಶಲ್ಯಂ ಚಾಸ್ಯ ನ ಕೃಂತಂತಿ ವಿದ್ಧಾಸ್ತತ್ರ ಸಭಾಸದಃ ॥ ೧೨

ವಾದಿ ಪ್ರತಿವಾದಿಗಳಲ್ಲಿ ಒಬ್ಬನ ಪಕ್ಷವು ಧರ್ಮವು, ಇನ್ನೊಬ್ಬನದು ಅಧರ್ಮವು ಆಗಿರುವುದು. ಅಲ್ಲಿ ಸಭಾಸದರು ಧರ್ಮಪೀಡಕವಾದ ಅಧರ್ಮವನ್ನು ವಿಭಾಗಿಸದೆ ಹೋದರೆ ಅಧರ್ಮಕ್ಕೆ ಸಭಾಸದರು ಗುರಿಯಾಗುವರು. ಸಂಯುಕ್ತಾಧಿಕಾರವುಳ್ಳ ವಿದ್ವದ್ಗೋಷ್ಠಿಯು ಸಭೆಯು.

ಸಭಾಂ ವಾ ನ ಪ್ರವೇಷ್ಟವ್ಯಂ ವಕ್ತವ್ಯಂ ವಾ ಸಮಂಜಸಂ ।
ಅಬ್ರುವನ್ ವಿಬ್ರುವನ್ ವಾಪಿ ನರೋ ಭವತಿ ಕಿಲ್ಬಿಷೀ ॥ ೧೩

ವ್ಯವಹಾರಕ್ಕೆ, ಸಭೆಗೆ ಹೋಗಲೇಬಾರದು. ಹೋದ ಮೇಲೆ ಪ್ರಶ್ನೆಗೆ ಉತ್ತರ ಹೇಳದಿದ್ದರೂ, ತಪ್ಪು ಹೇಳಿದರೂ ಪಾಪವು ಅಂಟಿಕೊಳ್ಳುವುದು.

ಯತ್ರ ಧರ್ಮೋ ಹ್ಯಧರ್ಮೇಣ ಸತ್ಯಂ ಯತ್ರಾನೃತೇನ ಚ ।
ಹನ್ಯತೇ ಪ್ರೇಕ್ಷಮಾಣಾನಾಂ ಹತಾಸ್ತತ್ರ ಸಭಾಸದಃ ॥ ೧೪

ಸಭೆಯಲ್ಲಿ ಸಭ್ಯರ ಸಮ್ಮುಖದಲ್ಲಿ ಧರ್ಮಕ್ಕೆ ಅಧರ್ಮದಿಂದ, ಸತ್ಯಕ್ಕೆ ಸುಳ್ಳಿನಿಂದ, ಅಪಚಾರವಾದರೆ ಆ ಪಾಪದಿಂದ ಸಭ್ಯರು ಬಾಧಿಸಲ್ಪಡುವರು.

ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ ।
ತಸ್ಮಾದ್ಧರ್ಮೋ ನ ಹಂತವ್ಯೋ ಮಾ ನೋ ಧರ್ಮೋ ಹತೋಽವಧೀತ್ ॥ ೧೫

ಧರ್ಮವನ್ನು ನಾವು ರಕ್ಷಿಸಿದರೆ, ನಾವು ಧರ್ಮವನ್ನು ಆಚರಿಸಿದರೆ ಆ

ಧರ್ಮವು ನಮ್ಮನ್ನು ರಕ್ಷಿಸುವುದು. ನಮ್ಮನ್ನು ಧರ್ಮವು ಕೆಡಿಸದಿರುವ ಬಗ್ಗೆ ನಾವು ಧರ್ಮಪರರಾಗಬೇಕು.

ವೃಷೋ ಹಿ ಭಗವಾನ್ ಧರ್ಮಸ್ತಸ್ಯ ಯಃ ಕುರುತೇ ಹ್ಯಲಂ ।
ವೃಷಲಂ ತಂ ವಿದುರ್ದೇವಾಸ್ತಸ್ಮಾದ್ಧರ್ಮಂ ನ ಲೋಪಯೇತ್ ॥ ೧೬

ಸರ್ವಕಾಮನೆಗಳನ್ನು ಕೊಡುವುದರಿಂದ ಧರ್ಮವು ವೃಷಪದವಾಚ್ಯವಾಗಿದೆ. ಅಂತಹ ಧರ್ಮವನ್ನು ನಿರಾಕರಿಸುವವನು ವೃಷಲನು. ಇದೊಂದು ವೃಷಲವದಾರ್ಥಕ್ಕೆ ಉದಾಹರಣೆಯಾಗದಂತೆ ವರ್ತಿಸಬೇಕು.

ಏಕ ಏವ ಸುಹೃದ್ಧರ್ಮೋ ನಿಧನೇಽಪ್ಯನುಯಾತಿ ಯಃ ।
ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ॥ ೧೭

ಮರಣನಂತರವೂ ಹಿಂಬಾಲಿಸುವ ಬಲವಿರುವುದರಿಂದ ಧರ್ಮವೊಂದೇ ಪ್ರಧಾನ ಮಿತ್ರನು. ಉಳಿದುವೆಲ್ಲ ಶರೀರದೊಡನೆ ತೊಲಗುತ್ತವೆ.

ಪಾದೋಽಧರ್ಮಸ್ಯ ಕರ್ತಾರಂ ಪಾದಃ ಸಾಕ್ಷಿಣಮೃಚ್ಛತಿ ।
ಪಾದಃ ಸಭಾಸದಃ ಸರ್ವಾನ್ ಪಾದೋ ರಾಜಾನಮೃಚ್ಛತಿ ॥ ೧೮

ವ್ಯವಹಾರದಲ್ಲಿ ಅಧರ್ಮವು ದಂಡದಿಂದ ಪರಿಹೃತವಾಗದೆ ಉಳಿದು ಹೋದರೆ ಆ ಅಧರ್ಮವು ಕರ್ತೃ, ಸಾಕ್ಷಿ, ನಿರ್ಣಾಯಕ, ರಾಜ ಈ ನಾಲ್ವರಲ್ಲಿ ಹಂಚಿಹೋಗುವುದು. ಅವರು ಅದರ ಫಲ ಅನುಭವಿಸುವರು.

ರಾಜಾ ಭವತ್ಯನೇನಾಸ್ತು ಮುಚ್ಯಂತೇ ಚ ಸಭಾಸದಃ ।
ಏನೋ ಗಚ್ಛತಿ ಕರ್ತಾರಂ ನಿಂದಾರ್ಹೋ ಯತ್ರ ನಿಂದ್ಯತೇ ॥ ೧೯

ಅಪರಾಧಿಯನ್ನು ಹುಡುಕಿ ದಂಡಿಸಿದರೆ ರಾಜ, ಸದಸ್ಯರು ಅಧರ್ಮದಿಂದ ಮುಕ್ತರಾಗುವರು.

ಜಾತಿಮಾತ್ರೋಪಜೀವೀ ವಾ ಕಾಮಂ ಸ್ಯಾದ್ಬ್ರಾಹ್ಮಣಬ್ರುವಃ ।
ಧರ್ಮಪ್ರವಕ್ತಾ ನೃಪತೇರ್ನ ತು ಶೂದ್ರಃ ಕಥಂಚನ ॥ ೨೦

ಮಿಶ್ರಸಂತತಿಯಲ್ಲಿ ಗುಣಸಂಕೀರ್ಣತೆಯಲ್ಲದೆ ಇತರರಲ್ಲಿ ಸಾಂಕರ್ಯವು ತೋರಲಾರದು. ಸೃಷ್ಟಿಯಿಂದ ಪ್ರಲಯದ ವರೆಗೆ ಎಳ್ಳು ಎಳ್ಳೆ ಆಗಿರುವಂತೆ ಗುಣವು ಬೀಜದಲ್ಲಿ ನಿಗೂಢವಾಗಿರುವುದು. ಆದುದರಿಂದ ಹೆಡ್ಡನು

ಎಂದೂ ಹೇಳ್ಡನೆ. ಅವನು ಬುದ್ಧಿವಂತನಾದರೂ ಆರುವ ದೀಪ ಹೊಳೆದಂತೆ ಸ್ಥಿರವಲ್ಲ. ಆದುದರಿಂದ ಶೂದ್ರನು ನ್ಯಾಯಸ್ಥಾನಕ್ಕೆ ಯೋಗ್ಯನಲ್ಲ. ವಿಕಾಸವಾದವ ಸಳ್ಳು. ಮಂಗ ಮನುಷ್ಯನಾಗಲಿಲ್ಲ. ಮನುಷ್ಯನ ವಿಕಾಸಕ್ಕೆ ಮಾನವ ಮರ್ಕಟಗಳ ಮಧ್ಯವರ್ತಿ ಪ್ರಾಣಿಗೆ ಎರಡಕ್ಕೂ ಉದಾಹರಣೆಯಿಲ್ಲ. ತಿಳಿದುದುದರಿಂದ ತಿಳಿಯದುದನ್ನು ಸಾಧಿಸಬಹುದಲ್ಲದೆ ಎಲ್ಲ ಕಲ್ಪನೆಯು ಬ್ರಹ್ಮಸೃಷ್ಟಿಯ ವಿಶ್ಲೇಷಣೆಯಲ್ಲ. ಮನುಷ್ಯರು ಸಮಾನರು, ರಸರಕ್ತಮಾಂಸ ಸಮಾನ, ಕೆಟ್ಟವರು ಗುಣಹೀನರು ಉತ್ತಮ ವರ್ಗದಲ್ಲೂ ಸಿಗುವರು ಎಂದರೆ ಅದು ದೂರಾಲೋಚನೆಯ ಮಾತಲ್ಲ. ಹಾವಿಗೆ ಹಾಲು ಕುಡಿಸಿದರೆ ವಿಷದ ಬೆಳೆಯಲ್ಲದೆ ಅಮೃತದ ಕೊಡ ತುಂಬದು. ಹಸು ಕಸತಿಂದೂ ಹಾಲು ಕೊಡ ಬಲ್ಲುದು. ಆದುದರಿಂದ ಭೇದವು ಸೃಷ್ಟಿಯಲ್ಲಿ ಅಡಗಿದೆ. ಅದು ತೋರ ದಿರುವುದು ದುರಾಗ್ರಹದಿಂದ.

ಯಸ್ಯ ಶೂದ್ರಸ್ತು ಕುರುತೇ ರಾಜ್ಞೋ ಧರ್ಮವಿವೇಚನಂ |
ತಸ್ಯ ಸೀದತಿ ತದ್ರಾಷ್ಟ್ರಂ ಪಂಕೇ ಗೌರಿವ ಪಶ್ಯತಃ || ೨೧

ಶೂದ್ರನು ಧರ್ಮಪತಿಯಾದರೆ ರಾಷ್ಟ್ರವು ಕೆಸರಿನಲ್ಲಿ ಗೋವಿನಂತೆ ಕುಂಟುತ್ತದೆ. ಈಗಿನ ಪ್ರಜಾಪ್ರಭುತ್ವದಲ್ಲಿ ಶೂದ್ರ ಚಂಡಾಲರು ಉನ್ನತ ಸ್ಥಾನಕ್ಕೇರಿದರೂ ಸುಭಿಕ್ಷವಾಗಲಿಲ್ಲ. ದುರ್ಭಿಕ್ಷವಿದೆ. ಈ ಪಂಥಾಹ್ವಾನಕ್ಕೆ ಸಾಟಿಯಾವುದು ? ಮಳೆಯಿಲ್ಲದೆ ಬರಗಾಲ ಬಂದಾಗ ಪೂಜೆ, ಜಪ, ಮಂತ್ರ ಬಹಳವಾಗುತ್ತದೆ. ಪ್ರಧಾನಿ, ಮುಖ್ಯಮಂತ್ರಿ, ಸಂಸತ್ತು, ಪುಡಾರಿಗಳು ರಾಜಕಾರಣಿಗಳು ಕೈಜೋಡಿಸಿ ಯಾಕೆ ಮೊರೆಯಿಟ್ಟರು. ಶೂದ್ರಚಂಡಾಲರು ಅಮೃತವೃಷ್ಟಿ ಮಾಡಬಹುದಾಗಿತ್ತು.

ಯದ್ರಾಷ್ಟ್ರಂ ಶೂದ್ರಭೂಯಿಷ್ಠಂ ನಾಸ್ತಿಕಾಕ್ರಾಂತಮದ್ವಿಜಂ |
ವಿನಶ್ಯತ್ಯಾಶು ತತ್ಕೃತ್ಸ್ನಂ ದುರ್ಭಿಕ್ಷವ್ಯಾಧಿಪೀಡಿತಂ || ೨೨

ದೈವಭಕ್ತಿಯಿಲ್ಲದ ಜನ ತುಂಬಿದ ಊರು ಎಲ್ಲಿಯೂ ಎಂದೂ ಸಂಪತ್ಸ ಮೃದ್ಧವಾದುದಿಲ್ಲ. ಪ್ರಕೃತಿ ಪ್ರಕೋಪವು ಯಾಕೆ ಬಾಧಿಸುತ್ತದೆ. ರೈಲು ಬೀಳುವುದು, ವಿಮಾನ ಬೀಳುವುದು, ಕಾರ್ಖಾನೆಗೆ ಬೆಂಕಿ ಬೀಳುವುದು, ಜನ ಸಾಯುವುದು, ಮಳೆಯಿಲ್ಲ, ಬೆಳೆಯಿಲ್ಲ

ಧರ್ಮಾಸನಮಧಿಷ್ಠಾಯ ಸಂವೀತಾಂಗಃ ಸಮಾಹಿತಃ ।
ಪ್ರಣಮ್ಯ ಲೋಕಪಾಲೇಭ್ಯಃ ಕಾರ್ಯದರ್ಶನಮಾರಭೇತ್ ॥ ೨೩

ನ್ಯಾಯಸ್ಥಾನದಲ್ಲಿ ಕುಳಿತು ಬಟ್ಟೆ ಹೊದೆದು ಲೋಕಪಾಲಕರಿಗೆ ವಂದಿಸಿ, ವಾದಿಪ್ರತಿವಾದಿ ವಿಚಾರವನ್ನು ಆರಂಭಿಸಬೇಕು.

ಅರ್ಥಾನರ್ಥಾಉಭೌ ಬುದ್ಧ್ವಾ ಧರ್ಮಾಧರ್ಮೌ ಚ ಕೇವಲೌ ।
ವರ್ಣಕ್ರಮೇಣ ಸರ್ವಾಣಿ ಪಶ್ಯೇತ್ಕಾರ್ಯಾಣಿ ಕಾರ್ಯಿಣಾಂ ॥ ೨೪

ಲಾಭ-ನಷ್ಟಗಳನ್ನು. ಧರ್ಮ-ಅಧರ್ಮಗಳನ್ನು ಚಿಂತಿಸಿ, ವಿವಾದವನ್ನು ಪರಿಶೀಲಿಸಬೇಕು. ಕ್ರಮದಂತೆ ಒಂದೊಂದನ್ನೆ ಎತ್ತಿಕೊಳ್ಳಬೇಕು.

ಬಾಹ್ಯೈರ್ವಿಭಾವಯೇಲ್ಲಿಂಗೈರ್ಭಾವಮಂತರ್ಗತಂ ನೃಣಾಂ ।
ಸ್ವರವರ್ಣೇಂಗಿತಾಕಾರೈಶ್ಚಕ್ಷುಷಾ ಚೇಷ್ಟಿತೇನ ಚ ॥ ೨೫

ವಾದಿ ಪ್ರತಿವಾದಿಗಳ ಕಂಠಸ್ವರ, ಬಣ್ಣ, ಆಕಾರ, ಕಣ್ಣು, ಕ್ರಿಯೆಗಳಿಂದ ಹೃದಯಗತವಾದ ಭಾವವನ್ನು ಊಹಿಸಬೇಕು.

ಆಕಾರೈರಿಂಗಿತೈರ್ಗತ್ಯಾ ಚೇಷ್ಟಯಾ ಭಾಷಿತೇನ ಚ ।
ನೇತ್ರವಕ್ತ್ರವಿಕಾರೈಶ್ಚ ಗೃಹ್ಯತೇಽಂತರ್ಗತಂ ಮನಃ ॥ ೨೬

ಕಣ್ಣು, ಮುಖವಿಕಾರ, ನಡಿಗೆ, ಮಾತು, ಮಾಲಿನ್ಯ, ಹರ್ಷಗಳಿಂದ ಮನಸ್ಸನ್ನು ತಿಳಿಯಬಹುದು.

ಬಾಲದಾಯಾದಿಕಂ ರಿಕ್ಥಂ ತಾವದ್ರಾಜಾನುಪಾಲಯೇತ್ ।
ಯಾವತ್ಸ ಸ್ಯಾತ್ಸಮಾವೃತ್ತೋ ಯಾವಚ್ಚಾತೀತಶೈಶವಃ ॥ ೨೭

ಬಾಲಕನು ರಕ್ಷಕರಿಲ್ಲದೆ ಹೋಗಿ ಅವನ ಸ್ಥಿರಚರ ಸೊತ್ತನ್ನು ಕಾಯುವವರಿಲ್ಲದಾಗ ಯುವಕನಾಗುವವರೆಗೆ ಅವನ ಸೊತ್ತನ್ನು ರಕ್ಷಿಸಿ ಕೊಡುವುದು ರಾಜನ ಕರ್ತವ್ಯವು.

ವಶಾಪುತ್ರಾಸು ಚೈವಂ ಸ್ಯಾದ್ರಕ್ಷಣಂ ನಿಷ್ಕುಲಾಸು ಚ ।
ಪತಿವ್ರತಾಸು ಚ ಸ್ತ್ರೀಷು ವಿಧವಾಸ್ವಾತುರಾಸು ಚ ॥ ೨೮

ಬಂಜೆ, ಮೃತಸಂತತಿ, ಸಪಿಂಡ ಹೀನಳು, ವಿಧವೆ, ರೋಗಿಣಿಯರು ಪತಿವ್ರತೆಯರಾಗಿದ್ದು ಅವರ ಸೊತ್ತನ್ನು ಅವರು ರಕ್ಷಿಸಲು ಅಸಮರ್ಥರಾದರೆ ಅವರನ್ನು ಕಾಪಾಡುವುದು ರಾಜಕಾರ್ಯ.

ಜೀವಂತೀನಾಂ ತು ತಾಸಾಂ ಯೇ ತದ್ಧರೇಯುಃ ಸ್ವಬಾಂಧವಾಃ ।
ತಾನ್‌ಶಿಷ್ಯಾಚ್ಚೌರದಂಡೇನ ಧಾರ್ಮಿಕಃ ಪೃಥಿವೀಪತಿಃ ॥ ೨೯

ಹಿಂದೆ ಹೇಳಿದ ಅಗತಿಕರಾದ ಮಕ್ಕಳು, ಹೆಂಗುಸರ ಸೊತ್ತನ್ನು ಅವರ ಬಂಧುಗಳು ಅಪಹರಿಸಲು ಇಷ್ಟಪಟ್ಟರೆ ಅವರನ್ನು ಕಳ್ಳರಂತೆ ದಂಡಿಸಬಹುದು. ಧರ್ಮಪಕ್ಷಪಾತಕ್ಕೆ ಅದು ಕರ್ತವ್ಯ.

ಪ್ರಣಷ್ಟಸ್ವಾಮಿಕಂ ರಿಕ್ಥಂ ರಾಜಾ ತ್ರ್ಯಬ್ದಂ ನಿಧಾಪಯೇತ್ ।
ಅರ್ವಾಕ್ ತ್ರ್ಯಬ್ದಾದ್ಧರೇತ್ ಸ್ವಾಮೀ ಪರೇಣ ನೃಪತಿರ್ಹರೇತ್ ॥ ೩೦

ಅಧಿಕಾರಿಯಿಲ್ಲದ ಸೊತ್ತನ್ನು ಮೂರು ವರ್ಷ ಬೇರೆ ಇಟ್ಟುಕೊಂಡು ಆವರೆಗೆ ಯಾರೂ ತನ್ನ ಹಕ್ಕನ್ನು ಸಾಧಿಸದಿದ್ದರೆ ಆ ಬಳಿಕ ಅದನ್ನು ರಾಜ ಕೋಶಕ್ಕೆ ಸಂಯೋಜಿಸಬೇಕು.

ಮಮೇದಮಿತಿ ಯೋ ಬ್ರೂಯಾತ್ಸೋನುಯೋಜ್ಯೋ ಯಥಾವಿಧಿ ।
ಸಂಪಾದ್ಯ ರೂಪಸಂಖ್ಯಾದೀನ್ ಸ್ವಾಮೀ ತದ್ದ್ರವ್ಯಮರ್ಹತಿ ॥ ೩೧

ನನ್ನದೆಂದು ಕಳೆದುಕೊಂಡವನು ಸೊತ್ತನ್ನು ಕೇಳುವಾಗ ವಿವಿಧವಾಗಿ ಆ ಸೊತ್ತಿನ ಪರಿಚಯದ ಕುರಿತು ಪ್ರಶ್ನಿಸಿ ಅವನು ಸರಿಯಾಗಿ ಉತ್ತರಿಸಿ ಅವನದೆಂದು ನಂಬಬಹುದಾದರೆ ಅದನ್ನು ಅವನಿಗೆ ಕೊಡಬೇಕು.

ಅವೇದಯಾನೋ ನಷ್ಟಸ್ಯ ದೇಶಂ ಕಾಲಂ ಚ ತತ್ತ್ವತಃ ।
ವರ್ಣಂ ರೂಪಂ ಪ್ರಮಾಣಂ ಚ ತತ್ಸಮಂ ದಂಡಮರ್ಹತಿ ॥ ೩೨

ಬಣ್ಣ, ರೂಪ, ತೂಕ, ಗಾತ್ರ, ದೇಶ, ಕಾಲಗಳನ್ನು ಕಾಣೆಯಾದ ಸೊತ್ತಿಗೆ ಸಂಬಂಧಿಸಿ ಅವನು ಹೇಳದಿದ್ದರೆ ಆ ಸೊತ್ತಿನಷ್ಟು ದಂಡನೆಯನ್ನು ಆ ಕೇಳಿದವನಿಗೆ ವಿಧಿಸಬೇಕು.

ಆದದೀತಾಥ ಷಡ್ಭಾಗಂ ಪ್ರಣಷ್ಟಾಧಿಗತಾನ್ನೃಪಃ ।
ದಶಮಂ ದ್ವಾದಶಂ ವಾಪಿ ಸತಾಂ ಧರ್ಮಮನುಸ್ಮರನ್ ॥ ೩೩

ಕಾಣೆಯಾಗಿ ಸಿಕ್ಕಿದ ಸೊತ್ತಿನ $\frac{1}{10}$, $\frac{1}{12}$, $\frac{1}{6}$ ಭಾಗವನ್ನು ರಾಜಧನವಾಗಿ ಅವನಿಂದ ಪಡೆಯಬಹುದು.

ಪ್ರಣಷ್ಟಾಧಿಗತಂ ದ್ರವ್ಯಂ ತಿಷ್ಠೇದ್ಯುಕ್ತೈರಧಿಷ್ಠಿತಂ ।
ಯಾಂಸ್ತತ್ರ ಚೌರಾನ್ ಗೃಹ್ಣೀಯಾತ್ತಾನ್ ರಾಜೇಭೇನ ಘಾತಯೇತ್ ॥ ೩೪

ಯಾರದಾದರೂ ಕಾಣೆಯಾಗಿ ಸಿಕ್ಕಿದ ಸೊತ್ತನ್ನು ರಾಜನು ಕಾಪಾಡಬೇಕು. ಅದನ್ನು ಯಾರಾದರೂ ಕದ್ದರೆ ಅವರನ್ನು ಆನೆಯಿಂದ ತುಳಿಸಿ ಕೊಲ್ಲಬೇಕು.

ಮಮಾಯಮಿತಿ ಯೋ ಬ್ರೂಯಾನ್ನಿಧಿಂ ಸತ್ಯೇನ ಮಾನವಃ ।
ತಸ್ಯಾದದೀತ ಷಡ್ಭಾಗಂ ರಾಜಾ ದ್ವಾದಶಮೇವ ವಾ ॥ ೩೫

ಎಲ್ಲಿಯಾದರೂ ನಿಧಿ ಸಿಕ್ಕಿದ್ದನ್ನು ಯಾರಾದರೂ ತನ್ನದೆಂದು ಪ್ರಮಾಣ ಮಾಡಿದರೆ ಅದರ $\frac{1}{6}$, $\frac{1}{12}$ ಅಂಶವನ್ನು ರಾಜನು ಪಡೆಯಬೇಕು. ಇಲ್ಲವಾದರೆ ಪೂರ್ಣ ರಾಜನಿಗೆ.

ಅನೃತಂ ತು ವದನ್ ದಂಡ್ಯಃ ಸ್ವವಿತ್ತಸ್ಯಾಂಶಮಷ್ಟಮಂ ।
ತಸ್ಯೈವ ವಾ ನಿಧಾನಸ್ಯ ಸಂಖ್ಯಾಯಾಲ್ಪೀಯಸೀಂ ಕಲಾಂ ॥ ೩೬

ನಿಧಿಯ ಬಗ್ಗೆ ಸುಳ್ಳಾಡಿದ್ದು ಸ್ಥಿರವಾದರೆ ಆ ನಿಧಿಧನದ ಎಂಟನೆ ಒಂದು ಭಾಗ ಅಥವಾ ಎಣಿಕೆ ಮಾಡಿ ಸ್ವಲ್ಪ ದಂಡನೆ ವಿಧಿಸಬೇಕು. ಗುಣಹೀನನಿಗೆ ದಂಡನೆ ಹೆಚ್ಚು, ಗುಣವಂತನಿಗೆ ಕಡಿಮೆ.

ವಿದ್ವಾಂಸ್ತು ಬ್ರಾಹ್ಮಣೋ ದೃಷ್ಟ್ವಾ ಪೂರ್ವೋಪನಿಹಿತಂ ನಿಧಿಂ ।
ಅಶೇಷತೋಽಪ್ಯಾದದೀತ ಸರ್ವಸ್ಯಾಧಿಪತಿರ್ಹಿ ಸಃ ॥ ೩೭

ಪುರಾತನ ನಿಧಿಯನ್ನು ಬ್ರಾಹ್ಮಣನು ಕಂಡರೆ ಆ ನಿಧಿ ಪೂರಾ ಅವನಿಗೆ. ರಾಜನು ಪರಿಗ್ರಹಿಸಬಾರದು. ವಿದ್ವಾಂಸನು ಜಗತ್ತಿಗೆ ಅಧಿಕಾರಿಯು.

ಯಂ ತು ಪಶ್ಯೇನ್ನಿಧಿಂ ರಾಜಾ ಪುರಾಣಂ ನಿಹಿತಂ ಕ್ಷಿತೌ ।
ತಸ್ಮಾದ್ದ್ವಿಜೇಭ್ಯೋ ದತ್ವಾರ್ಧಮರ್ಧಂ ಕೋಶೇ ಪ್ರವೇಶಯೇತ್ ॥ ೩೮

ಭೂಮಿಯೊಳಗೆ ನಿಧಿ ಸಿಕ್ಕಿದರೆ ಅದರಿಂದ ಅರ್ಧ ಬ್ರಾಹ್ಮಣರಿಗೆ ಕೊಟ್ಟು ಉಳಿದುದನ್ನು ರಾಜಕೋಶಕ್ಕೆ ತುಂಬುವುದು ಒಳ್ಳೆದು.

ನಿಧೀನಾಂ ತು ಪುರಾಣಾನಾಂ ಧಾತೂನಾಮೇವ ಚ ಕ್ಷಿತೌ ।
ಅರ್ಧಭಾಗ್ರಕ್ಷಣಾದ್ರಾಜಾ ಭೂಮೇರಧಿಪತಿರ್ಹಿ ಸಃ ॥ ೩೯

ಭೂಮಿಯನ್ನು ರಾಜನು ರಕ್ಷಿಸುವುದರಿಂದ ಪುರಾತನ ಭೂಗರ್ಭದ ನಿಧಿ, ಧಾತುಗಳಿಗೆ ರಾಜನು ಅರ್ಧಕ್ಕೆ ಅಧಿಕಾರಿಯು.

ದಾತವ್ಯಂ ಸರ್ವವರ್ಣೇಭ್ಯೋ ರಾಜ್ಞಾ ಚೋರೈರ್ಹೃತಂ ಧನಂ ।
ರಾಜಾ ತದುಪಯುಂಜಾನಶ್ಚೋರಸ್ಯಾಪ್ನೋತಿ ಕಿಲ್ಬಿಷಂ ॥ ೪೦

ಕಳ್ಳರು ಕದ್ದು ಸಿಕ್ಕಿದ ಧನವನ್ನು ರಾಜನು ಸ್ವೀಕರಿಸಿದರೆ ಪಾಪವಿದೆ. ಆದುದರಿಂದ ಸರ್ವರಿಗೂ ದಾನಮಾಡಬೇಕು.

ಜಾತಿಜಾನಪದಾನ್ಧರ್ಮಾನ್ ಶ್ರೇಣೀಧರ್ಮಾಂಶ್ಚ ಧರ್ಮವಿತ್ ।
ಸಮೀಕ್ಷ್ಯ ಕುಲಧರ್ಮಾಂಶ್ಚ ಸ್ವಧರ್ಮಂ ಪ್ರತಿಪಾದಯೇತ್ ॥ ೪೧

ಜಾತಿ ಧರ್ಮ, ಊರಿನ ಧರ್ಮ, ಸಮಾಜದ ಧರ್ಮ, ಕುಲಧರ್ಮ ಎಲ್ಲ ಧರ್ಮಗಳನ್ನು ತಿಳಿದು ಆಪಾದಿತನ ಧರ್ಮವನ್ನು ಬೋಧಿಸಬೇಕು.

ಸ್ವಾನಿ ಕರ್ಮಾಣಿ ಕುರ್ವಾಣಾ ದೂರೇ ಸಂತೋಽಪಿ ಮಾನವಾಃ ।
ಪ್ರಿಯಾ ಭವಂತಿ ಲೋಕಸ್ಯ ಸ್ವೇ ಸ್ವೇ ಕರ್ಮಣ್ಯವಸ್ಥಿತಾಃ ॥ ೪೨

ಅವರವರು ಅವರವರ ಧರ್ಮಗಳನ್ನು ಪಾಲಿಸುತ್ತ ಇದ್ದರೆ ದೂರ ದೂರದಲ್ಲಿ ವಾಸವಿದ್ದರೂ ಅವರವರು ದೇಶಕ್ಕೆ ಪ್ರಿಯರಾಗುತ್ತಾರೆ.

ನೋತ್ಪಾದಯೇತ್ಸ್ವಯಂ ಕಾರ್ಯಂ ರಾಜಾ ನಾಪ್ಯಸ್ಯ ಪೂರುಷಃ ।
ನ ಚ ಪ್ರಾಪಿತಮನ್ಯೇನ ಗ್ರಸೇದರ್ಥಂ ಕಥಂಚನ ॥ ೪೩

ರಾಜನು, ರಾಜನಿಯುಕ್ತರು ವಿವಾದವನ್ನು ಅಧಿಕಗೊಳಿಸಬಾರದು ಮತ್ತು ವಾದಿಪ್ರತಿವಾದಿಗಳು ತಂದ ವಿವಾದವನ್ನು ಧನಲೋಭದಿಂದ ಅಡಗಿಸಬಾರದು, ನಿರಾಕರಿಸಬಾರದು.

ಯಥಾ ನಯತ್ಯಸೃಕ್ಪಾತೈರ್ಮೃಗಸ್ಯ ಮೃಗಯುಃ ಪದಂ ।
ನಯೇತ್ತಥಾನುಮಾನೇನ ಧರ್ಮಸ್ಯ ನೃಪತಿಃ ಪದಂ ॥ ೪೪

ಪೆಟ್ಟಾದ ಮೃಗವು ರಕ್ತಸುರಿಸುತ್ತ ಓಡುವುದು. ಅದನ್ನು ಬೇಡನು ಹಿಂಬಾಲಿಸಿ ಮೃಗವನ್ನು ಹುಡುಕಿ ಸಂಧಿಸುವನು. ಅದರಂತೆ ರಾಜನು ಊಹೆಯಿಂದ ಧರ್ಮಮೂಲವನ್ನು ವಾದಿ ಪ್ರತಿವಾದಿಗಳಲ್ಲಿ ಹುಡುಕಿ ತೆಗೆಯಬೇಕು.

ಸತ್ಯಮರ್ಥಂ ಚ ಸಂಪಶ್ಯೇದಾತ್ಮಾನಮಥ ಸಾಕ್ಷಿಣಃ ।
ದೇಶಂ ರೂಪಂ ಚ ಕಾಲಂ ಚ ವ್ಯವಹಾರವಿಧೌ ಸ್ಥಿತಃ ॥ ೪೫

ನ್ಯಾಯಪತಿ ಸ್ಥಾನದಲ್ಲಿರುವವನು ಸತ್ಯವನ್ನು ವಿವಾದದಲ್ಲಿ ಹುಡುಕುವುದನ್ನೇ ಗುರಿಯಾಗಿಟ್ಟುಕೊಳ್ಳಬೇಕು. ಅದು ಬಿಟ್ಟು ವೈಯಕ್ತಿಕ ದ್ವೇಷ, ತನ್ನ, ಸಾಕ್ಷಿದಾರನ ಮಟ್ಟ, ದೇಶ, ಕಾಲಗಳನ್ನು ತನಗೆ ಅನುಕೂಲವೆಂದು ಹೊಂದಿಸಿ ಲಾಭ ಪ್ರಶಸ್ತಿಗಳಿಗೆ ಸರಿಯಾಗಿ ನಿರ್ಣಯವನ್ನು ಕೊಡುವ ಕೀಳು ಮಟ್ಟಕ್ಕೆ ಇಳಿಯಬಾರದು. ನ್ಯಾಯಾಸ್ಥಾನವನ್ನು ಪಕ್ಷಪಾತದಿಂದ ಕಲುಷಿತಗೊಳಿಸಬಾರದು.

ಸದ್ಭಿರಾಚರಿತಂ ಯತ್ಸ್ಯಾದ್ಧಾರ್ಮಿಕೈಶ್ಚ ದ್ವಿಜಾತಿಭಿಃ ।
ತದ್ದೇಶಕುಲಜಾತೀನಾಮವಿರುದ್ಧಂ ಪ್ರಕಲ್ಪಯೇತ್ ॥ ೪೬

ಸಜ್ಜನರು ಧರ್ಮನಿಷ್ಠರು ಆಚರಿಸಿದ್ದನ್ನು ಆ ದೇಶದ, ಆ ಕುಲದ, ಆ ಜಾತಿಯವರಿಗೆ ಅದು ಧರ್ಮವೆಂದು ನಿಶ್ಚೈಸಬೇಕು. ಧರ್ಮನಿಬಂಧಗಳಲ್ಲಿ ಬಾರದ ವಿಷಯದ ಕುರಿತು ಈ ನಿಯಮ. ಈ ವರೆಗೆ ಸಾಮಾನ್ಯವಾಗಿ ಎಲ್ಲ ವ್ಯವಹಾರಗಳ ಮೂಲ ಸೂತ್ರಗಳನ್ನು ವಿವರಿಸಿ ಇನ್ನು ಒಂದೊಂದನ್ನೆ ಬೇರೆ ಬೇರೆ ವಿವರಿಸುತ್ತಾರೆ. ಕ್ರಮಪ್ರಾಪ್ತವಾಗಿ ಸಾಲದ ವಿಚಾರ.

ಅಧಮರ್ಣಾರ್ಥಸಿದ್ಧ್ಯರ್ಥಮುತ್ತಮರ್ಣೇನ ಚೋದಿತಃ ।
ದಾಪಯೇದ್ಧನಿಕಸ್ಯಾರ್ಥಮಧಮರ್ಣಾದ್ವಿಭಾವಿತಂ ॥ ೪೭

ಸಾಲ ತಕ್ಕೊಂಡವನಿಂದ ವಸೂಲು ಪಡೆಯಲು ಕೊಟ್ಟವನು ದೂರು ತಂದರೆ ಸಾಲಕೊಟ್ಟದ್ದು ತಕ್ಕೊಂಡದ್ದು ಸತ್ಯವೆಂದು ನಿಶ್ಚಯವಾದರೆ ಧನ

ಸ್ವಾಮಿಗೆ ಸಾಲಗಾರನಿಂದ ಮೂಲಧನವನ್ನು ಕೊಡಿಸಬೇಕು. ಬರಹ ಮೂಲಕ ಸಾಲದ ಗುರುತು ಸಿಕ್ಕಿದರೆ ಸುಲಭ.

ಯೈರ್ಯೈರುಪಾಯೈರರ್ಥಂ ಸ್ವಂ ಪ್ರಾಪ್ನುಯಾದುತ್ತಮರ್ಣಿಕಃ ।
ತೈಸ್ತೈರುಪಾಯೈಃ ಸಂಗೃಹ್ಯ ದಾಪಯೇದಧಮರ್ಣಿಕಂ ॥ ೪೮

ಮುಂದೆ ಹೇಳುವ ಉಪಾಯಗಳಿಂದ ವಸೂಲು ಮಾಡಿ ಸಾಲದ ಮರುಪಾವತಿಯನ್ನು ಸಾಧಿಸಬೇಕು.

ಧರ್ಮೇಣ ವ್ಯವಹಾರೇಣ ಛಲೇನಾಚರಿತೇನ ಚ ।
ಪ್ರಯುಕ್ತಂ ಸಾಧಯೇದರ್ಥಂ ಪಂಚಮೇನ ಬಲೇನ ಚ ॥ ೪೯

ಇಷ್ಟರು, ಮಿತ್ರರು ಸಮಜಾಯಿಸಿ ಸಾಲಕೊಡುವಂತೆ ಮಾಡುವುದು, ಮೋಸದಿಂದ ಬೇಕೆಂದು ಕೇಳಿ ತಕ್ಕೊಂಡು ಸಾಲಕ್ಕೆ ಹಿಡಿಯುವುದು, ಬೇರೆ ಯವನು ಅವನಿಗೆ ಕೊಡುವುದಿದ್ದರೆ ಅದನ್ನು ಪಡೆಯುವುದು, ಸಾಲಗಾರನ ಮನೆ ಬಾಗಿಲಲ್ಲಿ ಕಾದಿರುವುದು, ಹೆಂಡತಿ ಮಕ್ಕಳನ್ನು ಪೀಡಿಸುವುದು, ಹೊಡೆದು ಕೊಡಿಸುವುದು—ಹೀಗೆ ಇಷ್ಟು ಉಪಾಯಗಳಿಂದ ಸಾಲವನ್ನು ಹಿಂದೆಗೆಯಬೇಕು.

ಯಃ ಸ್ವಯಂ ಸಾಧಯೇದರ್ಥಂ ಉತ್ತಮರ್ಣೋಽಧಮರ್ಣಿಕಾತ್ ।
ನ ಸ ರಾಜ್ಞಾಭಿಯೋಕ್ತವ್ಯಃ ಸ್ವಕಂ ಸಂಸಾಧಯನ್ ಧನಂ ॥ ೫೦

ಸಾಲಕೊಟ್ಟವನು ಸಾಲಗಾರನಿಂದ ಗದರಿಸಿ ವಸೂಲು ಪಡೆದರೆ ಅಪರಾಧವಲ್ಲವಾದ್ದರಿಂದ ರಾಜನು ವಿಚಾರಿಸುವುದು ಬೇಡ.

ಅರ್ಥೇಽಪವ್ಯಯಮಾನಂ ತು ಕರಣೇನ ವಿಭಾವಿತಂ ।
ದಾಪಯೇದ್ಧನಿಕಸ್ಯಾರ್ಥಂ ದಂಡಲೇಶಂ ಚ ಶಕ್ತಿತಃ ॥ ೫೧

ಸಾಲಗಾರನು ತಾನು ಸಾಲ ತಕ್ಕೊಳ್ಳಲಿಲ್ಲ, ಕೊಡತಕ್ಕದ್ದಿಲ್ಲ ಎಂದು ಹೇಳಿದಾಗ ಲೇಖನ, ಸಾಕ್ಷಿ, ಪ್ರಮಾಣಗಳಿಂದ ಸ್ಥಿರಪಟ್ಟರೆ ಸಾಲ ಹಿಂತಿರುಗಿಸಬೇಕು. ಮುಂದೆ ಹೇಳುವುದಕ್ಕಿಂತ ಎರಡು ಪಾಲು ದಂಡನೆ ವಸೂಲು ಮಾಡಬೇಕು.

ಅಪಹ್ನವೇಽಧಮರ್ಣಸ್ಯ ದೇಹೀತ್ಯುಕ್ತಸ್ಯ ಸಂಸದಿ ।
ಅಭಿಯೋಕ್ತಾ ದಿಶೇದ್ದೇಶ್ಯಂ ಕರಣಂ ವಾನ್ಯದುದ್ದಿಶೇತ್ ॥ ೫೨

ವಿಚಾರಣೆಯಕಾಲದಲ್ಲಿ ನ್ಯಾಯಪತಿಯ ಸಾಲದ ಪ್ರಶ್ನೆಗೆ ಸಾಲಗಾರನು ಅಡಗಿಸಿ ನಿರಾಕರಿಸುವಾಗ ಸಾಕ್ಷಿಯನ್ನು, ಲೇಖನವನ್ನು ದಾಖಲೆ ಕೇಳಬೇಕು.

ಅದೇಶ್ಯಂ ಯಶ್ಚ ದಿಶತಿ ನಿರ್ದಿಶ್ಯಾಪಹ್ನುತೇ ಚ ಯಃ ।
ಯಶ್ಚಾಧರೋತ್ತರಾನರ್ಥಾನ್ವಿಗೀತಾನ್ನಾವಬುಧ್ಯತೇ ॥ ೫೩
ಅಪದಿಶ್ಯಾಪದೇಶ್ಯಂ ಚ ಪುನರ್ಯಸ್ತ್ವಪಧಾವತಿ ।
ಸಮ್ಯಕ್ ಪ್ರಣಿಹಿತಂ ಚಾರ್ಥಂ ಪೃಷ್ಟಃ ಸನ್ನಾಭಿನಂದತಿ ॥ ೫೪
ಅಸಂಭಾಷ್ಯೇ ಸಾಕ್ಷಿಭಿಶ್ಚ ದೇಶೇ ಸಂಭಾಷತೇ ಮಿಥಃ ।
ನಿರುಚ್ಯಮಾನಂ ಪ್ರಶ್ನಂ ಚ ನೇಚ್ಛೇದ್ಯಶ್ಚಾಪಿ ನಿಷ್ಪತೇತ್ ॥ ೫೫
ಬ್ರೂಹೀತ್ಯುಕ್ತಶ್ಚ ನ ಬ್ರೂಯಾತ್ ಉಕ್ತಂ ಚ ನ ವಿಭಾವಯೇತ್ ।
ನ ಚ ಪೂರ್ವಾಪರಂ ವಿದ್ಯಾತ್ತಸ್ಮಾದರ್ಥಾತ್ಸ ಹೀಯತೇ ॥ ೫೬

ಸಾಲಕೊಟ್ಟವನು, ಸಾಲತೆಗೆದುಕೊಳ್ಳುವಾಗ ಅವನಿರಲಿಲ್ಲ ಎಂದು ನಾನು ಅದನ್ನು ಹೇಳಲಿಲ್ಲ ಎಂದು—ತನ್ನ ಮಾತಿನ ಪೂರ್ವಾಪರ ವಿರೋಧ ವನ್ನು ತಿಳಿಯದೆ ಮಾತಾಡುವವನು, ನ್ಯಾಯಪತಿಯ ಪ್ರಶ್ನೆಗೆ ಸರಿಯಾದ ಉತ್ತರ ಕೊಡದಿರುವವನು, ಸಾಕ್ಷಿಗಳೊಡನೆ ಗುಪ್ತಾಲೋಚನೆ ಸ್ಪಷ್ಟ ತಿಳು ವಳಿಕೆಗೆ ಪುನಃ ಪುನಃ ನ್ಯಾಯಪತಿಯು ಹೇಳುವಾಗ ಅಸಹ್ಯಪಟ್ಟವನು, ಪ್ರಶ್ನೆಗೆ ಉತ್ತರ ಕೊಡದಿರುವವನು–ಹೀಗೆ ತಪ್ಪುಗಾರನಾದರೆ ಅವನು ಸಾಲದ ಹಣ ಹೊಂದಲು ಯೋಗ್ಯನಲ್ಲ.

ಸಾಕ್ಷಿಣಃ ಸಂತಿ ಮೇತ್ಯುಕ್ತ್ವಾ ದಿಶೇತ್ಯುಕ್ತೋ ದಿಶೇನ್ನ ಯಃ ।
ಧರ್ಮಸ್ಥಃ ಕಾರಣೈರೇತೈರ್ಹೀನಂ ತಮಪಿ ನಿರ್ದಿಶೇತ್ ॥ ೫೭

ಸಾಕ್ಷಿಗಳು ಉಂಟೆಂದು ಹೇಳಿ ಹೆಸರು ಹೇಳಲು ಸಾಧ್ಯವಾಗದಿದ್ದರೆ ಅದು ಸುಳ್ಳೆಂದು ತಿಳಿಯಬಹುದು.

ಅಭಿಯೋಕ್ತಾ ನ ಚೇದ್ಬ್ರೂಯಾದ್ಬಧ್ಯೋ ದಂಡ್ಯಶ್ಚ ಧರ್ಮತಃ ।
ನ ಚೇತ್ತ್ರಿಪಕ್ಷಾತ್ಪ್ರಬ್ರೂಯಾದ್ಧರ್ಮಂ ಪ್ರತಿ ಪರಾಜಿತಃ ॥ ೫೮

ನ್ಯಾಯಸ್ಥಾನಕ್ಕೆ ಬಂದವನು ಪ್ರತಿಜ್ಞೆ ಮಾಡಲು ಸಾಧ್ಯವಿಲ್ಲದೆ ಹಿಂತೆಗೆದರೆ ಅವನು ದೊಡ್ಡ ಮೊತ್ತದ ಹಣದ ವ್ಯವಹಾರದಲ್ಲಿ ಬಂದಿಯಾಗಲು, ಸಣ್ಣದರಲ್ಲಿ ಹಣದಂಡನೆಗೆ ಗುರಿಯಾಗಿ ವ್ಯವಹಾರವು ವಿರಾಮ ಹೊಂದುವುದು.

ಯೋ ಯಾವನ್ನಿಹ್ನುವೀತಾರ್ಥಂ ಮಿಥ್ಯಾಯಾವತಿ ವಾ ವದೇತ್ ।
ತೌ ನೃಪೇಣ ಹ್ಯಧರ್ಮಜ್ಞೌ ದಾಪ್ಯೌ ತದ್ವಿಗುಣಂ ದಮಂ ॥ ೫೯

ಸಾಲದ ಅಂಶದಲ್ಲಿ ಕೊಟ್ಟವನು ತಕ್ಕೊಂಡವನು ಸುಳ್ಳಾಡಿದರೆ ಆ ಅಂಶದ ಇಮ್ಮಡಿ ದಂಡ ತೆರಲು ಅವರು ಬಾಧ್ಯರು.

ಪೃಷ್ಟೋಽಪವ್ಯಯಮಾನಸ್ತು ಕೃತಾವಸ್ಥೋ ಧನೈಷಿಣಾ ।
ತ್ರ್ಯವರೈಃ ಸಾಕ್ಷಿಭಿರ್ಭಾವ್ಯೋ ನೃಪಬ್ರಾಹ್ಮಣಸನ್ನಿಧೌ ॥ ೬೦

ಸಾಲಕೊಟ್ಟ ವಾದಿಯು ನ್ಯಾಯಪತಿಯು ಕೇಳುವಾಗ ಸುಳ್ಳಾಡಿದರೆ ಸದಸ್ಯರಿಗೆ ಮೂರು ಮಂದಿ ಸಾಕ್ಷಿಗಳನ್ನು ಆ ವಿಷಯದಲ್ಲಿ ಒದಗಿಸಬೇಕು.

ಯಾದೃಶಾ ಧನಿಭಿಃ ಕಾರ್ಯಾ ವ್ಯವಹಾರೇಷು ಸಾಕ್ಷಿಣಃ ।
ತಾದೃಶಾನ್ ಸಂಪ್ರವಕ್ಷ್ಯಾಮಿ ಯಥಾವಾಚ್ಯಮೃತಂ ಚ ತೈಃ ॥ ೬೧

ಸಾಕ್ಷಿದಾರರು ಎಂತಹವರಾಗಬೇಕೆಂದು ಹೇಳುತ್ತೇನೆ.

ಗೃಹಿಣಃ ಪುತ್ರಿಣೋ ಮೌಲಾಃ ಕ್ಷತ್ರವಿಟ್ಶೂದ್ರಯೋನಯಃ ।
ಅರ್ಥ್ಯುಕ್ತಾಃ ಸಾಕ್ಷ್ಯಮರ್ಹಂತಿ ನ ಯೇ ಕೇಚಿದನಾಪದಿ ॥ ೬೨

ಹೆಂಡತಿ ಮಕ್ಕಳು ಇರುವವರು, ಆ ಊರಿನವರು, ವೈಶ್ಯ, ಕ್ಷತ್ರಿಯ, ಶೂದ್ರರು ವಾದಿಯು ಹೇಳಿದವರು ಸಾಕ್ಷಿಗೆ ಆಗಬಹುದು. ಇದು ಸಿವಿಲ್ ಎಂದರೆ ಹನ್ನೆರಡು ತರದ ವಿವಾದದಲ್ಲಿ ಆಪದ್ ರೂಪವಾದ ಕ್ರಿಮಿನಲ್ ಎಂಬ ಆಗಂತುಕ ಅಪರಾಧದಲ್ಲಿ ಎಲ್ಲರೂ ಸಾಕ್ಷಿಗಳಾಗಬಹುದು. ಈಗ ಹೇಳಿದ ರೀತಿಯವರು ಮಾತ್ರ ಅಲ್ಲ.

ಆಪ್ತಾಃ ಸರ್ವೇಷು ವರ್ಣೇಷು ಕಾರ್ಯಾಃ ಕಾರ್ಯೇಷು ಸಾಕ್ಷಿಣಃ ।
ಸರ್ವಧರ್ಮವಿದೋಽಲುಬ್ಧಾ ವಿಪರೀತಾಂಸ್ತು ವರ್ಜಯೇತ್ ॥ ೬೩

ವಿಶ್ವಾಸಾರ್ಹರು, ಧರ್ಮಜ್ಞರು, ಲೋಭಹೀನರು ಯಾರೂ ಸಾಕ್ಷಿಗೆ ಆಗಬಹುದು. ವಂಚಕರು, ಧರ್ಮಹೀನರು, ಲೋಭಿಗಳು ಆಗಬಾರದು.

ನಾರ್ಥಸಂಬಂಧಿನೋ ನಾಪ್ತಾ ನ ಸಹಾಯಾ ನ ವೈರಿಣಃ ।
ನ ದೃಷ್ಟದೋಷಾಃ ಕರ್ತವ್ಯಾ ನ ವ್ಯಾಧ್ಯಾರ್ತಾ ನ ದೂಷಿತಾಃ ॥ ೬೪

ಹಣದ ಸಂಬಂಧ ಇರುವವರು, ಸಹಾಯರು, ಮಿತ್ರರು, ಶತ್ರು, ಸುಳ್ಳು ಸಾಕ್ಷಿ ಹೇಳುವವರು, ರೋಗಿಗಳು, ಸಾಕ್ಷಿಗೆ ಯೋಗ್ಯರಲ್ಲ.

ನ ಸಾಕ್ಷೀ ನೃಪತಿಃ ಕಾರ್ಯೋ ನ ಕಾರುಕಕುಶೀಲವೌ ।
ನ ಶ್ರೋತ್ರಿಯೋ ನ ಲಿಂಗಸ್ಥೋ ನ ಸಂಗೇಭ್ಯೋ ವಿನಿರ್ಗತಃ ॥ ೬೫

ಅರಸು, ಕಸುಬುದಾರ, ನರ್ತಕ, ಶ್ರೋತ್ರಿಯ, ಬ್ರಹ್ಮಚಾರಿ, ಪರಿವ್ರಾಜಕ ಇವರು ಅವರ ಕೆಲಸದಲ್ಲಿ ಆಸಕ್ತರಾದುದರಿಂದ ಸಾಕ್ಷಿಯಾಗಲು ಒಪ್ಪಲಾರರು.

ನಾಧ್ಯಧೀನೋ ನ ವಕ್ತವ್ಯೋ ನ ದಸ್ಯುರ್ನ ವಿಕರ್ಮಕೃತ್ ।
ನ ವೃದ್ಧೋ ನ ಶಿಶುರ್ನೈಕೋ ನಾಂತ್ಯೋ ನ ವಿಕಲೇಂದ್ರಿಯಃ ॥ ೬೬

ಪರಾಧೀನ, ನಿಂದಿತ, ಕ್ರೂರಿ, ನಿಷಿದ್ಧಕರ್ಮಕಾರಿ, ಮುದುಕ, ಹುಡುಗ, ಒಬ್ಬನು, ನೀಚನು, ಅಂಗಹೀನನು ಸಾಕ್ಷಿಗೆ ಅರ್ಹರಲ್ಲ.

ನಾರ್ತೋ ನ ಮತ್ತೋ ನೋನ್ಮತ್ತೋ ನ ಕ್ಷುತ್ತೃಷ್ಣೋಪಪೀಡಿತಃ ।
ನ ಶ್ರಮಾರ್ತೋ ನ ಕಾಮಾರ್ತೋ ನ ಕ್ರುದ್ಧೋ ನಾಪಿ ತಸ್ಕರಃ ॥ ೬೭

ದುಃಖಿತ, ಮದ್ಯಪಾಯಿ, ಹುಚ್ಚ, ಹಸಿದು ಬಾಯಾರಿದವನು, ಬಳಲಿದವನು, ಕಾಮಾತುರನು, ಸಿಟ್ಟುಗೊಂಡವನು, ಕಳ್ಳನು, ಸಾಕ್ಷ್ಯಾನರ್ಹರು.

ಸ್ತ್ರೀಣಾಂ ಸಾಕ್ಷ್ಯಂ ಸ್ತ್ರಿಯಃ ಕುರ್ಯುರ್ದ್ವಿಜಾನಾಂ ಸದೃಶಾ ದ್ವಿಜಾಃ ।
ಶೂದ್ರಾಶ್ಚ ಸಂತಃ ಶೂದ್ರಾಣಾಮಂತ್ಯಾನಾಮಂತ್ಯಯೋನಯಃ ॥ ೬೮

ಹೆಂಗುಸರಿಗೆ ಹೆಂಗುಸರು, ದ್ವಿಜರಿಗೆ ದ್ವಿಜರು, ಶೂದ್ರರಿಗೆ ಶೂದ್ರರು, ಅಂತ್ಯಜರಿಗೆ ಅಂತ್ಯಜರು ಸಾಕ್ಷಿಗಳು.

ಅನುಭಾವೀ ತು ಯಃ ಕಶ್ಚಿತ್ಕುರ್ಯಾತ್ಸಾಕ್ಷ್ಯಂ ವಿವಾದಿನಾಂ ।
ಅಂತರ್ವೇಶ್ಮನ್ಯರಣ್ಯೇ ವಾ ಶರೀರಸ್ಯಾಪಿ ಚಾತ್ಯಯೇ ॥ ೬೯

ಮನೆಯೊಳಗೆ, ಕಾಡಿನಲ್ಲಿ, ಕಳ್ಳತನ, ದೇಹಭಯಗಳಲ್ಲಿ ಸಿಕ್ಕಿದವರೆಲ್ಲ ಸಾಕ್ಷಿಗಳಾಗಬಹುದಾದರೂ ಹಿಂದೆ ಹೇಳಿದ ಹನ್ನೆರಡು ವಿವಾದಗಳಲ್ಲಿ ಅಂತಹ ವರಾಗದು.

ಸ್ತ್ರಿಯಾಽಪ್ಯಸಂಭವೇ ಕಾರ್ಯಂ ಬಾಲೇನ ಸ್ಥವಿರೇಣ ವಾ ।
ಶಿಷ್ಯೇಣ ಬಂಧುನಾ ವಾಪಿ ದಾಸೇನ ಭೃತಕೇನ ವಾ ॥ ೭೦

ಅಪರಾಧಗಳಲ್ಲಿ ಹೆಂಗಸು, ಹುಡುಗ, ಮುದುಕ, ಶಿಷ್ಯ, ಬಂಧು, ಸೇವಕ, ಸಂಬಳದವನು ಯಾರೂ ಸಾಕ್ಷಿಗಳಾಗಬಹುದು.

ಬಾಲವೃದ್ಧಾತುರಾಣಾಂ ಚ ಸಾಕ್ಷ್ಯೇಷು ವದತಾಂ ಮೃಷಾ ।
ಜಾನೀಯಾದಸ್ಥಿರಾಂ ವಾಚಮುತ್ಸಿಕ್ತಮನಸಾಂ ತಥಾ ॥ ೭೧

ಹುಡುಗರು, ಮುದುಕರು, ರೋಗಿಗಳು, ಚಿತ್ತವಿಕಾರವುಳ್ಳವರು ಆಡುವ ಮಾತು ಸ್ಥಿರವಲ್ಲದೆ ಚಂಚಲವಾದರೂ ಕಾರಣಗಳಿಂದ ಊಹಿಸಬೇಕು.

ಸಾಹಸೇಷು ಚ ಸರ್ವೇಷು ಸ್ತೇಯಸಂಗ್ರಹಣೇಷು ಚ ।
ವಾಗ್ದಂಡಯೋಶ್ಚ ಪಾರುಷ್ಯೇ ನ ಪರೀಕ್ಷೇತ ಸಾಕ್ಷಿಣಃ ॥ ೭೨

ಹೊಡೆತ, ಬಡಿತ, ಕಳ್ಳತನ, ಸ್ತ್ರೀಬಲಾತ್ಕಾರ, ಬೈಗಳು ಇಂತಹ ಪ್ರಸಂಗದಲ್ಲಿ ಸಾಕ್ಷಿ ಪರೀಕ್ಷೆ ಮಾಡಲು ಸಾಧ್ಯವಿಲ್ಲ. ಸಂಭವವೇ ಸಾಕು.

ಬಹುತ್ವಂ ಪರಿಗೃಹ್ಣೀಯಾತ್ಸಾಕ್ಷಿದ್ವೈಧೇ ನರಾಧಿಪಃ ।
ಸಮೇಷು ತು ಗುಣೋತ್ಕೃಷ್ಟಾನ್ ಗುಣಿದ್ವೈಧೇ ದ್ವಿಜೋತ್ತಮಾನ್ ॥ ೭೩

ಸಾಕ್ಷಿಯು ವಿರುದ್ಧವಾದರೆ ಹೆಚ್ಚು ಸಾಕ್ಷಿ ಬೇಕು. ಗುಣವಂತರು ವಿಶ್ವಾಸಾರ್ಹರು.

ಸಮಕ್ಷದರ್ಶನಾತ್ಸಾಕ್ಷ್ಯಂ ಶ್ರವಣಾಚ್ಚೈವ ಸಿಧ್ಯತಿ ।
ತತ್ರ ಸತ್ಯಂ ಬ್ರುವನ್ ಸಾಕ್ಷೀ ಧರ್ಮಾರ್ಥಾಭ್ಯಾಂ ನ ಹೀಯತೇ ॥ ೭೪

ಒಂದು ಘಟನೆಯನ್ನು ಸಾಕ್ಷಾತ್ ನೋಡಿದರೂ, ಕೇಳಿದರೂ ಅದನ್ನು ಸತ್ಯವಾಗಿ ಹೇಳಿದರೆ ಧರ್ಮ, ಅರ್ಥಗಳಿಂದ ಅಂತಹವನಿಗೆ ಹಾನಿಯಾಗುವುದಿಲ್ಲ. ಸುಳ್ಳು ಹೇಳಿದರೆ ಹಾನಿಯಿದೆ.

ಸಾಕ್ಷೀ ದೃಷ್ಟಶ್ರುತಾದನ್ಯತ್ ವಿಬ್ರುವನ್ನಾರ್ಯಸಂಸದಿ ।
ಅವಾಙ್ನರಕಮಭ್ಯೇತಿ ಪ್ರೇತ್ಯ ಸ್ವರ್ಗಾಚ್ಚ ಹೀಯತೇ ॥ ೭೫

ಸಾಕ್ಷಿದಾರನು ಕೇಳಿದ್ದು, ನೋಡಿದ್ದು ಬಿಟ್ಟು ಬೇರೆ ಹೇಳಿದರೆ ಸ್ವರ್ಗ ಕಳೆದುಕೊಂಡು ನರಕಕ್ಕೆ ಹೋಗುತ್ತಾನೆ.

ಯತ್ರಾನಿಬದ್ಧೋಽಪೀಕ್ಷೇತ ಶೃಣುಯಾದ್ವಾಪಿ ಕಿಂಚನ ।
ದೃಷ್ಟಸ್ತತ್ರಾಪಿ ತದ್ಬ್ರೂಯಾದ್ಯಥಾದೃಷ್ಟಂ ಯಥಾಶ್ರುತಮ್ ॥ ೭೬

ಒಬ್ಬ ಮನುಷ್ಯನು ಸಾಕ್ಷೀದಾರನೆಂದು ನಿಯಮಿಸಲ್ಪಟ್ಟಿರದಿದ್ದರೂ ಆಮೇಲೆ ಅವನನ್ನು ವಿಚಾರಿಸಿದರೂ ಕೂಡ ಅವನು ತಾನು ಕಂಡ ಹಾಗು ಕೇಳಿದ ನಿಜ ಸಂಗತಿಯನ್ನು ಚಾಚೂ ಬಿಡದಂತೆ ಹೇಳಬೇಕು.

ಏಕೋಽಲುಬ್ಧಸ್ತು ಸಾಕ್ಷೀ ಸ್ಯಾದ್ಬಹ್ವ್ಯಃ ಶುಚ್ಯೋಽಪಿ ನ ಸ್ತ್ರಿಯಃ ।
ಸ್ತ್ರೀಬುದ್ಧೇರಸ್ಥಿರತ್ವಾತ್ತು ದೋಷೈಶ್ಚಾನ್ಯೇಽಪಿ ಯೇ ವೃತಾಃ ॥ ೭೭

ಲೋಭಾದಿ ದೋಷರಹಿತನು ಒಬ್ಬನು ಸಾಕ್ಷಿಯಿದ್ದರೂ ನಂಬಬಹುದು. ಬಹುಮಂದಿ ಹೆಂಗಸರು ಒಳ್ಳೆಯವರಾದರೂ ಅವರು ಹೇಳಿದುದು ಅವರ ಸ್ವಭಾವ ಚಾಂಚಲ್ಯದಿಂದ ವಿಶ್ವಾಸಾರ್ಹವಲ್ಲ. ದೋಷದುಷ್ಟರು ಬಹುಮಂದಿಯೂ ಪ್ರಮಾಣವಲ್ಲ. ವ್ಯವಹಾರದಲ್ಲಿ ಪೂರ್ವಪರಾಮರ್ಶವು ಮುಖ್ಯ. ಅದು ಚಾಂಚಲ್ಯವಿದ್ದಲ್ಲಿರದು.

ಸ್ವಭಾವೇನೈವ ಯದ್ಬ್ರೂಯುಸ್ತದ್ಗ್ರಾಹ್ಯಂ ವ್ಯಾವಹಾರಿಕಂ ।
ಅತೋ ಯದನ್ಯದ್ ವಿಬ್ರೂಯುರ್ಧರ್ಮಾರ್ಥಂ ತದಪಾರ್ಥಕಂ ॥ ೭೮

ಭಯ, ಪಕ್ಷಪಾತಗಳಿಲ್ಲದೆ ಸ್ವಭಾವದಿಂದ ಹೇಳಿದ ಸಾಕ್ಷಿವಚನವು ಪ್ರಮಾಣವು. ಅಲ್ಲವಾದರೆ ಯಥಾರ್ಥವಲ್ಲದ್ದರಿಂದ ಅಪ್ರಮಾಣವು. ಅದು ಧರ್ಮಾರ್ಥ ಸಾಧಕವಲ್ಲ.

ಸಭಾಂತಃ ಸಾಕ್ಷಿಣಃ ಪ್ರಾಪ್ತಾನರ್ಥಿಪ್ರತ್ಯರ್ಥಿಸನ್ನಿಧೌ ।
ಪ್ರಾಙ್ವಿವಾಕೋಽನುಯುಂಜೀತ ವಿಧಿನಾ ತೇನ ಸಾಂತ್ವಯನ್ ॥ ೭೯

ವಾದಿಪ್ರತಿವಾದಿಗಳ ಸಮ್ಮುಖದಲ್ಲಿ ಸಭೆಯಲ್ಲಿ ಸಾಕ್ಷಿದಾರರಿಗೆ ಪ್ರಶ್ನೆ ಮಾಡಬೇಕು. ರಾಜಪ್ರತಿನಿಧಿಯು ಸಾಕ್ಷಿದಾರರಿಗೆ ರಕ್ಷಣೆ ಸಮಾಧಾನಗಳನ್ನು ಕೊಡಬೇಕು.

ಯದ್ದ್ವಯೋರನಯೋರ್ವೇತ್ಥ ಕಾರ್ಯೇಽಸ್ಮಿಂಶ್ಚೇಷ್ಟಿತಂ ಮಿಥಃ ।
ತದ್ಬ್ರೂತ ಸರ್ವಂ ಸತ್ಯೇನ ಯುಷ್ಮಾಕಂ ಹ್ಯತ್ರ ಸಾಕ್ಷಿತಾ ॥ ೮೦

ಇವರಿಬ್ಬರ ವ್ಯವಹಾರದಲ್ಲಿ ನಿಮಗೇನು ತಿಳಿದಿದೆಯೋ ಅದೆಲ್ಲ ಸತ್ಯವನ್ನು ಹೇಳಿರಿ. ನೀವೇ ಈ ವಿಷಯದಲ್ಲಿ ಸಾಕ್ಷಿಗಳು, ಎಂದು ನ್ಯಾಯಪತಿಯು ಕೇಳಬೇಕು.

ಸತ್ಯಂ ಸಾಕ್ಷ್ಯೇ ಬ್ರುವನ್ ಸಾಕ್ಷೀ ಲೋಕಾನಾಪ್ನೋತಿ ಪುಷ್ಕಲಾನ್ ।
ಇಹ ಚಾನುತ್ತಮಾಂ ಕೀರ್ತಿಂ ವಾಗೇಷಾ ಬ್ರಹ್ಮಪೂಜಿತಾ ॥ ೮೧

ಸಾಕ್ಷಿ ಹೇಳುವವನು ಸತ್ಯ ಹೇಳಿದರೆ ಸದ್ಗತಿಯು. ಅಲ್ಲದೆ ಈ ಲೋಕದಲ್ಲಿ ಅಪಾರವಾದ ಕೀರ್ತಿಯು. ಇದು ಜಗತ್ಸ್ರಷ್ಟಾರನಿಗೆ ಪ್ರಿಯವಾದ ವಿಷಯವು.

ಸಾಕ್ಷ್ಯೇಽನೃತಂ ವದನ್ ಪಾಶೈರ್ಬಧ್ಯತೇ ವಾರುಣೈರ್ಭೃಶಂ ।
ವಿವಶಃ ಶತಮಾಜಾತೀಸ್ತಸ್ಮಾತ್ಸಾಕ್ಷ್ಯಂ ವದೇದೃತಂ ॥ ೮೨

ಸಾಕ್ಷಿದಾರನು ಸುಳ್ಳು ಹೇಳಿದರೆ ಧರ್ಮಪತಿಯಾದ ವರುಣನ ಬಂಧನವನ್ನು ಹೊಂದುವನು. ಜಲೋದರ ರೋಗ ಬರುವುದು. ನೂರಾರು ಜನ್ಮದಲ್ಲಿ ದುಃಖವಿದೆ. ಆದುದರಿಂದ ಸತ್ಯವನ್ನೇ ಹೇಳಬೇಕು.

ಸತ್ಯೇನ ಪೂಯತೇ ಸಾಕ್ಷೀ ಧರ್ಮಃ ಸತ್ಯೇನ ವರ್ಧತೇ ।
ತಸ್ಮಾತ್ ಸತ್ಯಂ ಹಿ ವಕ್ತವ್ಯಂ ಸರ್ವವರ್ಣೇಷು ಸಾಕ್ಷಿಭಿಃ ॥ ೮೩

ಸಾಕ್ಷಿದಾರನು ಸತ್ಯವಚನದಿಂದ ಪವಿತ್ರನಾಗುವನು. ಧರ್ಮವೃದ್ಧಿಯಾಗುವುದು. ಆದುದರಿಂದ ಎಲ್ಲರೂ ಸತ್ಯವನ್ನೇ ಹೇಳಬೇಕು.

ಆತ್ಮೈವ ಹ್ಯಾತ್ಮನಃ ಸಾಕ್ಷೀ ಗತಿರಾತ್ಮಾ ತಥಾತ್ಮನಃ ।
ಮಾವಮಂಸ್ಥಾಃ ಸ್ವಮಾತ್ಮಾನಂ ನೃಣಾಂ ಸಾಕ್ಷಿಣಮುತ್ತಮಂ ॥ ೮೪

ತನಗೆ ತಾನೇ ಸಾಕ್ಷಿಯು. ತನಗೆ ತಾನೇ ಗತಿಯು. ಆದುದರಿಂದ ಉತ್ತಮವಾದ ಸಾಕ್ಷಿಸ್ಥಾನದಲ್ಲಿರುವ ತಾನು ತನ್ನನ್ನು ಅಸತ್ಯ ವಚನದಿಂದ ಅವಮಾನಿಸಬಾರದು.

ಮನ್ಯಂತೇ ವೈ ಪಾಪಕೃತೋ ನ ಕಶ್ಚಿತ್ಪಶ್ಯತೀತಿ ನಃ ।
ತಾಂಸ್ತು ದೇವಾಃ ಪ್ರಪಶ್ಯಂತಿ ಸ್ವಸ್ಯೈವಾಂತರಪೂರುಷಃ ॥ ೮೫

ಸುಳ್ಳಾಡುವ ಆ ಪಾಪಾತ್ಮರು ತನ್ನನ್ನು ಯಾರೂ ನೋಡುವುದಿಲ್ಲವೆಂಧು ತಿಳಿದಿದ್ದಾರೆ. ತಮ್ಮೊಳಗೆ ಇರುವ ದೇವರು ಅದೆಲ್ಲವನ್ನು ನೋಡುತ್ತಾನೆ ಎಂದು ಅವರು ತಿಳಿಯುವುದಿಲ್ಲ.

ದ್ಯೌರ್ಭೂಮಿರಾಪೋ ಹೃದಯಂ ಚಂದ್ರಾರ್ಕಾಗ್ನಿಯಮಾನಿಲಾಃ ।
ರಾತ್ರಿಃ ಸಂಧ್ಯೇ ಚ ಧರ್ಮಶ್ಚ ವೃತ್ತಜ್ಞಾಃ ಸರ್ವದೇಹಿನಾಂ ॥ ೮೬

ಸ್ವರ್ಗ, ಭೂಮಿ, ನೀರು, ಹೃದಯ, ಚಂದ್ರ, ಸೂರ್ಯ, ಅಗ್ನಿ, ಯಮ, ವಾಯು, ರಾತ್ರಿ, ಸಂಧ್ಯೆ, ಧರ್ಮ ಈ ಅಭಿಮಾನಿ ದೇವತೆಗಳು ಮನುಷ್ಯರ ಸಕಲ ವೃತ್ತಾಂತವನ್ನು ತಿಳಿಯುವರು.

ದೇವಬ್ರಾಹ್ಮಣಸಾನ್ನಿಧ್ಯೇ ಸಾಕ್ಷ್ಯಂ ಪೃಚ್ಛೇದೃತಂ ದ್ವಿಜಾನ್ ।
ಉದಙ್ಮುಖಾನ್ ಪ್ರಾಙ್ಮುಖಾನ್ವಾ ಪೂರ್ವಾಹ್ಣೇ ವೈ ಶುಚಿಃ ಶುಚೀನ್ ॥ ೮೭

ನ್ಯಾಯಪತಿಯು, ಬೆಳಗ್ಗೆ ಶುಚಿಯಾಗಿ, ದೇವತಾಮೂರ್ತಿಗಳ, ಬ್ರಾಹ್ಮಣರ ಸಮ್ಮುಖದಲ್ಲಿ ಶುಚಿಯಾದ ಸಾಕ್ಷಿಯವರನ್ನು ಸಾಕ್ಷಿಯ ವಿಷಯದಲ್ಲಿ ಪ್ರಶ್ನಿಸಬೇಕು.

ಬ್ರೂಹೀತಿ ಬ್ರಾಹ್ಮಣಂ ಪೃಚ್ಛೇತ್ಸತ್ಯಂ ಬ್ರೂಹೀತಿ ಪಾರ್ಥಿವಂ ।
ಗೋಬೀಜಕಾಂಚನೈರ್ವೈಶ್ಯಂ ಶೂದ್ರಂ ಸರ್ವೈಸ್ತು ಪಾತಕೈಃ ॥ ೮೮

ಅಮೇರಿಕದ ಅಂಗಡಿಯಲ್ಲಿ ಮನುಷ್ಯರಿಲ್ಲ. ವಸ್ತುಗಳ ಬೆಲೆಯನ್ನು

ಆದರಲ್ಲಿ ಬರೆದಿರುತ್ತಾರೆ. ಹಣ ತುಂಬಲು ಪೆಟ್ಟಿಗೆಯೂ ಅಲ್ಲೇ ಇದೆ. ಗಿರಾಕಿ ಬೇಕಾದ ಸಾಮಾನು ತೆಗೆದುಕೊಂಡು ಬೆಲೆಯ ಹಣ ಹಾಕಿಹೋಗುವರು ಎಂದು ಹೇಳುವ ಸಮಾಚಾರವನ್ನು ನಂಬುವುದಾದರೆ ಆದರಷ್ಟೆ ಇದು ಸರಿ. ಸಾಕ್ಷಿದಾರನಾಗಿ ಬ್ರಾಹ್ಮಣನು ನಿಂತಿದ್ದರೆ ನ್ಯಾಯಪತಿಯು—"ಹೇಳು" ಎಂದರೆ ಸಾಕು. ಕ್ಷತ್ರಿಯನನ್ನು ಸತ್ಯ ಹೇಳು ಎನ್ನಬೇಕು. ವೈಶ್ಯನಿಗೆ ಚಿನ್ನ, ಬೀಜ, ಗೋವುಗಳ ಸಾಕ್ಷಿಯಾಗಿ ಸತ್ಯ ಹೇಳು ಎಂದು, ಶೂದ್ರನಿಗೆ ಪಾಪವಿದೆ ಸತ್ಯ ಹೇಳು ಎಂದು ಪ್ರಶ್ನವಾಕ್ಯವನ್ನು ನಿಶ್ಚಯಿಸಬಹುದು. ಈಗಲೂ ಶೂದ್ರರು ಪಿಶಾಚಿ, ಭೂತ, ಕೊಲೆಗಳಿಗೆ ಬೆದರುತ್ತಾರೆ.

ಬ್ರಹ್ಮಘ್ನೋ ಯೇ ಸ್ಮೃತಾ ಲೋಕಾ ಯೇ ಚ ಸ್ತ್ರೀಬಾಲಘಾತಿನಃ ।
ಮಿತ್ರದ್ರುಹಃ ಕೃತಘ್ನಸ್ಯ ತೇ ತೇ ಸ್ಯುಬ್ರ್ರುವತೋ ಮೃಷಾ ॥ ೮೯

ಬ್ರಹ್ಮಹತ್ಯೆ, ಸ್ತ್ರೀ, ಬಾಲ ಹತ್ಯೆ, ಮಿತ್ರದ್ರೋಹ, ಕೃತಜ್ಞತೆಯಿಲ್ಲದವನಿಗೆ ಮಾಡಿದವರಿಗೆ ಯಾವ ಪಾಪವಿದೆಯೋ ಆ ಎಲ್ಲ ಪಾಪವು ಸಾಕ್ಷಿಯಲ್ಲಿ ಸುಳ್ಳಾಡಿದವನಿಗೆ ಬರುವುದು.

ಜನ್ಮಪ್ರಭೃತಿ ಯತ್ಕಿಂಚಿತ್ ಪುಣ್ಯಂ ಭದ್ರ ತ್ವಯಾ ಕೃತಂ ।
ತತ್ತೇ ಸರ್ವಂ ಶುನೋ ಗಚ್ಛೇದ್ಯದಿ ಬ್ರೂಯಾಸ್ತ್ವಮನ್ಯಥಾ ॥ ೯೦

ನೀನು ಸುಳ್ಳಾಡಿದರೆ ಹುಟ್ಟಿದಂದಿನಿಂದ ಮಾಡಿದ ಸ್ವಲ್ಪ ಪುಣ್ಯವೂ ನಾಯಿಗೆ ಸೇರುವುದು. ನಿನಗಿಲ್ಲ.

ಏಕೋಽಹಮಸ್ಮೀತ್ಯಾತ್ಮಾನಂ ಯತ್ತ್ವಂ ಕಲ್ಯಾಣ ಮನ್ಯಸೇ ।
ನಿತ್ಯಂ ಸ್ಥಿತಸ್ತೇ ಹೃದ್ಯೇಷಃ ಪುಣ್ಯಪಾಪೇಕ್ಷಿತಾ ಮುನಿಃ ॥ ೯೧

ನಾನು ಒಬ್ಬನು. ಸುಳ್ಳಾಡಿದರೆ ತಿಳಿಯದು ಎಂದು ಇದು ತಪ್ಪು ತಿಳುವಳಿಕೆ. ನಿನ್ನ ಹೃದಯದಲ್ಲಿ ಸರ್ವಜ್ಞಪರಮಾತ್ಮನಿರುವನು.

ಯಮೋ ವೈವಸ್ವತೋ ದೇವೋ ಯಸ್ತವೈಷ ಹೃದಿ ಸ್ಥಿತಃ ।
ತೇನ ಚೇದವಿವಾದಸ್ತೇ ಮಾ ಗಂಗಾಂ ಮಾ ಕುರೂನ್‌ಗಮಃ ॥ ೯೨

ಯಮನು ನಿನ್ನ ಹೃದಯದಲ್ಲಿ ಧರ್ಮಪತಿಯಾಗಿರುವಾಗ ನೀನು ಗಂಗೆ, ಕುರುಕ್ಷೇತ್ರ, ಪುಣ್ಯ ಸನ್ನಿಧಿ—ಎಲ್ಲಿಗೂ ಹೋಗುವುದು ಬೇಡ.

ನಗ್ನೋ ಮುಂಡಃ ಕಪಾಲೇನ ಭಿಕ್ಷಾರ್ಥೀ ಕ್ಷುತ್ಪಿಪಾಸಿತಃ ।
ಅಂಧಃ ಶತ್ರುಕುಲಂ ಗಚ್ಛೇದ್ಯಃ ಸಾಕ್ಷ್ಯಮನೃತಂ ವದೇತ್ ॥ ೯೩

ಸಾಕ್ಷಿ ಸುಳ್ಳಾಡಿದವನು ತಲೆ ಬೋಳಿಸಿ ಪಾತ್ರೆ ಹಿಡಿದು ಹಸಿವು ಬಾಯಾರಿಕೆಯಿಂದ ಕುರುಡನಾಗಿ ಶತ್ರುವಿನಲ್ಲಿ ಭಿಕ್ಷೆ ಬೇಡಬೇಕು.

ಅವಾಕ್ ಶಿರಾಸ್ತಮಸ್ಯಂಧೇ ಕಿಲ್ಬಿಷೀ ನರಕಂ ವ್ರಜೇತ್ ।
ಯಃ ಪ್ರಶ್ನಂ ವಿತಥಂ ಬ್ರೂಯಾತ್ ಪೃಷ್ಟಃ ಸನ್ಧರ್ಮನಿಶ್ಚಯೇ ॥ ೯೪

ಧರ್ಮನಿಶ್ಚಯಕ್ಕಾಗಿ ಕೇಳುವಾಗ ಸುಳ್ಳಾಡಿದವನು ತಲೆ ಕೆಳಗಾಗಿ ಕತ್ತಲು ನರಕದಲ್ಲಿರಬೇಕು.

ಅಂಧೋ ಮತ್ಸ್ಯಾನಿವಾಶ್ನಾತಿ ಸ ನರಃ ಕಂಟಕೈಃ ಸಹ ।
ಯೋ ಭಾಷತೇಽರ್ಥವೈಕಲ್ಯಮಪ್ರತ್ಯಕ್ಷಂ ಸಭಾಂ ಗತಃ ॥ ೯೫

ಸಭೆಯಲ್ಲಿ ಸುಳ್ಳು ಹೇಳಿದರೆ ಮುಳ್ಳುಮೀನನ್ನು ಕುರುಡನು ನುಂಗಿ ಗಂಟಲು ಸೀಳಿದಂತಾಗುವುದು.

ಯಸ್ಯ ವಿದ್ವಾನ್ಹಿ ವದತಃ ಕ್ಷೇತ್ರಜ್ಞೋ ನಾಭಿಶಂಕತೇ ।
ತಸ್ಮಾನ್ನ ದೇವಾಃ ಶ್ರೇಯಾಂಸಂ ಲೋಕೇಽನ್ಯಂ ಪುರುಷಂ ವಿದುಃ ॥ ೯೬

ಶಂಕಿಸಲಾರದಂತಹ ಸತ್ಯವನ್ನು ಹೇಳುವವನಿಗಿಂತ ಉತ್ತಮನು ಬೇರೆ ಯಾರೂ ಇಲ್ಲವೆಂದು ದೇವತೆಗಳೂ ಹೇಳುವರು.

ಯಾವತೋ ಬಾಂಧವಾನ್ ಯಸ್ಮಿನ್ ಹಂತಿ ಸಾಕ್ಷ್ಯೇಽನೃತಂ ವದನ್ ।
ತಾವತಃ ಸಂಖ್ಯಯಾ ತಸ್ಮಿನ್ ಶೃಣು ಸೌಮ್ಯಾನುಪೂರ್ವಶಃ ॥ ೯೭

ಸುಳ್ಳು ಸಾಕ್ಷ್ಯ ಹೇಳುವುದರಿಂದ ತನ್ನ ಬಂಧುಗಳಿಗೆ ಎಷ್ಟು ಪೀಡೆಯಾಗುವುದೆಂಬುದನ್ನು ಕ್ರಮವಾಗಿ ಹೇಳುತ್ತೇನೆ.

ಪಂಚ ಪಶ್ವನೃತೇ ಹಂತಿ ದಶ ಹಂತಿ ಗವಾಽನೃತೇ ।
ಶತಮಶ್ವಾನೃತೇ ಹಂತಿ ಸಹಸ್ರಂ ಪುರುಷಾನೃತೇ ॥ ೯೮

ಪಶುವಿನ ವ್ಯವಹಾರದಲ್ಲಿ ಸುಳ್ಳಾಡಿದರೆ ಐದು ಬಂಧುಗಳಿಗೆ, ಗೋವಿನಲ್ಲಿ ಹತ್ತು ಪಿತೃಗಳಿಗೆ, ಕುದುರೆಯಲ್ಲಿ ನೂರು ಬಂಧುಗಳಿಗೆ, ಮನುಷ್ಯನಲ್ಲಿ ಸಾವಿರ ಬಂಧುಗಳಿಗೆ ಪೀಡೆಯಿದೆ.

ಹಂತಿ ಜಾತಾನಜಾತಾಂಶ್ಚ ಹಿರಣ್ಯಾರ್ಥೇಽನೃತಂ ವದನ್ ।
ಸರ್ವಂ ಭೂಮ್ಯನೃತೇ ಹಂತಿ ಮಾ ಸ್ಮ ಭೂಮ್ಯನೃತಂ ವದೀಃ ॥ ೯೯

ಚಿನ್ನಕ್ಕಾಗಿ ಸುಳ್ಳಾಡಿದರೆ ಹುಟ್ಟಿದವರು, ಹುಟ್ಟುವವರು ಎಲ್ಲರಿಗೂ ದುಃಖವು. ಭೂಮಿಗೆ ಸುಳ್ಳಾಡಿದರೆ ಸರ್ವನಾಶವು. ಆದುದರಿಂದ ಸುಳ್ಳಾಡಬಾರದು.

ಅಪ್ಸು ಭೂಮಿವದಿತ್ಯಾಹುಃ ಸ್ತ್ರೀಣಾಂ ಭೋಗೇ ಚ ಮೈಥುನೇ ।
ಅಬ್ಜೇಷು ಚೈವ ರತ್ನೇಷು ಸರ್ವೇಷ್ವಶ್ಮಮಯೇಷು ಚ ॥ ೧೦೦

ನೀರು, ಸ್ತ್ರೀಭೋಗ, ಮುತ್ತು, ರತ್ನ, ವಜ್ರ ಇತ್ಯಾದಿಗಳ ವಿಷಯದಲ್ಲಿ ಸುಳ್ಳಾಡಿದರೆ ಸರ್ವನಾಶವು.

ಏತಾನ್ ದೋಷಾನವೇಕ್ಷ್ಯ ತ್ವಂ ಸರ್ವಾನನೃತಭಾಷಣೇ ।
ಯಥಾಶ್ರುತಂ ಯಥಾದೃಷ್ಟಂ ಸರ್ವಮೇವಾಂಜಸಾ ವದ ॥ ೧೦೧

ಸುಳ್ಳಾಡಿದರೆ ಇರುವ ಇಂತಹ ಪಾಪಗಳನ್ನು ನೀನು ತಿಳಿದು, ನೋಡಿದಂತೆ–ಕೇಳಿದಂತೆ ಸರಿಯಾಗಿ ಹೇಳು. ಎಂದು ನ್ಯಾಯಪತಿಯು ತಿಳಿಸಬೇಕು.

ಗೋರಕ್ಷಕಾನ್ ವಾಣಿಜಿಕಾನ್ ತಥಾ ಕಾರುಕುಶೀಲವಾನ್ ।
ಪ್ರೇಷ್ಯಾನ್ ವಾರ್ಧುಷಿಕಾಂಶ್ಚೈವ ವಿಪ್ರಾನ್ ಶೂದ್ರವದಾಚರೇತ್ ॥ ೧೦೨

ಗೋರಕ್ಷಣೆ, ವಾಣಿಜ್ಯ, ಅಡಿಗೆ, ನೃತ್ಯ, ಬಡ್ಡಿ ಮೊದಲಾದ ಕಸುಬಿನಲ್ಲಿರುವವರನ್ನು ಸಾಮಾನ್ಯರಂತೆ ಪ್ರಶ್ನಿಸಬೇಕು.

ತದ್ವದನ್ ಧರ್ಮತೋಽರ್ಥೇಷು ಜಾನನ್ನಪ್ಯನ್ಯಥಾ ನರಃ ।
ನ ಸ್ವರ್ಗಾಚ್ಚ್ಯವತೇ ಲೋಕಾದ್ದೈವೀಂ ವಾಚಂವದಂತಿ ತಾಂ ॥ ೧೦೩

ವಸ್ತುಸ್ಥಿತಿಯನ್ನು ತಿಳಿದೂ ದಯೆಯಿಂದ ಅನ್ಯಥಾ ಹೇಳಿದರೆ ಅದು ದೇವವಾಣಿಸಮವು, ಪಾಪವಿಲ್ಲ. ಅಂತಹ ಸಂದರ್ಭವು—

ಶೂದ್ರವಿಟ್‌ಕ್ಷತ್ರವಿಪ್ರಾಣಾಂ ಯತ್ರರ್ತೋಕ್ತೌ ಭವೇದ್ವಧಃ ।
ತತ್ರ ವಕ್ತವ್ಯಮನೃತಂ ತದ್ಧಿ ಸತ್ಯಾದ್ವಿಶಿಷ್ಯತೇ ॥ ೧೦೪

ಸುಳ್ಳಾಡಿದ್ದರಿಂದ ಪ್ರಾಣ ಉಳಿಯುವುದಾದರೆ ಅದು ಸತ್ಯಕ್ಕೆ ಕಡಮೆಯಲ್ಲ. ಆದರೆ ಪ್ರಾಯಶ್ಚಿತ್ತ ಬೇಕು.

ವಾಗ್ದೈವತ್ಯೈಶ್ಚ ಚರುಭಿರ್ಯಜೇರಂಸ್ತೇ ಸರಸ್ವತೀಂ ।
ಅನೃತಸ್ಯೈನಸಸ್ತಸ್ಯ ಕುರ್ವಾಣಾ ನಿಷ್ಕೃತಿಂ ಪರಾಂ ॥ ೧೦೫

ಪ್ರಾಣರಕ್ಷಣೆಗಾಗಿ ಮಾಡಿದ ಅಸತ್ಯವಚನ ಪಾಪದ ನಿವೃತ್ತಿಗೆ ವಾಗ್ದೇವತಾಮಂತ್ರಗಳಿಂದ ಚರುಹೋಮ ಮಾಡಬೇಕು.

ಕೂಷ್ಮಾಂಡೈರ್ವಾಪಿ ಜುಹುಯಾದ್ಘೃತಮಗ್ನೌ ಯಥಾವಿಧಿ ।
ಉದಿತ್ಯೃಚಾ ವಾ ವಾರುಣ್ಯಾ ತೃಚೇನಾಬ್ದೈವತೇನ ವಾ ॥ ೧೦೬

ಕೂಷ್ಮಾಂಡ ಮಂತ್ರಗಳಿಂದ ವರುಣ ದೇವತೆಯ ಉದುತ್ ಇತ್ಯಾದಿ ಮಂತ್ರದಿಂದ ಜಲದೇವತಾ ತೃಚದಿಂದ ಒಂದರಿಂದ ಘೃತಹೋಮ ಮಾಡಬೇಕು.

ತ್ರಿಪಕ್ಷಾದಬ್ರುವನ್ ಸಾಕ್ಷ್ಯಂಋಣಾದಿಷು ನರೋಽಗದಃ ।
ತದೃಣಂ ಪ್ರಾಪ್ನುಯಾತ್ಸರ್ವಂ ದಶಬಂಧಂ ಚ ಸರ್ವತಃ ॥ ೧೦೭

ಆರೋಗ್ಯವಿರುವಾಗ ೪೫ ದಿನವರೆಗೂ ಸಾಕ್ಷಿ ಹೇಳದಿದ್ದರೆ ವಿವಾದ ಧನವನ್ನು ಸಾಲಕೊಟ್ಟವನಿಗೆ ಸಾಕ್ಷಿದಾರನು ಕೊಡಬೇಕು. ಮತ್ತು ಹತ್ತನೆ ಒಂದಂಶ ರಾಜನಿಗೆ ದಂಡತೆರಬೇಕು.

ಯಸ್ಯ ದೃಶ್ಯೇತ ಸಪ್ತಾಹಾದುಕ್ತವಾಕ್ಯಸ್ಯ ಸಾಕ್ಷಿಣಃ ।
ರೋಗೋಽಗ್ನಿರ್ಜ್ಞಾತಿಮರಣಂ ಋಣಂ ದಾಪ್ಯೋ ದಮಂ ಚ ಸಃ ॥ ೧೦೮

ಸಾಕ್ಷಿ ಹೇಳಿ ಏಳುದಿನಗಳಲ್ಲಿ ರೋಗ, ಅಗ್ನಿ, ಜ್ಞಾತಿಮರಣ ಉಂಟಾದರೆ ಆಗಲೂ ಸಾಲವನ್ನು–ದಂಡವನ್ನು ಅವನು ಕೊಡಬೇಕು.

ಅಸಾಕ್ಷಿಕೇಷು ತ್ವರ್ಥೇಷು ಮಿಥೋ ವಿವದಮಾನಯೋಃ ।
ಅವಿಂದಂಸ್ತತ್ವತಃ ಸತ್ಯಂ ಶಪಥೇನಾಪಿ ಲಂಭಯೇತ್ ॥ ೧೦೯

ಸಾಕ್ಷಿಯಿಲ್ಲದೆ ಇದ್ದ ವಿವಾದಪರಿಹಾರಕ್ಕೆ ಶಪಥ ಮಾಡಿಸಬೇಕು.

ಮಹರ್ಷಿಭಿಶ್ಚ ದೇವೈಶ್ಚ ಕಾರ್ಯಾರ್ಥಂ ಶಪಥಾಃ ಕೃತಾಃ ।
ವಸಿಷ್ಠಶ್ಚಾಪಿ ಶಪಥಂ ಶೇಪೇ ಪೈಜವನೇ ನೃಪೇ ॥ ೧೧೦

ಸಂಶಯ ನಿವೃತ್ತಿಗೆ ದೇವತೆಗಳೂ, ಮಹರ್ಷಿಗಳೂ ಶಪಥ ಮಾಡಿದ್ದಾರೆ. ಪೈಜವನ ಸುದಾಸನಲ್ಲಿ ವಸಿಷ್ಠನು ನೂರು ಜನ ಮಕ್ಕಳಿಗಾಗಿ ಪ್ರತಿಜ್ಞೆ ಮಾಡಿದ್ದಾನೆ.

ನ ವೃಥಾ ಶಪಥಂ ಕುರ್ಯಾತ್ ಸ್ವಲ್ಪೇಽಪ್ಯರ್ಥೇ ನರೋ ಬುಧಃ ।
ವೃಥಾ ಹಿ ಶಪಥಂ ಕುರ್ವನ್ ಪ್ರೇತ್ಯ ಚೇಹ ಚ ನಶ್ಯತಿ ॥ ೧೧೧

ಸ್ವಲ್ಪಕ್ಕಾಗಿ ವೃಥಾ ಶಪಥ ಮಾಡಿದರೆ ಎಲ್ಲಿಯೂ ಶುಭವಿಲ್ಲ.

ಕಾಮಿನೀಷು ವಿವಾಹೇಷು ಗವಾಂ ಭಕ್ಷ್ಯೇ ತಥೇಂಧನೇ ।
ಬ್ರಾಹ್ಮಣಾಭ್ಯುಪಪತ್ತೌ ಚ ಶಪಥೇ ನಾಸ್ತಿ ಪಾತಕಂ ॥ ೧೧೨

ಕಾಮಿನಿಯರಲ್ಲಿ, ವಿವಾಹದಲ್ಲಿ, ಗೋ, ಆಹಾರದಲ್ಲಿ, ಸಮಿತ್ತುಗಳಲ್ಲಿ, ಬ್ರಾಹ್ಮಣ ರಕ್ಷಣೆಯಲ್ಲಿ ವೃಥಾ ಶಪಥ ಮಾಡಿದರೆ ಪಾಪವಿಲ್ಲ.

ಸತ್ಯೇನ ಶಾಪಯೇದ್ವಿಪ್ರಂ ಕ್ಷತ್ರಿಯಂ ವಾಹನಾಯುಧೈಃ ।
ಗೋಬೀಜಕಾಂಚನೈರ್ವೈಶ್ಯಂ ಶೂದ್ರಂ ಸರ್ವೈಸ್ತು ಪಾತಕೈಃ ॥ ೧೧೩

ಶೂದ್ರನನ್ನು ಪಾಪಗಳ, ವೈಶ್ಯನನ್ನು ಧನಧಾನ್ಯಗಳ, ಕ್ಷತ್ರಿಯನನ್ನು

ವಾಹನಾಯುಧಗಳ, ಬ್ರಾಹ್ಮಣನನ್ನು ಸತ್ಯದ ಆಣೆಯಾಗಿ ಶಪಥ ಮಾಡಿಸ ಬೇಕು.

ಅಗ್ನಿಂ ವಾಹಾರಯೇದೇನಮಪ್ಸು ಚೈನಂ ನಿಮಜ್ಜಯೇತ್ ।
ಪುತ್ರದಾರಸ್ಯ ವಾಪ್ಯೇನಂ ಶಿರಾಂಸಿ ಸ್ಪರ್ಶಯೇತ್ಪೃಥಕ್ ॥ ೧೧೪

ಆಪಾದಿತನನ್ನು ಬೆಂಕಿಯಲ್ಲಿ ನಡೆಸಬೇಕು. ನೀರಲ್ಲಿ ಮುಳುಗಿಸಬೇಕು. ಹೆಂಡತಿ ಮಕ್ಕಳ ತಲೆ ಮುಟ್ಟಿಸಬೇಕು.

ಯಮಿದ್ಧೋ ನ ದಹತ್ಯಗ್ನಿರಾಪೋ ನೋನ್ಮಜ್ಜಯಂತಿ ಚ ।
ನ ಚಾರ್ತಿಮೃಚ್ಛತಿ ಕ್ಷಿಪ್ರಂ ಸ ಜ್ಞೇಯಃ ಶಪಥೇ ಶುಚಿಃ ॥ ೧೧೫

ಉರಿಯುವ ಬೆಂಕಿ ಸುಡದಿದ್ದರೆ, ನೀರಲ್ಲಿ ತೇಲುವುದಿಲ್ಲವೋ, ದುಃಖ ಪಡುವುದಿಲ್ಲವೋ ಅವನು ಶುಚಿ ಸತ್ಯವಂತನೆಂದು ತಿಳಿಯಬೇಕು.

ವತ್ಸಸ್ಯ ಹ್ಯಭಿಶಸ್ತಸ್ಯ ಪುರಾ ಭ್ರಾತ್ರಾ ಯವೀಯಸಾ ।
ನಾಗ್ನಿರ್ದದಾಹ ರೋಮಾಪಿ ಸತ್ಯೇನ ಜಗತಃ ಸ್ಪಶಃ ॥ ೧೧೬

ಕಿರಿತಮ್ಮನು ಅಣ್ಣನಾದ ವತ್ಸನನ್ನು ನಿಂದಿಸಿದಾಗ, ವತ್ಸನು ಶಪಥ ಮಾಡಿದಾಗ ಬೆಂಕಿಯಲ್ಲಿ ರೋಮವೂ ಸುಡಲಿಲ್ಲ. ಸತ್ಯದಸಾಕ್ಷಿಯು ಅಗ್ನಿಯು.

ಯಸ್ಮಿನ್ ಯಸ್ಮಿನ್ ವಿವಾದೇ ತು ಕೌಟಸಾಕ್ಷ್ಯಂ ಕೃತಂ ಭವೇತ್ ।
ತತ್ತತ್ಕಾರ್ಯಂ ನಿವರ್ತೇತ ಕೃತಂ ಚಾಪ್ಯಕೃತಂ ಭವೇತ್ ॥ ೧೧೭

ವಿವಾದದಲ್ಲಿ ಸಾಕ್ಷಿಯು ವಿಚಾರ ಮಧ್ಯದಲ್ಲಿ ಸುಳ್ಳೆಂದು ತಿಳಿದರೆ ಪುನಃ ವಿಚಾರವನ್ನು ಆರಂಭಿಸಬೇಕು.

ಲೋಭಾನ್ಮೋಹಾದ್ಭಯಾನ್ಮೈತ್ರಾತ್ಕಾಮಾತ್ಕ್ರೋಧಾತ್ತಥೈವ ಚ ।
ಅಜ್ಞಾನಾದ್ಬಾಲಭಾವಾಚ್ಚ ಸಾಕ್ಷ್ಯಂ ವಿತಥಮುಚ್ಯತೇ ॥ ೧೧೮

ಆಸೆ, ಅಜ್ಞಾನ, ಹೆದರಿಕೆ, ಗೆಳೆತನ, ಕಾಮ, ಸಿಟ್ಟು, ತಿಳಿಯದೆ, ಬಾಲತ್ವ ಇವುಗಳ ಕಾರಣದಿಂದ ಸುಳ್ಳು ಸಾಕ್ಷಿಯಿರಬಹುದು.

ಏಷಾಮನ್ಯತಮೇ ಸ್ಥಾನೇ ಯಃ ಸಾಕ್ಷ್ಯಮನೃತಂ ವದೇತ್ ।
ತಸ್ಯ ದಂಡವಿಶೇಷಾಂಸ್ತು ಪ್ರವಕ್ಷ್ಯಾಮ್ಯನುಪೂರ್ವಶಃ ॥ ೧೧೯

ಯಾವನೊಬ್ಬನು ಮೇಲಿನ ಯಾವದೊಂದು ಉದ್ದೇಶದ ಮೂಲಕ ಸುಳ್ಳುಸಾಕ್ಷಿಯನ್ನು ನುಡಿದಲ್ಲಿ ಅಂಥವನಿಗೆ ವಿಶಿಷ್ಟವಾದ ಶಿಕ್ಷೆಯನ್ನು ಕೊಡಬೇಕೆಂದು ಸೂಚಿಸುವೆನು.

ಲೋಭಾತ್ಸಹಸ್ರಂ ದಂಡ್ಯಸ್ತು ಮೋಹಾತ್ಪೂರ್ವಂ ತು ಸಾಹಸಂ ।
ಭಯಾದ್ವೌ ಮಧ್ಯಮೌ ದಂಡೌ ಮೈತ್ರಾತ್ಪೂರ್ವಂ ಚತುರ್ಗುಣಂ ॥ ೧೨೦

ಲೋಭದಿಂದ ಸಾವಿರ ಹಣ, ಮೋಹದಿಂದ ಪ್ರಥಮಸಾಹಸ, ಭಯದಿಂದ ಮಧ್ಯಮ ಸಾಹಸ, ಮಿತ್ರತ್ವದಿಂದ ಪ್ರಥಮ ಸಾಹಸ ನಾಲ್ಕು ದಂಡನೆಯು.

ಕಾಮಾದ್ದಶಗುಣಂ ಪೂರ್ವಂ ಕ್ರೋಧಾತ್ತು ತ್ರಿಗುಣಂ ಪರಂ ।
ಅಜ್ಞಾನಾದ್ದ್ವೇ ಶತೇ ಪೂರ್ಣೇ ಬಾಲಿಶ್ಯಾಚ್ಛತಮೇವ ತು ॥ ೧೨೧

ಕಾಮದಿಂದ ಸುಳ್ಳಾಡಿದರೆ ಹತ್ತು ಪ್ರಥಮಸಾಹಸ, ಕ್ರೋಧದಿಂದ ಮೂರು ಮಧ್ಯಮಸಾಹಸ, ಅಜ್ಞಾನದಿಂದ ಇನ್ನೂರು ಹಣ, ಬಾಲಿಶ್ಯದಿಂದ ನೂರು ಹಣ ದಂಡನೆಯು.

ಏತಾನಾಹುಃ ಕೌಟಸಾಕ್ಷ್ಯೇ ಪ್ರೋಕ್ತಾನ್ ದಂಡಾನ್ಮನೀಷಿಭಿಃ ।
ಧರ್ಮಸ್ಯಾವ್ಯಭಿಚಾರಾರ್ಥಮಧರ್ಮನಿಯಮಾಯ ಚ ॥ ೧೨೨

ಸತ್ಯರಕ್ಷಣೆ, ಅಸತ್ಯ ನಿವಾರಣೆಗೆ ಸುಳ್ಳು ಸಾಕ್ಷ್ಯದಲ್ಲಿ ಈ ದಂಡನೆಗಳು ಅವಶ್ಯ.

ಕೌಟಸಾಕ್ಷ್ಯಂ ತು ಕುರ್ವಾಣಾಂಸ್ತ್ರೀನ್ ವರ್ಣಾನ್ ಧಾರ್ಮಿಕೋ ನೃಪಃ ।
ಪ್ರವಾಸಯೇದ್ದಂಡಯಿತ್ವಾ ಬ್ರಾಹ್ಮಣಂ ತು ವಿವಾಸಯೇತ್ ॥ ೧೨೩

ಸುಳ್ಳುಸಾಕ್ಷಿ ಹೇಳಿದುದು ತಿಳಿದುಬಂದರೆ ಅವರನ್ನು ಊರಿನಿಂದ ಓಡಿಸಿಬಿಡಬೇಕು. ಉತ್ತಮರಿಗೆ ದಂಡನೆ ಬೇಡ.

ದಶ ಸ್ಥಾನಾನಿ ದಂಡಸ್ಯ ಮನುಃ ಸ್ವಾಯಂಭುವೋಽಬ್ರವೀತ್ ।
ತ್ರಿಷು ವರ್ಣೇಷು ಯಾನಿ ಸ್ಯುರಕ್ಷತೋ ಬ್ರಾಹ್ಮಣೋ ವ್ರಜೇತ್ ॥ ೧೨೪

ಹತ್ತು ವಿಧಗಳಲ್ಲಿ ದಂಡನೆ ಮಾಡಬಹುದು. ಉತ್ತಮನಿಗೆ ದೇಹ ದಂಡನೆ ಬೇಡ.

ಉಪಸ್ಥಮುದರಂ ಜಿಹ್ವಾ ಹಸ್ತೌ ಪಾದೌ ಚ ಪಂಚಮಂ ।
ಚಕ್ಷುರ್ನಾಸಾ ಚ ಕರ್ಣೌ ಚ ಧನಂ ದೇಹಸ್ತಥೈವ ಚ ॥ ೧೨೫

ಗುಪ್ತೇಂದ್ರಿಯ, ಹೊಟ್ಟೆ, ನಾಲಿಗೆ, ಕೈ, ಕಾಲು, ಕಣ್ಣು, ಮೂಗು, ಕಿವಿ ದೇಹಗಳಲ್ಲಿ ನೋಯಿಸಬಹುದು.

ಅನುಬಂಧಂ ಪರಿಜ್ಞಾಯ ದೇಶಕಾಲೌ ಚ ತತ್ತ್ವತಃ ।
ಸಾರಾಪರಾಧೌ ಚಾಲೋಕ್ಯ ದಂಡಂ ದಂಡ್ಯೇಷು ಪಾತಯೇತ್ ॥ ೧೨೬

ಅಪರಾಧ, ಬೆಲೆ, ದೇಶ, ಕಾಲಗಳನ್ನು ನೋಡಿ ದಂಡನೆಯನ್ನು ನಿರ್ಣಯಿಸಬೇಕು.

ಅಧರ್ಮದಂಡನಂ ಲೋಕೇ ಯಶೋಘ್ನಂ ಕೀರ್ತಿನಾಶನಂ ।
ಅಸ್ವರ್ಗ್ಯಂ ಚ ಪರತ್ರಾಪಿ ತಸ್ಮಾತ್ತತ್ಪರಿವರ್ಜಯೇತ್ ॥ ೧೨೭

ಅಳತೆಮೀರಿದ ದಂಡನೆಯು ಪಾಪಕರವು.

ಅದಂಡ್ಯಾನ್ ದಂಡಯನ್ ರಾಜಾ ದಂಡ್ಯಾಂಶ್ಚೈವಾಪ್ಯದಂಡಯನ್ ।
ಅಯಶೋ ಮಹದಾಪ್ನೋತಿ ನರಕಂ ಚೈವ ಗಚ್ಛತಿ ॥ ೧೨೮

ಅಪರಾಧಿಯಲ್ಲದವನನ್ನು ದಂಡಿಸಿದರೂ, ಅಪರಾಧಿಯನ್ನು ದಂಡಿಸದೆ ಬಿಟ್ಟರೂ ಪಾಪವಿದೆ, ಅಪಕೀರ್ತಿಯಿದೆ.

ವಾಗ್ದಂಡಂ ಪ್ರಥಮಂ ಕುರ್ಯಾದ್ಧಿಗ್ದಂಡಂ ತದನಂತರಂ ।
ತೃತೀಯಂ ಧನದಂಡಂ ತು ವಧದಂಡಮತಃ ಪರಂ ॥ ೧೨೯

ಬಾಯಿಂದ ಗದರಿಸುವುದು ಒಂದನೆ ದಂಡನೆ. ಧಿಕ್ ಎಂದು ನಿಂದಿಸು

ವುದು ಎರಡನೆಯದು. ಧನದಂಡನೆ ಮೂರನೆಯದು. ನಾಲ್ಕನೆಯದು ಹೊಡೆಯುವುದು, ಕೊಯ್ಯುವುದು.

ವಧೇನಾಪಿ ಯದಾ ತ್ವೇತಾನ್ನಿಗ್ರಹೀತುಂ ನ ಶಕ್ನುಯಾತ್ ।
ತದೈಷು ಸರ್ವಮಪ್ಯೇತತ್ ಪ್ರಯುಂಜೀತ ಚತುಷ್ಟಯಂ ॥ ೧೩೦

ದೊಡ್ಡ ಅಪರಾಧಕ್ಕೆ ಈ ನಾಲ್ಕನ್ನೂ ಉಪಯೋಗಿಸಬಹುದು.

ಲೋಕಸಂವ್ಯವಹಾರಾರ್ಥಂ ಯಾಃ ಸಂಜ್ಞಾ ಪ್ರಥಿತಾ ಭುವಿ ।
ತಾಮ್ರರೂಪ್ಯಸುವರ್ಣಾನಾಂ ತಾಃ ಪ್ರವಕ್ಷ್ಯಾಮ್ಯಶೇಷತಃ ॥ ೧೩೧

ತಾಮ್ರ, ಚಿನ್ನ, ಬೆಳ್ಳಿಗಳ ಅಳತೆ ತೂಕಗಳನ್ನು ಲೋಕವ್ಯವಹಾರಕ್ಕೆ ಪ್ರಚಾರದಲ್ಲಿರುವಂತೆ ತಿಳಿಸುತ್ತೇನೆ.

ಜಾಲಾಂತರಗತೇ ಭಾನೌ ಯತ್ಸೂಕ್ಷ್ಮಂ ದೃಶ್ಯತೇ ರಜಃ ।
ಪ್ರಥಮಂ ತತ್ಪ್ರಮಾಣಾನಾಂ ತ್ರಸರೇಣುಂ ಪ್ರಚಕ್ಷತೇ ॥ ೧೩೨

ಸೂರ್ಯನ ಬೆಳಕಿನಲ್ಲಿ ಗಾಳಿಗೆ ಹಾರುತ್ತ ಇರುವ ಅತಿ ಚಿಕ್ಕದು ತ್ರಸರೇಣು ಎಂದು ಕರೆಯಲ್ಪಡುವುದು.

ತ್ರಸರೇಣವೋಽಷ್ಟೌ ವಿಜ್ಞೇಯಾ ಲಿಕ್ಷೈಕಾ ಪರಿಮಾಣತಃ ।
ತಾ ರಾಜಸರ್ಷಪಸ್ತಿಸ್ರಸ್ತೇ ತ್ರಯೋ ಗೌರಸರ್ಷಪಃ ॥ ೧೩೩

೩ ತ್ರಸರೇಣು=೧ ಲಿಕ್ಷಾ; ೩ ಲಿಕ್ಷಾ=೧ ರಾಜಸರ್ಷಪ; ೩ ರಾಜಸರ್ಷಪ= ೧ ಗೌರಸರ್ಷಪ.

ಸರ್ಷಪಾಃ ಷಟ್ ಯವೋ ಮಧ್ಯಸ್ತ್ರಿಯವಂ ತ್ವೇಕಕೃಷ್ಣಲಂ ।
ಪಂಚಕೃಷ್ಣಲಕೋ ಮಾಷಸ್ತೇ ಸುವರ್ಣಸ್ತು ಷೋಡಶ ॥ ೧೩೪

೬ ಸರ್ಷಪ = ೧ ಯವ; ೩ ಯವ = ೧ ಕೃಷ್ಣಲ = ರಕ್ತಿಕಾ; ೩ ರಕ್ತಿಕಾ= ೧ ಮಾಷ – ೧೬ ಮಾಷ = ೧ ಸುವರ್ಣ.

ಪಲಂ ಸುವರ್ಣಾಶ್ಚತ್ವಾರಃ ಪಲಾನಿ ಧರಣಂ ದಶ ।
ದ್ವೇ ಕೃಷ್ಣಲೇ ಸಮಧೃತೇ ವಿಜ್ಞೇಯೋ ರೌಪ್ಯಮಾಷಕಃ ॥ ೧೩೫

೪ ಸುವರ್ಣ = ೧ ಪಲ; ೧೦ ಪಲ = ೧ ಧರಣ; ೨ – ರಕ್ತಿಕಾ = ೧ ರೌಪ್ಯಮಾಷ.

ತೇ ಷೋಡಶ ಸ್ಯಾದ್ಧರಣಂ ಪುರಾಣಶ್ಚೈವ ರಾಜತಃ ।
ಕಾರ್ಷಾಪಣಸ್ತು ವಿಜ್ಞೇಯಸ್ತಾಮ್ರಿಕಃ ಕಾರ್ಷಿಕಃ ಪಣಃ ॥ ೧೩೬

೧೬ ರೌಪ್ಯಮಾಷ = ೧ ರೌಪ್ಯಧರಣ; ೧ ಕಾರ್ಷಿಕ = ೧ ಕಾರ್ಷಾಪಣ; ೧ ಪಲ = ೪ ಕಾರ್ಷಿಕ ಕಾರ್ಷಾಪಣ=ಪಣ ಇದು ತಾಮ್ರದ ನಾಣ್ಯ.

ಧರಣಾನಿ ದಶ ಜ್ಞೇಯಃ ಶತಮಾನಸ್ತು ರಾಜತಃ ।
ಚತುಃಸೌವರ್ಣಿಕೋ ನಿಷ್ಕೋ ವಿಜ್ಞೇಯಸ್ತು ಪ್ರಮಾಣತಃ ॥ ೧೩೭

೧೦ ಧರಣ = ೧ ಶತಮಾನರಾಜತ; ೪ ಸುವರ್ಣ = ೧ ನಿಷ್ಕ.

ಪಣಾನಾಂ ದ್ವೇ ಶತೇ ಸಾರ್ಧೇ ಪ್ರಥಮಃ ಸಾಹಸಃ ಸ್ಮೃತಃ ।
ಮಧ್ಯಮಃ ಪಂಚ ವಿಜ್ಞೇಯಃ ಸಹಸ್ರಂ ತ್ವೇವ ಚೋತ್ತಮಃ ೧೩೮

೨೫೦ ಪಣ = ಸುವರ್ಣ = ಪ್ರಥಮಸಾಹಸ; ೫೦೦ ಪಣ = ಮಧ್ಯಮ ಸಾಹಸ – ೧೦೦೦ ಪಣ = ಉತ್ತಮ ಸಾಹಸ.

ಋಣೇ ದೇಯೇ ಪ್ರತಿಜ್ಞಾತೇ ಪಂಚಕಂ ಶತಮರ್ಹತಿ ।
ಅಪಹ್ನವೇ ತದ್ದ್ವಿಗುಣಂ ತನ್ಮನೋರನುಶಾಸನಂ ॥ ೧೩೯

ಸಾಲಗಾರನು ನ್ಯಾಯಸಭೆಯಲ್ಲಿ ಸಾಲವನ್ನು ಒಪ್ಪಿಕೊಂಡರೆ ಸಾಲದ ನೂರಕ್ಕೆ ಐದರಂತೆ ದಂಡನೆ (ಜುಲುಮಾನೆ) ಸಭೆಯಲ್ಲೂ, ನಿರಾಕರಿಸಿದರೆ ನೂರಕ್ಕೆ ಹತ್ತು ಹಣದಂತೆ ದಂಡನೆಯು ಮನುಸಮ್ಮತ.

ವಸಿಷ್ಠವಿಹಿತಾಂ ವೃದ್ಧಿಂ ಸೃಜೇದ್ವಿತ್ತವಿವರ್ಧಿನೀಂ ।
ಅಶೀತಿಭಾಗಂ ಗೃಹ್ಣೀಯಾನ್ಮಾಸಾದ್ವಾರ್ಧುಷಿಕಃ ಶತೇ ॥ ೧೪೦

ಹಣದ ವೃದ್ಧಿಗೆ ವಸಿಷ್ಠನಮತವು ಧರ್ಮವಾಗಿದೆ. ಸಾಲಕೊಟ್ಟವನು ಒಂದು ತಿಂಗಳಿಗೆ ಸಾಲದ ಎಂಬತ್ತನೆ ಒಂದಂಶದಷ್ಟು ಬಡ್ಡಿಯನ್ನು ಪಡೆಯಬಹುದು.

ದ್ವಿಕಂ ಶತಂ ವಾ ಗೃಹ್ಣೀಯಾತ್ಸತಾಂ ಧರ್ಮಮನುಸ್ಮರನ್ ।
ದ್ವಿಕಂ ಶತಂ ಹಿ ಗೃಹ್ಣಾನೋ ನ ಭವತ್ಯರ್ಥಕಿಲ್ಬಿಷೀ ॥ ೧೪೧

ನೂರಕ್ಕೆ ಎರಡರಂತೆ ತಿಂಗಳಿಗೆ ಬಡ್ಡಿ ತಕ್ಕೊಂಡರೆ ತಪ್ಪಿಲ್ಲ.

ದ್ವಿಕಂ ತ್ರಿಕಂ ಚತುಷ್ಕಂ ಚ ಪಂಚಕಂ ಚ ಶತಂ ಸಮಂ।
ಮಾಸಸ್ಯ ವೃದ್ಧಿಂ ಗೃಹ್ಣೀಯಾದ್ವರ್ಣಾನಾಮನುಪೂರ್ವಶಃ ॥ ೧೪೨

ಜ್ಞಾನೋಪಾಸಕರು ಲಾಭದಾಯಕ ವೃತ್ತಿಯನ್ನು ಮಾಡುವುದಿಲ್ಲ. ಆದುದರಿಂದ ಅವರು ಸಾಲ ತೆಗೆದುಕೊಂಡಾಗ ಕಡಿಮೆ ಬಡ್ಡಿಯು. ನೂರಕ್ಕೆ ಎರಡು, ಮೂರು, ನಾಲ್ಕು, ಐದು ಅಂಶ ಬಡ್ಡಿಯನ್ನು ಬ್ರಾಹ್ಮಣಾದಿ ನಾಲ್ಕು ವರ್ಣದವರು ಸಾಲ ತಕ್ಕೊಂಡಾಗ ಕೊಡಬೇಕೆಂದು ನಿಯಮವು. ಈಗಲೂ ಬೇಂಕುಗಳು ಹೆಚ್ಚು ಬಡ್ಡಿ ಪಡೆಯಬಹುದು. ಇತರರಿಗೆ ದರ ಬೇರೆ. ಆದುದರಿಂದ ದೃಷ್ಟಿಕೋನವು ಬೇರಾದಂತೆ ತಾರತಮ್ಯವು ಬರುವುದು.

ನ ತ್ವೇವಾಧೌ ಸೋಪಕಾರೇ ಕೌಸೀದೀಂ ವೃದ್ಧಿಮಾಪ್ನುಯಾತ್ ।
ನ ಚಾಧೇಃ ಕಾಲಸಂರೋಧಾನ್ನಿಸರ್ಗೋsಸ್ತಿ ನ ವಿಕ್ರಯಃ ॥ ೧೪೩

ಆರವಾರ–ಅಡವು ಮುಂತಾದ ರೀತಿಯಲ್ಲಿ ಭೂಮಿ ಗೋವು ಮುಂತಾದುವುಗಳಿಗೆ ಹಣ ಕೊಟ್ಟಾಗ ಹಿಂದೆ ಹೇಳಿದ ರೀತಿಯಲ್ಲಿ ಬಡ್ಡಿ ಇಲ್ಲ. ಆಗ ಬಹಳ ಕಾಲ ಕಳೆಯುವಾಗ ಮೂಲಧನಕ್ಕಿಂತ ಬಡ್ಡಿ ಅಧಿಕವಾಗುವುದು. ಆದುದರಿಂದ ಬಡ್ಡಿ ಕಡಿಮೆಯಾಗಬೇಕು.

ನ ಭೋಕ್ತವ್ಯೋ ಬಲಾದಾಧಿರ್ಭುಂಜಾನೋ ವೃದ್ಧಿಮುತ್ಸೃಜೇತ್।
ಮೂಲ್ಯೇನ ತೋಷಯೇಚ್ಚೈನಮಾಧಿಸ್ತೇನೋsನ್ಯಥಾ ಭವೇತ್ ॥ ೧೪೪

ಆಧಿಶ್ಚೋಪನಿಧಿಶ್ಚೋಭೌ ನ ಕಾಲಾತ್ಯಯಮರ್ಹತಃ ।
ಅವಹಾರ್ಯೌ ಭವೇತಾಂ ತೌ ದೀರ್ಘಕಾಲಮವಸ್ಥಿತೌ ॥ ೧೪೫

ಸಂಪ್ರೀತ್ಯಾ ಭುಜ್ಯಮಾನಾನಿ ನ ನಶ್ಯಂತಿ ಕದಾಚನ ।
ಧೇನುರುಷ್ಟ್ರೋ ವಹನ್ನಶ್ವೋ ಯಶ್ಚ ದಮ್ಯಃ ಪ್ರಯುಜ್ಯತೇ ॥ ೧೪೬

ಯತ್ಕಿಂಚಿದ್ದಶ ವರ್ಷಾಣಿ ಸನ್ನಿಧೌ ಪ್ರೇಕ್ಷತೇ ಧನೀ ।
ಭುಜ್ಯಮಾನಂ ಪರೈಸ್ತೂಷ್ಣೀಂ ನ ಸ ತಲ್ಲಬ್ಧುಮರ್ಹತಿ ॥ ೧೪೭

ಒಂದು ಸೊತ್ತನ್ನು ಒಬ್ಬನು ಹತ್ತು ವರ್ಷದಿಂದ ಅನುಭವಿಸುತ್ತ ಇದ್ದರೂ ನಿರಾಕರಿಸದೆ ಸ್ವಾಮಿಯು ನೋಡುತ್ತಿದ್ದರೆ ಆಗ ಅದರ ಸ್ವಾಮಿತ್ವ ವನ್ನು ಆ ಸ್ವಾಮಿಯು ಕಳಕೊಂಡು ಅನುಭವಿಸಿದವನೇ ಸೊತ್ತಿನ ಸ್ವಾಮಿ ಯಾಗುವನು. ಒತ್ತೆಯಿಟ್ಟು ಬಹಳ ಸಮಯ ಕಳೆದರೂ ಸ್ವಾಮಿಯು ಕೇಳಿದೊಡನೆ ಸೊತ್ತನ್ನು ಕೊಡತಕ್ಕದ್ದು. ವ್ಯಾದೆ ದಾಟುವುದೆಂದು ಇಲ್ಲ.

ಅಜಡಶ್ಚೇದಪೋಗಂಡೋ ವಿಷಯೇ ಚಾಸ್ಯ ಭುಜ್ಯತೇ ।
ಭಗ್ನಂ ತದ್ವ್ಯವಹಾರೇಣ ಭೋಕ್ತಾ ತದ್ದ್ರವ್ಯಮರ್ಹತಿ ॥ ೧೪೮

ಹೆಡ್ಡನು, ಅಪ್ರಾಯಸ್ತನು ಹೊರತು ಇತರರ ಸೊತ್ತನ್ನು ಇತರರು ಅನುಭವಿಸುವದನ್ನು ಸ್ವಾಮಿಯು ನಿರಾಕರಿಸದಿದ್ದರೆ ಅನುಭವಿಸುತ್ತಿದ್ದವನಿಗೆ ಅದು ಸೇರಬೇಕು.

ಆಧಿಃ ಸೀಮಾ ಬಾಲಧನಂ ನಿಕ್ಷೇಪೋಪನಿಧಿಃ ಸ್ತ್ರಿಯಃ ।
ರಾಜಸ್ವಂ ಶ್ರೋತ್ರಿಯಸ್ವಂ ಚ ನ ಭೋಗೇನ ಪ್ರಣಶ್ಯತಿ ॥ ೧೪೯

ಅನುಭವದ ಹಕ್ಕಿನಿಂದ ಕೆಳಗೆ ಹೇಳುವ ವಿಷಯುಗಳು ಅವಧಿ ಕಳೆದು ಕೊಳ್ಳುವುದಿಲ್ಲ. ಕರಾರು, ಗಡಿ, ಮಕ್ಕಳ ಸೊತ್ತು, ಒತ್ತೆ, ಕೂಲಿಹೆಂಗಸು, ರಾಜಧನ, ಬ್ರಾಹ್ಮಣಧನ, ಇವುಗಳು.

ಯಃ ಸ್ವಾಮಿನಾನನುಜ್ಞಾತಮಾಧಿಂ ಭುಂಕ್ತೇಽವಿಚಕ್ಷಣಃ ।
ತೇನಾರ್ಧವೃದ್ಧಿರ್ಮೋಕ್ತವ್ಯಾ ತಸ್ಯ ಭೋಗಸ್ಯ ನಿಷ್ಕೃತಿಃ ॥ ೧೫೦

ಒತ್ತೆಯಿಟ್ಟ ಸೊತ್ತನ್ನು ಸ್ವಾಮಿಯ (ಮಾಲಿಕನ) ಒಪ್ಪಿಗೆಯಿಲ್ಲದೆ ತಾನು ಅನುಭವಿಸಿದರೆ ಅದರ ಬಡ್ಡಿಯ ಅರ್ಧವನ್ನು ಮಾಲಿಕನಿಗೆ ಕಡಿಮೆ ಮಾಡಬೇಕು.

ಕುಸೀದವೃದ್ಧಿರ್ದ್ವೈಗುಣ್ಯಂ ನಾತ್ಯೇತಿ ಸಕೃದಾಹೃತಾ ।
ಧಾನ್ಯೇ ಸದೇ ಲವೇ ವಾಹ್ಯೇ ನಾತಿಕ್ರಾಮತಿ ಪಂಚತಾಂ ॥ ೧೫೧

ಬಡ್ಡಿಗೆ ಹಣ ಕೊಟ್ಟಾಗ ಅದರ ಬಡ್ಡಿಯು ಅಸಲಿನಿಂದ ಇಮ್ಮಡಿ

ಯಾಗುವ ಮೊದಲು ವಸೂಲು ಪಡೆಯಬೇಕು. ಧಾನ್ಯ, ಮರಮುಟ್ಟು, ಉಣ್ಣೆ, ಎತ್ತು, ಕೋಣ, ಕುದುರೆ ಇವನ್ನೆಲ್ಲ ಬಾಡಿಗೆಗೆ ಕೊಟ್ಟಾಗ ಮೂಲ ಧನದ ಐದು ಪಾಲಿಗಿಂತ ಮೀರಬಾರದು.

ಕೃತಾನುಸಾರಾದಧಿಕಾ ವ್ಯತಿರಿಕ್ತಾ ನ ಸಿಧ್ಯತಿ ।
ಕುಸೀದಪಥಮಾಹುಸ್ತಂ ಪಂಚಕಂ ಶತಮರ್ಹತಿ ॥ ೧೫೨

ಹಿಂದೆ ಹೇಳಿದ ಎಂಬತ್ತನೆ ಒಂದು,ನೂರಕ್ಕೆ ಎರಡು, ಮೂರು, ನಾಲ್ಕು, ಐದು ಎಂಬ ದರದ ಬಡ್ಡಿ ಹೊರತು ಬೇರೆ ದರವು ಶಾಸ್ತ್ರಸಮ್ಮತವಲ್ಲ.

ನಾತಿಸಾಂವತ್ಸರೀಂ ವೃದ್ಧಿಂ ನ ಚಾದೃಷ್ಟಾಂ ಪುನರ್ಹರೇತ್ ।
ಚಕ್ರವೃದ್ಧಿಃ ಕಾಲವೃದ್ಧಿಃ ಕಾರಿತಾ ಕಾಯಿಕಾ ಚ ಯಾ ॥ ೧೫೩

ಬಡ್ಡಿ ಸಂದಾಯದ ಅವಧಿಯು ಇಬ್ಬರ ಸಮ್ಮತಿಯಿಂದ ಒಂದು ವರ್ಷದ ಒಳಗೆ ಹೇಗೆಯೂ ಮಾಡಿಕೊಳ್ಳಬಹುದು. ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಯು ಸಾಲದ ಬಡ್ಡಿಗೆ ಎಂದೂ ಇಲ್ಲ. ಸಾಲಕ್ಕೂ ಇಲ್ಲ. ಚಕ್ರಬಡ್ಡಿ ಮುಂತಾದ ಬಡ್ಡಿ ರೀತಿಯು ಧರ್ಮವಲ್ಲ.

ಋಣಂ ದಾತುಮಶಕ್ತೋ ಯಃ ಕರ್ತುಮಿಚ್ಛೇತ್ಪುನಃ ಕ್ರಿಯಾಂ ।
ಸ ದತ್ವಾ ನಿರ್ಜಿತಾಂ ವೃದ್ಧಿಂ ಕರಣಂ ಪರಿವರ್ತಯೇತ್ ॥ ೧೫೪

ಅವಧಿಗೆ ಸಾಲ ಸಂದಾಯ ಮಾಡಲು ಅಶಕ್ತನಾದರೆ ಆ ವರೆಗಿನ ಬಡ್ಡಿ ಕೊಟ್ಟು ಹೊಸ ಲೇಖನವನ್ನು ಬರೆದುಕೊಡಬೇಕು.

ಅದರ್ಶಯಿತ್ವಾ ತತ್ರೈವ ಹಿರಣ್ಯಂ ಪರಿವರ್ತಯೇತ್ ।
ಯಾವತೀ ಸಂಭವೇದ್ವೃದ್ಧಿಸ್ತಾವತೀಂ ದಾತುಮರ್ಹತಿ ॥ ೧೫೫

ಬಡ್ಡಿಹಣವನ್ನು ವ್ಯಾದೆಗೆ ಕೊಡದೆ ಹೋದರೆ ಆಗ ಪುನಃ ಬಡ್ಡಿ ಬಾಕಿಯನ್ನು ಅದರಲ್ಲಿ ಬರೆಯಬೇಕು.

ಚಕ್ರವೃದ್ಧಿಂ ಸಮಾರೂಢೋ ದೇಶಕಾಲವ್ಯವಸ್ಥಿತಃ ।
ಅತಿಕ್ರಾಮನ್ದೇಶಕಾಲೌ ನ ತತ್ಫಲಮವಾಪ್ನುಯಾತ್ ॥ ೧೫೬

ಇಷ್ಟು ಸಮಯ, ಇಷ್ಟು ದೂರಕ್ಕೆ, (ವಾಹನ) ಇಷ್ಟು ಬಾಡಿಗೆ ಎಂದು

ನಿಶ್ಚೈಸಿದರೆ ಆ ನಿಯಮವನ್ನು ಸಾಧಿಸದೆ ಹೋದರೆ ಆ ಬಾಡಿಗೆ ಕೊಡಬೇಕಾಗಿಲ್ಲ.

ಸಮುದ್ರಯಾನಕುಶಲಾ ದೇಶಕಾಲಾರ್ಥದರ್ಶಿನಃ ।
ಸ್ಥಾಪಯಂತಿ ತು ಯಾಂ ವೃದ್ಧಿಂ ಸಾ ತತ್ರಾಧಿಗಮಂ ಪ್ರತಿ ॥ ೧೫೭

ನೀರಿನ, ನೆಲದ ಬಾಡಿಗೆಯನ್ನು ಆ ಕಾಲದ, ಆ ದೇಶದ ಜನರು ಹೇಗೆ ನಿಶ್ಚೈಸುತ್ತಾರೊ ಅದೇ ನಿಯಮವು ಶಾಸ್ತ್ರಸಮ್ಮತವು.

ಯೋ ಯಸ್ಯ ಪ್ರತಿಭೂಸ್ತಿಷ್ಠೇದ್ದರ್ಶನಾಯೇಹ ಮಾನವಃ ।
ಅದರ್ಶಯನ್ಸ ತಂ ತಸ್ಯ ಪ್ರಯಚ್ಛೇತ್ಸ್ವಧನಾದೃಣಂ ॥ ೧೫೮

ಸಾಲ ತಕ್ಕೊಳ್ಳುವ ಕಾಲದಲ್ಲಿ ಆ ಸಾಲಗಾರನನ್ನು ಯೋಗ್ಯ ಸಮಯಕ್ಕೆ ತೋರಿಸಲು ಒಬ್ಬನು ಜಾಮೀನುದಾರನಾದರೆ ಅವನು ಆ ಶರತ್ತನ್ನು ಮೀರಿದರೆ ಸಾಲವನ್ನು ಅವನೇ ತೆರಬೇಕಾಗುವುದು.

ಪ್ರಾತಿಭಾವ್ಯಂ ವೃಥಾದಾನಂ ಆಕ್ಷಿಕಂ ಸೌರಿಕಂ ಚ ಯತ್ ।
ದಂಡಶುಲ್ಕಾವಶೇಷಂ ಚ ನ ಪುತ್ರೋ ದಾತುಮರ್ಹತಿ ॥ ೧೫೯

ಜಾಮೀನುದಾರಿಕೆ ಹೊಣೆ, ಪರಿಹಾಸವಾಗ್ದಾನ, ಮದ್ಯ, ಜೂಜುಗಳ ಹಣ, ಅಪರಾಧ ದಂಡನೆ, ಶುಲ್ಕ ಇವನ್ನು ತಂದೆಯು ತೀರಿಸದೆ ಉಳಿದು ಮೃತನಾದರೆ ಮಗನು ಅದನ್ನು ಕೊಡತಕ್ಕದ್ದಲ್ಲ.

ದರ್ಶನಪ್ರಾತಿಭಾವ್ಯೇ ತು ವಿಧಿಃ ಸ್ಯಾತ್ಪೂರ್ವಚೋದಿತಃ ।
ದಾನಪ್ರತಿಭುವಿ ಪ್ರೇತೇ ದಾಯಾದಾನಪಿ ದಾಪಯೇತ್ ॥ ೧೬೦

ಹಿಂದೆ ಜಾಮೀನುದಾರನು ಮೃತನಾದರೆ ಮಗನು ಬದ್ಧನಲ್ಲವೆಂದು ಹೇಳಿದುದು ಗುರುತು–ಜಾಮೀನುದಾರಿಕೆ ಬಗ್ಗೆ. ಸಾಲದ ಜಾಮೀನುಗಾರಿಯಿದ್ದರೆ ಅದು ಮಗನಿಗೂ ಸಂಬಂಧಿಸುವುದು.

ಅದಾತರಿ ಪುನರ್ದಾತಾ ವಿಜ್ಞಾತಪ್ರಕೃತಾವೃಣಂ ।
ಪಶ್ಚಾತ್ಪ್ರತಿಭುವಿ ಪ್ರೇತೇ ಪರೀಪ್ಸೇತ್ಕೇನ ಹೇತುನಾ ॥ ೧೬೧

ಜಾಮೀನುದಾರನು ಹಣ ವಸೂಲು ಬರುವ ಮೊದಲು ಸತ್ತರೆ ಸಾಲ ಕೊಟ್ಟವನಿಗೆ ಹಣ ಬರುವುದಕ್ಕೆ ಬೇರೆ ಉಪಾಯವಿಲ್ಲ.

ನಿರಾದಿಷ್ಟಧನಶ್ಚೇತ್ತು ಪ್ರತಿಭೂಃ ಸ್ಯಾದಲಂಧನಃ ।
ಸ್ವಧನಾದೇವ ತದ್ದದ್ಯಾನ್ನಿರಾದಿಷ್ಟ ಇತಿ ಸ್ಥಿತಿಃ ॥ ೧೬೨

ಜಾಮೀನ್ದಾರನಿಗೆ ಸಾಲಗಾರನು ಸಾಲದ ಹಣವನ್ನು ನಂದಾಯ ಮಾಡಿದ್ದರೆ ಸಾಲಗಾರನು ಸತ್ತರೂ ಜಾಮೀನುದಾರನೇ ತೆರಬೇಕು.

ಮತ್ತೋನ್ಮತ್ತಾರ್ತಾಧ್ಯಧೀನೈರ್ಬಾಲೇನ ಸ್ಥವಿರೇಣ ವಾ ।
ಅಸಂಬದ್ಧಕೃತಶ್ಚೈವ ವ್ಯವಹಾರೋ ನ ಸಿಧ್ಯತಿ ॥ ೧೬೩

ಮದ್ಯಮತ್ತರು, ಹುಚ್ಚರು, ರೋಗಿಗಳು, ಹುಡುಗರು, ಮುದುಕರು, ಪರಾಧೀನರು, ಸಂಬಂಧಹೀನರು ಮಾಡಿದ ವ್ಯಾಜ್ಯವು ಸಿಂಧುವಲ್ಲ.

ಸತ್ಯಾ ನ ಭಾಷಾ ಭವತಿ ಯದ್ಯಪಿ ಸ್ಯಾತ್ಪ್ರತಿಷ್ಠಿತಾ ।
ಬಹಿಶ್ಚೇದ್ಭಾಷ್ಯತೇ ಧರ್ಮಾತ್ ನಿಯತಾದ್ ವ್ಯಾವಹಾರಿಕಾತ್ ॥ ೧೬೪

ಎಗ್ರಿಮೆಂಟ್ ಕರಾರು ರಜಿಸ್ಟರಾದರೂ ಶಾಸ್ತ್ರಧರ್ಮ, ವ್ಯವಹಾರ ಧರ್ಮಗಳಿಗೆ ವಿರುದ್ಧವಾದರೆ ಅದು ಮಾನ್ಯವಲ್ಲ. ಕಾರ್ಯಕಾರಿಯಲ್ಲ.

ಯೋಗಾಧಮನವಿಕ್ರೀತಂ ಯೋಗದಾನಪ್ರತಿಗ್ರಹಂ ।
ಯತ್ರ ವಾಪ್ಯುಪಧಿಂ ಪಶ್ಯೇತ್ತತ್ಸರ್ವಂ ವಿನಿವರ್ತಯೇತ್ ॥ ೧೬೫

ಬಿನಾಮೆ, ಸುಳ್ಳು, ಕಪಟವಾಗಿ ಮಾಡಿದ ಅಡವು–ಆರವಾದ ಕ್ರಯ ಪ್ರತಿಗ್ರಹದಾನಗಳು ಒತ್ತೆಯಿಡುವುದು ಇವು ಯಾವುವೂ ನ್ಯಾಯವಲ್ಲ.

ಗ್ರಹೀತಾ ಯದಿ ನಷ್ಟಃ ಸ್ಯಾತ್ಕುಟುಂಬಾರ್ಥೇ ಕೃತೋ ವ್ಯಯಃ ।
ದಾತವ್ಯಂ ಬಾಂಧವೈಸ್ತತ್ಸ್ಯಾತ್ ಪ್ರವಿಭಕ್ತೈರಪಿ ಸ್ವತಃ ॥ ೧೬೬

ವಿಭಾಗದ ಮೊದಲು ಕುಟುಂಬದ ಕ್ಷೇಮಕ್ಕಾಗಿ ಮಾಡಿದ ಸಾಲವು ಸಾಲ ತಕ್ಕೊಂಡವನು ಸತ್ತರೂ ವಿಭಾಗಹೊಂದಿದರೂ ಅವರೆಲ್ಲರೂ ಆ ಸಾಲದ ಹಣ ಸಂದಾಯ ಮಾಡಲು ಬದ್ಧರು.

ಕುಟುಂಬಾರ್ಥೇಽಧ್ಯಧೀನೋಽಪಿ ವ್ಯವಹಾರಂ ಯಮಾಚರೇತ್ ।
ಸ್ವದೇಶೇ ವಾ ವಿದೇಶೇ ವಾ ತಂ ಜ್ಯಾಯಾನ್ನ ವಿಚಾಲಯೇತ್ ॥ ೧೬೭

ಕುಟುಂಬದ ಕ್ಷೇಮದ ಬಗ್ಗೆ ಕುಟುಂಬ ಪತಿಯು ಇದ್ದಾಗಲೂ ದೂರ ದೇಶದಲ್ಲಿದ್ದಾಗಲೂ ಮನೆಯ ಯಾವ ಸದಸ್ಯನೂ ಅಥವಾ ಸೇವಕನೂ ಮಾಡಿದ ಸಾಲವನ್ನು ಸ್ವಾಮಿಯು ತೆರಲು ಬದ್ಧನು.

ಬಲಾದ್ದತ್ತಂ ಬಲಾದ್ಭುಕ್ತಂ ಬಲಾದ್ಯಚ್ಚಾಪಿ ಲೇಖಿತಂ।
ಸರ್ವಾನ್ ಬಲಕೃತಾನರ್ಥಾನಕೃತಾನ್ ಮನುರಬ್ರವೀತ್ ॥ ೧೬೮

ಸಮ್ಮತಿಯಿಲ್ಲದೆ ಬಲಾತ್ ಕೊಟ್ಟದ್ದು, ಅನುಭವಿಸಿದ್ದು ಬರಹ, ಲೇಖ ರಿಕಾರ್ಡು ಅಥವಾ ಯಾವುದೇ ಅಕ್ರಮವ್ಯವಹಾರ ನ್ಯಾಯಕ್ಕೆ ಮಾನ್ಯವಾಗ ತಕ್ಕದ್ದಲ್ಲ. ಇದು ಮನುಮತವು.

ತ್ರಯಃ ಪರಾರ್ಥೇ ಕ್ಲಿಶ್ಯಂತಿ ಸಾಕ್ಷಿಣಃ ಪ್ರತಿಭೂಃ ಕುಲಂ।
ಚತ್ವಾರಸ್ತೂಪಚೀಯಂತೇ ವಿಪ್ರ ಆಢ್ಯೋ ವಣಿಙ್ನೃಪಃ ॥ ೧೬೯

ಸಾಕ್ಷಿಗಳು, ಜಾಮೀನುದಾರರು, ಪಾರ್ಟಿಯವರು ಇವರು ಮೂವರು ಇನ್ನೊಬ್ಬರಿಗಾಗಿ ದುಃಖ ಅನುಭವಿಸುತ್ತಾರೆ. ಆದುದರಿಂದ ಸಾಕ್ಷ್ಯ, ಜಾಮೀನು, ನ್ಯಾಯಪತಿತ್ವ ಇವನ್ನು ಯಾರೂ ಬಲಾತ್ ಅಂಗೀಕರಿಸುವಂತೆ ಮಾಡಬಾರದು. ನ್ಯಾಯಪತಿ, ಸಾಲಕೊಟ್ಟವನು, ವ್ಯಾಪಾರಿ, ರಾಜ ಇವರು ಕರ್ತವ್ಯಪರಾಯಣರಾದರೆ ವೃದ್ಧಿಹೊಂದುತ್ತಾರೆ. ಇವರಲ್ಲೂ ಬಲಾತ್ಕಾರ ಸಲ್ಲದು. ಹಿಂದಿನ ವಿವರವಿದು.

ಅನಾದೇಯಂ ನಾದದೀತ ಪರಿಕ್ಷೀಣೋಽಪಿ ಪಾರ್ಥಿವಃ।
ನ ಚಾದೇಯಂ ಸಮೃದ್ಧೋಽಪಿ ಸೂಕ್ಷ್ಮಮಪ್ಯರ್ಥಮುತ್ಸೃಜೇತ್ ॥ ೧೭೦

ರಾಜನು ದರಿದ್ರನಾಗಿ ಕ್ಷೀಣನಾದರೂ ಅಧರ್ಮದ ಧನವನ್ನು ಸ್ವೀಕರಿಸ ಬಾರದು. ಐಶ್ವರ್ಯವಂತನಾದರೂ ಸ್ವಲ್ಪವೆಂದು ಸಿಗತಕ್ಕ ಹಣವನ್ನು ಬಿಡ ಬೇಕಾಗಿಯೂ ಇಲ್ಲ.

ಅನಾದೇಯಸ್ಯ ಚಾದಾನಾತ್ ಆದೇಯಸ್ಯ ಚ ವರ್ಜನಾತ್।
ದೌರ್ಬಲ್ಯಂ ಖ್ಯಾಪ್ಯತೇ ರಾಜ್ಞಃ ಸ ಪ್ರೇತ್ಯೇಹ ಚ ನಶ್ಯತಿ ॥ ೧೭೧

ಪರಧನ ಸ್ವೀಕಾರ, ಸ್ವಧನ ಪರಿತ್ಯಾಗಗಳು, ರಾಜನ ದೌರ್ಬಲ್ಯ. ಅದ ರಿಂದ ಎಲ್ಲೆಯೂ ಕ್ಷೇಮವಿಲ್ಲ.

ಸ್ವಾದಾನಾದ್ವರ್ಣಸಂಸರ್ಗಾತ್ತ್ವಬಲಾನಾಂ ಚ ರಕ್ಷಣಾತ್ ।
ಬಲಂ ಸಂಜಾಯತೇ ರಾಜ್ಞಃ ಸ ಪ್ರೇತ್ಯೇಹ ಚ ವರ್ಧತೇ ॥ ೧೭೨

ನ್ಯಾಯವಾದ ಧನಪರಿಗ್ರಹ, ಧರ್ಮವಿವಾಹ, ದುರ್ಬಲ ರಕ್ಷಣೆ— ಇವುಗಳಿಂದ ರಾಜನು ಧರ್ಮವೃದ್ಧಿಯ ಮೂಲಕ ಸಕಲ ಶ್ರೇಯೋಭಾಜನನಾಗುವನು.

ತಸ್ಮಾದ್ಯಮ ಇವ ಸ್ವಾಮೀ ಸ್ವಯಂ ಹಿತ್ವಾ ಪ್ರಿಯಾಪ್ರಿಯೇ ।
ವರ್ತೇತ ಯಾಮ್ಯಯಾ ವೃತ್ತ್ಯಾ ಜಿತಕ್ರೋಧೋ ಜಿತೇಂದ್ರಿಯಃ ॥ ೧೭೩

ಸಿಟ್ಟು ರಾಗದ್ವೇಷಗಳನ್ನು ಬಿಟ್ಟು ಸರ್ವಸಮಾನತೆಯಿಂದ ಯಮನಂತೆ ತನ್ನ ಇಷ್ಟಾನಿಷ್ಟಗಳನ್ನು ಗಣಿಸದೆ ನ್ಯಾಯವಂತನಾಗಬೇಕು.

ಯಸ್ತ್ವಧರ್ಮೇಣ ಕಾರ್ಯಾಣಿ ಮೋಹಾತ್ಕುರ್ಯಾನ್ನರಾಧಿಪಃ ।
ಅಚಿರಾತ್ತಂ ದುರಾತ್ಮಾನಂ ವಶೇ ಕುರ್ವಂತಿ ಶತ್ರವಃ ॥ ೧೭೪

ಅಧರ್ಮದಿಂದ ವ್ಯವಹರಿಸುವ ರಾಜನು ಪ್ರಜೆಗಳ ಕೋಪಕ್ಕೆ ತುತ್ತಾಗಿ ಬೇಗನೆ ಶತ್ರುಗಳ ಆಘಾತಕ್ಕೆ ಗುರಿಯಾಗುವನು.

ಕಾಮಕ್ರೋಧೌ ತು ಸಂಯಮ್ಯ ಯೋಽರ್ಥಾನ್ಧರ್ಮೇಣ ಪಶ್ಯತಿ ।
ಪ್ರಜಾಸ್ತಮನುವರ್ತಂತೇ ಸಮುದ್ರಮಿವ ಸಿಂಧವಃ ॥ ೧೭೫

ಕಾಮಕ್ರೋಧ ವಶನಾಗದೆ ಧರ್ಮಪರನಾಗಿ ರಾಜ್ಯ ಕರ್ಮವ್ಯಾಪೃತನಾದರೆ ಪ್ರಜೆಗಳು ಅವನನ್ನು ನಂಬಿ ಸ್ವಾತ್ಮಸಮರ್ಪಣೆ ಮಾಡಲು ಹಿಂಜರಿಯುವುದಿಲ್ಲ. ಸಮುದ್ರವನ್ನು ಸೇರಿ ನದಿಗಳು ಅಡಗುತ್ತವೆ.

ಯಃ ಸಾಧಯಂತಂ ಛಂದೇನ ವೇದಯೇದ್ಧನಿಕಂ ನೃಪೇ ।
ಸ ರಾಜ್ಞಾ ತಚ್ಚತುರ್ಭಾಗಂ ದಾಪ್ಯಸ್ತಸ್ಯ ಚ ತದ್ಧನಂ ॥ ೧೭೬

ಸಾಲಗಾರನು ಸಾಲಕೊಟ್ಟವನು ಸಾಲವನ್ನು ತನ್ನಲ್ಲಿ ಕೇಳುವಾಗ ಅದನ್ನು ರಾಜನಲ್ಲಿಗೆ ಬೇಕೆಂದು ಒಯ್ದರೆ ಅಂತಹ ಕಪಟಿಗೆ ರಾಜನು ಸಾಲದ ನಾಲ್ಕನೆ ಒಂದು ಪಾಲಿನಷ್ಟು ದಂಡನೆ ಮಾಡಿ ಅದನ್ನು ಸಾಲಕೊಟ್ಟವನಿಗೆ ಕೊಡಬೇಕು.

ಕರ್ಮಣಾಪಿ ಸಮಂ ಕುರ್ಯಾದ್ಧನಿಕಾಯಾಧಮರ್ಣಿಕಃ ।
ಸಮೋಽವಕೃಷ್ಟಜಾತಿಸ್ತು ದದ್ಯಾಚ್ಛ್ರೇಯಾಂಸ್ತು ತಚ್ಛನೈಃ ॥ ೧೭೭

ಸಾಲಗಾರನು ಮರುಪಾವತಿ ಮಾಡಲು ಹಣವಿಲ್ಲದೆ ಗರಿಬನಾಗ ಬಹುದು. ಅಂತಹವನು ಕೆಲಸಮಾಡಿ ಜೀವಿಸುವವನಾದರೆ ಅವನು ಕೆಲಸ ಮಾಡಿ ಸಾಲ ಸಂದಾಯ ಮಾಡಬಹುದು. ಕೆಲಸಮಾಡದ ಜ್ಞಾನವ್ಯವಸಾಯಿ ಯಾದರೆ ದೀರ್ಘ ಅವಧಿಯಲ್ಲಿ ಸ್ವಲ್ಪ ಸ್ವಲ್ಪ ಕೊಟ್ಟು ಸಂದಾಯ ಮಾಡ ಬೇಕು.

ಅನೇನ ವಿಧಿನಾ ರಾಜಾ ಮಿಥೋ ವಿವದತಾಂ ನೃಣಾಂ ।
ಸಾಕ್ಷಿಪ್ರತ್ಯಯಸಿದ್ಧಾನಿ ಕಾರ್ಯಾಣಿ ಸಮತಾಂ ನಯೇತ್ ॥ ೧೭೮

ಹೀಗೆ ವಿವಾದ ಬಂದಾಗ ಲೇಖ, ಸಾಕ್ಷಿ ಮುಂತಾದ ಆಧಾರದಿಂದ ನಿರ್ಣಯಿಸಿ ಸಂಶಯ ನಿವಾರಣೆ ಮಾಡಬೇಕು.

ಕುಲಜೇ ವೃತ್ತಸಂಪನ್ನೇ ಧರ್ಮಜ್ಞೇ ಸತ್ಯವಾದಿನಿ ।
ಮಹಾಪಕ್ಷೇ ಧನಿನ್ಯಾರ್ಯೇ ನಿಕ್ಷೇಪಂ ನಿಕ್ಷಿಪೇದ್ಬುಧಃ ॥ ೧೭೯

ತನ್ನ ಸೊತ್ತನ್ನು ತನಗೆ ಅನುಕೂಲವಿಲ್ಲದೆ ಇನ್ನೊಬ್ಬನಲ್ಲಿ ಕಾದು ಕೊಳ್ಳಲು ಇಡುವುದುಂಟು. ಅಂಥವನು ಸೊತ್ತನ್ನು ಸತ್ಯ, ಧರ್ಮ, ಸದಾಚಾರ, ಸತ್ಕುಲ ಮತ್ತು ಧನ ತುಂಬಿದ ಸಂಸಾರ ಇರುವಂತಹ ಮನುಷ್ಯನಲ್ಲಿ ಇಡು ವುದು ಒಳ್ಳೆದು. ತಾನು ಕೇಳುವಾಗ ಸಿಗಲು ಇಂತವನೆ ಆಗಬೇಕು.

ಯೋ ಯಥಾ ನಿಕ್ಷಿಪೇದ್ಧಸ್ತೇ ಯಮರ್ಥಂ ಯಸ್ಯ ಮಾನವಃ ।
ಸ ತಥೈವ ಗೃಹೀತವ್ಯೋ ಯಥಾ ದಾಯಸ್ತಥಾ ಗ್ರಹಃ ॥ ೧೮೦

ನಿಕ್ಷೇಪ ಇಡುವಾಗ ಯಾವ ರೀತಿ ಇಟ್ಟಿದ್ದಾನೋ ಅದೇ ರೀತಿ ಆ ಸೊತ್ತನ್ನು ಹಾಗೆಯೆ ಹಿಂದೆ ಪಡೆಯಬೇಕು. ಲಿಖಿತ ಮಾಡಿ ಸಾಕ್ಷಿಸಮ್ಮುಖ ದಲ್ಲಿ ಎಣಿಕೆ ಮಾಡಿ ಮುದ್ರೆ ಮಾಡಿ ಇಲ್ಲದೆ ಇಡಬಹುದು. ಅದು ಅವರ ಇಷ್ಟ. ತಕ್ಕೊಳ್ಳುವವನಿಗೆ ಹೆಚ್ಚು ಶರತಕ್ಕೆ ನ್ಯಾಯವಿಲ್ಲ.

ಯೋ ನಿಕ್ಷೇಪಂ ಯಾಚ್ಯಮಾನೋ ನಿಕ್ಷೇಪ್ತುರ್ನ ಪ್ರಯಚ್ಛತಿ ।
ಸ ಯಾಚ್ಯಃ ಪ್ರಾಡ್ವಿವಾಕೇನ ತನ್ನಿಕ್ಷೇಪ್ತುರಸನ್ನಿಧೌ ॥ ೧೮೧

ನಿಕ್ಷೇಪ ವಸ್ತುವನ್ನು ನಿಕ್ಷೇಪವಿಟ್ಟವನು ನಿಕ್ಷೇಪ ತಕ್ಕೊಂಡವನಲ್ಲಿ ಕೇಳಿದಾಗ ಆ ನಿಕ್ಷೇಪವನ್ನು ಅವನು ಕೊಡದಿದ್ದರೆ ಅಲ್ಲಿ ಈ ಉಪಾಯವನ್ನು ಮಾಡಬೇಕು. ಆ ನಿಕ್ಷೇಪ ಇಟ್ಟವನನ್ನು ಈಗ ನೀನು ಹೋಗು ವಿಚಾರಿಸಿ ತಿಳಿಸುತ್ತೇವೆ ಎಂದು ನ್ಯಾಯಪತಿಯು ಅವನನ್ನು ಕಳಿಸಿಬಿಡಬೇಕು. ಮತ್ತು ತನ್ನ ಆಪ್ತರಿಂದ ಸ್ವಲ್ಪ ಬಂಗಾರವನ್ನು ಪುನಃ ಅವನಲ್ಲಿ ನಿಕ್ಷೇಪವಿಡಬೇಕು. ಇಡುವಾಗ ಅವರು ನಾವು ರಾಜಾಗ್ರಹಕ್ಕೆ ತುತ್ತಾದವರು ಗುಟ್ಟು ಯಾರಿಗೂ ತಿಳಿಯಬಾರದು ಎಂದು ಅವನಿಗೆ ತಿಳಿಸಬೇಕು. ಅಂತಹ ನಿಕ್ಷೇಪವನ್ನು ಪುನಃ ಕೆಲಸಮಯ ಕಳೆದು ಆ ನ್ಯಾಯಪತಿಯು ಅವನಲ್ಲಿ ಕೇಳಬೇಕು. ಇದು ಸಾಕ್ಷಿಯಿಲ್ಲದ ನಿಕ್ಷೇಪವನ್ನು ಗೊತ್ತುಮಾಡುವ ರೀತಿಯು. ಅದನ್ನೆ ವಿವರಿಸುತ್ತಾರೆ.

ಸಾಕ್ಷ್ಯಭಾವೇ ಪ್ರಣಿಧಿಭಿರ್ವಯೋರೂಪಸಮನ್ವಿತೈಃ ।
ಅಪದೇಶೈಶ್ಚ ಸನ್ನ್ಯಸ್ಯ ಹಿರಣ್ಯಂ ತಸ್ಯ ತತ್ವತಃ ॥ ೧೮೨
ಸ ಯದಿ ಪ್ರತಿಪದ್ಯೇತ ಯಥಾನ್ಯಸ್ತಂ ಯಥಾಕೃತಂ ।
ನ ತತ್ರ ವಿದ್ಯತೇ ಕಿಂಚಿದ್ಯತ್ಪರೈರಭಿಯುಜ್ಯತೇ ॥ ೧೮೩

ಹಾಗೆ ಆ ನ್ಯಾಯಪತಿಯು ಬೇರೆಯವರಿಟ್ಟ ನಿಕ್ಷೇಪವನ್ನು ಕೊಡಲು ಒಪ್ಪುತ್ತಾನಾದರೆ ವಿಷಯವನ್ನು ವಿವರಿಸುತ್ತಾನಾದರೆ ಆಗ ಅವನು ಅಪರಾಧಿಯಲ್ಲ, ಸುಳ್ಳುಗಾರನಲ್ಲ ಹಿಂದಿನ ನಿಕ್ಷೇಪದ ಅಪಹಾರದ ಆಪಾದನೆ ಸರಿಯಲ್ಲ ಎಂದು ನಿರ್ಣಯಿಸಬಹುದು. ಈಗಲೂ ಮೋಸಗಾರನಾದರೆ ಅವನಿಂದ ಸೊತ್ತು ಪೂರಾ ವಶಪಡಿಸಿ ವಸೂಲು ಪಡೆಯಬಹುದು.

ತೇಷಾಂ ನ ದದ್ಯಾದ್ಯದಿ ತು ತದ್ಧಿರಣ್ಯಂ ಯಥಾವಿಧಿ ।
ಉಭೌ ನಿಗೃಹ್ಯ ದಾಪ್ಯಃ ಸ್ಯಾದಿತಿ ಧರ್ಮಸ್ಯ ಧಾರಣಾ ॥ ೧೮೪

ವಂಚಕನನ್ನು ಎರಡು ನಿಕ್ಷೇಪವು ಸತ್ಯವೆಂದು ತಿಳಿದು ಬಲಾತ್ಕರಿಸಿ ವಸೂಲು ಮಾಡತಕ್ಕದ್ದು. ಇದು ಧರ್ಮವು.

ನಿಕ್ಷೇಪೋಪನಿಧೀ ನಿತ್ಯಂ ನ ದೇಯೌ ಪ್ರತ್ಯನಂತರೇ ।
ನಶ್ಯತೋ ವಿನಿಪಾತೇ ತಾವನಿಪಾತೇ ತ್ವನಾಶಿನೌ ॥ ೧೮೫

ನಿಕ್ಷೇಪ, ಉಪನಿಧಿ ದ್ರವ್ಯಗಳನ್ನು ಕೊಟ್ಟವರು ಬದುಕಿರುವಾಗ ಅವರ ಉತ್ತರಾಧಿಕಾರಿಗಳಿಗೆ ಕೊಡಬಾರದು. ತಂದೆಯು ಮಕ್ಕಳಿಗೆ ಕೊಡದಿದ್ದರೆ ಸ್ವತ್ವ ಬರುವುದಿಲ್ಲ.

ಸ್ವಯಮೇವ ತು ಯೋ ದದ್ಯಾನ್ಮೃತಸ್ಯ ಪ್ರತ್ಯನಂತರೇ ।
ನ ಸ ರಾಜ್ಞಾ ನಿಯೋಕ್ತವ್ಯೋ ನ ನಿಕ್ಷೇಪ್ತುಶ್ಚ ಬಂಧುಭಿಃ ॥ ೧೮೬

ನಿಕ್ಷೇಪ ಕೊಟ್ಟವನು ತಕ್ಕೊಳ್ಳುವ ಮೊದಲು ಸತ್ತರೆ ಆ ನಿಕ್ಷೇಪವನ್ನು ತಾನು ಸ್ವೇಚ್ಛೆಯಿಂದ ಕೊಟ್ಟವನ ಉತ್ತರಾಧಿಕಾರಿಗೆ ಕೊಡಬಹುದು. ಹಾಗೆ ಕೊಡುವಾಗ ರಾಜನಿಗಾಗಲಿ ಬಂಧುಗಳಿಗಾಗಲಿ ನಿಕ್ಷೇಪದ ವಿಷಯವಾಗಿ ವಾದಿಸುವ ಹಕ್ಕು ಇರುವುದಿಲ್ಲ.

ಅಚ್ಛಲೇನೈವ ಚಾನ್ವಿಚ್ಛೇತ್ತಮರ್ಥಂ ಪ್ರೀತಿಪೂರ್ವಕಂ ।
ವಿಚಾರ್ಯ ತಸ್ಯ ವಾ ವೃತ್ತಂ ಸಾಮ್ನೈವ ಪರಿಸಾಧಯೇತ್ ॥ ೧೮೭

ನಿಕ್ಷೇಪದ ಮರುಪಾವತಿ ವಿಷಯದಲ್ಲಿ ನಿಕ್ಷೇಪವು ಬಾಕಿ ಉಳಿದಿದೆ ಎಂದು ಸಂಶಯವಿದ್ದರೆ ಪ್ರೀತಿಯಿಂದ ವಿಚಾರಿಸಬೇಕು. ಪ್ರತಿಜ್ಞೆ, ಅಗ್ನಿದಿವ್ಯಾದಿಗಳನ್ನು ಪ್ರಯೋಗಿಸಬಾರದು. ಅವನು ಧಾರ್ಮಿಕನಾದುದರಿಂದ ಬಲಾತ್ಕಾರವಿಲ್ಲದೆ ಸಮಾಧಾನ ತಾಳಬೇಕು.

ನಿಕ್ಷೇಪೇಷ್ವೇಷು ಸರ್ವೇಷು ವಿಧಿಃ ಸ್ಯಾತ್ಪರಿಸಾಧನೇ ।
ಸಮುದ್ರೇ ನಾಪ್ನುಯಾತ್ಕಿಂಚಿದ್ಯದಿ ತಸ್ಮಾನ್ನ ಸಂಹರೇತ್ ॥ ೧೮೮

ನಿಕ್ಷೇಪ ಪ್ರತ್ಯರ್ಪಣವು ಆತಂಕಿಸಲ್ಪಟ್ಟಾಗ ಹಿಂದಿನ ಉಪಾಯವನ್ನು ಆಶ್ರಯಿಸಬೇಕು. ಮುದ್ರಾಸಹಿತವಾಗಿ ಒಪ್ಪಿಸುವಾಗ ಯಾವ ಅಪರಾಧವೂ ಇರುವುದಿಲ್ಲ.

ಚೌರೈರ್ಹೃತಂ ಜಲೇನೋಢಮಗ್ನಿನಾ ದಗ್ಧಮೇವ ವಾ ।
ನ ದದ್ಯಾದ್ಯದಿ ತಸ್ಮಾತ್ಸ ನ ಸಂಹರತಿ ಕಿಂಚನ ॥ ೧೮೯

ಕಳ್ಳರು ಕದ್ದರೆ, ನೀರುಪಾಲಾದರೆ, ಬೆಂಕಿಸುಟ್ಟರೆ ಆ ನಿಕ್ಷೇಪವನ್ನು ಕೊಡುವುದು ಬೇಡ. ತಾನು ಮಾತ್ರ ಅದರ ಅಣುವನ್ನು ತಕ್ಕೊಳ್ಳಬಾರದು. ತಕ್ಕೊಂಡರೆ ಕೊಡಬೇಕು.

ನಿಕ್ಷೇಪಸ್ಯಾಪಹರ್ತಾರಮನಿಕ್ಷೇಪ್ತಾರಮೇವ ಚ ।
ಸರ್ವೈರುಪಾಯೈರನ್ವಿಚ್ಛೇಚ್ಛಪಥೈಶ್ಚೈವ ವೈದಿಕೈಃ ॥ ೧೯೦

ನಿಕ್ಷೇಪವನ್ನು ಅಪಹರಿಸುವವನು ನಿಕ್ಷೇಪವಿಡದೆ ಕೇಳುವವನು ಇಂತಹರನ್ನು ಸಮಯೋಚಿತ ಉಪಾಯಗಳಿಂದ ವೈದಿಕವಾದ ಶಪಥದಿವ್ಯಗಳಿಂದ ನಿಶ್ಚೈಸಬೇಕು.

ಯೋ ನಿಕ್ಷೇಪಂ ನಾರ್ಪಯತಿ ಯಶ್ಚಾನಿಕ್ಷಿಪ್ಯ ಯಾಚತೇ ।
ತಾವುಭೌ ಚೌರವಚ್ಛಾಸ್ಯೌ ದಾಪ್ಯೌ ವಾ ತತ್ಸಮಂ ದಮಂ ॥ ೧೯೧

ನಿಕ್ಷೇಪವನ್ನು ನಿರಾಕರಿಸುವವನನ್ನು ಸುಳ್ಳು ನಿಕ್ಷೇಪವನ್ನು ಕೇಳುವವನ್ನು ಕಳ್ಳರಂತೆ ದಂಡಿಸಬೇಕು. ನಿಕ್ಷೇಪ ಸಮಧನವನ್ನು ವಸೂಲು ಪಡೆಯಲೂ ಬಹುದು.

ನಿಕ್ಷೇಪಸ್ಯಾಪಹರ್ತಾರಂ ತತ್ಸಮಂ ದಾಪಯೇದ್ದಮಂ ।
ತಥೋಪನಿಧಿಹರ್ತಾರಮವಿಶೇಷೇಣ ಪಾರ್ಥಿವಃ ॥ ೧೯೨

ನಿಕ್ಷೇಪವನ್ನು ಕೊಡದಿರುವವನು ಸುಳ್ಳಾಗಿ ಇಡುಗಂಟನ್ನು ಕೇಳುವವನು (ಕದಿಯುವವನು) ನಿರಾಕರಿಸುವವನ ಪ್ರಥಮ ಬಾರಿಗೆ ಇಂತಹ ಅಪರಾಧಿಯನ್ನು ದೇಹದಂಡನೆಯಿಂದ ವಿನಾಕರಿಸಿ ಧನದಂಡವನ್ನು ಮಾತ್ರ ಪ್ರಯೋಗಿಸಬೇಕು. ಹಿಂದೆ ಹೇಳಿದುದು ಅನೇಕಬಾರಿ ಅಪರಾಧಿಯಾದಾಗ.

ಉಪಧಾಭಿಶ್ಚ ಯಃ ಕಶ್ಚಿತ್ಪರದ್ರವ್ಯಂ ಹರೇನ್ನರಃ ।
ಸಸಹಾಯಃ ಸ ಹಂತವ್ಯಃ ಪ್ರಕಾಶಂ ವಿವಿಧೈರ್ವಧೈಃ ॥ ೧೯೩

ಸುಳ್ಳು, ಮೋಸಗಳಿಂದ ಪರದ್ರವ್ಯವನ್ನು ಅಪಹರಿಸಿದವನಿಗೆ ಅವನ ಪರಿವಾರಸಹಿತವಾಗಿ ಬಹಿರಂಗ ಚಿತ್ರಹಿಂಸೆಗೆ ಗುರಿಪಡಿಸಬೇಕು.

ನಿಕ್ಷೇಪೋ ಯಃ ಕೃತೋ ಯೇನ ಯಾವಾಂಶ್ಚ ಕುಲಸನ್ನಿಧೌ ।
ತಾವಾನೇವ ಸ ವಿಜ್ಞೇಯೋ ವಿಬ್ರುವನ್ ದಂಡಮರ್ಹತಿ ॥ ೧೯೪

ನ್ಯಾಸ (ಇಟ್ಟವನು) ಇಡುವಾಗ ಇದ್ದ ಸಾಕ್ಷಿದಾರನು ಹೇಳಿದ ಧನ ಮೌಲ್ಯವೇ ನ್ಯಾಯವು. ಬಳಿಕ ನ್ಯಾಸ ಇಟ್ಟವನು ವ್ಯತ್ಯಾಸ ಮಾಡಿದರೆ ಅವನು ದಂಡನೀಯನು.

ಮಿಥೋ ದಾಯಃ ಕೃತೋ ಯೇನ ಗೃಹೀತೋ ಮಿಥ ಏವ ವಾ ।
ಮಿಥ ಏವ ಪ್ರದಾತವ್ಯೋ ಯಥಾ ದಾಯಸ್ತಥಾ ಗ್ರಹಃ ॥ ೧೯೫

ನಿಕ್ಷೇಪ ಇಡುವಾಗ ತೆಕ್ಕೊಳ್ಳುವಾಗ ಅವರಿಬ್ಬರ ಸಾಕ್ಷಿಯನ್ನು ಅಪೇಕ್ಷಿಸದೆ ಅನ್ಯೋನ್ಯ ಮೈತ್ರಿಯಿಂದ ಮಾಡಿದ ವ್ಯವಹಾರದಲ್ಲಿ ನಿಕ್ಷೇಪದ ಪ್ರತ್ಯರ್ಪಣ ಮಾಡುವಾಗ ನಿಕ್ಷೇಪವನ್ನು ಮರುಪಾವತಿ ಮಾಡುವವನಿಗೆ ಸಾಕ್ಷಿಯಿಲ್ಲದೆ ಕೊಡಲಾರೆನೆಂದು ಹೇಳುವ ಹಕ್ಕು ಇಲ್ಲ. ಕೊಟ್ಟಂತೆ ಕೊಡುವುದು. ಪುನಃ ಹಿಂದೆ ನಿಕ್ಷೇಪ ಪಡೆಯುವವನು ಸಾಕ್ಷಿಯನ್ನು ಬೇಕೆಂದು ಹೇಳುವ ಆಧಿಕಾರವನ್ನು ನಿರಾಕರಿಸಿರುವುದು. ಇಲ್ಲಿ ನಿಕ್ಷೇಪ ಪುನಃ ಕೊಡುವವನು ಸಾಕ್ಷಿಯನ್ನು ಬೇಕೆಂದು ಹೇಳುವ ಅಧಿಕಾರವನ್ನು ನಿರಾಕರಿಸುವುದು. ಹೀಗೆ ಎರಡು ಜನರೂ ಶರತ ಏರಿಸಕೂಡದು ಎಂದು ಭಾವ.

ನಿಕ್ಷಿಪ್ತಸ್ಯ ಧನಸ್ಯೈವಂ ಪ್ರೀತ್ಯೋಪನಿಹಿತಸ್ಯ ಚ ।
ರಾಜಾ ವಿನಿರ್ಣಯಂ ಕುರ್ಯಾತ್ ಅಕ್ಷಿಣ್ವನ್ ನ್ಯಾಸಧಾರಿಣಂ ॥ ೧೯೬

ಸೊತ್ತನ್ನು ಕಾಪಾಡಲು ಕೊಟ್ಟು ನಿಕ್ಷೇಪ ಮಾಡಿದರೂ ಪ್ರೀತಿಯಿಂದ ಸ್ವಲ್ಪ ಕಾಲ ಅನುಭವಿಸಲು ಕೊಟ್ಟು ಉಪನಿಧಾನ ಮಾಡಿದರೂ ಈ ಎರಡು ಸಂದರ್ಭಗಳಲ್ಲೂ ನಿರ್ಣಯವು ಉಪಕಾರ ಮಾಡಿದ ಮೂಲಕ ಕ್ಲಪ್ತಕಾಲ ಹೊಂದಿದವನನ್ನು ಸರ್ವಥಾ ಪೀಡಿಸಬಾರದು.

ವಿಕ್ರೀಣೀತೇ ಪರಸ್ಯ ಸ್ವಂ ಯೋಽಸ್ವಾಮೀ ಸ್ವಾಮ್ಯಸಮ್ಮತಃ ।
ನ ತಂ ನಯೇತ ಸಾಕ್ಷ್ಯಂ ತು ಸ್ತೇನಮಸ್ತೇನಮಾನಿನಂ ॥ ೧೯೭

ಪರದ್ರವ್ಯವನ್ನು ಸ್ವಾಮಿ ಸಮ್ಮತಿಯಿಲ್ಲದೆ ಮಾರಾಟ ಮಾಡಿ ಹಣ ತೆಕ್ಕೊಳ್ಳುವವನು ಕಳ್ಳನೇ ಆದುದರಿಂದ ಅವನು ಎಂದೂ ಸಾಕ್ಷಿಯಾಗಲು ಅರ್ಹನಲ್ಲ, ವಂಚಕನು. ಪ್ರಾಮಾಣಿಕನಲ್ಲ.

ಅವಹಾರ್ಯೋ ಭವೇಚ್ಚೈವ ಸಾನ್ವಯಃ ಷಟ್ಶತಂ ದಮಂ ।
ನಿರನ್ವಯೋಽನಪಸರಃ ಪ್ರಾಪ್ತಃ ಸ್ಯಾಚ್ಚೌರಕಿಲ್ಬಿಷಂ ॥ ೧೯೮

ಪರದ್ರವ್ಯವನ್ನು ಮಾರಾಟ ಮಾಡಿದವನು ಸ್ವಾಮಿ ಸಂಬಂಧಿಯಾಗಿದ್ದರೆ ೬೦೦ ಹಣ ದಂಡನೆಯು. ಬೇರೆಯವನಾದರೆ ಕಳ್ಳನಂತೆ ದಂಡ್ಯನು. (ಸ್ವಾಮಿ) ಮಾಲಿಕನ ಬಂಧುವಲ್ಲದಿದ್ದರೂ ಅವನ ಉತ್ತರಾಧಿಕಾರಿಯು ಕೊಟ್ಟಿದ್ದು, ಮಾರಿದ್ದು ಆದರೆ ಅದು ಕಳ್ಳತನವಲ್ಲವಾದರೂ ಅಕ್ರಮವ್ಯವಹಾರದ ದಂಡನೆಗೆ ಗುರಿಯಾಗುವನು.

ಅಸ್ವಾಮಿನಾ ಕೃತೋ ಯಸ್ತು ದಾಯೋ ವಿಕ್ರಯ ಏವ ವಾ ।
ಅಕೃತಃ ಸ ತು ವಿಜ್ಞೇಯೋ ವ್ಯವಹಾರೇ ಯಥಾ ಸ್ಥಿತಿಃ ॥ ೧೯೯

ಮಾರಾಟ ಮಾಡಲು ಕೊಡಲು ಸ್ವಾಮಿಯಲ್ಲದವನಿಗೆ ಹಕ್ಕು ಇಲ್ಲದಿರುವುದರಿಂದ ಅಂತಹವರು ಕೊಟ್ಟಿದ್ದು ಮಾರಿದ್ದು ಅಲ್ಲವೆಂದೇ ನಿರ್ಣಯ. ದಾನ ವಿಕ್ರಯವನ್ನು ಸ್ವಾಮಿ ಮಾಡಿದರೆ ಮಾತ್ರ ನ್ಯಾಯವು.

ಸಂಭೋಗೋ ದೃಶ್ಯತೇ ಯತ್ರ ನ ದೃಶ್ಯೇತಾಗಮಃ ಕ್ವಚಿತ್ ।
ಆಗಮಃ ಕಾರಣಂ ತತ್ರ ನ ಸಂಭೋಗ ಇತಿ ಸ್ಥಿತಿಃ ॥ ೨೦೦

ಒಬ್ಬನು ಒಂದು ಸೊತ್ತನ್ನು ಅನುಭವಿಸುತ್ತಾನೆ. ಅದು ಅವನಿಗೆ ಬಂದು ಸೇರಿದ—ಸಿಕ್ಕಿದ ವಿಧಾನವು ತಿಳಿದಿಲ್ಲ. ದಾನ ಕ್ರಯಗಳು ಪ್ರತ್ಯಕ್ಷವಲ್ಲ. ಅಂತಹ ಸಂದರ್ಭದಲ್ಲಿ, ಅನುಭವದ ಹಕ್ಕು ಮಾನ್ಯವಲ್ಲ. ಹೇಗೋ ಬಂದಿದೆಯೆಂದು ಮಾನ್ಯವಾಗುವುದು.

ವಿಕ್ರಯಾದ್ಯೋ ಧನಂ ಕಿಂಚಿದ್ಗೃಹ್ಣೀಯಾತ್ಕುಲಸನ್ನಿಧೌ ।
ಕ್ರಯೇಣ ಸ ವಿಶುದ್ಧಂ ಹಿ ನ್ಯಾಯತೋ ಲಭತೇ ಧನಂ ॥ ೨೦೦

ಹಣ ಕೊಟ್ಟು ಒಂದು ಸೊತ್ತನ್ನು ತಕ್ಕೊಳ್ಳುವಾಗ ಮಾರಾಟದಲ್ಲಿ ಅದರ ಬೆಲೆಯನ್ನು ಬಹಿರಂಗವಾಗಿ ಕೊಟ್ಟಿದ್ದಾನೆ. ಆದುದರಿಂದ ಆ ಸೊತ್ತು ನ್ಯಾಯವಾಗಿ ತಕ್ಕೊಂಡವನದು. ಅದು ಕಳ್ಳಮಾಲು ಆಗಿರಬಹುದು ಎಂದರೆ ಯಾರದೋ ಸೊತ್ತನ್ನು ಯಾರೋ ಕೊಟ್ಟಿರಬಹುದು. ಕೊಟ್ಟವನು ಈಗ

ಸಿಗದಿರಬಹುದು. ಆದರೂ ಅಂಗಡಿಗಾರನು ಯೋಗ್ಯ ಬೆಲೆ ಕೊಟ್ಟೇ ತಕ್ಕೊಂಡದ್ದರಿಂದ ಅದು ನ್ಯಾಯವಾಗಿ ಅವನ ಸೊತ್ತು.

ಅಥ ಮೂಲಮನಾಹಾರ್ಯಂ ಪ್ರಕಾಶಕ್ರಯಶೋಧಿತಃ ।
ಅದಂಡ್ಯೋ ಮುಚ್ಯತೇ ರಾಜ್ಞಾ ನಾಷ್ಟಿಕೋ ಲಭತೇ ಧನಂ ॥ ೨೦೨

ಕಳ್ಳ ಮಾರಾಟಗಾರನು ಕಾಣೆಯಾದರೂ ಅಂಗಡಿಗಾರನು ರಾಜನಿಂದ ದಂಡ್ಯನಲ್ಲ. ಅವನು ನ್ಯಾಯವಾಗಿ ಹಣ ಕೊಟ್ಟಿದ್ದಾನೆ. ಆದರೆ ಅದು ಸತ್ಯವಾಗಿ ಯಾರ ಸೊತ್ತೋ ಅಂಥ ಕಳಕೊಂಡವನು ಅದನ್ನು ಪಡೆಯಲೇ ಬೇಕು. ಅಂಗಡಿಕಾರನಿಗೆ ಅರ್ಧ ಹಣ ಕೊಡಬೇಕೆಂದು ನಿರ್ಣಯ.

ನಾನ್ಯದನ್ಯೇನ ಸಂಸೃಷ್ಟರೂಪಂ ವಿಕ್ರಯಮರ್ಹತಿ ।
ನ ಚಾಸಾರಂ ನ ಚ ನ್ಯೂನಂ ನ ದೂರೇಣ ತಿರೋಹಿತಂ ॥ ೨೦೩

ಒಂದಕ್ಕೆ ಒಂದು ಬೆರಕೆ ಮಾಡಿ ಮಾರಬಾರದು. ಹಾಳನ್ನು ಒಳ್ಳೆ ದೆಂದು ಲೆಖ್ಖದ ತೂಕಕ್ಕಿಂತ ಕಡಿಮೆ—ಮಾಲು ಕೈಯಲ್ಲಿ ಕೊಡದೆ ಅಡಗಿಸಿ ಮಾರಾಟ ಮಾಡಬಾರದು. ಸ್ವಾಮಿವಿಕ್ರಯವಾದರೂ ಅಸ್ವಾಮಿ ವಿಕ್ರಯ ಸಮಾನವೆಂದೇ ಆದರ ದಂಡನೆಯು ಧರ್ಮವು.

ಅನ್ಯಾಂ ಚೇದ್ದರ್ಶಯಿತ್ವಾನ್ಯಾ ವೋಢುಃ ಕನ್ಯಾ ಪ್ರದೀಯತೇ ।
ಉಭೇ ತ ಏಕಶುಲ್ಕೇನ ವಹೇದಿತ್ಯಬ್ರವೀನ್ಮನುಃ ॥ ೨೦೪

ಹಣಕೊಟ್ಟು ಹೆಣ್ಣು ಪಡೆಯುವಾಗ ಕೊಡುವವರು ಒಳ್ಳೆ ಹುಡುಗಿ ತೋರಿಸಿ ಇನ್ನೊಂದು ಹುಡುಗಿಯನ್ನು ಮದುವೆ ಮಾಡಿದರೆ ಆಗ ಮೊದಲಿನ ಶುಲ್ಕದಿಂದ ಆ ಎರಡು ಹುಡುಗಿಯರನ್ನು ಮದುವೆಯಾಗಲು ಆ ವರನು ಹಕ್ಕುಳ್ಳವನು ಇದು ಮನುಮತ.

ನೋನ್ಮತ್ತಾಯಾ ನ ಕುಷ್ಠಿನ್ಯಾ ನ ಚ ಯಾ ಸ್ಪೃಷ್ಟಮೈಥುನಾ ।
ಪೂರ್ವಂ ದೋಷಾನಭಿಖ್ಯಾಪ್ಯ ಪ್ರದಾತಾ ದಂಡಮರ್ಹತಿ ॥ ೨೦೫

ಹುಚ್ಚು, ಕುಷ್ಠ, ಪರಸ್ಪರ್ಶ ದೋಷವುಳ್ಳ ಹುಡುಗಿಯ ವಿಷಯ ಹೇಳಿ ಇಷ್ಟ ಇದ್ದವನು ಮದುವೆಯಾಗುವುದಾದರೆ ಕೊಡಬಹುದು. ಹೇಳದೆ

ಮದುವೆ ಮಾಡಿದ ಕನ್ಯಾಪಕ್ಷದವರು ದಂಡನೀಯರು. ದಂಡಪರಿಮಾಣ ವನ್ನು ಮುಂದೆ ಹೇಳುವರು. ವಿನಿಮಯ ವಂಚನೆಯಾದುದರಿಂದ ಈ ಪ್ರಕರಣದಲ್ಲಿ ಬಂದಿದೆ.

ಋತ್ವಿಗ್ಯದಿ ವೃತೋ ಯಜ್ಞೇ ಸ್ವಕರ್ಮ ಪರಿಹಾಪಯೇತ್ ।
ತಸ್ಯ ಕರ್ಮಾನುರೂಪೇಣ ದೇಯೋಽಂಶಃ ಸಹ ಕರ್ತೃಭಿಃ ॥ ೨೦೬

ಯಾಗದಲ್ಲಿ ಋತ್ವಿಗ್ವರಣದ ಬಳಿಕ ಋತ್ವಿಕ್ಕಿಗೆ ವ್ಯಾಧಿ, ಸಂಬಂಧಿಮರಣ ಮುಂತಾದ ಪ್ರತಿಬಂಧಕ ಬಂದು ಅವನ ಕರ್ಮವು ಉಳಿದುಹೋದರೆ ಆಗ ಆ ವರೆಗೆ ಮಾಡಿದ ಕರ್ಮಕ್ಕೆ ಸರಿಯಾಗಿ ದಕ್ಷಿಣಾಂಶವನ್ನು ಕೊಡಬೇಕು.

ದಕ್ಷಿಣಾಸು ಚ ದತ್ತಾಸು ಸ್ವಕರ್ಮ ಪರಿಹಾಪಯನ್ ।
ಕೃತ್ಸ್ನಮೇವ ಲಭೇತಾಂಶಮನ್ಯೇನೈವ ಚ ಕಾರಯೇತ್ ॥ ೨೦೭

ಯಾಗದಲ್ಲಿ ದಕ್ಷಿಣಾದಾನದ ಬಳಿಕ ವಿಘ್ನ ಬಂದು ಕರ್ಮವನ್ನು ಋತ್ವಿ ಜನು ಮಾಡದಿದ್ದರೆ ದಕ್ಷಿಣೆಯಲ್ಲಿ ಲೋಪವಿಲ್ಲ. ಉಳಿದ ಕರ್ಮವನ್ನು ಇತರರಿಂದ ಮಾಡಿಸಬೇಕು.

ಯಸ್ಮಿನ್ ಕರ್ಮಣಿ ಯಾಸ್ತು ಸ್ಯುರುಕ್ತಾಃ ಪ್ರತ್ಯಂಗದಕ್ಷಿಣಾಃ ।
ಸ ಏವ ತಾ ಆದದೀತ ಭಜೇರನ್ ಸರ್ವ ಏವ ವಾ ॥ ೨೦೮

ಒಂದು ಕರ್ಮದಲ್ಲಿ ಅಂಗದಕ್ಷಿಣೆಗಳು ತುಂಬಾ ಇದ್ದರೆ ಆಗದಕ್ಷಿಣೆ ಎಲ್ಲ ಋತ್ವಿಜರಿಗೆ ಸಮವೊ ವಿಷಮ ಭಾಗವೋ ಎಂದು ಸಂಶಯ. ಅದಕ್ಕೆ ಸಿದ್ಧಾಂತ—

ರಥಂ ಹರೇತ ಚಾಧ್ವರ್ಯುರ್ಬ್ರಹ್ಮಾಧಾನೇ ಚ ವಾಜಿನಂ ।
ಹೋತಾ ವಾಪಿ ಹರೇದಶ್ವಂ ಉದ್ಗಾತಾ ಚಾಪ್ಯನಃ ಕ್ರಯೇ ॥ ೨೦೯

ಅಧ್ವರ್ಯುವಿಗೆ ರಥವೂ ಬ್ರಹ್ಮನಿಗೆ ಓಟದ ಕುದುರೆಯೂ ಹೋತೃ ವಿಗೆ ಕುದುರೆಯೂ ಉದ್ಗಾತೃವಿಗೆ ಸೋಮಕ್ರಯವಾಹನವಾದ ಗಾಡಿಯೂ ದಕ್ಷಿಣೆಯೆಂದು ನಿಯಮವು.

ಸರ್ವೇಷಾಮರ್ಧಿನೋ ಮುಖ್ಯಾಸ್ತದರ್ಧೇನಾರ್ಧಿನೋಽಪರೇ ।
ತೃತೀಯಿನಸ್ತೃತೀಯಾಂಶಾಶ್ಚತುರ್ಥಾಂಶಾಶ್ಚ ಪಾದಿನಃ ॥ ೨೧೦

ಹದಿನಾರುಮಂದಿ ಋತ್ವಿಜರು. ಅವರಲ್ಲಿ ಹೋತೃ, ಅಧ್ವರ್ಯು, ಬ್ರಹ್ಮ ಉದ್ಗಾತೃಗಳು, ಸಂಪೂರ್ಣ ದಕ್ಷಿಣೆಯ ಅರ್ಧಕ್ಕೆ ಹಕ್ಕುದಾರರು. ೪೮ ಗೋವುಗಳು ಆ ಅರ್ಧವು. ಮೈತ್ರಾವರುಣಿ ಪ್ರತಿಪ್ರಸ್ಥಾತೃ, ಬ್ರಾಹ್ಮಣಾಚ್ಛರಿಸಿ, ಪ್ರಸ್ತೋತೃಗಳು ಅರ್ಧದ ಅರ್ಧ ೨೪ ಗೋವುಗಳು ದಕ್ಷಿಣೆ ಉಳ್ಳವರು. ಅಚ್ಛಾವಾಚ್‌ನೇಷ್ಟೃ, ಆಗ್ನೀಧ್ರ, ಪ್ರತಿಹರ್ತೃ ಎಂಬವರು ಮೂರನೆ ಒಂದು ಭಾಗದ ದಕ್ಷಿಣೆ ಉಳ್ಳವರು. ೧೨ ಗೋವುಗಳು. ಗ್ರಾವಸ್ತುತ್ ನೇತೃ, ಪೋತೃ, ಸುಬ್ರಹ್ಮಣ್ಯ ಈ ಋತ್ವಿಜರು ಮುಖ್ಯ ಋತ್ವಿಜರ ದಕ್ಷಿಣೆಯ ನಾಲ್ಕನೆ ಒಂದಂಶದ ದಕ್ಷಿಣೆ ಉಳ್ಳವರು.

ಸಂಭೂಯ ಸ್ವಾನಿ ಕರ್ಮಾಣಿ ಕುರ್ವದ್ಭಿರಿಹ ಮಾನವೈಃ ।
ಅನೇನ ವಿಧಿಯೋಗೇನ ಕರ್ತವ್ಯಾಂಶಪ್ರಕಲ್ಪನಾ ॥ ೨೧೧

ಬಹುಮಂದಿ ಒಟ್ಟು ಸೇರಿ ಮಾಡುವ ಯಾಗದಲ್ಲಿ ದಕ್ಷಿಣಾನಿಯಮವು ಈ ರೀತಿ. ಈ ವಿಷಯ ಇಲ್ಲಿಗೆ ಮುಗಿಯಿತು.

ಧರ್ಮಾರ್ಥಂ ಯೇನ ದತ್ತಂ ಸ್ಯಾತ್ಕಸ್ಮೈಚಿದ್ಯಾಚತೇ ಧನಂ ।
ಪಶ್ಚಾಚ್ಚ ನ ತಥಾ ತತ್ಸ್ಯಾನ್ನ ದೇಯಂ ತಸ್ಯ ತದ್ಭವೇತ್ ॥ ೨೧೨

ಒಬ್ಬನು ಯಜ್ಞಾದಿ ಧರ್ಮಕಾರ್ಯಕ್ಕೆಂದು ಯಾಚನೆ ಮಾಡಿದ ಹಣವನ್ನು ಅದು ಬಿಟ್ಟು ಬೇರೆ ರೀತಿ ಖರ್ಚು ಮಾಡಿದರೆ ಆ ಹಣವನ್ನು ಪುನಃ ಪಡೆಯಬಹುದು.

ಯದಿ ಸಂಸಾಧಯೇತ್ತತ್ತು ದರ್ಪಾಲ್ಲೋಭೇನ ವಾ ಪುನಃ ।
ರಾಜ್ಞಾ ದಾಪ್ಯಃ ಸುವರ್ಣಂ ಸ್ಯಾತ್ತಸ್ಯ ಸ್ತೇಯಸ್ಯ ನಿಷ್ಕೃತಿಃ ।

ಹಾಗೆ ವ್ಯಾಜದಿಂದ ಪಡೆದ ಹಣವನ್ನು ಲೋಭದಿಂದ ಇಲ್ಲವೇ ದರ್ಪದಿಂದ ಪುನಃ ಕೇಳಿದಾಗ ಕೊಡದಿದ್ದರೆ ಆ ಕಳ್ಳತನದ ಪ್ರಾಯಶ್ಚಿತ್ತವಾಗಿ ಒಂದು ಸುವರ್ಣದಂಡನೆಯನ್ನು ರಾಜನು ವಿಧಿಸಬೇಕು.

ದತ್ತಸ್ಯೈಷೋದಿತಾ ಧರ್ಮ್ಯಾ ಯಥಾವದನಪಕ್ರಿಯಾ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ವೇತನಸ್ಯಾನಪಕ್ರಿಯಾಂ ॥ ೨೧೪

ಈ ವರೆಗೆ ಕೊಟ್ಟಿದ್ದನ್ನು ಕೊಡದೆ ಇದ್ದರೆ ಅದು ಧರ್ಮಸಮ್ಮತ ವಾಗುವಂತೆ ಪರಿಹರಿಸುವ ವಿಧಾನವು ನಿರೂಪಿಸಲ್ಪಟ್ಟಿತು. ಇನ್ನು ಮೇಲೆ ವೇತನದ ವಿವಾದ ವಿಷಯವನ್ನು ವಿವರಿಸುತ್ತೇನೆ.

ಭೃತೋ ನಾರ್ತೋ ನ ಕುರ್ಯಾದ್ಯೋ ದರ್ಪಾತ್ಕರ್ಮ ಯಥೋದಿತಂ ।
ಸ ದಂಡ್ಯಃ ಕೃಷ್ಣಲಾನ್ಯಷ್ಟೌ ನ ದೇಯಂ ಚಾಸ್ಯ ವೇತನಂ ॥ ೨೧೫

ಕೂಲಿಯವನು ರೋಗವಿಲ್ಲದಿದ್ದರೂ ಒಪ್ಪಿದ ಕೆಲಸವನ್ನು ಮಾಡದೆ ಇರಲು ದರ್ಪವು ಕಾರಣವಾದರೆ ಅವನಿಗೆ ಎಂಟು ಕೃಷ್ಣಲ ಹಣ ದಂಡನೆಯು. ಮತ್ತು ಮಾಡಿದ್ದಕ್ಕೆ ಸಂಬಳವಿಲ್ಲ.

ಆರ್ತಸ್ತು ಕುರ್ಯಾತ್ ಸ್ವಸ್ಥಃ ಸನ್ಯಥಾಭಾಷಿತಮಾದಿತಃ ।
ಸ ದೀರ್ಘಸ್ಯಾಪಿ ಕಾಲಸ್ಯ ತಲ್ಲಭೇತೈವ ವೇತನಂ ॥ ೨೧೬

ರೋಗಮುಕ್ತಿಯ ನಂತರ ವಚನದಂತೆ ಕರ್ಮವನ್ನು ಮುಗಿಸಿದರೆ ಸಮಯ ಮೀರಿದರೂ ಅವನು ಕೂಲಿಯನ್ನು ಹೊಂದಲೇಬೇಕು. ಕಾಲದ ಅಂಶದಲ್ಲಿ ತಪ್ಪಿದರೂ ಕಾರ್ಯವು ಪೂರ್ಣ.

ಯಥೋಕ್ತಮಾರ್ತಃ ಸುಸ್ಥೋ ವಾ ಯಸ್ತತ್ಕರ್ಮ ನ ಕಾರಯೇತ್ ।
ನ ತಸ್ಯ ವೇತನಂ ದೇಯಮಲ್ಪೋನಸ್ಯಾಪಿ ಕರ್ಮಣಃ ॥ ೨೧೭

ಆರೋಗ್ಯವಿದ್ದರೂ ಇಲ್ಲದಿದ್ದರೂ ಕೆಲಸವನ್ನು ಸ್ವಲ್ಪ ಮಾಡಿ ಉಳಿಕೆ ಪೂರೈಸದಿದ್ದರೆ ಕೂಲಿ ಕೊಡತಕ್ಕದ್ದಲ್ಲ.

ಏಷ ಧರ್ಮೋಽಖಿಲೇನೋಕ್ತೋ ವೇತನಾದಾನಕರ್ಮಣಃ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಧರ್ಮಂ ಸಮಯಭೇದಿನಾಂ ॥ ೨೧೮

ಕೂಲಿ ವಿಷಯ ಮುಗಿಸಿ ಶರತ ಮೀರುವ ವಿಷಯ ಹೇಳುತ್ತೇನೆ.

ಯೋ ಗ್ರಾಮದೇಶಸಂಘಾನಾಂ ಕೃತ್ವಾ ಸತ್ಯೇನ ಸಂವಿದಂ ।
ವಿಸಂವದೇನ್ನರೋ ಲೋಭಾತ್ತಂ ರಾಷ್ಟ್ರಾದ್ವಿಪ್ರವಾಸಯೇತ್ ॥ ೨೧೯

ಯಾವುದೇ ಕೆಲ ಜನರು ಒಂದು ನಿಯಮವನ್ನು ಅನ್ಯೋನ್ಯ ಮಾಡಿಕೊಂಡು ಕೆಲಸ ಆರಂಭಸಿ ಮತ್ತೆ ಆಸೆಯಿಂದ ತಪ್ಪಿದರೆ ಅಂತಹವನನ್ನು ತನ್ನ ದೇಶದಿಂದ ಓಡಿಸಬೇಕು. ಮತ್ತು,

ನಿಗೃಹ್ಯ ದಾಪಯೇಚ್ಚೈನಂ ಸಮಯವ್ಯಭಿಚಾರಿಣಂ ।
ಚತುಃಸುವರ್ಣಾನ್ ಷಣ್ನಿಷ್ಕಾನ್ ಶತಮಾನಂ ಚ ರಾಜತಂ ॥ ೨೨೦

ಅಂತಹ ನಿಯಮ ಮೀರುವವನಿಗೆ ನಾಲ್ಕು ಸುವರ್ಣ ಆರು ನಿಷ್ಕ ನೂರು ಬೆಳ್ಳಿ ನಾಣ್ಯ ದಂಡನೆಯು.

ಏತದ್ದಂಡವಿಧಿಂ ಕುರ್ಯಾದ್ಧಾರ್ಮಿಕಃ ಪೃಥಿವೀಪತಿಃ ।
ಗ್ರಾಮಜಾತಿಸಮೂಹೇಷು ಸಮಯವ್ಯಭಿಚಾರಿಣಾಂ ॥ ೨೨೧

ನಿಯಮ (ಕರಾರು) ಮೀರುವವರಿಗೆ ನಿಯಮದ ಲಾಭ-ನಷ್ಟಗಳನ್ನು ನೋಡಿಕೊಂಡು ಎಲ್ಲ ಅಂಶ ಪ್ರತ್ಯೇಕವಾಗಿ ಅಪರಾಧದ ತುಲನೆಯಿಂದ ಧಾರ್ಮಿಕನು ವಿಧಿಸಬೇಕು.

ಕ್ರೀತ್ವಾ ವಿಕ್ರೀಯ ವಾ ಕಿಂಚಿದ್ಯಸ್ಯೇಹಾನುಶಯೋ ಭವೇತ್ ।
ಸೋಽಂತರ್ದಶಾಹಾತ್ತದ್ದ್ರವ್ಯಂ ದದ್ಯಾಚ್ಚೈವಾದದೀತ ವಾ ॥ ೨೨೨

ಕೊಂಡು, ಕೊಟ್ಟು, ಕ್ರಯ, ದ್ರವ್ಯಗಳ ಗುಣದಲ್ಲಿ ಏರುಪೇರು ತುಂಬ ಆಗಿ ವ್ಯವಹಾರದಲ್ಲಿ ಸೋಲುಕಂಡರೆ ಹತ್ತು ದಿನದೊಳಗೆ ಕೊಟ್ಟವನು ಅಥವಾ ತಕ್ಕೊಂಡವನು ಪುನಃ ಹಿಂತಿರುಗಿಸಬಹುದು.

ಪರೇಣ ತು ದಶಾಹಸ್ಯ ನ ದದ್ಯಾನ್ನಾಪಿ ದಾಪಯೇತ್ ।
ಆದದಾನೋ ದದಚ್ಚೈವ ರಾಜ್ಞಾ ದಂಡ್ಯಃ ಶತಾನಿ ಷಟ್ ॥ ೨೨೩

ಹತ್ತುದಿನದ ಮೇಲೆ ಕೊಡಲು ತಕ್ಕೊಳ್ಳಲು ಕೂಡದು. ಹಾಗೆ ಮಾಡಿದರೆ ೬೦೦ ಹಣ ದಂಡನೆಯು.

ಯಸ್ತು ದೋಷವತೀಂ ಕನ್ಯಾಮನಾಖ್ಯಾಯ ಪ್ರಯಚ್ಛತಿ ।
ತಸ್ಯ ಕುರ್ಯಾನ್ನೃಪೋ ದಂಡಂ ಸ್ವಯಂ ಷಣ್ಣವತಿಂ ಪಣಾನ್ ॥ ೨೨೪

ಕನ್ಯಾದೋಷಗಳನ್ನು ವರಪಕ್ಷದವರಿಗೆ ತಿಳಿಸದೆ ಮದುವೆ ಮಾಡಿದರೆ ಅಂತಹ ಕನ್ಯಾಪಕ್ಷದವರಿಗೆ ಅರುವತ್ತಾರು ಪಣ ದಂಡನೆಯು.

ಅಕನ್ಯೇತಿ ತು ಯಃ ಕನ್ಯಾಂ ಬ್ರೂಯಾದ್ದ್ವೇಷೇಣ ಮಾನವಃ |
ಸ ಶತಂ ಪ್ರಾಪ್ನುಯಾದ್ದಂಡಂ ತಸ್ಯಾ ದೋಷಮದರ್ಶಯನ್ ॥ ೨೨೫

ಇವಳು ಕನ್ಯೆಯಲ್ಲಿ ಪುರುಷ ಸ್ಪರ್ಶವುಳ್ಳವಳು ಎಂದು ದ್ವೇಷದಿಂದ (ಸುಳ್ಳು) ಆಪಾದನೆ ಮಾಡಿ ಅದನ್ನು ನಿದರ್ಶಿಸಲು ಅಸಮರ್ಥನಾದರೆ ನೂರು ಪಣ ದಂಡನೆಯು.

ಪಾಣಿಗ್ರಹಣಿಕಾ ಮಂತ್ರಾಃ ಕನ್ಯಾಸ್ವೇವ ಪ್ರತಿಷ್ಠಿತಾಃ |
ನಾಕನ್ಯಾಸು ಕ್ವಚಿನ್ನೃಣಾಂ ಲುಪ್ತಧರ್ಮಕ್ರಿಯಾ ಹಿ ತಾಃ ॥ ೨೨೬

( ಪಾಣಿಗ್ರಹಣ ) ವಿವಾಹದಲ್ಲಿ ಹೇಳಬೇಕಾದ ವೇದಮಂತ್ರಗಳಲ್ಲಿ ಕನ್ಯಾಪದವಿರುವುದರಿಂದ ಋತುಮತಿಯು ಪುರುಷಸ್ಪರ್ಶವುಳ್ಳವಳು ಅಲ್ಲದ ಹುಡುಗಿಯ ವಿವಾಹವು ಮುಖ್ಯವಾದ ಧರ್ಮವಿವಾಹವೆಂದು ಆಗುವುದು. ಕ್ಷತಯೋನಿಯಾದ ಗರ್ಭಿಣೀ ಸಂಸ್ಕಾರವನ್ನು ಮನುಸಮ್ಮತಿಸುತ್ತಾನೆ. ಗಂಧರ್ವ ವಿವಾಹದಲ್ಲಿಯೂ ಬಳಿಕ ಮಂತ್ರವಿವಾಹವು ಧರ್ಮವು. ಆದುದರಿಂದ ದುರದುಷ್ಟದಿಂದ ಅಕನ್ಯಾ ವಿವಾಹವು ಮಂತ್ರಪೂರ್ವಕವಾದರೂ ಅದು ಧಾರ್ಮಿಕವಾದ ವಿವಾಹವಲ್ಲ. ಹಾಗಾಗಿ ಕನ್ಯಾದೂಷಣೆಯಲ್ಲಿ ದಂಡನೆಯು.

ಪಾಣಿಗ್ರಹಣಿಕಾ ಮಂತ್ರಾ ನಿಯತಂ ದಾರಲಕ್ಷಣಂ |
ತೇಷಾಂ ನಿಷ್ಠಾ ತು ವಿಜ್ಞೇಯಾ ವಿದ್ವದ್ಭಿಃ ಸಪ್ತಮೇ ಪದೇ | ೨೨೭

ಹುಡುಗಿಯು ಹೆಂಡತಿಯಾಗುವುದು ಮಂತ್ರಗಳಿಂದ. ಗೋತ್ರಭೇದ ಧರ್ಮಾಧಿಕಾರಗಳು ಅನ್ಯಥಾ ಇಲ್ಲ. ಸುಖ, ಧನ, ಪರಿಚರ್ಯೆಗಳನ್ನು ಸಂಬಳದವಳೂ ಕೊಡಬಹುದು. ದೀರ್ಘಕಾಲದ ವಿವಾಹ ಸಂಸ್ಕಾರದಲ್ಲಿ ಸಪ್ತಪದಾ ವಿಧಿಯಲ್ಲಿ ಮಂತ್ರವು ಗೆಳತಿಯಾಗೆಂದು ಹೇಳುವುದರಿಂದ ಆ ಬಳಿಕ ವಿಚ್ಛೇದವಿಲ್ಲದ ಸಂಬಂಧ. ಈ ಮೊದಲು ವರನು ಮೃತಪಟ್ಟರೆ ದೋಷ (ರೋಗ)ವುಳ್ಳವನೆಂದು ತಿಳಿದರೆ ಯೋಗ್ಯ ವರನೊಡನೆ ಬೇರೆ ವಿವಾಹ ಮಾಡಬಹುದು.

ಯಸ್ಮಿನ್ ಯಸ್ಮಿನ್ ಕೃತೇ ಕಾರ್ಯೇ ಯಸ್ಯೇಹಾನುಶಯೋ ಭವೇತ್ ।
ತಮನೇನ ವಿಧಾನೇನ ಧರ್ಮ್ಯೇ ಪಥಿ ನಿವೇಶಯೇತ್ ॥ ೨೨೮

ಯಾವುದೇ ಒಂದು ಕೆಲಸ ಮಾಡಿದ ಮೇಲೆ ವಿವಾದ ಬಂದರೆ ಈ ರೀತಿಯಿಂದ ಧರ್ಮಪರರಾಗುವಂತೆ ರಾಜನು ಮಾಡಬೇಕು.

ಪಶುಷು ಸ್ವಾಮಿನಾಂ ಚೈವ ಪಾಲಾನಾಂ ಚ ವ್ಯತಿಕ್ರಮೇ ।
ವಿವಾದಂ ಸಂಪ್ರವಕ್ಷ್ಯಾಮಿ ಯಥಾವದ್ಧರ್ಮತತ್ತ್ವತಃ ॥ ೨೨೯

ಪಶು ಸ್ವಾಮಿ ಪಶುಪಾಲಕರ ವಿವಾದ ನಿರ್ಣಯವನ್ನು ಹೇಳುತ್ತೇನೆ.

ದಿವಾ ವಕ್ತವ್ಯತಾ ಪಾಲೇ ರಾತ್ರೌ ಸ್ವಾಮಿನಿ ತದ್ಗೃಹೇ ।
ಯೋಗಕ್ಷೇಮೇಽನ್ಯಥಾ ಚೇತ್ತು ಪಾಲೋ ವಕ್ತವ್ಯತಾಮಿಯಾತ್ ॥ ೨೩೦

ಹಗಲು ಮಾತ್ರ ದನ ಕಾಯುವುದು ಕೆಲಸವಾದರೆ ಆಗ ಆದ ಪಶು ದೋಷಕ್ಕೆ ಪಾಲಕನೇ ಹೊಣೆ. ರಾತ್ರಿ ಸ್ವಾಮಿ ವಶ ಇರುವಾಗ ಆದ ಅನರ್ಥಕ್ಕೆ ಸ್ವಾಮಿ ಹೊಣೆ. ರಾತ್ರಿಯೂ ಪಾಲಕನು ಪಾಲಿಸಬೇಕೆಂದು ನಿಯಮವಾದರೆ ಆಗ ಪಾಲಕನು ಹೊಣೆ.

ಗೋಪಃ ಕ್ಷೀರಭೃತೋ ಯಸ್ತು ಸ ದುಹ್ಯಾದ್ದಶತೋ ವರಾಂ ।
ಗೋಸ್ವಾಮ್ಯನುಮತೇ ಭೃತ್ಯಃ ಸಾ ಸ್ಯಾತ್ಪಾಲೇಽಭೃತೇ ಭೃತಿಃ ॥ ೨೩೧

ಗೋಪಾಲನಿಗೆ ಅನ್ನ ಸಂಬಳವಿಲ್ಲದೆ ಕಾಯುವುದು ಕೆಲಸವಾದರೆ ಅವನು ಹತ್ತು ಗೋಗಳನ್ನು ಕಾದರೆ, ಆತನಿಗೆ ಒಂದು ಹಸುವನ್ನು ಕರೆದುಕೊಳ್ಳಲು ಕೊಡಬೇಕು. ಅದೇ ಹತ್ತು ದನಕಾಯಲು ಸಂಬಳವು.

ನಷ್ಟಂ ವಿನಷ್ಟಂ ಕೃಮಿಭಿಃ ಶ್ವಹತಂ ವಿಷಮೇ ಮೃತಂ ।
ಹೀನಂ ಪುರುಷಕಾರೇಣ ಪ್ರದದ್ಯಾತ್ಪಾಲ ಏವ ತು ॥ ೨೩೨

ಕಾಣೆಯಾದುದು, ಕೃಮಿ, ನಾಯಿ ತಿಂದದ್ದು, ಬಿದ್ದು ಸತ್ತದ್ದು ಪುರುಷ ಯತ್ನವಿಲ್ಲದೆ ನಾಶವಾದುದುಕ್ಕೆ ಪಾಲಕನು ಹೊಣೆಯು.

ವಿಘುಷ್ಯ ತು ಹೃತಂ ಚೌರೈರ್ನ ಪಾಲೋ ದಾತುಮರ್ಹತಿ ।
ಯದಿ ದೇಶೇ ಚ ಕಾಲೇ ಚ ಸ್ವಾಮಿನಃ ಸ್ವಸ್ಯ ಶಂಸತಿ ॥ ೨೩೩

ಕಳ್ಳರು ಗದ್ದಲ ಮಾಡಿ ಕದ್ದರೆ ಅದನ್ನು ಕೂಡಲೆ ಬಂದು ಸ್ವಾಮಿಗೆ ತಿಳಿಸಿದರೆ ಗೋಪಾಲನ ತಪ್ಪಿಲ್ಲ.

ಕರ್ಣೌ ಚರ್ಮ ಚ ವಾಲಂಶ್ಚ ಬಸ್ತಿಂ ಸ್ನಾಯುಂ ಚ ರೋಚನಾಂ ।
ಪಶುಷು ಸ್ವಾಮಿನಾಂ ದದ್ಯಾನ್ಮೃತೇಷ್ವಂಕಾನಿ ದರ್ಶಯೇತ್ ॥ ೨೩೪

ಗೋಗಳು ತಾವಾಗಿ ಸತ್ತರೆ ಕಿವಿ, ಚರ್ಮ, ಬಾಲ, ಬಸ್ತಿ, ಸ್ನಾಯು ರೋಚನಾಗಳನ್ನು ತಂದು ಸ್ವಾಮಿಗೆ ತೋರಿಸಬೇಕು. ಗೊರಸು ಕೋಡು ಸಹ ಗುರುತಾಗುವುದು.

ಅಜಾವಿಕೇ ತು ಸಂರುದ್ಧೇ ವೃಕೈಃ ಪಾಲೇ ತ್ವನಾಯತಿ ।
ಯಾಂ ಪ್ರಸಹ್ಯ ವೃಕೋ ಹನ್ಯಾತ್ಪಾಲೇ ತತ್ಕಿಲ್ಬಿಷಂ ಭವೇತ್ ॥ ೨೩೫

ಪಾಲಕನಿಲ್ಲದಾಗ ತೋಳವು ಆಡು-ಕುರಿಗಳನ್ನು ತಿಂದರೆ ಅದು ಪಾಲಕನ ಅಪರಾಧವು.

ತಾಸಾಂ ಚೇದವರುದ್ಧಾನಾಂ ಚರಂತೀನಾಂ ಮಿಥೋ ವನೇ ।
ಯಾಮುತ್ಪ್ಲುತ್ಯ ವೃಕೋ ಹನ್ಯಾತ್ ನ ಪಾಲಸ್ತತ್ರ ಕಿಲ್ಬಿಷೀ ॥ ೨೩೬

ಆಡು-ಕುರಿಗಳು ಹಿಂಡಾಗಿದ್ದರೂ ಮೇಯುವಾಗ ಕಾಡಿನಲ್ಲಿ ತೋಳವು ಹಾರಿ ಕೊಂದರೆ ಅದು ಪಾಲಕನ ಅಪರಾಧವಲ್ಲ.

ಧನುಃಶತಂ ಪರೀಹಾರೋ ಗ್ರಾಮಸ್ಯ ಸ್ಯಾತ್ಸಮಂತತಃ ।
ಶಮ್ಯಾಪಾತಾಸ್ತ್ರಯೋ ವಾಪಿ ತ್ರಿಗುಣೋ ನಗರಸ್ಯ ತು ॥ ೨೩೭

ಊರಿನ ಸುತ್ತಲೂ ನಾಲ್ಕುನೂರು ಕೋಲು ದೂರ ಧಾನ್ಯ ಬೆಳೆ ಬೆಳೆಸಬಾರದು. ಅದು ಪಶುಗಳು ಮೇಯುವ ಸ್ಥಳ. ಪಟ್ಟಣದಲ್ಲಿ ಇದರ ಮೂರು ಪಾಲು ದೂರ (೧೨೦೦೦) ಹುಲ್ಲುಗಾವಲು ತೋಟಮಾಡಬಾರದು.

ತತ್ರಾಪರಿವೃತಂ ಧಾನ್ಯಂ ವಿಹಿಂಸ್ಯುಃ ಪಶವೋ ಯದಿ ।
ನ ತತ್ರ ಪ್ರಣಯೇದ್ದಂಡಂ ನೃಪತಿಃ ಪಶುರಕ್ಷಿಣಾಂ ॥ ೨೩೮

ಆ ಹುಲ್ಲುಗಾವಲಿನಲ್ಲಿ ಆವರಣವಿಲ್ಲದೆ ಯಾರಾದರೂ ಧಾನ್ಯಬೆಳಸಿ ಅದನ್ನು ಪಶುಗಳು ತಿಂದರೆ ಆಗ ಪಶುಪಾಲಕರಿಗೆ ದಂಡನೆಯನ್ನು ರಾಜನು ವಿಧಿಸುವುದು ಬೇಡ.

ವೃತಿಂ ತತ್ರ ಪ್ರಕುರ್ವೀತ ಯಾಮುಷ್ಟ್ರೋ ನ ವಿಲೋಕಯೇತ್ ।
ಛಿದ್ರಂ ಚ ವಾರಯೇತ್ಸರ್ವಂ ಶ್ವಸೂಕರಮುಖಾನುಗಂ ॥ ೨೩೯

ಆ ಹುಲ್ಲುಗಾವಲಿನಲ್ಲಿ ಯಾರಾದರೂ ಬೆಳೆ ಮಾಡುವುದಾದರೆ ಅಲ್ಲಿ ಬೇಲಿ ಬೇಕು. ಅದು ಒಂಟೆ ಇಣಿಕಿ ನೋಡಲಾರದಷ್ಟು ಎತ್ತರವಿರಬೇಕು. ನಾಯಿ ಹಂದಿಗಳು ನುಗ್ಗದಷ್ಟು ತೂತಿಲ್ಲದೆ ದಪ್ಪವಾಗಿರಬೇಕು.

ಪಥಿ ಕ್ಷೇತ್ರೇ ಪರಿವೃತೇ ಗ್ರಾಮಾಂತೀಯೇಽಥವಾ ಪುನಃ ।
ಸಪಾಲಃ ಶತದಂಡಾರ್ಹೋ ವಿಪಾಲಾನ್ ವಾರಯೇತ್ಪಶೂನ್ ॥ ೨೪೦

ದಾರಿಯ ಪಕ್ಕದಲ್ಲಿ ಊರಿನ ಹತ್ತಿರ ಬೇಲಿ ಇರುವ ಹೊಲವನ್ನು ನುಗ್ಗಿ ಗೋವು ಬೆಳೆಯನ್ನು ನಾಶಪಡಿಸಿದರೆ ಗೋಪಾಲನಿಗೆ ದಂಡನೆಯು. ಗೋಪಾಲಕನಿಲ್ಲದ ಗೋವಾದರೆ ಅದನ್ನು ಹೊಲದೊಡೆಯನು ತಡೆಯಬೇಕು.

ಕ್ಷೇತ್ರೇಷ್ವನ್ಯೇಷು ತು ಪಶುಃ ಸಪಾದಂ ಪಣಮರ್ಹತಿ ।
ಸರ್ವತ್ರ ತು ಸದೋ ದೇಯಃ ಕ್ಷೇತ್ರಿಕಸ್ಯೇತಿ ಧಾರಣಾ ॥ ೨೪೧

ದೂರದ ಹೊಲವನ್ನು ನುಗ್ಗಿ ದನ ಮೇದರೆ ಗೋಪಾಲನಿಗೆ ಒಂದೂ ಕಾಲು ಪಣ ದಂಡನೆಯು. ಮತ್ತು ನಾಶವಾದ ಬೆಳೆಯ ಪ್ರತಿಫಲವನ್ನು ಗೋಪಾಲನು ಅಥವಾ ಗೋಸ್ವಾಮಿಯು ಕೊಡಬೇಕು.

ಅನಿರ್ದಶಾಹಾಂ ಗಾಂ ಸೂತಾಂ ವೃಷಾನ್ ದೇವಪಶೂಂಸ್ತಥಾ ।
ಸಪಾಲಾನ್ವಾ ವಿಪಾಲಾನ್ವಾ ನ ದಂಡ್ಯಾನ್ಮನುರಬ್ರವೀತ್ ॥ ೨೪೨

ಕರುವಿಳಿಸಿ ಹತ್ತು ದಿನ ಕಳೆಯದ ಹಸು, ಉತ್ಸರ್ಗ ಮಾಡಿದ ಎತ್ತು, ದೇವಸ್ಥಾನದ ಎತ್ತು ಇವುಗಳು ಬೆಳೆ ತಿಂದರೆ ದಂಡನೆಯಿಲ್ಲ. ಎತ್ತನ್ನು ಗೋಪಾಲನು ಹಸುಗಳೊಡನೆ ಮೇಯಿಸಿದರೆ ಆಗ ಅವನು ಅಪರಾಧಿಯು.

ಕ್ಷೇತ್ರಿಯಸ್ಯಾತ್ಯಯೇ ದಂಡೋ ಭಾಗಾದ್ದಶಗುಣೋ ಭವೇತ್ ।
ತತೋಽರ್ಧದಂಡೋ ಭೃತ್ಯಾನಾಮಜ್ಞಾನಾತ್ ಕ್ಷೇತ್ರಿಕಸ್ಯ ತು ॥ ೨೪೩

ಉಳುವವನ ಎತ್ತು ಹೊಲಮೇದರೆ ಸಮಯಕ್ಕೆ ಬೀಜ ಹಾಕಿ ಸಸಿ ನಡದಿದ್ದರೆ ಆ ನಷ್ಟದ ಹತ್ತು ಪಾಲು ದಂಡನೆಯನ್ನು ಆ ಭೃತ್ಯರಿಗೆ ವಿಧಿಸಬೇಕು.

ಎತದ್ವಿಧಾನಮಾತಿಷ್ಠೇದ್ಧಾರ್ಮಿಕಃ ಪೃಥಿವೀಪತಿಃ ।
ಸ್ವಾಮಿನಾಂ ಚ ಪಶೂನಾಂ ಚ ಪಾಲಾನಾಂ ಚ ವ್ಯತಿಕ್ರಮೇ ॥ ೨೪೪

ಗೋಸ್ವಾಮಿಯ, ಗೋಪಾಲನ, ಪಶುವಿನ ಅಪರಾಧಗಳಲ್ಲಿ ಈ ರೀತಿ ಧರ್ಮವನ್ನು ನಿರ್ಣೈಸಬೇಕು.

ಸೀಮಾಂ ಪ್ರತಿ ಸಮುತ್ಪನ್ನೇ ವಿವಾದೇ ಗ್ರಾಮಯೋರ್ದ್ವಯೋಃ ।
ಜ್ಯೇಷ್ಠೇ ಮಾಸಿ ನಯೇತ್ಸೀಮಾಂ ಸುಪ್ರಕಾಶೇಷು ಸೇತುಷು ॥ ೨೪೫

ಗಡಿವಿವಾದವು ಬಂದಾಗ ಈ ರೀತಿ ಪರಿಹರಿಸಬೇಕು. ಸೀಮಾಚಿಹ್ನಗಳು ಬಿಸಿಲಿಗೆ ಒಣಗಿದ ಹುಲ್ಲು ತೆರೆದು ಕಾಣುವಾಗ ಪರೀಕ್ಷಿಸಬೇಕು.

ಸೀಮಾವೃಕ್ಷಾಂಶ್ಚ ಕುರ್ವೀತ ನ್ಯಗ್ರೋಧಾಶ್ವತ್ಥಕಿಂಶುಕಾನ್ ।
ಶಾಲ್ಮಲೀನ್ ಶಾಲತಾಲಾಂಶ್ಚ ಕ್ಷೀರಿಣಶ್ಚೈವ ಪಾದಪಾನ್ ॥ ೨೪೬

ಗೋಳಿ, ಅಶ್ವತ್ಥ, ಪಲಾಶ, ಮರಹತ್ತಿ ತಾಳಿ ಮರಗಳನ್ನು ಗಡಿ ಗುರುತಿಗೆ ನೆಡಬೇಕು.

ಗುಲ್ಮಾನ್ ವೇಣೂಂಶ್ಚ ವಿವಿಧಾಞ್ಛಮೀವಲ್ಲೀಸ್ಥಲಾನಿ ಚ ।
ಶರಾನ್ ಕುಬ್ಜಕಗುಲ್ಮಾಂಶ್ಚ ತಥಾ ಸೀಮಾ ನ ನಶ್ಯತಿ ॥ ೨೪೭

ಗಿಡ, ಬಳ್ಳಿ, ಪೊದರು, ಬಿದಿರು ಮುಳ್ಳುಗಿಡಗಳನ್ನು ಬೆಳೆಸಿ ಗಡಿಯ ಮರಗಳನ್ನು ನಾಶವಾಗದಂತೆ ಕಾಯಬಹುದು.

ತಡಾಗಾನ್ಯುದಪಾನಾನಿ ವಾಪ್ಯಃ ಪ್ರಸ್ರವಣಾನಿ ಚ ।
ಸೀಮಾಸಂಧಿಷು ಕಾರ್ಯಾಣಿ ದೇವತಾಯತನಾನಿ ಚ ॥ ೨೪೮

ಕೆರೆ, ಬಾವಿ, ಕಾಲುವೆಗಳನ್ನು ಗಡಿಗಳಲ್ಲಿ ಮಾಡಿದರೆ ನೀರಿನ ಜನರು ಗಡಿಯನ್ನು ಪ್ರಚಾರಮಾಡುವರು. ದೇವಸ್ಥಾನವನ್ನು ಮಾಡಬಹುದು.

ಉಪಚ್ಛನ್ನಾನಿ ಚಾನ್ಯಾನಿ ಸೀಮಾಲಿಂಗಾನಿ ಕಾರಯೇತ್ |
ಸೀಮಾಜ್ಞಾನೇ ನೃಣಾಂ ವೀಕ್ಷ್ಯ ನಿತ್ಯಂ ಲೋಕೇ ವಿಪರ್ಯಯಂ || ೨೪೯

ಜನರಿಗೆ ಗಡಿಜಗಳ ಬರುವುದರಿಂದ ಗುಟ್ಟಾಗಿ ತಿಳಿಯುವ ಗಡಿಯನ್ನು ಗುರುತಿಸಬಹುದು. ಅದಕ್ಕೆ ಕೆಳಗೆ ಉಪಾಯವನ್ನು ಹೇಳಲಾಗುವುದು.

ಅಶ್ಮನೋಽಸ್ಥೀನಿ ಗೋವಾಂಸ್ತುಷಾನ್ ಭಸ್ಮ ಕಪಾಲಿಕಾಃ |
ಕರೀಷಮಿಷ್ಟಕಾಂಗಾರಾನ್ ಶರ್ಕರಾ ವಾಲುಕಾಸ್ತಥಾ || ೨೫೦

ಯಾನಿ ಚೈವಂಪ್ರಕಾರಾಣಿ ಕಾಲಾದ್ಭೂಮಿರ್ನ ಭಕ್ಷಯೇತ್ |
ತಾನಿ ಸಂಧಿಷು ಸೀಮಾಯಾಮಪ್ರಕಾಶಾನಿ ಕಾರಯೇತ್ || ೨೫೧

ಶಿಲೆ, ಎಲುಬು, ಹೊಟ್ಟು, ಬೂದಿ, ತಲೆಬುರುಡೆ, ಬೆರಣಿ, ಬೆಂದ ಇಟ್ಟಿಗೆ, ಮಸಿ, ದೊಡ್ಡಹರಳು ಹೊಗೆ, ಸಣ್ಣಮರಳು ಇಂತಹ ಮಣ್ಣಿನಲ್ಲಿ ನಾಶಹೊಂದದ ಸಾಮಗ್ರಿಗಳನ್ನು ಮಡಕೆಯಲ್ಲಿ ತುಂಬಿ ನೆಲದೊಳಗೆ ಹೂತು ಗಡಿಗುರುತಿಸಿದರೆ ಗಡಿವಿವಾದವು ಬರಲಾರದು.

ಏತೈರ್ಲಿಂಗೈರ್ನಯೇತ್ಸೀಮಾಂ ರಾಜಾ ವಿವದಮಾನಯೋಃ |
ಪೂರ್ವಭುಕ್ತ್ಯಾ ಚ ಸತತಂ ಉದಕಸ್ಯಾಗಮೇನ ಚ || ೨೫೨

ಮೇಲೆ ಹೇಳಿದ ಗುರುತುಗಳಿಂದ ಗಡಿ ಜಗಳವನ್ನು ನಿರ್ಣಯಿಸಬಹುದು. ನೀರಿನ ಪ್ರವಾಹವನ್ನು ಗಡಿಯಾಗಿ ಮಾಡಬಹುದು. ಸಣ್ಣ ಗಡಿ ವಿವಾದಗಳಲ್ಲಿ ನಿರಂತರ ಅನುಭವವನ್ನು ಪ್ರಮಾಣವಾಗಿ ಸ್ವೀಕರಿಸಬಹುದು.

ಯದಿ ಸಂಶಯ ಏವ ಸ್ಯಾಲ್ಲಿಂಗಾನಾಮಪಿ ದರ್ಶನೇ |
ಸಾಕ್ಷಿಪ್ರತ್ಯಯ ಏವ ಸ್ಯಾತ್ಸೀಮಾವಾದವಿನಿರ್ಣಯಃ || ೨೫೩

ಸೀಮಾ ಚಿಹ್ನಗಳ ಪರಿವರ್ತನೆ, ಸ್ಪಷ್ಟನೆ, ಮೊದಲಾದ ವಿವಾದಗಳಿಂದ ಪರಿಹಾರವಿಲ್ಲದಾದರೆ ಅದಕ್ಕೆ ಸಾಕ್ಷಿಯ ಮೂಲಕ ಕೊನೆ ತೀರ್ಮಾನವನ್ನು ಮಾಡಿಕೊಳ್ಳಬೇಕು.

ಗ್ರಾಮೀಯಕಕುಲಾನಾಂ ಚ ಸಮಕ್ಷಂ ಸೀಮ್ನಿ ಸಾಕ್ಷಿಣಃ ।
ಪ್ರಷ್ಟವ್ಯಾಃ ಸೀಮಲಿಂಗಾನಿ ತಯೋಶ್ಚೈವ ವಿವಾದಿನೋಃ ॥ ೨೫೪

ಗ್ರಾಮಸ್ಥರಿಗೆ, ಗ್ರಾಮಾಧಿಪತಿಗಳಿಗೆ ಸೀಮಾವಿವಾದವು ಪರಿಹಾರವಾಗದಿದ್ದರೆ ವಿವಾದವುಳ್ಳವರು ಗ್ರಾಮಸ್ಥರು, ಗ್ರಾಮನಿಯುಕ್ತರು ಇವರ ಸಮ್ಮುಖದಲ್ಲಿ ಸಾಕ್ಷಿದಾರರನ್ನು ಪ್ರಶ್ನಿಸಬೇಕು. ಅದರಿಂದ ನಿರ್ಣಯವು.

ತೇ ಪೃಷ್ಟಾಸ್ತು ಯಥಾ ಬ್ರೂಯುಃ ಸಮಸ್ತಾಃ ಸೀಮ್ನಿ ನಿಶ್ಚಯಂ ।
ನಿಬಧ್ನೀಯಾತ್ತಥಾ ಸೀಮಾಂ ಸರ್ವಾಂಸ್ತಾಂಶ್ಚೈವ ನಾಮತಃ ॥ ೨೫೫

ಆ ಸಾಕ್ಷಿಗಳ ಅಭಿಪ್ರಾಯವನ್ನು ಅವರ ಹೆಸರನ್ನು ನಿಬಂಧಿಸಿ ಪತ್ರಲೇಖನ ಪ್ರಮಾಣವನ್ನು ವಿರಚಿಸಬೇಕು. ಗಡಿಯನ್ನು ಗುರುತಿಸಬೇಕು.

ಶಿರೋಭಿಸ್ತೇ ಗೃಹೀತ್ವೋರ್ವೀಂ ಸ್ರಗ್ವಿಣೋ ರಕ್ತವಾಸಸಃ ।
ಸುಕೃತೈಃ ಶಾಪಿತಾಃ ಸ್ವೈಃ ಸ್ವೈರ್ನಯೇಯುಸ್ತೇ ಸಮಂಜಸಂ ॥ ೨೫೬

ಆ ಸಾಕ್ಷಿಗಳು ತಲೆ ಮೇಲೆ ಮಣ್ಣು ಹೊತ್ತುಕೊಂಡು ಕೆಂಪು ಬಟ್ಟೆಯುಟ್ಟು ಹೂಮುಡಿದುಕೊಂಡು ಸುಳ್ಳಾಡಿದರೆ ತಮ್ಮ ಪುಣ್ಯವು ನಾಶಹೊಂದುವುದೆಂದು ಪ್ರತಿಜ್ಞೆ ಮಾಡಿ ನಿರ್ಣಯವನ್ನು ಹೇಳಬೇಕು.

ಯಥೋಕ್ತೇನ ನಯಂತಸ್ತೇ ಪೂಯಂತೇ ಸತ್ಯಸಾಕ್ಷಿಣಃ ।
ವಿಪರೀತಂ ನಯಂತಸ್ತು ದಾಪ್ಯಾಃ ಸ್ಯುರ್ದ್ವಿಶತಂ ದಮಂ ॥ ೨೫೭

ಅವರು ಸತ್ಯವಾಗಿ ನಿರ್ಣಯ ಹೇಳಿದರೆ ಪಾಪವಿಲ್ಲ. ಸುಳ್ಳಾಡಿದರೆ ಅವರಿಗೆ ಇನ್ನೂರು ಹಣ ದಂಡನೆಯು.

ಸಾಕ್ಷ್ಯಭಾವೇ ತು ಚತ್ವಾರೋ ಗ್ರಾಮಾಃ ಸಾಮಂತವಾಸಿನಃ ।
ಸೀಮಾವಿನಿರ್ಣಯಂ ಕುರ್ಯುಃ ಪ್ರಯತಾ ರಾಜಸನ್ನಿಧೌ ॥ ೨೫೮

ಸಾಕ್ಷಿಗಳು ದೊರೆಯದಿದ್ದರೆ ಗ್ರಾಮವಾಸಿಗಳಾದ ನಾಲ್ವರನ್ನು ಕರೆದು ಗಡಿ ನಿರ್ಣಯ ಮಾಡುವಂತೆ ಹೇಳಬೇಕು. ಇದು ರಾಜಸಮ್ಮುಖದಲ್ಲಿ ನಡೆಯಬೇಕು.

ಸಾಮಂತಾನಾಮಭಾವೇ ತು ಮೌಲಾನಾಂ ಸೀಮ್ನಿ ಸಾಕ್ಷಿಣಾಂ |
ಇಮಾನಪ್ಯನುಯುಂಜೀತ ಪುರುಷಾನ್ ವನಗೋಚರಾನ್ || ೨೫೯

ಸಾಕ್ಷಿಯಾಗಿ ರಾಜ ಸಮ್ಮುಖದಲ್ಲಿ ನಿರ್ಣಯ ಹೇಳುವವರು ಮತ್ತು ಸಂತಾನ ಪಾರಂಪರ್ಯ ಆ ಪ್ರದೇಶದಲ್ಲಿ ವಾಸವಾಗಿ ಅನುಭವ ಹೇಳುವವರು ಇಲ್ಲವಾದರೆ ವನವಾಸಿಗಳನ್ನು ವಿಚಾರಿಸಬೇಕು.

ವ್ಯಾಧಾನ್ ಶಾಕುನಿಕಾನ್ ಗೋಪಾನ್ ಕೈವರ್ತಾನ್ ಮೂಲಖಾನಕಾನ್ |
ವ್ಯಾಲಗ್ರಾಹಾನುಂಛವೃತ್ತೀನನ್ಯಾಂಶ್ಚ ವನಚಾರಿಣಃ || ೨೬೦

ಬೇಡರು, ಹಕ್ಕಿಹಿಡಿಯುವವರು, ಗೋವಳರು, ಮೀನು ಹಿಡಿಯುವವರು, ಸರ್ಪಹಿಡಿಯುವವರು, ಶಿಲೋಂಛ ವೃತ್ತಿಯ ಸಾಧುಗಳು, ವನವಾಸಿ, ಗಳಾದ ಇತರರು ಇವರೆಲ್ಲ ಪರಿಚಯ ಉಳ್ಳವರಾಗಲು ಸಾಧ್ಯವಿರುವುದರಿಂದ ಅವರಲ್ಲಿ ತಿಳಿದು ನಿಶ್ಚಯಿಸಬೇಕು.

ತೇ ಪೃಷ್ಟಾಸ್ತು ಯಥಾ ಬ್ರೂಯುಃ ಸೀಮಾಸಂಧಿಷು ಲಕ್ಷಣಂ |
ತತ್ತಥಾ ಸ್ಥಾಪಯೇದ್ರಾಜಾ ಧರ್ಮೇಣ ಗ್ರಾಮಯೋರ್ದ್ವಯೋಃ || ೨೬೧

ಎರಡು ಊರುಗಳ ಗಡಿಯನ್ನು ಅವರು ಹೇಳಿದಂತೆ ನಿಶ್ಚಯಿಸಬಹುದು.

ಕ್ಷೇತ್ರಕೂಪತಡಾಗಾನಾಮಾರಾಮಸ್ಯ ಗೃಹಸ್ಯ ಚ |
ಸಾಮಂತಪ್ರತ್ಯಯೋ ಜ್ಞೇಯಃ ಸೀಮಾಸೇತುವಿನಿರ್ಣಯಃ || ೨೬೨

ಹೊಲ, ಬಾವಿ, ಕೆರೆ, ತೋಟ, ಮನೆಗಳ ವಿವಾದದಲ್ಲಿ ನಿವಾಸಿಗಳ ಅನುಭವದಿಂದ ನಿರ್ಣಯವು ನ್ಯಾಯವು.

ಸಾಮಂತಾಶ್ಚೇನ್ಮೃಷಾ ಬ್ರೂಯುಃ ಸೇತೌ ವಿವದತಾಂ ನೃಣಾಂ |
ಸರ್ವೇ ಪೃಥಕ್‌ಪೃಥಗ್ ದಂಡ್ಯಾ ರಾಜ್ಞಾ ಮಧ್ಯಮಸಾಹಸಂ || ೨೬೩

ಗಡಿ ಗುರುತುಗಳ ವಿಷಯದಲ್ಲಿ ವಿವಾದವಾಗಿ ನಿವಾಸಿಗಳು ಸುಳ್ಳು ಅನುಭವ ಕೊಟ್ಟರೆ ಅವರಿಗೆ ಮಧ್ಯಮ ಸಾಹಸ ದಂಡನೆಯು.

ಗೃಹಂ ತಡಾಗಮಾರಾಮಂ ಕ್ಷೇತ್ರಂ ವಾ ಭೀಷಯಾ ಹರನ್ ।
ಶತಾನಿ ಪಂಚ ದಂಡ್ಯಃ ಸ್ಯಾದಜ್ಞಾನಾದ್ದ್ವಿಶತೋ ದಮಃ ॥ ೨೬೪

ಮನೆ, ಕೆರೆ, ಕೋಟೆ, ಹೊಲಗಳನ್ನು ತಿಳಿದು ತನ್ನದಲ್ಲದುದನ್ನು ಹೆದರಿಸಿ ಸ್ವಾಧೀನ ಮಾಡುವವನಿಗೆ ಐನೂರು ಪಣ ದಂಡನೆಯು. ತಿಳಿಯದೆ ಭ್ರಮಿಸಿ ಸ್ವಾಧೀನ ಮಾಡಿದರೆ ಇನ್ನೂರು ಹಣ ದಂಡನೆಯು.

ಸೀಮಾಯಾಮವಿಷಹ್ಯಾಯಾಂ ಸ್ವಯಂ ರಾಜೈವ ಧರ್ಮವಿತ್ ।
ಪ್ರದಿಶೇದ್ಭೂಮಿಮೇತೇಷಾಮುಪಕಾರಾದಿತಿ ಸ್ಥಿತಿಃ ॥ ೨೬೫

ಗಡಿ ಜಗಳದಲ್ಲಿ ಪರಿಹಾರಕ್ಕೆ ಯೋಗ್ಯ ಆಧಾರವು ಸಿಗದೆ ಹೋದಾಗ ರಾಜನು ಸ್ವಯಂ ಧರ್ಮಕ್ಕೆ ಸರಿಯಾಗಿ ಪಕ್ಷಪಾತವಿಲ್ಲದೆ ತಾನೇ ಪರಿಶೀಲಿಸಿ ಯಾವ ಜಗಳದ ಸ್ಥಳವು ಯಾವ ಭೂಮಿಗೆ ಸೇರಿದ್ದರಿಂದ ಅಭಿವೃದ್ಧಿ ಹೊಂದುವುದೋ ಅದು ಆ ಕಡೆಗೇ ಸೇರತಕ್ಕದೆಂದು ನಿರ್ಣಯ ಮಾಡಬೇಕು.

ಏಷೋಽಖಿಲೇನಾಭಿಹಿತೋ ಧರ್ಮಃ ಸೀಮಾವಿನಿರ್ಣಯೇ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ವಾಕ್ ಪಾರುಷ್ಯವಿನಿರ್ಣಯಂ ॥ ೨೬೬

ಸೀಮಾ ವಿವಾದವನ್ನು ಮುಗಿಸಿ ವಾಕ್ಪಾರುಷ್ಯ ವಿಧಿಯನ್ನು ಹೇಳುತ್ತೇನೆ.

ಶತಂ ಬ್ರಾಹ್ಮಣಮಾಕ್ರುಶ್ಯ ಕ್ಷತ್ರಿಯೋ ದಂಡಮರ್ಹತಿ ।
ವೈಶ್ಯೋಽಪ್ಯರ್ಧಶತಂ ದ್ವೇ ವಾ ಶೂದ್ರಸ್ತು ವಧಮರ್ಹತಿ ॥ ೨೬೭

ಕ್ಷತ್ರಿಯನು ಬ್ರಾಹ್ಮಣನನ್ನು ಬೈದರೆ ನೂರು ಹಣ ದಂಡವು. ವೈಶ್ಯನು ಬೈದರೆ ನೂರೈವತ್ತು, ಇನ್ನೂರು, ಹಣ ಸಂದರ್ಭಾನುಸಾರ ದಂಡನೆಯು. ಶೂದ್ರನು ಬೈದರೆ ಏಟು ಕೊಡುವುದು. ವಧಪದವು ಹನಧಾತುವಿನ ಒಂದು ರೂಪವು. ಹಿಂಸಾಪದವು ಹನಧಾತುವಿನ ಸಮಾನಾರ್ಥವು. ಪೀಡೆ, ದುಃಖ ತೊಂದರೆ ಉಂಟುಮಾಡುವುದು ಎಲ್ಲ ವಿಧದಿಂದ, ಸಾಮಾನ್ಯ ಏಟು, ಕೊಲ್ಲುವುದು, ಅರ್ಥವಾಗುವುದು. ಹಾಗಾದರೆ ಪಕ್ಷಪಾತ ಕ್ರೂರತನವು ಮನುವಿಗೂ ಬ್ರಾಹ್ಮಣನಿಗೂ ಬರುವುದೆಂದು ಆಪಾದನೆ. ಯಾವುದೇ ಅಪರಾಧಕ್ಕೂ

ಮರಣ ದಂಡನೆಯಿರಬಾರದು ಎಂಬುದು ಕೆಲವರ ವಾದ. ಇನ್ನು ಕೆಲವರು ಒಬ್ಬ ಮನುಷ್ಯನನ್ನು ಬೈದುದಕ್ಕೆ ಒಬ್ಬನಿಗೆ ಮರಣದಂಡನೆ ಅನ್ಯಾಯ, ಸಮಾನತೆಯ ಉಲ್ಲಂಘನೆ ಎಂದು ಇನ್ನೊಂದು ವಾದ, ಈ ಎರಡು ವಾದವೂ ಹುರುಳಿಲ್ಲದ್ದು. ಸಮಾನ ಕಾಲದ ಭಾವನೆಯ ಆಧಾರದ ಆರೋಪ, ಸಂಶಯ, ವಿವಾದಗಳು, ಯುಕ್ತಿಯ ಪರ್ಯಾಲೋಚನೆಯಲ್ಲಿ ತಾರತಮ್ಯವನ್ನು ವಿವೇಚಿಸುವ. ಈಗ ಮರಣಕ್ಕೂ ಮರಣದಂಡನೆಯಿರಬಾರದುಎನ್ನುವವರ ವಾದವನ್ನು ನೋಡುವ. ದಂಡನೆಯು ಅಪರಾಧಿ ಮನುಷ್ಯನಿಗೆ ಎಚ್ಚರಿಕೆ. ಮತ್ತೆ ಮಾಡದಂತೆ ತಡೆಯುವುದು. ಈ ಉದ್ದೇಶ ಕಾರ್ಯಗತವಾಗಲು ಮರಣ ದಂಡನೆಯು ಬೇಡ. ಮತ್ತು ವಿರುದ್ಧ. ಕೊಂದರೆ ಅವನಿಗೆ ಯಾವ ಎಚ್ಚರಿಕೆ. ಆದುದರಿಂದ ಜೀವಾವಧಿ ಬಂಧನವು ಸಾಧುವೆನ್ನುವರು. ಇದು ತುಚ್ಛ ಭಾವನೆ. ಜೀವಾವಧಿ ಬಂಧನದಿಂದ ಅವನಿಗೆ ಎಚ್ಚರಿಕೆಯಾಗಿ ಫಲವೇನು ? ಯಾವ ಸದಾಚಾರದಿಂದ ತನಗೂ ಇತರರಿಗೂ ಸುಖಮಯನಾಗುವನು ? ಅದಿಲ್ಲ. ಸ್ವೇಚ್ಛಾ ಜೀವನಕ್ಕೆ ಅವಕಾಶ ಕೊಟ್ಟರೆ ಮಾತ್ರ ಅದರ ಫಲ ಪ್ರತ್ಯಕ್ಷವಾಗಬಲ್ಲುದು. ಜೀವಾವಧಿ ಬಂಧನವು ದಯೆಯಲ್ಲ. ಅತಿಕ್ರೂರತನ, ಚಿತ್ರಹಿಂಸೆ, ದೀರ್ಘಯಾತನೆ. ಅನ್ನ, ಬಟ್ಟೆ, ನಿದ್ದೆ ಕೊಟ್ಟ ಮೇಲೆ ಹಿಂಸೆಯಿಲ್ಲ ಎನ್ನುವುದಾದರೆ ಅದು ದಂಡನೆಯಲ್ಲ. ಸ್ವೇಚ್ಛೆಗೆ ತಡೆಯು ದಂಡನೆಯಾದರೆ ಅದು ಅಲ್ಲೂ ತುಂಬ ಇದೆ. ಕಾಮುದಮನ ಅವನಿಷ್ಟದ ಯಾವುದಕ್ಕೂ ಅಲ್ಲಿ ಆತಂಕ. ಆದುದರಿಂದ ಜೀವಾವಧಿ ದಂಡನೆಯು ತುಂಬ ದೋಷಕರ. ಅವನನ್ನು ಸಾಕಲು ಹಣ ಹಾಳು. ಜನರ ಶ್ರಮ ಹಾಳು. ಆದುದರಿಂದ ಲಾಭವೂ ಸುಖವೂ ದೀರ್ಘ ದಂಡನೆಯಿಂದ ಎಲ್ಲಿದೆ ? ಶಿಕ್ಷೆ ಎಂದರೆ ಕಲಿಸುವುದು. ಕಲಿಸಿ ಕಲಿತು ಬಂದುದೇನು ಬಂಧನದಲ್ಲಿ. ಜೀವಾವಧಿ ದಂಡನೆ ಬೇಡ. ಕೆಲವರ್ಷ ಎಂದರೆ ಜೈಲಿನಿಂದ ಬಂದು ವಾರದೊಳಗೆ ಕೊಲ್ಲುವವರೂ, ಕದಿಯುವವರೂ ಇದ್ದಾರೆ. ಹಾಗಾದರೆ ಶಿಕ್ಷೆಯು ಸುಳ್ಳು, ಪುನಃ ಪರಿವರ್ತನೆ ಮನಃಶಾಸ್ತ್ರ ಸೂತ್ರಗಳು ಇಲ್ಲಿ ವಿಫಲ. ಒಂದೇ ಜನ ಹತ್ತು ಕಳ್ಳತನಕ್ಕೆ ಹತ್ತು ಬಾರಿ ಜೈಲು ಸೇರಿದವರನ್ನು ನಾನು ನೋಡಿದ್ದೇನೆ. ನಡತೆ ತಿದ್ದುವುದು ಸುಳ್ಳು. ಕೆಲವರು ಹಾಗೆ ಹೆಚ್ಚಿನವರು ತಿದ್ದುತ್ತಾರೆ ಎಂದರೆ ಒಬ್ಬ ಅಪರಾಧಿಯ ಮರಣದಂಡನೆಯಿಂದ ಸಾವಿರಾರು ಮಂದಿ ಅಪರಾಧ ಮಾಡದೆ

ಎಚ್ಚರಿಕೆಯಿಂದ ವರ್ತಿಸುವವರು. ಒಬ್ಬನ ಮರಣವು ಆಗ ಇತರ ಬಹು ಮಂದಿಯ ಸುಖಕ್ಕೂ, ಸರಕಾರದ ಹಣಕ್ಕೂ ಲಾಭಕರ. ಆದುದರಿಂದ ಮರಣದಂಡನೆಯು ಯಾಕೆ ಕ್ರೂರ. ಮತ್ತು ಮರಣದಂಡನೆ ಬೇಡವೆನ್ನುವ ಮಹಾಪುರುಷರು ಮಾಂಸಕ್ಕಾಗಿ ಪ್ರಾಣಿಗಳನ್ನು ಸಾಕಿ ಕೊಂದುತಿನ್ನುವುದನ್ನು ಮೆಚ್ಚುತ್ತಾರೆ. ಅಲ್ಲದೆ ಯುದ್ಧಗಳನ್ನು ಮಾರಕಾಸ್ತ್ರಗಳನ್ನು ಮೆಚ್ಚುತ್ತಾರೆ. ತುಂಬ ಸಂಗ್ರಹಿಸುತ್ತಾರೆ. ಸಂತೋಷಪಡುತ್ತಾರೆ. ಯುದ್ಧಕ್ಕೆ ಕಾದಿರು ತ್ತಾರೆ. ಮರಣವನ್ನು ದ್ವೇಷಿಸುವವರು ಯುದ್ಧವನ್ನು ಪ್ರೀತಿಸಲು ಮಾಂಸಾ ಹಾರವನ್ನು ಪ್ರೀತಿಸಲು ಕಾರಣವೇನಿದೆ. ಅದೆರಡು ನಮ್ಮ ರಕ್ಷಣೆಗೆ ಎನ್ನುವು ದಾದರೆ ಇದೇ ಕಾರಣದಿಂದಲೂ ಆಗ ಹೇಳಿದ ವ್ಯಕ್ತಿ ಸುಖದಿಂದಲೂ ಮರಣ ದಂಡನೆಯು ಅನ್ಯಾಯವಾಗುವುದು ಹೇಗೆ. ಒಬ್ಬನ ಮರಣದಿಂದ ಅನೇಕರ ಸುಖ-ಲಾಭವಾಗುವುದಾದರೆ ಅದು ಅಧರ್ಮವಾಗಲು ಶಕ್ಯವಿಲ್ಲ. ಆದುದ ರಿಂದ ಮರಣ ದಂಡನೆ ನಿಷೇಧವು ಸಮಾನಕಾಲೀನ ಸಮಾನತಾಭಾವನೆಯ ಒಂದು ವಿಕೃತರೂಪವು. ಯುಕ್ತಿಗೆ ಎದುರು ನಿಲ್ಲುವುದಲ್ಲ. ಇನ್ನು ಎರಡನೆ ಯದು. ಒಬ್ಬನನ್ನು ಬೈದುದಕ್ಕೆ ಇನ್ನೊಬ್ಬನ ಮರಣವು ನ್ಯಾಯವಲ್ಲ. ಬ್ರಾಹ್ಮಣನು ಸರ್ವೋತ್ತಮನು ಯಾಕೆ, ಶೂದ್ರನು ನಿಕೃಷ್ಟನು ಯಾಕೆ, ಇದು ದ್ವೇಷ, ಪಕ್ಷಪಾತ, ಮತ್ಸರ, ಅವಿವೇಕ, ಅಜ್ಞಾನ, ಸ್ವಪ್ರತಿಷ್ಠೆ, ಹೀನೈಸುವ ನಿಕೃಷ್ಟ ಭಾವನೆ, ಇದು ಮಹಾತ್ಮತೆಯು ಆಗಬಲ್ಲುದೇ ಇದನ್ನು ನೋಡುವ. ಮರಣ ದಂಡನೆಯು ಕ್ರೂರತೆಯಲ್ಲ. ಮರ-ಗಿಡ_ಬಳ್ಳಿಗಳಿಗೆ ಜೀವವಿದೆ. ಬೆಳೆಯುತ್ತದೆ, ಒಣಗುತ್ತದೆ. ಬೀಜಕ್ಕೂ ಜೀವವಿದೆ ಅದು ಮೊಳೆಯುತ್ತದೆ. ಆದುದರಿಂದ ಕಟ್ಟಿಗೆ ಮಾಡುವುದು, ಅನ್ನ ಪಲ್ಯ ಮಾಡುವುದು ಹಿಂಸೆಯೇ. ಅದು ಬೊಬ್ಬಿಡುವುದಿಲ್ಲ. ಗದ್ದಲವಿಲ್ಲದೆ ಸತ್ತರೆ ಹಿಂಸೆ ಕ್ರೂರತನ ಯಾಕಿಲ್ಲ. ಅದು ನಮ್ಮ ಪೋಷಣೆಗಾಗಿರುವ ಸೃಷ್ಟಿ ಎನ್ನುವುದಾದರೆ ನಿಯಮವನ್ನು ಮೀರುವವನು ನಿಯಮಕ್ಕೆ ಒಳಪಡುವವರ ರಕ್ಷಣೆಗೆ ಬಾಧ್ಯನು. ಅಪರಾಧಿ ಮರಣದಿಂದ ನ್ಯಾಯಸ್ಥರ ಸುಖ ಜೀವನವು ಸಿದ್ಧಿಸುವುದಾದರೆ ಅದು ಎಲ್ಲರ ಪುಣ್ಯ. ಮೃತನಿಗೂ ಅದು ಅಕಾರ್ಯವಲ್ಲ. ಅನಪೇಕ್ಷಣೀಯವಲ್ಲ. ನಿಯಮವು ತಿಳಿದಿದ್ದೂ ಈ ಅಪರಾಧಕ್ಕೆ ಈ ದಂಡನೆಯೆಂದೂ ತಿಳಿದೂ ಮಾಡುವುದರ ಉದ್ದೇಶವೇನು. ದಂಡನೆಯಿಂದ ತಪ್ಪಿಕೊಳ್ಳುವ ಉದ್ದೇಶ ಅಥವಾ ಭಾವಾ

ವೇಶ. ಭಾವಾವೇಶ, ಕೋಪ, ಕ್ರೋಧಗಳು ಸುಧಾರಿಸುವುದು ಹೇಗೆ ? ಅಪರಾಧಿಯು ಅಪರಾಧವನ್ನು ಒಪ್ಪಿ ಕ್ಷಮೆ ಕೇಳಿದರೆ ಸುಳ್ಳಾಡದ ಸತ್ಯದಿಂದ ಅವನಿಗೆ ದಂಡನೆಯು ಅರ್ಧಕ್ಕೆ ಇಳಿಯುವುದು ಇದ್ದೇ ಇದೆ. ಭಾವಾವೇಶಕ್ಕೆ ಗುರಿಯಾದವನು ಹೀಗೆಯೇ ಮಾಡುವನು. ಉದ್ದೇಶ ಪೂರ್ವಕ ಅಪರಾಧಕ್ಕೆ ಪೂರ್ಣ ದಂಡನೆಯು ನ್ಯಾಯ. ದಂಡನೆಯಿಂದ ತಪ್ಪಿಕೊಳ್ಳಬಲ್ಲೆನೆಂದು ಮಾಡುವ ಅಪರಾಧಿಗೆ ಎರಡು ಅಪರಾಧವು. ತಪ್ಪಿಕೊಳ್ಳುವ ಉದ್ದೇಶ ಒಂದು, ಅಪರಾಧ ಮಾಡುವ ಉದ್ದೇಶ ಒಂದು. ಇನ್ನು ಬೈದುದಕ್ಕೆ ಮರಣ ದಂಡನೆಯು ಅಲ್ಪಾಪರಾಧಕ್ಕೆ ಬಹುದಂಡನೆಯಾಯಿತು ಎಂದು ಹೇಳುವುದಾದರೆ ಅದು ಕಲ್ಪನೆಯಲ್ಲಿದೆ. ದಂಡನೆಯ ಮೂಲೋದ್ದೇಶ ನೋಡಬೇಕು. ಜ್ಞಾನ, ಉಪದೇಶ, ಪ್ರಚಾರ, ವಿವೇಕ, ವಿದ್ಯಾಭ್ಯಾಸಗಳಿಂದ ನೀತಿಯನ್ನು ತರಲು ಸಾಧ್ಯವಿಲ್ಲ. ಭಯವೂ ನೀತಿಗೆ ಬೇಕು ಎಂಬುದು ಒಂದು ನ್ಯಾಯ. ಅಪರಾಧಿಯ ದಂಡನೆಯನ್ನು ಪ್ರತ್ಯಕ್ಷ ನೋಡಿದರೆ ಇತರರಿಗೆ ಭಯವಾಗಿ ಅವರು ಎಚ್ಚರವಹಿಸುತ್ತಾರೆ. ಅಪರಾಧ ಮನೋವೃತ್ತಿಯನ್ನು ಬೇರೆ ಯಾವ ರೀತಿ ಸರಿಪಡಿಸಲು ಸಾಧ್ಯವಿದೆ ? ಅಪರಾಧ ತಾರತಮ್ಯವಿದ್ದಂತೆ ದಂಡನೆಯಲ್ಲಿ ತಾರತಮ್ಯವಿದೆ. ಅಲ್ಪಾಪರಾಧಕ್ಕೆ ದಂಡಿಸಲ್ಪಟ್ಟವನು ಎಚ್ಚರಿಕೆಯಾಗಿ ತಿದ್ದಿಕೊಳ್ಳಲಿ. ಮೈಗಳ್ಳರು ಜೀವಾವಧಿ ದಂಡನೆಯನ್ನು ಸುಖವೆನ್ನುತ್ತಾರೆ. ಉಣ್ಣಲು ಉಡಲು ದುಡಿಯಲಾರದವನಿಗೆ ಅದು ಜೈಲಲ್ಲಿ ಸಿಗುವುದರಿಂದ ಸಂತೋಷ. ಶತ್ರುಗಳಿಗೆ ಸಹಾಯ ಮಾಡುವವನು. ರಾಷ್ಟ್ರದ ಉನ್ನತಾಧಿಕಾರಿಯ (ಶಾಸನಗಳ) ಮರಣವನ್ನು ಸಾಧಿಸುವವನನ್ನು ಶಾಸನಗಳನ್ನು ಭಂಗಿಸುವವನನ್ನು ಬಹುಜನರ ದುಃಖಕ್ಕೆ ಅಧಿಕಾರಿಯ, ಮರಣ, ಶಾಸನ ಭಂಗ ಶತ್ರು ಪ್ರವೇಶಗಳ ಮೂಲಕ ಕಾರಣನಾದವನನ್ನು ಯಾರೂ ಮರಣ ದಂಡನೆಯಿಂದ ವಿಮುಕ್ತಿಗೊಳಿಸಬೇಕೆಂದು ಹೇಳುವುದಿಲ್ಲ. ಜೈಲಿನಿಂದ ತಪ್ಪಿಕೊಂಡು ಹೋಗಿ ಇದಕ್ಕಿಂತಲೂ ದೊಡ್ಡ ಗಂಡಾಂತರ ತರುವ ದೊಡ್ಡ ಅಪಾಯದ ರಕ್ಷಣೆಗೆ ಶೀಘ್ರ ಮರಣವು ಸಮ್ಮತವು. ರಾಷ್ಟ್ರಧ್ವಜಕ್ಕೆ, ರಾಷ್ಟ್ರ ಶಾಸನಕ್ಕೆ ಉನ್ನತಾಧಿಕಾರಿಗೆ ಅವಮಾನ, ನಾಶ ಮಾಡುವ ಘೋರ ಅಪರಾಧಕ್ಕೆ ಬೇರಾವುದು ಸಮದಂಡನೆ? ಸಾಧುಸಂತರನ್ನು ಕೊಂದವರಿಗೂ ರಾಷ್ಟ್ರದ್ರೋಹಿಗಳಿಗೂ ಮರಣದಂಡನೆ ಬೇಡವೆಂದವರು ಈ ವರೆಗೆ ಯಾರೂ ಇಲ್ಲ. ಹೇಳಿ

ದರೂ ಮಾಡಿದವರಿಲ್ಲ. ಬೈದರೆ, ಅವಮಾನಿಸಿದರೆ ಕೊಲ್ಲುವ ಅವಶ್ಯವಿಲ್ಲ. ಅವನಿಷ್ಟಕ್ಕೆ ಬಿಟ್ಟು ಶಾಂತಿ, ಅಹಿಂಸೆ, ತಾಳ್ಮೆ, ಸಹನೆಯಿಂದ ಅದನ್ನು ತಿದ್ದು ವುದು ನ್ಯಾಯ. ಸರಿ ಇದು ನ್ಯಾಯ ಯಾರಿಗೆ, ವ್ಯಕ್ತಿಗೆ. ಇದು ವ್ಯಕ್ತಿ ಧರ್ಮ. ಸಾಧು ಸಂತರು ಮಹಾತ್ಮಾಗಾಂಧಿಯವರು ತನ್ನನ್ನು ಕೊಂದವ ರನ್ನು ಕೊಲ್ಲಲು ಅಪೇಕ್ಷಿಸಲಿಲ್ಲ. ಬ್ರಾಹ್ಮಣೋತ್ತಮರೂ ಹಾಗೆ ಮಾಡಿದ್ದಾರೆ. ಆದರೆ ಅದು ರಾಷ್ಟ್ರ ಧರ್ಮವಾಗಲಾರದು. ಒಂದು ರಾಷ್ಟ್ರಶಾಸನವು. ಒಂದು ರಾಜಕುಟುಂಬವು. ಒಂದು ರಾಜ್ಯದ ಉತ್ತಮ ಆಡಳಿತಗಾರನು ನಾಶಹೊಂದಿದರೆ, ಸತ್ತರೆ, ಅವಮಾನ ಹೊಂದುವುದಾದರೆ ಎಂತಹ ಆಡಳಿತ ದೊರೆಯುವುದು ಆ ಪ್ರಜೆಗಳಿಗೆ. ಇದೇ ಶಾಂತಿ ನ್ಯಾಯವನ್ನು ಆಕ್ರಮಣಕ್ಕೆ ಬರುವ ಶತ್ರುಸೈನ್ಯಕ್ಕೆ ಹೊಂದಿಸಲು ಯಾರು ತಯಾರು. ಅವನು ಮನುಷ್ಯ ನಲ್ಲವೆ ? ಅವನನ್ನು ಯಾಕೆ ಕೊಲ್ಲುವುದು ತಪ್ಪಲ್ಲವೆನ್ನುತ್ತೀರಿ ? ರಕ್ಷಣಾ ವಿಭಾಗದ ಒಬ್ಬ ನೌಕರನನ್ನು ನಮ್ಮ ಪ್ರಜೆ ಕೊಂದರೆ ಯಾವ ತಪ್ಪು ಆದುದ ರಿಂದ ನಿಯಮದ ಉಲ್ಲಂಘನೆಯು ತಪ್ಪೇ. ಆದರಿಂದ ಅನೇಕ ಜನರ ಪ್ರಾಣವು ಸಂಶಯಕ್ಕೊಳಗಾಗುವುದು. ಬ್ರಾಹ್ಮಣನನ್ನು ಬೈಯಬಾರದು ಎಂದು ಶಾಸನ ಇರುವಾಗ ಬೈಯುವುದು ಅಪರಾಧವೇ, ಅದಕ್ಕೆ ಮರಣದಂಡನೆ ನ್ಯಾಯವೇ? ಮರಣ ದಂಡನೆಯನ್ನು ತಿಳಿದೂ ಬೈದಿದ್ದಾನೆ. ರಾಷ್ಟ್ರಶಾಸನವನ್ನು ಮೀರು ವವನು ರಾಷ್ಟ್ರವನ್ನು ನಾಶಿಸಿಯಾನು. ಆದುದರಿಂದ ಮರಣದಂಡನೆ. ನಿಯಮವನ್ನು ಶಾಸನವನ್ನು ತಿಳಿಯದೆ ಅಪರಾಧ ಮಾಡುತ್ತಾನೆ ಇದು ಸರಿಯಲ್ಲ. ತನ್ನ ಜೀವನಾವಶ್ಯವನ್ನು ಮೀರಿದ ವರ್ತನೆಯೆಲ್ಲ ಅಪರಾಧವು. ಇದು ಅಪರಾಧದ ಮೂಲ ಸೂತ್ರ. ಜನರ ಜೀವನಾವಶ್ಯವನ್ನೇ ಶಾಸನದಲ್ಲಿ ಸಾರುವುದು. ಅದು ತಿಳಿಯಲಿಲ್ಲ. ತಿಳಿಯುವುದು ಬೇಡ. ತನ್ನ ಆವಶ್ಯ ಕತೆಯು ನಿರ್ದಿಷ್ಟವಿದ್ದರಾಯಿತು. ಪರಪೀಡೆಯಿಲ್ಲದೆ ತನ್ನ ಜೀವನ ನಡೆಸಲಿ. ಅಪರಾಧವೆಲ್ಲಿದೆ ? ಇನ್ನೊಬ್ಬರ ಅಪರಾಧವನ್ನು ತಾನು ಸರಿಪಡಿಸಲು ಪ್ರಯತ್ನಿಸಿ ತಾನು ಅಪರಾಧಿಯಾದನು. ಅದು ಅವನ ಕೆಲಸವಲ್ಲ. ಇನ್ನೊ ಬ್ಬನ ಅಪರಾಧಕ್ಕೆ ಬೇರೆ ವ್ಯವಸ್ಥೆಯಿದೆ. ತಾನು ಮಾಡುವ ವ್ಯವಸ್ಥೆಯೇ ಅಪರಾಧ ಆದುದರಿಂದ ಮರಣದಂಡನೆ ಆಕಾಲಕ್ಕೆ ನ್ಯಾಯ. ಈಗ ಹಣವು ನ್ಯಾಯವಾಗಿದೆ. ಹಣಕ್ಕೆ, ಅಧಿಕಾರಕ್ಕೆ ಅಡ್ಡಿಯಾದವನನ್ನು ಈಗ ಎಲ್ಲ

ರೀತಿಯಿಂದ ಎಲ್ಲರೂ ಪೀಡಿಸುತ್ತಾರೆ. ಬ್ರಾಹ್ಮಣ ಶೂದ್ರ ಶಬ್ದವಿಲ್ಲ. ಹಣ ಅಧಿಕಾರವಿದೆ. ವಿಷವಿಕ್ಕುತ್ತಾರೆ. ಶಾಂತಿರಕ್ಷಣೆಯ ನೆಪದಲ್ಲಿ ಬೇಡವಾದವರನ್ನು ಕೊಲ್ಲುತ್ತಾರೆ. ಪೋಲೀಸರಿಂದ ಕೊಲ್ಲಿಸುತ್ತಾರೆ. ಶಾಂತಿ, ಕ್ಷಮೆ, ಆತ್ಮ, ವಿದ್ಯೆ, ಶೀಲ, ಸದಾಚಾರ, ವಿದ್ಯಾಭ್ಯಾಸಗಳಲ್ಲಿ ನಿರತನಾದವನನ್ನು ಬೈಯುವುದು ಯಾಕೆ? ಸಚ್ಚರಿತ್ರರ ವ್ಯವಹಾರ ತನಗೆ ಯಾಕೆ ಬೇಕಾಗಿತ್ತು? ಅವರು ಮಾನ್ಯರೆಂದು ಒಪ್ಪುವುದಾದರೆ ಅಪರಾಧವನ್ನು ಮಾಡಲಾರನು. ಅವರು ಅಪೂಜ್ಯರಾದರೆ ಇವನು ಯಾಕೆ ರಕ್ಷಣೀಯನು. ಇವನೇನು ಸಾಧಿಸಿದ್ದಾನೆ. ಧಾನ್ಯ ಬೇಯಿಸಿ ಕೊಂದು ತಿಂದಂತೆ ಮನುಷ್ಯನನ್ನು ಕೊಲ್ಲಬಹುದು. ಪ್ರಾಣಿಯನ್ನು ತಿನ್ನಬಹುದು. ಉದ್ದೇಶ ನೋಡಬೇಕು. ಶೂದ್ರನಿಗೆ ಮರಣ ದಂಡನೆ ಹೇಳುವ ಮನುವು ಬ್ರಾಹ್ಮಣನಾದರೂ ತನಗಾಗಿ ಧಾನ್ಯವನ್ನು ಮೃಗವನ್ನು ಬೇಯಿಸಿ ತಿನ್ನಲು ಸಮ್ಮತಿಸಲಿಲ್ಲ. ಪಂಚಯಜ್ಞಗಳೂ ಇತರ ಯಜ್ಞಯಾಗಗಳೂ ಅದಕ್ಕೆ ದೇವತೋದ್ದೇಶ. ನಾಲಗೆ ದಾಸನಾಗಿ ಹೊಟ್ಟೆಬಂಟನಾಗಿ ಧಾನ್ಯ, ಮಾಂಸ ಎರಡೂ ತಿನ್ನಬಾರದೆಂದು ನಿಂದಿಸಿ ನಿಷೇಧಿಸಿ ಪ್ರಾಯಶ್ಚಿತ್ತವನ್ನು ಕಠೋರವಾಗಿ ಬ್ರಾಹ್ಮಣನಿಗೆ ವಿಧಿಸಿದೆ. ಗೋವಧೆಯೂ ಈ ರೀತಿಯಿಂದಲೇ ಧರ್ಮವಾಗಿತ್ತು. ಚರ್ಮಕ್ಕೆ ಮಾಂಸಕ್ಕೆ ಗೋವನ್ನು ಕೊಲ್ಲಲು ವೇದವು ಹೇಳಿಲ್ಲ. ಬ್ರಾಹ್ಮಣರು ದುಡಿಯಲಾರದೆ ಮೈ ಬೆಳೆಯಲು ತಿನ್ನಲಿಲ್ಲ. ಅಂತಹ ವೇದದ ಅನುಯಾಯಿಗಳಿಗೆ ಶೂದ್ರ ವಧವು ಅಧರ್ಮವಲ್ಲ. ಶೂದ್ರನಲ್ಲಿ ಮಾತ್ರ ಅವರಿಗೆ ಜೀವವಲ್ಲ. ಶತ್ರುಯೋಧನಲ್ಲೂ ಇತ್ತು. ನಿಮಗೂ ಇದೆ. ಶತ್ರುಯೋಧನನ್ನು ಕತ್ತಿಯಿಂದ ಗುಂಡಿನಿಂದ ಕೊಲ್ಲಬಹುದು, ಶೂದ್ರನನ್ನು ಕೊಲ್ಲಬಾರದು ಎಂಬುದು ಕಲ್ಪನೆಯಲ್ಲವೆ ? ರಾಷ್ಟ್ರಧ್ವಜಕ್ಕೆ ಅದರ ರಕ್ಷಣೆಗೆ ದೇಶಕ್ಕೆ ಪ್ರಾಣದಾನ ಮಾಡುವವರಿಗೆ ವೈದಿಕ ಬ್ರಾಹ್ಮಣನ ಅವಮಾನಕ್ಕೆ ಪ್ರಾಣವು ಅಮೂಲ್ಯವಲ್ಲ. ಈಗಿನ ಬ್ರಾಹ್ಮಣರು ಹಾಗಿಲ್ಲ. ನೀವೂ ಹಾಗಿಲ್ಲ. ದುಡ್ಡಿಗಾಗಿ ಇದ್ದೀರಿ. ಧರ್ಮ ಬೇಡ. ಇತರರ ಸುಖ ನಿಮಗೂ ಬೇಡ. ನಿಮ್ಮ ಸುಖಕ್ಕಾಗಿ ಅವರು ಬೇಕು ಹಣ ಬೇಕು. ಆ ದೃಷ್ಟಿಯಿಂದ ಈಗಲೂ ಬ್ರಾಹ್ಮಣರು ಪವಿತ್ರರು. ಎಲ್ಲವರೂ ಅಲ್ಲ. ಎಲ್ಲವರೂ ನೀವೂ ಒಳ್ಳೆಯವರಲ್ಲ, ಅದು ಎಂದೂ ಎಲ್ಲರಿಗೂ ಅನ್ವಯವಾಗುವ ಸೂತ್ರ. ಬಹುಮತ, ಬಹುಮತ ಈಗ ಏನು ತಂದಿದೆ ಎಂದು ನೋಡುತ್ತೇವೆ.

ಅಲ್ಪಾಪರಾಧಗಳಿಗೆ ಮರಣ ದಂಡನೆಯು ನ್ಯಾಯ. ಅದಕ್ಕೆ ಅರ್ಥಶಾಸ್ತ್ರದ ಆಧಾರವಿದೆ. ಜನಸಂಖ್ಯಾ ಆಧಿಕ್ಯವನ್ನು ಇದರಿಂದ ತಡೆಯಬಹುದು. ಅಪರಾಧದ ಕಾರಣದಿಂದ ಅಪರಾಧಿಯನ್ನು ಕೊಂದರೆ ಸಜ್ಜನರು ಮಾತ್ರ ಉಳಿಯುವರು. ಕೇಡಿಗಳು, ಕಳ್ಳರು, ಕೃತಘ್ನರು, ಕಪಟಿಗಳು ತುಂಬಿದ ನಾಡು ಸುಭಿಕ್ಷ ಆಗದು. ಈಗ ಅನ್ನಾಭಾವ ಯಾಕೆ ? ದುಡಿಯುವವರಿಲ್ಲ. ಕೂತು ಉಣ್ಣುವರು. ಆದುದರಿಂದ ಮರಣ ದಂಡನೆ, ಸತೀಸಹಗಮನ, ಜನಸಂಖ್ಯೆಯನ್ನು ಸಮತೋಲದಲ್ಲಿಡುವುವು. ಸ್ತ್ರೀಪ್ರಜೆಯ ಆಧಿಕ್ಯ, ಸ್ತ್ರೀ ಉದ್ದೇಶದ ವ್ಯಭಿಚಾರ, ಅನ್ನಾಭಾವದ ವ್ಯಭಿಚಾರ (ಹಣಕ್ಕೆ) ಎಲ್ಲ ನಿಲ್ಲುವುದು. ಮಿತಪ್ರಜೆಯಿಂದ ದೇಶ ಸುಭಿಕ್ಷವಾಗುವುದು. ಮಿತಸಂತತಿ ಯೋಜನೆಯಿಂದ ಜನಸಂಖ್ಯಾ ನಿಯಂತ್ರಣವು ಮಾನ್ಯವಾದರೆ ಅಲ್ಪಾಪರಾಧಕ್ಕೆ ಮರಣ ದಂಡನೆಯು ಅಪೇಕ್ಷಣೀಯವೇ. ಅಂದು ವಿದ್ಯೆಯು ಬ್ರಾಹ್ಮಣನ ಅಧೀನವಿತ್ತು. ಆವನು ಪೂಜ್ಯನಾದನು. ಇಂದು ಉಪಾಧ್ಯಾಯರ ನಿಂದೆಯನ್ನು ಯಾರೂ ಸಹಿಸುವುದಿಲ್ಲ. ಉಪಾಧ್ಯಾಯರು ಮರ್ಯಾದಸ್ಥರು. ವಿದ್ಯಾವಂತನಿಗೆ ಅಷ್ಟು ಮನ್ನಣೆ ಯಾಕೆ. ಸರಿ ಇಂದು ವಿದ್ಯಾಖಾತೆಯನ್ನು ಒಂದು ಸಂಸ್ಥೆಗೊಳಪಡಿಸಿ ಅದರಲ್ಲಿ ನುಗ್ಗಿದವರಿಗೆ ಮಾತ್ರ ಉದ್ಯೋಗ ಎಂಬ ನಿಯಮವಿದೆ. ಅದು ಯಾಕೆ. ಒಂದು ವರ್ಗದವರನ್ನು ಹೊರಗಿಡುವುದು ಉದ್ದೇಶ. ವಿದ್ಯಾಭ್ಯಾಸದ ಪರಿಶುದ್ಧಿಗೆ ಇಂತಹ ಪದವೀಧರನು ಈ ಉದ್ಯೋಗಕ್ಕೆ ಎಂದು ನಿಯಮ. ಅದಕ್ಕೆ ಅದೇ ಪರಿಶುದ್ಧಿಗೆ ಒಂದು ವರ್ಗವು ವಿದ್ಯಾರಕ್ಷಣೆಗೆ. ಕೆಲವು ಅಪವಾದವಿದ್ದರೂ ಹೆಚ್ಚಾಗಿ ಆನುವಂಶಿಕತೆಯು ಅನುಭವದಲ್ಲಿದೆ.

ಪಂಚಾಶದ್ ಬ್ರಾಹ್ಮಣೋ ದಂಡ್ಯಃ ಕ್ಷತ್ರಿಯಾಸ್ಯಾಭಿಶಂಸನೇ ।
ವೈಶ್ಯೇ ಸ್ಯಾದರ್ಧಪಂಚಾಶತ್ ಶೂದ್ರೇ ದ್ವಾದಶಕೋ ದಮಃ ॥ ೨೬೮

ಬ್ರಾಹ್ಮಣನು ಕ್ಷತ್ರಿಯನನ್ನು, ವೈಶ್ಯನನ್ನು, ಶೂದ್ರನನ್ನು ಬೈದರೆ ಕ್ರಮವಾಗಿ ಐವತ್ತು, ಇಪ್ಪತ್ತೈದು, ಹನ್ನೆರಡು ಪಣ ದಂಡನೆಯು.

ಸಮವರ್ಣೇ ದ್ವಿಜಾತೀನಾಂ ದ್ವಾದಶೈವ ವ್ಯತಿಕ್ರಮೇ ।
ವಾದೇಷ್ವವಚನೀಯೇಷು ತದೇವ ದ್ವಿಗುಣಂ ಭವೇತ್ ॥ ೨೬೯

ತ್ರೈವರ್ಣಿಕರು ಅನ್ಯೋನ್ಯ ಬೈದರೆ ಹನ್ನೆರಡು ಪಣ ದಂಡನೆಯು. ಪರುಷವಾದರೆ ಇನ್ನೂರು ಹಣ ದಂಡವು.

ಏಕಜಾತಿರ್ದ್ವಿಜಾತೀಂಸ್ತು ವಾಚಾ ದಾರುಣಯಾ ಕ್ಷಿಪನ್ ।
ಜಿಹ್ವಾಯಾಃ ಪ್ರಾಪ್ನುಯಾಚ್ಛೇದಂ ಜಘನ್ಯಪ್ರಭವೋ ಹಿ ಸಃ ॥ ೨೭೦

ನಾಲ್ಕನೆಯವನು ಮೂವರನ್ನು ಹೀನವಾಗಿ ಬೈದರೆ ನಾಲಿಗೆ ಕಳೆಕೊಳ್ಳುವನು. ಅವನು ಕೆಳಗಿನವನು.

ನಾಮಜಾತಿಗ್ರಹಂ ತ್ವೇಷಾಮಭಿದ್ರೋಹೇಣ ಕುರ್ವತಃ ।
ನಿಕ್ಷೇಪ್ಯೋಽಯೋಮಯಃ ಶಂಕುರ್ಜ್ವಲನ್ನಾಸ್ಯೇ ದಶಾಂಗುಲಃ ॥ ೨೭೧

ಜಾತಿ ಹೆಸರು ಕರೆದು ಬೈಯುವವನಿಗೆ ಕಾಯಿಸಿದ ಕಬ್ಬಿಣದ ಸರಳನ್ನು ಹತ್ತಂಗುಲ ಬಾಯಿಗೆ ತುರುಕಬೇಕು.

ಧರ್ಮೋಪದೇಶಂ ದರ್ಪೇಣ ವಿಪ್ರಾಣಾಮಸ್ಯ ಕುರ್ವತಃ ।
ತಪ್ತಮಾಸೇಚಯೇತ್ತೈಲಂ ವಕ್ತ್ರೇ ಶ್ರೋತ್ರೇ ಚ ಪಾರ್ಥಿವಃ ॥ ೨೭೨

ಶೂದ್ರನು ದರ್ಪದಿಂದ ಬ್ರಾಹ್ಮಣನಿಗೆ ಧರ್ಮೋಪದೇಶ ಮಾಡಲು ಇಚ್ಛಿಸಿದರೆ ಕಾಸಿದ ಎಣ್ಣೆಯನ್ನು ಕಿವಿಮೋರೆಗಳಿಗೆ ಹಾಕಬೇಕು.

ಶ್ರುತಂ ದೇಶಂ ಚ ಜಾತಿಂ ಚ ಕರ್ಮ ಶಾರೀರಮೇವ ಚ ।
ವಿತಥೇನ ಬ್ರುವನ್ ದರ್ಪಾದ್ದಾಪ್ಯಃ ಸ್ಯಾದ್ದ್ವಿಶತಂ ದಮಂ ॥ ೨೭೩

ಬ್ರಾಹ್ಮಣರು ಅನ್ಯೋನ್ಯ, ನೀನು ಕಲಿಯಲಿಲ್ಲ, ನೀನು ಆ ಜಾತಿಯವನಲ್ಲ, ನಿನಗೆ ಉಪನಯನವಾಗಿಲ್ಲ, ಎಂದು ಸುಳ್ಳಾಡಿ ದರ್ಪತೋರಿಸುವವನು ಇನ್ನೂರು ಪಣ ದಂಡನೆಗೆ ಅರ್ಹನು.

ಕಾಣಂ ವಾಪ್ಯಥವಾ ಖಂಜಮನ್ಯಂ ವಾಪಿ ತಥಾವಿಧಂ ।
ತಥ್ಯೇನಾಪಿ ಬ್ರುವನ್ ದಾಪ್ಯೋ ದಂಡಂ ಕಾರ್ಷಾಪಣಾವರಂ ॥ ೨೭೪

ಕುರುಡ, ಕುಂಟ ಎಂದು ಸತ್ಯವಾಗಿ ಬೈದರೂ ಅಲ್ಪದಂಡನೆಗೆ ಯೋಗ್ಯನು.

ಮಾತರಂ ಪಿತರಂ ಜಾಯಾಂ ಭ್ರಾತರಂ ತನಯಂ ಗುರುಂ ।
ಆಕ್ಷಾರಯನ್ ಶತಂ ದಾಪ್ಯಃ ಪಂಥಾನಂ ಚಾದದದ್ಗುರೋಃ ॥ ೨೭೫

ತಾಯಿ, ತಂದೆ, ಹೆಂಡತಿ, ಸೋದರ, ಮಗ ಇವರನ್ನು ಶಪಿಸಿದರೆ ನೂರು ಪಣ ದಂಡನೆಯು. ಗುರುವಿಗೆ ದಾರಿ ಕೊಡದವನಿಗೂ ಅದೇ ದಂಡವು.

ಬ್ರಾಹ್ಮಣಕ್ಷತ್ರಿಯಾಭ್ಯಾಂ ತು ದಂಡಃ ಕಾರ್ಯೋ ವಿಜಾನತಾ ।
ಬ್ರಾಹ್ಮಣೇ ಸಾಹಸಃ ಪೂರ್ವಃ ಕ್ಷತ್ರಿಯೇ ತ್ವೇವ ಮಧ್ಯಮಃ ॥ ೨೭೬

ಬ್ರಾಹ್ಮಣನನ್ನು ಕ್ಷತ್ರಿಯನು ಬೈದರೆ ಮಧ್ಯಮಸಾಹಸ ಬ್ರಾಹ್ಮಣನು ಕ್ಷತ್ರಿಯನನ್ನು ಬೈದಾಗ ಅವನಿಗೆ ಪ್ರಥಮಸಾಹಸ.

ವಿಟ್ ಶೂದ್ರಯೋರೇವಮೇವ ಸ್ವಜಾತಿಂ ಪ್ರತಿ ತತ್ವತಃ ।
ಛೇದವರ್ಜಂ ಪ್ರಣಯನಂ ದಂಡಸ್ಯೇತಿ ವಿನಿಶ್ಚಯಃ ॥ ೨೭೭

ವೈಶ್ಯನು ಶೂದ್ರನನ್ನು ಬೈದರೆ ಪ್ರಥಮಸಾಹಸ. ಶೂದ್ರನು ವೈಶ್ಯನನ್ನು ಬೈದರೆ ಮಧ್ಯಮಸಾಹಸ. ಅಂಗಛೇದನವು ಬೇಡ.

ಏಷ ದಂಡವಿಧಿಃ ಪ್ರೋಕ್ತೋ ವಾಕ್ಪಾರುಷ್ಯಸ್ಯ ತತ್ವತಃ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ದಂಡಪಾರುಷ್ಯನಿರ್ಣಯಂ ॥ ೨೭೮

ಇಲ್ಲಿವರೆಗೆ ವಾಚನಿಕ ಅಪರಾಧ ದಂಡನೆಯನ್ನು ಹೇಳಿ ಇನ್ನು ಮೇಲೆ ಹೊಡೆತ ಬಡಿತಗಳ ವಿಷಯವು ಹೇಳಲ್ಪಡುವುದು.

ಯೇನ ಕೇನಚಿದಂಗೇನ ಹಿಂಸ್ಯಾಚ್ಚೇತ್ ಶ್ರೇಷ್ಠಮಂತ್ಯಜಃ ।
ಛೇತ್ತವ್ಯಂ ತತ್ತದೇವಾಸ್ಯ ತನ್ಮನೋರನುಶಾಸನಂ ॥ ೨೭೯

ಶೂದ್ರನು ಶ್ರೇಷ್ಠನನ್ನು ತನ್ನ ಯಾವ ಅವಯವದಿಂದ ಹಿಂಸಿಸುತ್ತಾನೋ ಅವನ ಅದೇ ಅಂಗವನ್ನು ಕತ್ತರಿಸುವುದು ಮನುಸಮ್ಮತ ದಂಡನೆಯು.

ಪಾಣಿಮುದ್ಯಮ್ಯ ದಂಡಂ ವಾ ಪಾಣಿಚ್ಛೇದನಮರ್ಹತಿ ।
ಪಾದೇನ ಪ್ರಹರನ್ ಕೋಪಾತ್ಪಾದಚ್ಛೇದನಮರ್ಹತಿ ॥ ೨೮೦

ದೊಣ್ಣೆಯನ್ನು ಹೊಡೆಯಲು ಕೈ ಎತ್ತಿದರೆ ಕೈಯನ್ನು ಕಡಿಯಬೇಕು. ಕಾಲಿನಿಂದ ತುಳಿದರೆ ಕಾಲು ಕತ್ತರಿಸುವುದು.

ಸಹಾಸನಮಭಿಪ್ರೇಪ್ಸುರುತ್ಕೃಷ್ಟಸ್ಯಾಪಕೃಷ್ಟಜಃ ।
ಕಟ್ಯಾಂ ಕೃತಾಂಕೋ ನಿರ್ವಾಸ್ಯಃ ಸ್ಫಿಚಂ ವಾಽಸ್ಯಾವಕರ್ತಯೇತ್ ॥ ೨೮೧

ಅಪಕೃಷ್ಟನು ಉತ್ಕೃಷ್ಟನ ಒಡನೆ ಕುಳಿತುಕೊಳ್ಳಲು ಇಚ್ಛಿಸಿದರೆ ಸೊಂಟದಲ್ಲಿ ಕಬ್ಬಿಣ ಕಾಸಿಟ್ಟು ಗುರುತು ಮಾಡಬೇಕು. ಅಥವಾ ಕುಂಡೆ ಕೆತ್ತಬೇಕು. ಸಾಯಬಾರದು.

ಅವನಿಷ್ಠೀವತೋ ದರ್ಪಾದ್ದ್ವಾವೋಷ್ಠೌ ಛೇದಯೇನ್ನೃಪಃ ।
ಅವಮೂತ್ರಯತೋ ಮೇಢ್ರಮವಶರ್ಧಯತೋ ಗುದಂ ॥ ೨೮೨

ಎದುರಾಗಿ ಉಗುಳಿದರೆ ತುಟಿ ಕೊಯ್ಯುವುದು. ಮೂತ್ರ ಬಿಟ್ಟರೆ ಮೂತ್ರಾಂಗ ಕೊಯ್ಯುವುದು, ಅಪಾನವಾಯು ಬಿಟ್ಟರೆ ಗುದಕೆತ್ತುವುದು. ಉದ್ದೇಶ ಪೂರ್ವಕ ಮಾಡಿದರೆ ಈ ದಂಡನೆಯು.

ಕೇಶೇಷು ಗೃಹ್ಣತೋ ಹಸ್ತೌ ಛೇದಯೇದವಿಚಾರಯನ್ ।
ಪಾದಯೋರ್ದಾಢಿಕಾಯಾಂ ಚ ಗ್ರೀವಾಯಾಂ ವೃಷಣೇಷು ಚ । ೨೮೩

ತಲೆಕೂದಲು ಹಿಡಿದೆಳೆದರೆ ಕೈ ಕಡಿಯಬೇಕು. ಕಾಲು, ಗಡ್ಡ, ಮೀಸೆ, ಕುತ್ತಿಗೆ, ಅಂಡಕೋಶ ಹಿಡಿದೆಳೆದರೆ ಹಾಗೆ ಮಾಡುವುದು.

ತ್ವಗ್ಭೇದಕಃ ಶತಂ ದಂಡ್ಯೋ ಲೋಹಿತಸ್ಯ ಚ ದರ್ಶಕಃ ।
ಮಾಂಸಭೇತ್ತಾ ತು ಷಣ್ಣಿಷ್ಕಾನ್ ಪ್ರವಾಸ್ಯಸ್ತ್ವಸ್ಥಿಭೇದಕಃ ॥ ೨೮೪

ಒಂದೇ ಜಾತಿಯವರು ಪರಸ್ಪರ ಜಗಳಾಡಿ ಚರ್ಮ ಕಿತ್ತರೆ ನೂರು ಪಣ, ನೆತ್ತರು ಸುರಿದರೆ ಅದೇ ದಂಡ, ಮಾಂಸ ಕಿತ್ತರೆ ಅರುವತ್ತು ನಿಷ್ಕ, ಎಲುಬು ಮುರಿದರೆ ಊರಿಂದ ಓಡಿಸುವುದು.

ವನಸ್ಪತೀನಾಂ ಸರ್ವೇಷಾಮುಪಭೋಗೋ ಯಥಾಯಥಾ ।
ತಥಾತಥಾ ದಮಃ ಕಾರ್ಯೋ ಹಿಂಸಾಯಾಮಿತಿ ಧಾರಣಾ ॥ ೨೮೫

ವನಸ್ಪತಿಗಳ ಅವಯವ ಕಡಿದು ಅನುಭವಿಸಿದರೆ ಅದರ ಬೆಲೆಗೆ ಸರಿಯಾದ ದಂಡನೆಯು.

ಮನುಷ್ಯಾಣಾಂ ಪಶೂನಾಂ ಚ ದುಃಖಾಯ ಪ್ರಹೃತೇ ಸತಿ ।
ಯಥಾಯಥಾ ಮಹದ್ದುಃಖಂ ದಂಡಂ ಕುರ್ಯಾತ್ತಥಾತಥಾ ॥ ೨೮೬

ಮನುಷ್ಯರಿಗೂ ಪಶುಗಳಿಗೂ ಹೊಡೆದರೆ ಹೀಗೆಯೇ ದುಃಖಾನುಸಾರ ದಂಡನೆಯು.

ಅಂಗಾವಪೀಡನಾಯಾಂ ಚ ವ್ರಣಶೋಣಿತಯೋಸ್ತಥಾ ।
ಸಮುತ್ಥಾನವ್ಯಯಂ ದಾಪ್ಯಃ ಸರ್ವದಂಡಮಥಾಪಿ ವಾ ॥ ೨೮೭

ಅಂಗಪೀಡೆ, ಗಾಯ, ರಕ್ತಸೋರುವುದು ಉಂಟುಮಾಡಿದರೆ ಗುಣ ಹೊಂದುವವರೆಗಿನ ಖರ್ಚನ್ನು ದಂಡವಾಗಿ ವಿಧಿಸಬೇಕು.

ದ್ರವ್ಯಾಣಿ ಹಿಂಸ್ಯಾದ್ಯೋ ಯಸ್ಯ ಜ್ಞಾನತೋಽಜ್ಞಾನತೋಽಪಿ ವಾ ।
ಸ ತಸ್ಯೋತ್ಪಾದಯೇತ್ತುಷ್ಟಿಂ ರಾಜ್ಞೇ ದದ್ಯಾಚ್ಚ ತತ್ಸಮಂ ॥ ೨೮೮

ಪಾತ್ರೆ ವಗೈರೆ ಹಾಳುಮಾಡಿದರೆ ಅದನ್ನು ಸರಿಮಾಡಿಸಿ ಮಾಲಿಕನನ್ನು ಸಂತೋಷಪಡಿಸುವುದಲ್ಲದೆ ಅಷ್ಟು ಧನ ದಂಡನೆಯು.

ಚರ್ಮಚಾರ್ಮಿಕಭಾಂಡೇಷು ಕಾಷ್ಠಲೋಷ್ಟಮಯೇಷು ಚ ।
ಮೂಲ್ಯಾತ್ಪಂಚಗುಣೋ ದಂಡಃ ಪುಷ್ಪಮೂಲಫಲೇಷು ಚ ॥ ೨೮೯

ಚರ್ಮದ ಪಾತ್ರೆ, ಮರದ ಪಾತ್ರೆ, ಮಣ್ಣಿನ ಪಾತ್ರೆ, ಸಾಮಾನು ಹಾಳು ಮಾಡಿದರೆ ಅದರ ಐದರಷ್ಟು ದಂಡನೆಯು.

ಯಾನಸ್ಯ ಚೈವ ಯಾತುಶ್ಚ ಯಾನಸ್ವಾಮಿನ ಏವ ಚ ।
ದಶಾತಿವರ್ತನಾನ್ಯಾಹುಃ ಶೇಷೇ ದಂಡೋ ವಿಧೀಯತೇ ॥ ೨೯೦

ವಾಹನ, ಪ್ರಯಾಣಿಕ, ವಾಹನಸ್ವಾಮಿ ಇವರೊಳಗಿನ ಹತ್ತು ದುರ್ವರ್ತನೆಗಳು ದಂಡನೀಯಗಳಲ್ಲ. ಬೇರೆ ಅಪರಾಧಗಳು ದಂಡಾರ್ಹಗಳು.

ಛಿನ್ನನಾಸ್ಯೇ ಭಗ್ನಯುಗೇ ತಿರ್ಯಕ್ ಪ್ರತಿಮುಖಾಗತೇ ।
ಅಕ್ಷಭಂಗೇ ಚ ಯಾನಸ್ಯ ಚಕ್ರಭಂಗೇ ತಥೈವ ಚ ॥ ೨೯೧

ಛೇದನೇ ಚೈವ ಯಂತ್ರಾಣಾಂ ಯೋಕ್ತ್ರರಶ್ಮ್ಯೋಸ್ತಥೈವ ಚ ।
ಆಕ್ರಂದೇ ಚಾಪ್ಯಪೈಹೀತಿ ನ ದಂಡಂ ಮನುರಬ್ರವೀತ್ ॥ ೨೯೨

ಮೂಗಿನ ಬಳ್ಳಿ ತುಂಡಾದರೆ, ನೊಗ ತುಂಡಾದರೆ, ರಥ ಹಿಂದೆ ಬಂದರೆ, ಅಚ್ಚು ಮುರಿದರೆ, ಚಕ್ರ ಮುರಿದರೆ, ಚರ್ಮದ ಕಟ್ಟು ಕಡಿದರೆ, ಎತ್ತಿನ ಗಾಡಿಯ ಬಳ್ಳಿ ಹರಿದರೆ, ದಾರಿಬಿಡಲು ಬೊಬ್ಬಿಟ್ಟರೂ ದಾರಿಯಲ್ಲಿ ಅಪಾಯವಾದರೆ (ದಾರಿಗರಿಗೆ) ಈ ಹತ್ತು ಅತಿಕ್ರಮಗಳು ಸಂಭವನೀಯ ದಂಡನೀಯವಲ್ಲ. ಎಂದು ಮನುಮತವು.

ಯತ್ರಾಪವರ್ತತೇ ಯುಗ್ಯಂ ವೈಗುಣ್ಯಾತ್ಪ್ರಾಜಕಸ್ಯ ತು ।
ತತ್ರ ಸ್ವಾಮೀ ಭವೇದ್ದಂಡ್ಯೋ ಹಿಂಸಾಯಾಂ ದ್ವಿಶತಂ ದಮಂ ॥ ೨೯೩

ಸಾರಥಿಯ ದೋಷದಿಂದ ವಾಹನಾಪಘಾತವಾಗಿ ಯಾರಿಗಾದರೂ ಹಿಂಸೆಯಾದರೆ ಆಗ ವಾಹನಸ್ವಾಮಿಗೆ ಇನ್ನೂರು ಹಣ ದಂಡವು.

ಪ್ರಾಜಕಶ್ಚೇದ್ಭವೇದಾಪ್ತಃ ಪ್ರಾಜಕೋ ದಂಡಮರ್ಹತಿ ।
ಯುಗ್ಯಸ್ಥಾಃ ಪ್ರಾಜಕೇಽನಾಪ್ತೇ ಸರ್ವೇ ದಂಡ್ಯಾಃ ಶತಂ ಶತಂ ॥ ೨೯೪

ಸಾರಥಿಯು ಸಮರ್ಥನಾಗಿ ಅಪಘಾತವಾದರೆ ಸಾರಥಿಗೆ ದಂಡನೆಯು. ಸಾರಥಿಯು ಅಶಿಕ್ಷಿತನಾದರೆ ಅವನು, ಪ್ರಯಾಣಿಕರು, ಎಲ್ಲರೂ ನೂರು ಪಣ ಪ್ರತ್ಯೇಕ ದಂಡತೆರತಕ್ಕವರು.

ಸ ಚೇತ್ತು ಪಥಿ ಸಂರುದ್ಧಃ ಪಶುಭಿರ್ವಾ ರಥೇನ ವಾ ।
ಪ್ರಮಾಪಯೇತ್ಪ್ರಾಣಭೃತಸ್ತತ್ರ ದಂಡೋಽವಿಚಾರಿತಃ ॥ ೨೯೫

ಮಾರ್ಗದಲ್ಲಿ ಪಶುಗಳು, ಇನ್ನೊಂದು ವಾಹನವು, ಎದುರಾಗಿ ಪ್ರಾಣ ಹಾನಿಯಾದರೆ ಆಗ ದಂಡನೆಯು ಬೇಕು.

ಮನುಷ್ಯಮಾರಣೇ ಕ್ಷಿಪ್ರಂ ಚೌರವತ್ಕಿಲ್ಬಿಷಂ ಭವೇತ್ ।
ಪ್ರಾಣಭೃತ್ಸು ಮಹತ್ಸ್ವರ್ಧಂ ಗೋಗಜೋಷ್ಟ್ರಹಯಾದಿಷು ॥ ೨೯೬

ಅಪಘಾತದಲ್ಲಿ ಮನುಷ್ಯನು ಸತ್ತರೆ ಸಾರಥಿಗೆ ಕಳ್ಳನ ದಂಡನೆಯಾದ ಉತ್ತಮಸಾಹಸವು. ಪ್ರಾಣಿಮರಣವಾದರೆ ಐನೂರು ಪಣ ದಂಡವು.

ಕ್ಷುದ್ರಕಾಣಾಂ ಪಶೂನಾಂ ತು ಹಿಂಸಾಯಾಂ ದ್ವಿಶತೋ ದಮಃ |
ಪಂಚಾಶತ್ತು ಭವೇದ್ದಂಡಃ ಶುಭೇಷು ಮೃಗಪಕ್ಷಿಷು || ೨೯೭

ಅಪಘಾತದಲ್ಲಿ ಸಣ್ಣ ಪ್ರಾಣಿಗಳು ಸತ್ತರೆ ಇನ್ನೂರು ಹಣ ದಂಡ. ಒಳ್ಳೆ ಪಕ್ಷಿಗಳು ಸತ್ತರೆ ಐವತ್ತು ಹಣ.

ಗರ್ದಭಾಜಾವಿಕಾನಾಂ ತು ದಂಡಃ ಸ್ಯಾತ್ಪಂಚಮಾಷಿಕಃ |
ಮಾಷಿಕಸ್ತು ಭವೇದ್ದಂಡಃ ಶ್ವಸೂಕರನಿಪಾತನೇ || ೨೯೮

ಕತ್ತೆ, ಆಡು, ಕುರಿ ಹಿಂಸೆಯಾದರೆ ಐದು ಮಾಷ ದಂಡವು. ನಾಯಿ, ಹಂದಿ ಹಿಂಸೆಯಾದರೆ ಒಂದು ಮಾಷ ದಂಡವು.

ಭಾರ್ಯಾ ಪುತ್ರಶ್ಚ ದಾಸಶ್ಚ ಪ್ರೇಷ್ಯೋ ಭ್ರಾತಾ ಚ ಸೋದರಃ |
ಪ್ರಾಪ್ತಾಪರಾಧಾಸ್ತಾಡ್ಯಾಃ ಸ್ಯೂ ರಜ್ವಾ ವೇಣುದಲೇನ ವಾ || ೨೯೯

ಹೆಂಡತಿ, ಮಗ, ಸೇವಕ, ತಮ್ಮ ಇವರು ತಪ್ಪು ಮಾಡಿದರೆ ಬಳ್ಳಿ ಬಿದಿರು ಸಿಗುಳುಗಳಿಂದ ಸ್ವಲ್ಪ ಹೊಡೆಯುಬಹುದು. ಆಗ ಹೊಡೆದವನಿಗೆ ದಂಡನೆಯಿಲ್ಲ.

ಪೃಷ್ಠತಸ್ತು ಶರೀರಸ್ಯ ನೋತ್ತಮಾಂಗೇ ಕಥಂಚನ |
ಅತೋಽನ್ಯಥಾ ತು ಪ್ರಹರನ್ ಪ್ರಾಪ್ತಃ ಸ್ಯಾಚ್ಚೌರಕಿಲ್ಬಿಷಂ || ೩೦೦

ಬೆನ್ನಿಗೆ ಹೊಡೆಯುಬಹುದು. ತಲೆಗೆ ಹೊಡೆಯುಬಾರದು. ಇಂತಹ ಕ್ರಮತಪ್ಪಿ ಹೊಡೆದರೆ ಕಳ್ಳನ ದಂಡನೆಗೆ ಅರ್ಹನು.

ಏಷೋಽಖಿಲೇನಾಭಿಹಿತೋ ದಂಡಪಾರುಷ್ಯನಿರ್ಣಯಃ |
ಸ್ತೇನಸ್ಯಾತಃ ಪ್ರವಕ್ಷ್ಯಾಮಿ ವಿಧಿಂ ದಂಡವಿನಿರ್ಣಯೇ || ೩೦೧

ಇದು ಹೇಳಿದುದು ದಂಡಪಾರುಷ್ಯ ನಿರ್ಣಯವು. ಇನ್ನು ಕಳ್ಳನ ದಂಡವಿಧಿಯನ್ನು ಹೇಳುವೆನು.

ಪರಮಂ ಯತ್ನಮಾತಿಷ್ಠೇತ್ ಸ್ತೇನಾನಾಂ ನಿಗ್ರಹೇ ನೃಪಃ |
ಸ್ತೇನಾನಾಂ ನಿಗ್ರಹಾದಸ್ಯ ಯಶೋ ರಾಷ್ಟ್ರಂ ಚ ವರ್ಧತೇ || ೩೦೨

ರಾಜನು ಕಳ್ಳರನ್ನು ಹಿಡಿದು ದಮನಿಸಲು ತುಂಬ ಪ್ರಯತ್ನ ಮಾಡಬೇಕು. ಕಳ್ಳರನ್ನು ಅಡಗಿಸಿದರೆ ರಾಷ್ಟ್ರಕ್ಕೂ ತನಗೂ ಕೀರ್ತಿಯಿದೆ.

ಅಭಯಸ್ಯ ಹಿ ಯೋ ದಾತಾ ಸ ಪೂಜ್ಯಃ ಸತತಂ ನೃಪಃ ।
ಸತ್ರಂ ಹಿ ವರ್ಧತೇ ತಸ್ಯ ಸದೈವಾಭಯದಕ್ಷಿಣಂ ॥ ೩೦೩

ಕಳ್ಳರು ಇಲ್ಲದೆ ಪ್ರಜೆಗಳಿಗೆ ಉಂಟಾಗುವ ಅಭಯದ ಪುಣ್ಯವು ರಾಜನಿಗೆ ಲಭಿಸುವುದು. ಈ ಯಾಗವು ಸದಾ ಇದೆ. ಇಲ್ಲಿ ಅಭಯವೇ ದಕ್ಷಿಣೆ. ಗವಾಯನಾದಿಸತ್ರವು ಅನ್ಯವಿಧ.

ಸರ್ವತೋ ಧರ್ಮಷಡ್ಭಾಗೋ ರಾಜ್ಞೋ ಭವತಿ ರಕ್ಷತಃ ।
ಅಧರ್ಮಾದಪಿ ಷಡ್ಭಾಗೋ ಭವತ್ಯಸ್ಯ ಹ್ಯರಕ್ಷತಃ ॥ ೩೦೪

ಪ್ರಜೆಗಳನ್ನು ಸರಿಯಾಗಿ ರಕ್ಷಿಸುವ ರಾಜನಿಗೆ ಪ್ರಜೆಗಳ ಧರ್ಮದ ಆರನೆ ಭಾಗ ಲಾಭವಿದ್ದಂತೆ ರಕ್ಷಣೆ ಮಾಡದಾಗ ಅಧರ್ಮದ ಭಾಗವೂ ರಾಜನಿಗೆ ಸೇರುವುದು.

ಯದಧೀತೇ ಯದ್ಯಜತೇ ಯದ್ದದಾತಿ ಯದರ್ಚತಿ ।
ತಸ್ಯ ಷಡ್ಭಾಗಭಾಗ್ರಾಜಾ ಸಮ್ಯಗ್ಭವತಿ ರಕ್ಷಣಾತ್ ॥ ೩೦೫

ಯಾವ ಪ್ರಜೆಯು ಅಧ್ಯಯನ, ಯಜನ, ದಾನ, ಅರ್ಚನೆಗಳನ್ನು ಮಾಡುತ್ತಾನೊ ಅದರ ಆರನೆ ಒಂದು ಭಾಗವು ಅವನ ರಕ್ಷಣೆ ಮಾಡಿ ನಿರಾಂತಕ ಕಾರ್ಯ ನೆರವೇರುವುದರಿಂದ ರಾಜನಿಗೆ ಲಭಿಸದಿರುವುದಿಲ್ಲ.

ರಕ್ಷನ್ ಧರ್ಮೇಣ ಭೂತಾನಿ ರಾಜಾ ವಧ್ಯಾಂಶ್ಚ ಘಾತಯನ್ ।
ಯಜತೇಽಹರಹರ್ಯಜ್ಞೈಃ ಸಹಸ್ರಶತದಕ್ಷಿಣೈಃ ॥ ೩೦೬

ಪ್ರತಿದಿನ ಲಕ್ಷ ಗೋದಾನವುಳ್ಳ ಯಜ್ಞವನ್ನು ಮಾಡಿದ ಫಲವು ರಾಜನಿಗೆ ಧರ್ಮಬದ್ಧವಾದ ಪ್ರಜಾಪಾಲನೆಯಿಂದ ಲಭಿಸುವುದು.

ಯೋಽರಕ್ಷನ್ ಬಲಿಮಾದತ್ತೇ ಕರಂ ಶುಲ್ಕಂ ಚ ಪಾರ್ಥಿವಃ ।
ಪ್ರತಿಭಾಗಂ ಚ ದಂಡಂ ಚ ಸ ಸದ್ಯೋ ನರಕಂ ವ್ರಜೇತ್ ॥ ೩೦೭

ದಂಡನೆ, ಫೀಸು, ಕಂದಾಯ, ಟೇಕ್ಸು ಇವುಗಳ ರೂಪದಿಂದ ಪ್ರಜಾಧನ ಸ್ವೀಕರಿಸುವ ರಾಜನು ಅವ್ಯಾಜರಕ್ಷಣೆಯನ್ನು ಒದಗಿಸದಿದ್ದರೆ ರಾಜನಿಗೆ ನರಕವಿದೆ.

ಅರಕ್ಷಿತಾರಂ ರಾಜಾನಂ ಬಲಿಷಡ್ಭಾಗಹಾರಿಣಂ ।
ತಮಾಹುಃ ಸರ್ವಲೋಕಸ್ಯ ಸಮಗ್ರಮಲಹಾರಕಂ ॥ ೩೦೮

ರಾಜನು ರಕ್ಷಣೆ ಮಾಡದೆ ಸುಖಲೋಲನಾಗಿ ಪ್ರಜೆಗಳು ಅಂತರ್ಬಾಹ್ಯ ಶತ್ರುಗಳ ಪೀಡೆಗೊಳಗಾದರೆ ರಾಜನ ಧನವು ಮಲ ಸಮಾನವು.

ಅನಪೇಕ್ಷಿತಮರ್ಯಾದಂ ನಾಸ್ತಿಕಂ ವಿಪ್ರಲುಂಪಕಂ ।
ಅರಕ್ಷಿತಾರಮತ್ತಾರಂ ನೃಪಂ ವಿದ್ಯಾದಧೋಗತಿಂ ॥ ೩೦೯

ಶಾಸ್ತ್ರವನ್ನು ಮೀರಿ ನಾಸ್ತಿಕನಾಗಿ ರಕ್ಷಣೆ ಮಾಡದೆ ಬರಿ ಉಣ್ಣುವವನಾದ ರಾಜನು ಉತ್ತಮ ಗತಿಯನ್ನು ಹೊಂದುವುದಿಲ್ಲ.

ಅಧಾರ್ಮಿಕಂ ತ್ರಿಭಿರ್ನ್ಯಾಯೈರ್ನಿಗೃಹ್ಣೀಯಾತ್ಪ್ರಯತ್ನತಃ ।
ನಿರೋಧನೇನ ಬಂಧೇನ ವಿವಿಧೇನ ವಧೇನ ಚ ॥ ೩೧೦

ಧರ್ಮವಿರುದ್ಧ ವರ್ತನೆಯುಳ್ಳವರನ್ನು ಜೈಲು, ಸರಪಣಿ ಹೊಡೆತಗಳಿಂದ ಸದಾಚಾರದಲ್ಲಿ ನಿಯಮಿಸಬೇಕು.

ನಿಗ್ರಹೇಣ ಹಿ ಪಾಪಾನಾಂ ಸಾಧೂನಾಂ ಸಂಗ್ರಹೇಣ ಚ ।
ದ್ವಿಜಾತಯ ಇವೇಜ್ಯಾಭಿಃ ಪೂಯಂತೇ ಸತತಂ ನೃಪಾಃ ॥ ೩೧೧

ಪಾಪಕರ್ಮಿಗಳ ದಮನದಿಂದ, ಸಜ್ಜನರ ರಕ್ಷಣೆಯಿಂದ ರಾಜನು ಪರಿಶುದ್ಧನಾಗುತ್ತಾನೆ. ಬ್ರಾಹ್ಮಣರು ಯಜ್ಞದಿಂದ ಶುದ್ಧರು ಆದಂತೆ.

ಕ್ಷಂತವ್ಯಂ ಪ್ರಭುಣಾ ನಿತ್ಯಂ ಕ್ಷಿಪತಾಂ ಕಾರ್ಯಿಣಾಂ ನೃಣಾಂ ।
ಬಾಲವೃದ್ಧಾತುರಾಣಾಂ ಚ ಕುರ್ವತಾ ಹಿತಮಾತ್ಮನಃ ॥ ೩೧೨

ವಾದಿ–ಪ್ರತಿವಾದಿಗಳ ಮತ್ತು ರೋಗಿ ಮುದುಕ, ಹುಡುಗರ ಅಸಹನೆಯ ಮಾತುಗಳನ್ನು ಸಹಿಸಬೇಕು.

ಯಃ ಕ್ಷಿಪ್ತೋ ಮರ್ಷಯತ್ಯಾರ್ತೈಸ್ತೇನ ಸ್ವರ್ಗೇ ಮಹೀಯತೇ ।
ಯಸ್ತ್ವೈಶ್ವರ್ಯಾನ್ನ ಕ್ಷಮತೇ ನರಕಂ ತೇನ ಗಚ್ಛತಿ ॥ ೩೧೩

ದುಃಖಿತರ ಆಕ್ಷೇಪವನ್ನು ತಾಳಿದರೆ ಸ್ವರ್ಗದಲ್ಲಿ ಗೌರವವಿದೆ. ಅಧಿಕಾರ ಮದದಿಂದ ತೀಕ್ಷ್ಣನಾದರೆ ನರಕವಿದೆ.

ರಾಜಾ ಸ್ತೇನೇನ ಗಂತವ್ಯೋ ಮುಕ್ತಕೇಶೇನ ಧಾವತಾ ।
ಆಚಕ್ಷಾಣೇನ ತತ್‌ಸ್ತೇಯಮೇವಂಕರ್ಮಾಸ್ಮಿ ಶಾಧಿ ಮಾಂ ॥ ೩೧೪

ಸ್ಕಂಧೇನಾದಾಯ ಮುಸಲಂ ಲಗುಡಂ ವಾಪಿ ಖಾದಿರಂ ।
ಶಕ್ತಿಂ ಚೋಭಯತಸ್ತೀಕ್ಷ್ಣಾಮಾಯಸಂ ದಂಡಮೇವ ವಾ ॥ ೩೧೫

ಕದ್ದ ಕಳ್ಳನು ತಲೆಕೂದಲು ಕೆದರಿಕೊಂಡು ಓಡಿ ಹೋಗಿ ಇಂತಹ ಕಳ್ಳತನ ಮಾಡಿದೆ ನನ್ನನ್ನು ದಂಡಿಸು ಎಂದು ರಾಜನಿಗೆ ಮೊರೆಯಿಡಬೇಕು. ಓಡುವಾಗ ಹೆಗಲಲ್ಲಿ ಒನಕೆ ದೊಣ್ಣೆ ಎರಡು ಚೂಪಾದ ಕಬ್ಬಿಣದ ಸರಳು ಹೊತ್ತುಕೊಳ್ಳಬೇಕು.

ಶಾಸನಾದ್ವಾ ವಿಮೋಕ್ಷಾದ್ವಾ ಸ್ತೇನಃ ಸ್ತೇಯಾದ್ವಿಮುಚ್ಯತೇ ।
ಅಶಾಸಿತ್ವಾ ತು ತಂ ರಾಜಾ ಸ್ತೇನಸ್ಯಾಪ್ನೋತಿ ಕಿಲ್ಬಿಷಂ ॥ ೩೧೬

ದ್ರವ್ಯದ ಮೂಲವನ್ನನುಸರಿಸಿ ಹೊಡೆದರೂ ಕೊಂದರೂ ಕಳ್ಳತನದ ಪಾಪದಿಂದ ಕಳ್ಳನು ಮುಕ್ತನಾಗುವನು. ಅಂತಹ ಕಳ್ಳನನ್ನು ಕರುಣೆಯಿಂದ ದಂಡಿಸದೆ ಬಿಟ್ಟರೆ ಕಳ್ಳನ ಪಾಪವು ರಾಜನಿಗೆ ಬರುವುದು.

ಅನ್ನಾದೇ ಭ್ರೂಣಹಾ ಮಾರ್ಷ್ಟಿ ಪತ್ಯೌ ಭಾರ್ಯಾಪಚಾರಿಣೀ ।
ಗುರೌ ಶಿಷ್ಯಶ್ಚ ಯಾಜ್ಯಶ್ಚ ಸ್ತೇನೋ ರಾಜನಿ ಕಿಲ್ಬಿಷಂ ॥ ೩೧೭

ಬ್ರಹ್ಮಹತ್ಯಾಪಾಪವು ಅವನ ಅನ್ನ ತಿಂದವನಿಗೂ, ಹೆಂಡತಿಯ ವ್ಯಭಿಚಾರದ ಪಾಪವು ಗಂಡನಿಗೂ, ಶಿಷ್ಯಯಾಜ್ಯರ ಪಾಪವು ಗುರುವಿಗೂ, ಕಳ್ಳನ ಪಾಪವು ರಾಜನಿಗೂ ಸಂಬಂಧಿಸುವುದು. ಆದುದರಿಂದ ಅವರ ಅಪರಾಧಕ್ಕೆ ಜಾಗ್ರತೆಯಿಂದ ಪ್ರತಿಕ್ರಿಯೆ ಮಾಡಲು ಸಂಬಂಧಿಸಿದವರು ತಪ್ಪಬಾರದು.

ರಾಜಭಿಃ ಕೃತದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ ।
ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ ॥ ೩೧೮

ಅಪರಾಧಕ್ಕೆ ರಾಜನಿಂದ ದಂಡಿತರಾದವರು ನಿರ್ಮಲರಾಗಿ ಪುಣ್ಯಾತ್ಮರಂತೆ ಸ್ವರ್ಗಕ್ಕೆ ಹೋಗುತ್ತಾರೆ.

ಯಸ್ತು ರಜ್ಜುಂ ಘಟಂ ಕೂಪಾದ್ಧರೇದ್ಭಿದ್ಯಾಚ್ಚ ಯಃ ಪ್ರಪಾಂ ।
ಸ ದಂಡಂ ಪ್ರಾಪ್ನುಯಾನ್ಮಾಷಂ ತಚ್ಚ ತಸ್ಮಿನ್ ಸಮಾಹರೇತ್ ॥ ೩೧೯

ಬಾವಿಹಗ್ಗ, ಕೊಡ ಕದ್ದರೆ, ಅರವಟ್ಟಿಗೆಯನ್ನು ಕೆಡವಿದರೆ ಅವನಿಗೆ ಒಂದು ಮಾಷ ದಂಡವು. ಮತ್ತು ಆ ಸಾಮಗ್ರಿಯನ್ನು ಕೊಡಬೇಕು.

ಧಾನ್ಯಂ ದಶಭ್ಯಃ ಕುಂಭೇಭ್ಯೋ ಹರತೋಽಭ್ಯಧಿಕಂ ವಧಃ ।
ಶೇಷೇಽಪ್ಯೇಕಾದಶಗುಣಂ ದಾಪ್ಯಸ್ತಸ್ಯ ಚ ತದ್ಧನಂ ॥ ೩೨೦

ಹತ್ತು ಕುಂಭಗಳಿಗಿಂತ ಅಧಿಕ ಧಾನ್ಯವನ್ನು ಕದ್ದರೆ ಉಚಿತ ಕಂಡಂತೆ ಪೆಟ್ಟು. ಅಂಗಚ್ಛೇದ ಮರಣಗಳನ್ನು ವಿಧಿಸಬಹುದು. ಕಡಿಮೆ ಕದ್ದರೆ ಕದ್ದ ಧಾನ್ಯದ ಹನ್ನೊಂದು ಪಾಲಿನಷ್ಟು ದಂಡನೆಯು.

ತಥಾ ಧರಿಮಮೇಯಾನಾಂ ಶತಾದಭ್ಯಧಿಕೇ ವಧಃ ।
ಸುವರ್ಣರಜತಾದೀನಾಮುತ್ತಮಾನಾಂ ಚ ವಾಸಸಾಂ ॥ ೩೨೧

ಚಿನ್ನ, ಬೆಳ್ಳಿ ವಗೈರೆ ತೂಗುವ ಸಾಮಾನು, ಪಟ್ಟೆ ಬಟ್ಟೆ, ನೂರುಪಲಕ್ಕಿಂತ ಅಧಿಕ ಕದ್ದರೆ ಹೊಡೆತದಿಂದ ಮರಣದವರೆಗಿನ ದಂಡನೆಯು.

ಪಂಚಾಶತಸ್ತ್ವಭ್ಯಧಿಕೇ ಹಸ್ತಚ್ಛೇದನಮಿಷ್ಯತೇ ।
ಶೇಷೇ ತ್ವೇಕಾದಶಗುಣಂ ಮೂಲ್ಯಾದ್ದಂಡಂ ಪ್ರಕಲ್ಪಯೇತ್ ॥ ೩೨೨

ಐವತ್ತು ಪಲಕ್ಕಿಂತ ಅಧಿಕ ಕದ್ದರೆ ಕೈ ಕಡಿಯುವುದು, ಐವತ್ತಕ್ಕಿಂತ ಕಡಿಮೆಯಾದರೆ ಅದರ ಹನ್ನೊಂದು ಪಾಲು ದಂಡನೆಯು.

ಪುರುಷಾಣಾಂ ಕುಲೀನಾನಾಂ ನಾರೀಣಾಂ ಚ ವಿಶೇಷತಃ ।
ಮುಖ್ಯಾನಾಂ ಚೈವ ರತ್ನಾನಾಂ ಹರಣೇ ವಧಮರ್ಹತಿ ॥ ೩೨೩

ಸತ್ಕುಲದ ಸ್ತ್ರೀ–ಪುರುಷರು ರತ್ನಗಳು ಇವುಗಳನ್ನು ಕದ್ದರೆ ಮರಣ ದಂಡನೆಯು.

ಮಹಾಪಶೂನಾಂ ಹರಣೇ ಶಸ್ತ್ರಾಣಾಮೌಷಧಸ್ಯ ಚ ।
ಕಾಲಮಾಸಾದ್ಯ ಕಾರ್ಯಂ ಚ ದಂಡಂ ರಾಜಾ ಪ್ರಕಲ್ಪಯೇತ್ ॥ ೩೨೪

ಆನೆ ಮುಂತಾದ ಪ್ರಾಣಿ, ಆಯುಧಗಳು, ಮದ್ದುಗಳು ಇವುಗಳನ್ನು ಕದ್ದರೆ ದೇಶ ಕಾಲ ಪರಿಸ್ಥಿತಿಗೆ ಸರಿಯಾಗಿ ರಾಜನು ದಂಡನೆಯನ್ನು ವಿಧಿಸಬೇಕು.

ಗೋಷು ಬ್ರಾಹ್ಮಣಸಂಸ್ಥಾಸು ಛುರಿಕಾಯಾಶ್ಚ ಭೇದನೇ ।
ಪಶೂನಾಂ ಹರಣೇ ಚೈವ ಸದ್ಯಃಕಾರ್ಯೋಽರ್ಧಪಾದಿಕಃ ॥ ೩೨೫

ಬ್ರಾಹ್ಮಣರ ಗೋವು ಯಜ್ಞಪಶುಗಳನ್ನು ಕದ್ದರೆ ಹಸು ಕದ್ದು ತಂದು ಮೂಗು ಮುರಿದರೆ ಕಾಲನ್ನು ಅರ್ಧ ಕತ್ತರಿಸುವುದು.

ಸೂತ್ರಕಾರ್ಪಾಸಕಿಣ್ವಾನಾಂ ಗೋಮಯಸ್ಯ ಗುಡಸ್ಯ ಚ ।
ದಧ್ನಃ ಕ್ಷೀರಸ್ಯ ತಕ್ರಸ್ಯ ಪಾನೀಯಸ್ಯ ತೃಣಸ್ಯ ಚ ॥ ೩೨೬

ವೇಣುವೈದಲಭಾಂಡಾನಾಂ ಲವಣಾನಾಂ ತಥೈವ ಚ ।
ಮೃಣ್ಮಯಾನಾಂ ಚ ಹರಣೇ ಮೃದೋ ಭಸ್ಮನ ಏವ ಚ ॥ ೩೨೭

ಮತ್ಸ್ಯಾನಾಂ ಪಕ್ಷಿಣಾಂ ಚೈವ ತೈಲಸ್ಯ ಚ ಘೃತಸ್ಯ ಚ ।
ಮಾಂಸಸ್ಯ ಮಧುನಶ್ಚೈವ ಯಚ್ಚಾನ್ಯತ್ ಪಶುಸಂಭವಂ ॥ ೩೨೮

ಅನ್ಯೇಷಾಂ ಚೈವಮಾದೀನಾಮದ್ಯಾನಾಮೋದನಸ್ಯ ಚ ।
ಪಕ್ವಾನ್ನಾನಾಂ ಚ ಸರ್ವೇಷಾಂ ತನ್ಮೂಲ್ಯಾದ್ದ್ವಿಗುಣೋ ದಮಃ ॥ ೩೨೯

ಉಣ್ಣೆ, ನೂಲು, ಹತ್ತಿ, ಮದ್ಯದ ಬೀಜ, ಬೆಲ್ಲ, ದನಗಳ ಹಾಲು, ಅದರ ವಿಕೃತಿ, ಸೆಗಣಿ, ಹುಲ್ಲು, ಬೆತ್ತ ಬಿದಿರು ಬೀಣೆ ಸಿಗುಳಿನ ಪಾತ್ರೆ ಉಪ್ಪು ಮಣ್ಣಿನ ಪಾತ್ರೆ, ಬೂದಿ, ಮೀನು, ಹಕ್ಕಿ, ಎಣ್ಣೆ, ತುಪ್ಪ, ಮಾಂಸ, ಮದ್ಯ, ಸಿದ್ಧಾನ್ನ, ಪಕ್ವಾನ್ನ, ತಿಂಡಿತಿನಸು ಇಂತವುಗಳನ್ನು ಕದ್ದರೆ ಅದರ ಬೆಲೆಯ ಎರಡು ಪಾಲು ದಂಡನೆಯು.

ಪುಷ್ಪೇಷು ಹರಿತೇ ಧಾನ್ಯೇ ಗುಲ್ಮವಲ್ಲೀನಗೇಷು ಚ ।
ಅನ್ಯೇಷ್ವಪರಿಪೂತೇಷು ದಂಡಃ ಸ್ಯಾತ್ಪಂಚಕೃಷ್ಣಲಃ ॥ ೩೩೦

ಹೂ, ಹೊಲದ ಧಾನ್ಯ, ಮರಗಿಡಬಳ್ಳಿ ಇವುಗಳನ್ನು ಕದ್ದರೆ ಐದು ಕೃಷ್ಣಲ ದಂಡನೆಯು.

ಪರಿಪೂತೇಷು ಧಾನ್ಯೇಷು ಶಾಕಮೂಲಫಲೇಷು ಚ ।
ನಿರನ್ವಯೇ ಶತಂ ದಂಡಃ ಸಾನ್ವಯೇಽರ್ಧಶತಂ ದಮಃ ॥ ೩೩೧

ಅಂಗಳದಲ್ಲಿ ಗೇರಿಹಾಕಿದ ಕಾಳು, ತರಕಾರಿ, ಗಡ್ಡೆಗೆಣಸುಗಳನ್ನು ದೂರದವನು ಕದ್ದರೆ ನೂರು ಪಣ ದಂಡವು. ಊರಿನವನು ಕದ್ದರೆ ಐವತ್ತು ಪಣ. ಮನೆಯೊಳಗಿಂದ ಕದ್ದರೆ ಅದರ ಹನ್ನೊಂದು ಪಾಲು ದಂಡ ಹೇಳಿದೆ.

ಸ್ಯಾತ್ಸಾಹಸಂ ತ್ವನ್ವಯವತ್ ಪ್ರಸಭಂ ಕರ್ಮ ಯತ್ಕೃತಂ ।
ನಿರನ್ವಯಂ ಭವೇತ್ ಸ್ತೇಯಂ ಹೃತ್ವಾಪವ್ಯಯತೇ ಚ ಯತ್ ॥ ೩೩೨

ಸ್ವಾಮಿಯಿಲ್ಲದಿರುವಾಗ ಎಂದರೆ ಅವನ ತಿಳುವಳಿಕೆಗೆ ಬಾರದಂತೆ ತೆಗೆದರೆ ಅದು ಕಳ್ಳತನ. ಕೊಂಡುಹೋಗಿ ಅಡಗಿಸಿದರೆ ಅದೂ ಕಳ್ಳತನ. ಸ್ವಾಮಿಯು ನೋಡುತ್ತಿರುವಾಗಲೇ ಬಲಾತ್ಕಾರದಿಂದ ಕೊಂಡು ಹೋದರೆ ಅದು ಸಾಹಸ.

ಯಸ್ತ್ವೇತಾನ್ಯುಪಕ್ಲೃಪ್ತಾನಿ ದ್ರವ್ಯಾಣಿ ಸ್ತೇನಯೇನ್ನರಃ ।
ತಮಾದ್ಯಂ ದಂಡಯೇದ್ರಾಜಾ ಯಶ್ಚಾಗ್ನಿಂ ಚೋರಯೇದ್ಗೃಹಾತ್ ॥ ೩೩೩

ತನ್ನ ಅನುಭವಕ್ಕೆ ಮಾಡಿದ ಸಾಮಗ್ರಿಯನ್ನು ಅಗ್ನಿ ಗೃಹದಿಂದ ಅಗ್ನಿಯನ್ನು ಕದ್ದರೆ ಪ್ರಥಮ ಸಾಹಸ ದಂಡನೆಯು.

ಯೇನ ಯೇನ ಯಥಾಂಗೇನ ಸ್ತೇನೋ ನೃಷು ವಿಚೇಷ್ಟತೇ ।
ತತ್ತದೇವ ಹರೇತ್ತಸ್ಯ ಪ್ರತ್ಯಾದೇಶಾಯ ಪಾರ್ಥಿವಃ ॥ ೩೩೪

ಕಳ್ಳನು ಯಾವ ಯಾವ ತನ್ನ ಅಂಗಕೌಶಲದಿಂದ ಕಳ್ಳತನ ಮಾಡುತ್ತಾನೊ ಆಯಾ ಅಂಗಗಳನ್ನು ಕಡಿಯುವುದು ಪುನಃ ಮಾಡದಿರಲು ಉತ್ತಮ ದಂಡನೆಯಾಗುವುದು.

ಪಿತಾಚಾರ್ಯಃ ಸುಹೃನ್ಮಾತಾ ಭಾರ್ಯಾ ಪುತ್ರಃ ಪುರೋಹಿತಃ ।
ನಾದಂಡ್ಯೋ ನಾಮ ರಾಜ್ಞೋಽಸ್ತಿ ಯಃ ಸ್ವಧರ್ಮೇ ನ ತಿಷ್ಠತಿ ॥ ೩೩೫

ತಂದೆ, ಆಚಾರ್ಯ, ಮಿತ್ರ, ತಾಯಿ, ಹೆಂಡತಿ, ಮಗ, ಪುರೋಹಿತ ಯಾರೂ ರಾಜನಿಗೆ ದಂಡನೀಯರೇ, ಅಪರಾಧವಿದ್ದರೆ ಸರಿ.

ಕಾರ್ಷಾಪಣಂ ಭವೇದ್ದಂಡ್ಯೋ ಯತ್ರಾನ್ಯಃ ಪ್ರಾಕೃತೋ ಜನಃ ।
ತತ್ರ ರಾಜಾ ಭವೇದ್ದಂಡ್ಯಃ ಸಹಸ್ರಮಿತಿ ಧಾರಣಾ ॥ ೩೩೬

ಸಾಮಾನ್ಯ ಜನರು ಮಾಡಿದ ಯಾವ ಅಪರಾಧಕ್ಕೆ ಒಂದು ಕಾರ್ಷಾಪಣ ದಂಡವೋ ಅದೇ ಅಪರಾಧ ರಾಜನು ಮಾಡಿದರೆ ಸಾವಿರ ಪಣ ದಂಡನೆಯು. ಆ ದಂಡಧನವನ್ನು ನೀರಿಗೆಸೆಯಬಹುದು. ಬ್ರಾಹ್ಮಣನಿಗೆ ಕೊಡಬಹುದು. ಪಕ್ಷಪಾತವಿಲ್ಲದ ದಂಡವಿಧಾನವು

ಅಷ್ಟಾಪಾದ್ಯಂ ತು ಶೂದ್ರಸ್ಯ ಸ್ತೇಯೇ ಭವತಿ ಕಿಲ್ಬಿಷಂ ।
ಷೋಡಶೈವ ತು ವೈಶ್ಯಸ್ಯ ದ್ವಾತ್ರಿಂಶತ್ಕ್ಷತ್ರಿಯಸ್ಯ ಚ । ೩೩೭

ಬ್ರಾಹ್ಮಣಸ್ಯ ಚತುಃಷಷ್ಟಿಃ ಪೂರ್ಣಂ ವಾಪಿ ಶತಂ ಭವೇತ್ ।
ದ್ವಿಗುಣಾ ವಾ ಚತುಃಷಷ್ಟಿಸ್ತದ್ದೋಷಗುಣವಿದ್ಧಿ ಸಃ ॥ ೩೩೮

ತಿಳಿದವರು ಮಾಡುವ ಅಪರಾಧಕ್ಕೆ ದಂಡನೆಯು ಅಧಿಕ ಪ್ರಮಾಣವುಳ್ಳದ್ದು. ತಿಳುವಳಿಕೆ ಇಲ್ಲದ ಶೂದ್ರನು ಮಾಡಿದ ಅಪರಾಧದ ದಂಡನೆಯು ಎಂಟು ಪಾಲು ಗುಣದೋಷ ಜ್ಞಾನವುಳ್ಳ ಶೂದ್ರನು ಮಾಡಿದ ಅಪರಾಧಕ್ಕೆ ದಂಡನೆಯು. ವೈಶ್ಯನು ವಿದ್ಯೆಯುಳ್ಳವನಾದರೆ ಅದರೆರಡು ಪಾಲು ಹದಿನಾರು ದಂಡನೆ. ವಿದ್ಯಾವಂತ ಕ್ಷತ್ರಿಯನು ಮಾಡಿದರೆ ಮೂವತ್ತೆರಡು ಅಂತಹ ಬ್ರಾಹ್ಮಣನಿಗೆ ಅರುವತ್ತನಾಲ್ಕು ಅಥವಾ ಪೂರ್ಣ ನೂರು ಪಾಲು. ಅಥವಾ ನೂರಿಪ್ಪತ್ತೆಂಟು ಪಾಲು ದಂಡನೆಯು. ಅವನು ಗುಣದೋಷ ಜ್ಞಾನವುಳ್ಳವನಾದುದಕ್ಕೆ ಸಮಾನ ದಂಡನೆಯಾದರೆ ಬೆಲೆಯೇನಿದೆ?

ವಾನಸ್ಪತ್ಯಂ ಮೂಲಫಲಂ ದಾರ್ವಗ್ನ್ಯರ್ಥಂ ತಥೈವ ಚ ।
ತೃಣಂ ಚ ಗೋಭ್ಯೋ ಗ್ರಾಸಾರ್ಥಮಸ್ತೇಯಂ ಮನುರಬ್ರವೀತ್ ॥ ೩೩೯

ಆವರಣ ಇಲ್ಲದ ಸ್ಥಳದಿಂದ ಹಣ್ಣು, ಹೂ, ಗಡ್ಡೆ, ಗೆಣಸು, ಕಟ್ಟಿಗೆ, ಹುಲ್ಲು, ದನಗಳಿಗೆ ಇವು ತೆಗೆದುಕೊಂಡರೆ ಅದು ಕಳ್ಳತನವಲ್ಲ ಎಂದು ಮನುವಿನ ಅಭಿಪ್ರಾಯವು.

ಯೋಽದತ್ತಾದಾಯಿನೋ ಹಸ್ತಾಲ್ಲಿಪ್ಸೇತ ಬ್ರಾಹ್ಮಣೋ ಧನಂ ।
ಯಾಜನಾಧ್ಯಾಪನೇನಾಪಿ ಯಥಾ ಸ್ತೇನಸ್ತಥೈವ ಸಃ ॥ ೩೪೦

ಬ್ರಾಹ್ಮಣನು ಯಾಗ ವಿದ್ಯಾದಾನ ಮಾಡಿ ಕಳ್ಳನ ಹಣವನ್ನು ತಕ್ಕೊಂಡು ಜೀವಿಸಲು ಇಷ್ಟಪಟ್ಟರೆ ಅವನು ಕಳ್ಳನೇ ಆಗುವನು.

ದ್ವಿಜೋಽಧ್ವಗಃ ಕ್ಷೀಣವೃತ್ತಿರ್ದ್ವಾವಿಕ್ಷೂ ದ್ವೇ ಚ ಮೂಲಕೇ ।
ಆದದಾನಃ ಪರಕ್ಷೇತ್ರಾನ್ನ ದಂಡಂ ದಾತುಮರ್ಹತಿ ॥ ೩೪೧

ತ್ರೈವರ್ಣಿಕರು ದಾರಿ ನಡೆಯುವಾಗ ಬುತ್ತಿಯು ತೀರಿಹೋಗಿ ಹಸಿದು ಬಾಯಾರಿದರೆ ಎರಡು ಕಬ್ಬು ಎರಡು ಮುಲ್ಲಂಗಿ ಗಡ್ಡೆಗಳನ್ನು ಬೇರೆಯವರ ಹೊಲದಿಂದ ತಕ್ಕೊಂಡರೂ ದಂಡಾರ್ಹರಲ್ಲ. ಯಾವಾಗಲೂ ದಾರಿ ನಡೆಯದೆ ದಣಿಯದಿರುವಾಗ ತೆಗೆದರೆ ಅಪರಾಧವು.

ಅಸಂದಿತಾನಾಂ ಸಂದಾತಾ ಸಂದಿತಾನಾಂ ಚ ಮೋಕ್ಷಕಃ ।
ದಾಸಾಶ್ವರಥಹರ್ತಾ ಚ ಪ್ರಾಪ್ತಃ ಸ್ಯಾಚ್ಚೋರಕಿಲ್ಬಿಷಂ ॥ ೩೪೨

ಅಡ್ಡಾಡುತ್ತಿದ್ದ ಹೆರವರ ಕುದುರೆ, ದನಕರು, ಎಮ್ಮೆ ಮುಂತಾದುವನ್ನು ಕಟ್ಟುವುದು, ಹಟ್ಟಿಯಲ್ಲಿ ಕಟ್ಟಿದವುಗಳನ್ನು ಬಿಡಿಸುವುದು, ಕೊಂಡು ಹೋಗುವುದು, ಸೇವಕ ಗಾಡಿ ಮುಂತಾದುವುಗಳನ್ನು ತಕ್ಕೊಳ್ಳುವುದು ಚೋರತನವು.

ಅನೇನ ವಿಧಿನಾ ರಾಜಾ ಕುರ್ವಾಣಃ ಸ್ತೇನನಿಗ್ರಹಂ ।
ಯಶೋಽಸ್ಮಿನ್ ಪ್ರಾಪ್ನುಯಾಲ್ಲೋಕೇ ಪ್ರೇತ್ಯ ಚಾನುತ್ತಮಂ ಸುಖಂ ॥ ೩೪೩

ಹೇಳಿದಂತೆ ಕಳ್ಳರನ್ನು ದಂಡಿಸುತ್ತಿದ್ದರೆ ಈ ಲೋಕದಲ್ಲಿ ಕೀರ್ತಿಯು ಪರಲೋಕದಲ್ಲಿ ಉತ್ತಮ ಸುಖವು ರಾಜನಿಗೆ ದೊರೆಯುವುದು.

ಐಂದ್ರಂ ಸ್ಥಾನಮಭಿಪ್ರೇಪ್ಸುರ್ಯಶಶ್ಚಾಕ್ಷಯಮವ್ಯಯಂ ।
ನೋಪೇಕ್ಷೇತ ಕ್ಷಣಮಪಿ ರಾಜಾ ಸಾಹಸಿಕಂ ನರಂ ॥ ೩೪೪

ಕೀರ್ತಿಯೂ ಇಂದ್ರಪದವಿಯೂ ರಾಜನಿಗೆ ಬೇಕಾದರೆ ಅವನು ಯಾವಾಗಲೂ ಅಪರಾಧಿಯನ್ನು ಅಲಕ್ಷಿಸಬಾರದು.

ವಾಗ್ದುಷ್ಟಾತ್ತಸ್ಕರಾಚ್ಚೈವ ದಂಡೇನೈವ ಚ ಹಿಂಸತಃ ।
ಸಾಹಸಸ್ಯ ನರಃ ಕರ್ತಾ ವಿಜ್ಞೇಯಃ ಪಾಪಕೃತ್ತಮಃ ॥ ೩೪೫

ಬೈಯುವುದು, ಕದಿಯುವುದು, ಹೊಡೆಯುವುದು ಈ ಮೂರರಿಂದ ಬಲಾತ್ಕಾರ ಮಾಡುವ ಅಪರಾಧಿಯು ಅತ್ಯಂತ ಪಾಪಿಯು.

ಸಾಹಸೇ ವರ್ತಮಾನಂ ತು ಯೋ ಮರ್ಷಯತಿ ಪಾರ್ಥಿವಃ ।
ಸ ವಿನಾಶಂ ವ್ರಜತ್ಯಾಶು ವಿದ್ವೇಷಂ ಚಾಧಿಗಚ್ಛತಿ ॥ ೩೪೬

ಡೊಂಬಿ, ದರೋಡೆ, ಕೊಲೆ, ಲೂಟಿ, ಹಲ್ಲೆ ಮಾಡುವ ಮನುಷ್ಯನನ್ನು ರಾಜನು ಕ್ಷಮಿಸಿದರೆ ಎಲ್ಲರೂ ಅಂತಹ ಪುಂಡರಾಗಿ ರಾಜನೂ ಪ್ರಜೆಗಳೂ ಅದೇ ಅನರ್ಥಕ್ಕೆ ಗುರಿಯಾಗುವರು. ಸಜ್ಜನರ ದ್ವೇಷಕ್ಕೆ ಗುರಿಯಾಗುವನು.

ನ ಮಿತ್ರಕಾರಣಾದ್ರಾಜಾ ವಿಪುಲಾದ್ವಾ ಧನಾಗಮಾತ್ ।
ಸಮುತ್ಸೃಜೇತ್ ಸಾಹಸಿಕಾನ್ ಸರ್ವಭೂತಭಯಾವಹಾನ್ ॥ ೩೪೭

ಮಿತ್ರತ್ವ, ಹಣ ಇವುಗಳ ಲಾಭರೂಪವಾದ ಬಂಧನಗಳ ಮೂಲಕ ಅಪರಾಧಿಗಳನ್ನು ಉಪೇಕ್ಷಿಸಿದರೆ ತನಗೂ ಇತರರಿಗೂ ಅಪಾಯವಾಗಬಹುದಾದುದರಿಂದ ದಂಡಿಸದಿರಲೇಬಾರದು. ಜನಮತದಿಂದ ಶಾಸಕರಾಗುವ ಈ ಕಾಲದಲ್ಲಿ ಯಾರ ಅಪರಾಧ ವಿಚಾರಕ್ಕೂ ಅವಕಾಶವಿಲ್ಲ. ತನಗೆ ಜನಮತ ಜನಪ್ರಿಯತ್ವ ಜನಾನುರಾಗ ತಪ್ಪಿಹೋಗಿ ಶಾಸಕನಾಗಿ ಮಾಡುವ ದೇಶ ಸೇವೆಯೂ, ಅಧಿಕಾರವೂ, ಧನಲಾಭವೂ, ಸುಖವೂ ಉಂಟಾಗುವುದಿಲ್ಲವೆಂದು ಭ್ರಷ್ಟಾಚಾರಗಳಿಗೆ ಮುಕ್ತದ್ವಾರವು ಪ್ರಜಾಪ್ರಭುತ್ವದ ದೊಡ್ಡತನವು. ಆದುದರಿಂದ ಪ್ರಜಾಪ್ರಭುತ್ವವು ಯಶಸ್ವಿಯಲ್ಲವೆಂದು ಮನುಶಾಸನವು. ಅಪರಾಧಿಗಳ ಉಪೇಕ್ಷೆಯಿಂದ ಅವರ ಆವರ್ಜನೆಯಾದರೂ ಸಜ್ಜನರ ಅಸಮಾಧಾನವು ತನ್ನ ಪಾಲಿಗೆ ಬರುವುದೆಂಬ ಅರಿವು ಇಂದಿನ ರಾಜಕಾರಣಿಗಿಲ್ಲದಿರುವುದು ಶೋಚನೀಯ ಅಥವಾ ಅವನ ಹೆಚ್ಚುಗಾರಿಕೆ.

ಶಸ್ತ್ರಂ ದ್ವಿಜಾತಿಭಿರ್ಗ್ರಾಹ್ಯಂ ಧರ್ಮೋ ಯತ್ರೋಪರುಧ್ಯತೇ ।
ದ್ವಿಜಾತೀನಾಂ ಚ ವರ್ಣಾನಾಂ ವಿಪ್ಲವೇ ಕಾಲಕಾರಿತೇ ॥ ೩೪೮

ಆತ್ಮನಶ್ಚ ಪರಿತ್ರಾಣೇ ದಕ್ಷಿಣಾನಾಂ ಚ ಸಂಗರೇ ।
ಸ್ತ್ರೀವಿಪ್ರಾಭ್ಯುಪಪತ್ತೌ ಚ ಘ್ನನ್ ಧರ್ಮೇಣ ನದುಷ್ಯತಿ ॥ ೩೪೯

ತ್ರೈವರ್ಣಿಕರು ಇಂತಹ ಕೆಲವು ಸಂದರ್ಭದಲ್ಲಿ ಆಯುಧ ಹಿಡಿಯ ಬಹುದು, ಕೊಲ್ಲಬಹುದು, ಯುದ್ಧ ಮಾಡಬಹುದು. ಅದು ಧರ್ಮವಿರುದ್ಧ ವಲ್ಲ. ಅಪರಾಧವಲ್ಲ. ಆದುದರಿಂದ ಯುದ್ಧ ವಿದ್ಯೆಯು ಆಗ ಸಾರ್ವತ್ರಿಕ ವಾಗಿತ್ತು. ಮತ್ತು ಅವಶ್ಯವೆಂದು ಆತ್ಮಜ್ಞಾನಿಗಳೂ ಒಪ್ಪುತ್ತಾರೆ ಎಂದು ತಿಳಿಯುವುದು. ಧರ್ಮ ನಾಶವಾಗುವಾಗ ಕಾಲದೋಷದಿಂದ ವರ್ಣವಿಪ್ಲವ ವಾದಾಗ, ಆತ್ಮರಕ್ಷಣೆ ಬಗ್ಗೆ, ದಕ್ಷಿಣೆಯನ್ನು ಎಳೆದುಕೊಂಡು ಹೋಗುವಾಗ, ಸ್ತ್ರೀಯ ಬ್ರಾಹ್ಮಣನ ರಕ್ಷಣೆ ಪರಹಿಂಸೆಯಾದರೆ ಧರ್ಮದ ದೋಷವಿಲ್ಲ. ಹಿಂಸೆಯೂ ಧರ್ಮವೇ. ಉದ್ದೇಶವು ನಿಯಾಮಕವು.

ಗುರುಂ ವಾ ಬಾಲವೃದ್ಧೌ ವಾ ಬ್ರಾಹ್ಮಣಂ ವಾ ಬಹುಶ್ರುತಂ ।
ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ ॥ ೩೫೦

ಗುರು, ಹುಡುಗ, ಮುದುಕ, ಬ್ರಾಹ್ಮಣ, ವಿದ್ಯಾವಂತ ಇವರು ವಿದ್ಯೆ, ಜನ್ಮ, ತಪಸ್ಸುಗಳಿಂದ ಅಧಿಕರಾದರೂ ಶಸ್ತ್ರಧಾರಿಗಳಾಗಿ ಬಂದಾಗ ತಾನೂ ಶಸ್ತ್ರಧರಿಸಬಹುದು. ಯಾವುದೇ ಉಪಾಯಗಳಾದ ಸಮಾಧಾನ, ಓಡುವುದು, ಬೇಡುವುದು ಮುಂತಾದ ರೀತಿಯಿಂದ ತಪ್ಪಿಕೊಳ್ಳಲು ಅನುಕೂಲವಿಲ್ಲದೆ ಹೋದರೆ ಅವನನ್ನು ತಡೆಯುವ ಮಟ್ಟಿಗೆ ತಾತ್ಕಾಲಿಕ ಪ್ರತಿಕ್ರಿಯೆ ಮಾಡ ಬಹುದು. ಹುಡುಗ, ಮುದುಕ, ಬುದ್ಧಿಹೀನರು ಅವರು ಅವಿಚಾರದ ಕೆಲಸ ಮಾಡಬಲ್ಲರು. ಆದರೂ ಸಮರ್ಥನು ಅವರಿಗೆ ಸಮಪ್ರತಿಕ್ರಿಯೆ ಮಾಡು ವುದು ಕರ್ತವ್ಯವಲ್ಲ. ತಡೆಯುವ ಉದ್ದೇಶದ ಕ್ರಿಯೆ ತಪ್ಪಲ್ಲ. ಗುರು ವಿದ್ವದ್ ಬ್ರಾಹ್ಮಣರು ರೋಗಿಗಳಲ್ಲದಿರುವಾಗ ವಿವೇಕ ಕಳೆದುಕೊಳ್ಳುವುದು ಸಾಮಾನ್ಯವಾಗಿ ಅಸಂಭವ ಯುದ್ಧ ಕೋಪಗಳ ಕಾರಣದಿಂದ ಆಯುಧ ಹಿಡಿದು ಹೊಡೆಯಲು ಬರಬೇಕು. ಆಗಲೂ ತಡೆಯುವಷ್ಟು ಮಾಡಿದ ಪ್ರತಿ ಕ್ರಿಯೆ ಅಪರಾಧವಲ್ಲ. ಅನೇಕ ಹೊಡೆತ ಹೊಡೆದರೆ ಆಗಲೂ ಅಪರಾಧವು. ಆತತಾಯಿ ಪದವು ಸಾಮಾನ್ಯವಾಗಿ ಉದ್ದೇಶಪೂರ್ವಕ ಹೊಡೆಯಲು ಬರು ವವ ಎಂಬ ಅರ್ಥವನ್ನು ಕೊಡುವುದು. ಆಗ ಅವನು ಕೊಲ್ಲಬಹುದು ಎಂದು ಇದರರ್ಥವಲ್ಲ. ಅವನು ಕೊಲ್ಲುತ್ತಾನೆ ಎಂದು ತಿಳಿಯದು. ಹೊಡೆಯುವ ತಯಾರಿ ಕಾಣುವುದು. ಎದುರು ಇರುವವನು ವಿವೇಕವಂತನಾದರೆ ಗುರುವನ್ನು,

ಹುಡುಗನನ್ನು, ಮುದುಕನನ್ನು ಕೊಲ್ಲಲು ಉದ್ದೇಶಿಸಲಾರನು. ಏನೋ ಒಂದು ದುರ್ಘಟನೆ ಎಂಬುದು ಸರಿ. ಆದುದರಿಂದ ಸಮಯೋಚಿತ ತಾತ್ಕಾಲಿಕ ಪ್ರತಿಕ್ರಿಯೆ ಅಪರಾಧವಲ್ಲ. ಚಿತ್ತಭ್ರಮೆಯಿಂದಲೂ ಆ ನಾಲ್ವರಿಗೆ ಇದು ಸಂಭವಿಸಬಹುದು. ಆಗಲು ಕೊಲ್ಲುವುದು ಶಕ್ಯವಲ್ಲ ಬೆಂಕಿ, ವಿಷ ಇಡುವವನು, ಶಸ್ತ್ರಧಾರಿ, ಧನಾಪಹಾರಿ, ಭೂಮಿ, ಹೆಂಡತಿ ಕಳ್ಳ ಈ ಆರು ಮಂದಿಯೂ ಆತತಾಯಿ ಪದಾರ್ಥ ಎನ್ನುತ್ತಾರೆ. ಈ ಸಂದರ್ಭವು ಯಾರಿಗಾದರೂ ದುರದೃಷ್ಟದಿಂದ ಬರಬೇಕಷ್ಟೆ. ಗುರು, ವಿದ್ವದ್, ಬ್ರಾಹ್ಮಣರು ಇವುಗಳನ್ನು ಸಂಕಲ್ಪಿಸುವುದು ದುಷ್ಕರ. ಮುಂದಿನ ಪದ್ಯದಲ್ಲಿ ಕೋಪವನ್ನೇ ಅಪರಾಧ ಕಾರಣವಾಗಿ ಉದಾಹರಿಸುತ್ತಾನೆ. ಸಿಟ್ಟಿನಿಂದ ಸಿಟ್ಟು ಕೆರಳಿ ನಡೆಯುವ ಅಪಘಾತವಾದುದರಿಂದ ಅಪರಾಧವಲ್ಲ ಎಂಬ ಭಾವವು ಅಲ್ಲಿ ತೋರುವುದು ಆದರೂ ಕೊಲ್ಲಲು ಉದ್ದೇಶಿಸಬೇಕೆಂಬ ಅರ್ಥವಿಲ್ಲ.

ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ ।
ಪ್ರಕಾಶಂ ವಾಪ್ರಕಾಶಂ ವಾ ಮನ್ಯುಸ್ತಂ ಮನ್ಯುಮೃಚ್ಛತಿ ॥ ೩೫೧

ಈ ಪರಸ್ಪರಾಕ್ರಮಣವು ಜನಶೂನ್ಯ ಪ್ರದೇಶವಾಗಿರಬಹುದು. ಬಹು ಜನರು ನೋಡುವಂತೆ ಘಟಿಸಬಹುದು. ಆಕ್ರಮಣವನ್ನು ತಡೆಯುವುದು ಅಪರಾಧವಲ್ಲ. ಆ ಕ್ರಮಣಕಾರನ ಸಿಟ್ಟಿನಿಂದ ಆಕ್ರಮಿಸಲ್ಪಟ್ಟವನ ಕೋಪವು ಕೆರಳಿ ಪ್ರಸಂಗವುಂಟಾಗುವುದು. ಅಲ್ಲಿ ಪರಸ್ಪರ ಕೋಪವೇ ಖಂಡನೀಯವು.

ಪರದಾರಾಭಿಮರ್ಶೇಷು ಪ್ರವೃತ್ತಾನ್ ನೃನ್ಮಹೀಪತಿಃ ।
ಉದ್ವೇಜನಕರೈರ್ದಂಡೈಶ್ಛಿನ್ನಯಿತ್ವಾ ಪ್ರವಾಸಯೇತ್ ॥ ೩೫೨

ಹೆರವರ ಹೆಂಡತಿಯನ್ನು ಅಪೇಕ್ಷಿಸುವ ಜನರಿಗೆ ಖೇದಕರವಾದ ದಂಡನೆಯನ್ನು ವಿಧಿಸಿ ಪರಊರಿಗೆ ಓಡಿಸಬೇಕು.

ತತ್ಸಮುತ್ಥೋ ಹಿ ಲೋಕಸ್ಯ ಜಾಯತೇ ವರ್ಣಸಂಕರಃ ।
ಯೇನ ಮೂಲಹರೋಽಧರ್ಮಃ ಸರ್ವನಾಶಾಯ ಕಲ್ಪತೇ ॥ ೩೫೩

ಪರಸ್ತ್ರೀ ಕಾಮುಕನಿಂದ ಪ್ರಜೆಯಲ್ಲಿ ಸಂಕರತೆ ಉಂಟಾಗುವುದು.

ಪರಿಶುದ್ಧಯಾಗಾಧಿಕಾರಿಯಿಲ್ಲದೆ ಯಜ್ಞ, ಅದರಿಂದ ಮಳೆ ಬೆಳೆ, ಎಲ್ಲ ಪ್ರತಿಬದ್ಧವಾಗುವುದು. ಆಹಾರಾಭಾವದಿಂದ ಸರ್ವನಾಶವು.

> ಪರಸ್ಯ ಪತ್ನ್ಯಾ ಪುರುಷಃ ಸಂಭಾಷಾಂ ಯೋಜಯನ್ ರಹಃ ।
> ಪೂರ್ವಮಾಕ್ಷಾರಿತೋ ದೋಷೈಃ ಪ್ರಾಪ್ನುಯಾತ್ಪೂರ್ವಸಾಹಸಂ ॥ ೩೫೪

ಪರಸ್ತ್ರೀಯೊಡನೆ ಗುಟ್ಟಿನಲ್ಲಿ ಮಾತನಾಡುವವನು, ಮೈಥುನ ಯಾಚನಾ, ವರ್ಣಸಂಕರ, ಅಧರ್ಮ ಸರ್ವನಾಶ ಕರ್ತೃವಾದುದರಿಂದ ಅವನಿಗೆ ಪ್ರಥಮ ಸಾಹಸ ದಂಡನೆಯು.

> ಯಸ್ತ್ವನಾಕ್ಷಾರಿತಃ ಪೂರ್ವಮಭಿಭಾಷೇತ ಕಾರಣಾತ್ ।
> ನ ದೋಷಂ ಪ್ರಾಪ್ನುಯಾತ್ ಕಿಂಚಿನ್ನ ಹಿ ತಸ್ಯ ವ್ಯತಿಕ್ರಮಃ ॥ ೩೫೫

ಮೈಥುನ ಪ್ರಾರ್ಥನೆ ಮಾಡದವನು ಏನಾದರೂ ಕಾರಣದಿಂದ ಪರಸ್ತ್ರೀ ಸಂಭಾಷಣೆ ಮಾಡಿದರೆ ಅವನು ಅಪರಾಧಿಯಲ್ಲ.

> ಪರಸ್ತ್ರಿಯಂ ಯೋಽಭಿವದೇತ್ತೀರ್ಥೇಽರಣ್ಯೇ ವನೇಽಪಿ ವಾ ।
> ನದೀನಾಂ ವಾಪಿ ಸಂಭೇದೇ ಸ ಸಂಗ್ರಹಣಮಾಪ್ನುಯಾತ್ ॥ ೩೫೬

ನೀರುತರುವ ದಾರಿ, ಕಾಡು, ನದೀದಡ, ನಿರ್ಜನ ಪ್ರದೇಶದಲ್ಲಿ ಪರಸ್ತ್ರೀ ಸಂಭಾಷಣ ನಿರತನಾದರೆ ಅದು ಸಾವಿರ ಪಣ ದಂಡನೆಯ ಅಪರಾಧವು. ಇಚ್ಛೆಯಂತೆ ಬಹುಸ್ತ್ರೀ ವಿವಾಹಕ್ಕೆ ಸಮ್ಮತಿಯಿರುವ ಕಾಲವಾದುದರಿಂದ ಪರಸ್ತ್ರೀ ಪ್ರಸಂಗವು ನಿಂದನೀಯು.

> ಉಪಚಾರಕ್ರಿಯಾ ಕೇಲಿಃ ಸ್ಪರ್ಶೋ ಭೂಷಣವಾಸಸಾಂ ।
> ಸಹ ಖಟ್ವಾಸನಂ ಚೈವ ಸರ್ವಂ ಸಂಗ್ರಹಣಂ ಸ್ಮೃತಂ ॥ ೩೫೭

ಬಟ್ಟೆಬರೆ, ವೇಶಭೂಷಣ ಕೊಡುವುದು, ಆಲಿಂಗನ, ವೀಕ್ಷಣ ವಸ್ತ್ರಾಲಂಕಾರ ಸ್ಪರ್ಶ, ಏಕಾಸನದಲ್ಲಿ ಕುಳ್ಳಿರುವುದು ಇದೆಲ್ಲ ಸಾವಿರ ಪಣ ದಂಡನೆಯ ಅಪರಾಧವು.

> ಸ್ತ್ರಿಯಂ ಸ್ಪೃಶೇದದೇಶೇ ಯಃ ಸ್ಪೃಷ್ಟೋ ವಾ ಮರ್ಷಯೇತ್ತಯಾ ।
> ಪರಸ್ಪರಸ್ಯಾನುಮತೇ ಸರ್ವಂ ಸಂಗ್ರಹಣಂ ಸ್ಮೃತಂ ॥ ೩೫೮

ಸ್ತ್ರೀ-ಪುರುಷರು ಪರಸ್ಪರ ಸಮ್ಮತಿಯಿಂದ ಅಂಗಸ್ಪರ್ಶ ಮಾಡುವುದಾದರೂ ಅದು ಅಂತಹ ಅಪರಾಧವೇ ಆಗಿದೆ.

ಅಬ್ರಾಹ್ಮಣಃ ಸಂಗ್ರಹಣೇ ಪ್ರಾಣಾಂತಂ ದಂಡಮರ್ಹತಿ ।
ಚತುರ್ಣಾಮಪಿ ವರ್ಣಾನಾಂ ದಾರಾ ರಕ್ಷ್ಯತಮಾಃ ಸದಾ ॥ ೩೫೯

ಎಲ್ಲ ಪರಸ್ತ್ರೀಯರು ರಕ್ಷಣೀಯರಾದುದರಿಂದ ಪರಸ್ತ್ರೀ ಪ್ರಸಂಗದಲ್ಲಿ ದ್ರವ್ಯದಂಡನೆಯಲ್ಲದೆ ಮರಣಾಂತ ದಂಡನೆಯೂ ಮಾನ್ಯವಾಗಿದೆ.

ಭಿಕ್ಷುಕಾ ಬಂದಿನಶ್ಚೈವ ದೀಕ್ಷಿತಾಃ ಕಾರವಸ್ತಥಾ ।
ಸಂಭಾಷಣಂ ಸಹ ಸ್ತ್ರೀಭಿಃ ಕುರ್ಯುರಪ್ರತಿವಾರಿತಾಃ ॥ ೩೬೦

ಯಾಚಕರು, ಸ್ತುತಿಪಾಠಕರು, ಯಜ್ಞವ್ರತಗಳು, ಅಡಿಗೆಯವರು ಮುಂತಾದವರು ಎಲ್ಲ ಸ್ತ್ರೀಯರೊಡನೆ ಸಂಭಾಷಿಸಿದರೆ ಅಪರಾಧವಲ್ಲ.

ನ ಸಂಭಾಷಾಂ ಪರಸ್ತ್ರೀಭಿಃ ಪ್ರತಿಷಿದ್ಧಃ ಸಮಾಚರೇತ್ ।
ನಿಷಿದ್ಧೋ ಭಾಷಮಾಣಸ್ತು ಸುವರ್ಣಂ ದಂಡಮರ್ಹತಿ ॥ ೩೬೧

ಸಂಬಂಧಪಟ್ಟವರು ನಿಷೇಧಿಸುವಾಗ ಪರಸ್ತ್ರೀಯೊಡನೆ ಸಂಭಾಷಣೆಯನ್ನು ಮಾಡಬಾರದು. ಹಾಗೆ ಮಾತಾಡಿದರೆ ಒಂದು ಸುವರ್ಣ ದಂಡನೆಯು.

ನೈಷ ಚಾರಣದಾರೇಷು ವಿಧಿರ್ನಾತ್ಮೋಪಜೀವಿಷು ।
ಸಜ್ಜಯಂತಿ ಹಿ ತೇ ನಾರೀರ್ನಿಗೂಢಾಶ್ಚಾರಯಂತಿ ಚ ॥ ೩೬೨

ನಟರು, ಗಾಯಕರು ಇವರ ಹೆಂಡಿರು ಮತ್ತು ಹೆಂಡತಿಯ ಜಾರತನದಿಂದ ಬದುಕುವವರ ಹೆಂಡಿರೊಡನೆ ಸಂಭಾಷಣೆಯನ್ನು ನಿಷಿದ್ಧ ರೀತಿಯಲ್ಲಿ ಸಂಭಾಷಣೆ ಮಾಡಿದರೆ ಆ ದಂಡನೆಯು ಅಪರಾಧವಿಲ್ಲ. ಅಂತಹವರು ಗುಟ್ಟಾಗಿ ಹೆಂಡಿರನ್ನು ಪರಪುರುಷರೊಡನೆ ಕಲೆಯಲು ಇಚ್ಛಿಸುತ್ತಾರೆ.

ಕಿಂಚಿದೇವ ತು ದಾಪ್ಯಃ ಸ್ಯಾತ್ಸಂಭಾಷಾಂ ತಾಭಿರಾಚರನ್ ।
ಪ್ರೈಷ್ಯಾಸು ಚೈಕಭಕ್ತಾಸು ರಹಃ ಪ್ರವ್ರಜಿತಾಸು ಚ ॥ ೩೬೩

ಹಿಂದೆ ಹೇಳಿದ ಜಾರಸ್ತ್ರೀಯರೊಡನೆ ಮಾತನಾಡಿದರೆ ಸ್ವಲ್ಪ ದಂಡನೆಯು. ಸೇವಕಿಯರು ಬೈರಾಗಿಣಿಗಳು ಕೂಡ ಅಂತಹ ವರ್ಗದ ಸ್ತ್ರೀಯರು.

ಯೋಽಕಾಮಾಂ ದೂಷಯೇತ್ಕನ್ಯಾಂ ಸ ಸದ್ಯೋ ವಧಮರ್ಹತಿ।
ಸಕಾಮಾಂ ದೂಷಯಂಸ್ತುಲ್ಯೋ ನ ವಧಂ ಪ್ರಾಪ್ನುಯಾನ್ನರಃ ॥ ೩೬೪

ಸಮಜಾತಿಯವನು ಸ್ವಜಾತಿ ಸ್ತ್ರೀಯನ್ನು ಇಚ್ಛಾವಿರುದ್ಧವಾಗಿಭೋಗಿಸಿ ದೂಷಿಸಿದರೆ ಹೊಡೆಯುವುದು, ಕಡಿಯುವುದು, ಕೊಲ್ಲುವುದು ಮೊದಲಾದ ಉಚಿತ ದಂಡನೆಗೆ ಅರ್ಹನು. ಅವಳು ಅನುರಾಗವತಿಯಾದರೆ ಆ ದಂಡನೆಯು ಬೇಡ.

ಕನ್ಯಾಂ ಭಜಂತೀಮುತ್ಕೃಷ್ಟಂ ನ ಕಿಂಚಿದಪಿ ದಾಪಯೇತ್ ।
ಜಘನ್ಯಂ ಸೇವಮಾನಾಂ ತು ಸಂಯತಾಂ ವಾಸಯೇದ್ಗೃಹೇ ॥ ೩೬೫

ಗಂಡು ತನಗಿಂತ ಹೀನ ಜಾತಿ ಸ್ತ್ರೀಯನ್ನು ಸೇವಿಸಿದರೆ ಏನೂ ದಂಡನೆಯಿಲ್ಲ. ಹೆಣ್ಣು ತನಗಿಂತ ಕೀಳು ಜಾತಿಯ ಪುರುಷನನ್ನು ಹಿಂಬಾಲಿಸಿದರೆ ಅವಳನ್ನು ಮನೆಯಲ್ಲಿ ಬಂದೋಬಸ್ತಿನಲ್ಲಿಟ್ಟು ಅವನನ್ನು ಮರೆಯುವಂತೆ ಮಾಡಬೇಕು.

ಉತ್ತಮಾಂ ಸೇವಮಾನಸ್ತು ಜಘನ್ಯೋ ವಧಮರ್ಹತಿ ।
ಶುಲ್ಕಂ ದದ್ಯಾತ್ಸೇವಮಾನಃ ಸಮಾಮಿಚ್ಛೇತ್ಪಿತಾ ಯದಿ ॥ ೩೬೬

ಹೀನನು ಉತ್ತಮ ಸ್ತ್ರೀಯನ್ನು ವಶೀಕರಿಸಿದರೆ ಹಿಂಸಾರ್ಹನು. ಹೀನನಳನ್ನು ಮೋಹಿಸಿದ ಅವನನ್ನು ಅವಳ ತಂದೆಯು ಸಮ್ಮತಿಸಿದರೆ ದ್ರವ್ಯ ಕೊಟ್ಟು ಮದುವೆಯಾಗಬಹುದು.

ಅಭಿಷಹ್ಯ ತು ಯಃ ಕನ್ಯಾಂ ಕುರ್ಯಾದ್ದರ್ಪೇಣ ಮಾನವಃ ।
ತಸ್ಯಾಶು ಕರ್ತ್ಯೇ ಅಂಗುಲ್ಯೌ ದಂಡಂ ಚಾರ್ಹತಿ ಷಟ್ಶತಂ ॥ ೩೬೭

ಸಮಜಾತಿಯವನು ಅಂತಹ ಕನ್ಯೆಯ ಸಮ್ಮತಿಯಿಲ್ಲದೆ ಬಲಾತ್ಕಾರದಿಂದ ದೂಷಿಸಿದರೆ ಅವನ ಕೈಬೆರಳನ್ನು ಕಡಿಯಬೇಕು.

ಸಕಾಮಾಂ ದೂಷಯಂಸ್ತುಲ್ಯೋ ನಾಂಗುಲಿಚ್ಛೇದಮಾಪ್ನುಯಾತ್ ।
ದ್ವಿಶತಂ ತು ದಮಂ ದಾಪ್ಯಃ ಪ್ರಸಂಗವಿನಿವೃತ್ತಯೇ ॥ ೩೬೮

ಸ್ವಜಾತಿಯ ಹೆಣ್ಣು ಅನುರಕ್ತಳಾಗಿ ಪುರುಷಸಂಗ ಪಡೆದರೆ ಗಂಡಿಗೆ ಹಿಂಸೆಯಿಲ್ಲ. ಇನ್ನೂರು ಪಣ ಧನದಂಡನೆಯು.

ಕನ್ಯೈವ ಕನ್ಯಾಂ ಯಾ ಕುರ್ಯಾತ್ತಸ್ಯಾಃ ಸ್ಯಾದ್ದ್ವಿಶತೋ ದಮಃ ।
ಶುಲ್ಕಂ ಚ ದ್ವಿಗುಣಂ ದದ್ಯಾಚ್ ಶಿಫಾಶ್ಚೈವಾಪ್ನುಯಾದ್ದಶ ॥ ೩೬೯

ಹುಡುಗಿಯು ಹುಡುಗಿಯನ್ನು ಮರ್ಮಾಂಗ ಸಂಭೇದದಿಂದ ದೂಷಿಸಿದರೆ ಇನ್ನೂರು ಪಣ ದಂಡನೆಯು. ಕನ್ಯಾಪಿತೃವಿಗೆ ಇಮ್ಮಡಿ ಶುಲ್ಕವನ್ನು ಕೊಡಬೇಕು. ಹತ್ತು ಪೆಟ್ಟನ್ನು ಕೊಡಬೇಕು ಅಪರಾಧಿ ಹುಡುಗಿಗೆ.

ಯಾ ತು ಕನ್ಯಾಂ ಪ್ರಕುರ್ಯಾತ್ಸ್ತ್ರೀ ಸಾ ಸದ್ಯೋ ಮೌಂಡ್ಯಮರ್ಹತಿ ।
ಅಂಗುಲ್ಯೋರೇವ ವಾ ಛೇದಂ ಖರೇಣೋದ್ವಹನಂ ತಥಾ ॥ ೩೭೦

ಮದುವೆಯಾಗದ ಯುವತಿಯನ್ನು ಭ್ರಷ್ಟಗೊಳಿಸಿದ ಹೆಂಗುಸನ್ನು ಕೂಡಲೇ ಬೋಳಿಸಬೇಕು. (ತಲೆಯನ್ನು) ಅಥವಾ ಎರಡು ಬೆರಳುಗಳನ್ನು ಕತ್ತರಿಸಬೇಕು. ಮತ್ತು ಕತ್ತೆಯ ಮೇಲೆ ಕೂಡಿಸಬೇಕು. (ಊರಲ್ಲೆಲ್ಲ ಮೆರೆಸಬೇಕು.)

ಭರ್ತಾರಂ ಲಂಘಯೇದ್ಯಾ ತು ಸ್ತ್ರೀ ಜ್ಞಾತಿಗುಣದರ್ಪಿತಾ ।
ತಾಂ ಶ್ವಭಿಃ ಖಾದಯೇದ್ರಾಜಾ ಸಂಸ್ಥಾನೇ ಬಹುಸಂಸ್ಥಿತೇ ॥ ೩೭೧

ಹೆಂಗುಸು ತನ್ನ ಪಿತೃಪಕ್ಷದ ಧನಬಲಾದಿಗಳಿಂದ ಮತ್ತು ತನ್ನ ಸೌಂದರ್ಯದಿಂದ ಗರ್ವಿತಳಾಗಿ ಗಂಡನನ್ನು ಮೀರಿ ಪರಪುರುಷರ ಸಂಗಮಾಡಿದರೆ ರಾಜನು ಅವಳನ್ನು ಬಹುಜನ ಸಮ್ಮುಖದಲ್ಲಿ ನಾಯಿಗಳಿಂದ ತಿನ್ನಿಸಬೇಕು.

ಪುಮಾಂಸಂ ದಾಹಯೇತ್ಪಾಪಂ ಶಯನೇ ತಪ್ತ ಆಯಸೇ ।
ಅಭ್ಯಾದಧ್ಯುಶ್ಚ ಕಾಷ್ಠಾನಿ ತತ್ರ ದಹ್ಯೇತ ಪಾಪಕೃತ್ ॥ ೩೭೨

ಹಿಂದೆ ಹೇಳಿದ ಪ್ರಸಂಗದ ಅಪರಾಧಿ ಪುರುಷನನ್ನು ಕಾದ ಕಬ್ಬಿಣದ ಮಂಚದಲ್ಲಿ ಮಲಗಿಸಿ ಸೌದೆ ಒಟ್ಟಿ ಸುಡಬೇಕು.

ಸಂವತ್ಸರಾಭಿಶಸ್ತಸ್ಯ ದುಷ್ಟಸ್ಯ ದ್ವಿಗುಣೋ ದಮಃ ।
ವ್ರಾತ್ಯಯಾ ಸಹ ಸಂವಾಸೇ ಚಾಂಡಾಲ್ಯಾ ತಾವದೇವ ತು ॥ ೩೭೩

ಮೊದಲು ಮಾಡಿದ ಅಪರಾಧವನ್ನು ಒಂದು ವರ್ಷ ಕಳೆದು ಪುನಃ ಮಾಡಿದರೆ ಅದಕ್ಕಿಂತ ಇಮ್ಮಡಿ ದಂಡನೆಯು. ವ್ರತಭ್ರಷ್ಟನ ಹೆಂಡತಿ ಮತ್ತು ಚಂಡಾಲ ಸ್ತ್ರೀಸಹವಾಸವನ್ನು ಮಾಡಿದರೂ ದ್ವಿಗುಣ ದಂಡ.

ಶೂದ್ರೋ ಗುಪ್ತಮಗುಪ್ತಂ ವಾ ದ್ವೈಜಾತಂ ವರ್ಣಮಾವಸನ್ ।
ಅಗುಪ್ತಮಂಗಸರ್ವಸ್ವೈರ್ಗುಪ್ತಂ ಸರ್ವೇಣ ಹೀಯತೇ ॥ ೩೭೪

ಶೂದ್ರನು, ರಕ್ಷಣೆಗೊಳಪಟ್ಟ ಅಥವಾ ಅನಾಥ ಬ್ರಾಹ್ಮಣ ಸ್ತ್ರೀಯನ್ನು ಪ್ರೀತಿಸಿದರೆ (ತ್ರೈವರ್ಣಿಕ) ಅಂಗಹೀನತೆಯು ದಂಡಕ್ಕೆ ಅರ್ಹನು. ರಕ್ಷಿತೆ ಸ್ತ್ರೀಯ ಪ್ರೀಯಿಂದ ಧನಅಂಗದ್ವಯ ದಂಡನೆಗೆ ಅರ್ಹನು.

ವೈಶ್ಯಃ ಸರ್ವಸ್ವದಂಡ್ಯಃ ಸ್ಯಾತ್ಸಂವತ್ಸರನಿರೋಧತಃ ।
ಸಹಸ್ರಂ ಕ್ಷತ್ರಿಯೋ ದಂಡ್ಯೋ ಮೌಂಡ್ಯಂ ಮೂತ್ರೇಣ ಚಾರ್ಹತಿ ॥ ೩೭೫

ವೈಶ್ಯನು ಬ್ರಾಹ್ಮಣ ಸ್ತ್ರೀಯನ್ನು ದೂಷಿಸಿದರೆ ಒಂದು ವರ್ಷ ಬಂಧನದಲ್ಲಿಟ್ಟು ಬಳಿಕ ಅವನ ಸರ್ವಸೊತ್ತನ್ನು ರಾಜನು ವಶಪಡಿಸಬೇಕು. ಕ್ಷತ್ರಿಯನು ಬ್ರಾಹ್ಮಣೆಯನ್ನು ದೂಷಿಸಿದರೆ ಅವನ ತಲೆಯನ್ನು ಕತ್ತೆಮೂತ್ರದಿಂದ ನೆನಸಿ ಬೋಳಿಸಬೇಕು.

ಬ್ರಾಹ್ಮಣೀಂ ಯದ್ಯಗುಪ್ತಾಂ ತು ಗಚ್ಛೇತಾಂ ವೈಶ್ಯಪಾರ್ಥಿವೌ ।
ವೈಶ್ಯಂ ಪಂಚಶತಂ ಕುರ್ಯಾತ್ ಕ್ಷತ್ರಿಯಂ ತು ಸಹಸ್ರಿಣಂ ॥ ೩೭೬

ಅನಾಥ ಬ್ರಾಹ್ಮಣೆಯನ್ನು ಕ್ಷತ್ರಿಯ ವೈಶ್ಯರು ದೂಷಿಸಿದರೆ ಸಾವಿರ ಪಣ ದಂಡನೆಯು.

ಉಭಾವಪಿ ತು ತಾವೇವ ಬ್ರಾಹ್ಮಣ್ಯಾ ಗುಪ್ತಯಾ ಸಹ ।
ವಿಪ್ಲುತೌ ಶೂದ್ರವದ್ದಂಡ್ಯೌ ದಗ್ಧವ್ಯೌ ವಾ ಕಟಾಗ್ನಿನಾ ॥ ೩೭೭

ರಕ್ಷಿತ ಗುಣವತೀ ಬ್ರಾಹ್ಮಣೀಯನ್ನು ಕ್ಷತ್ರಿಯ ವೈಶ್ಯರು ಮೈಥುನದಿಂದ ದೂಷಿಸಿದರೆ ಚಾಪೆಯಲ್ಲಿ ಸುತ್ತಿ ಸುಡಬೇಕು.

ಸಹಸ್ರಂ ಬ್ರಾಹ್ಮಣೋ ದಂಡ್ಯೋ ಗುಪ್ತಾಂ ವಿಪ್ರಾಂ ಬಲಾದ್ವ್ರಜನ್ ।
ಶತಾನಿ ಪಂಚ ದಂಡ್ಯಃ ಸ್ಯಾದಿಚ್ಛಂತ್ಯಾ ಸಹ ಸಂಗತಃ ॥ ೩೭೮

ರಕ್ಷಿತ ಬ್ರಾಹ್ಮಣಿಯು ನಿರಾಕರಿಸುವಾಗ ಬಲಾತ್ಕರಿಸಿ ಬ್ರಾಹ್ಮಣನು ಸಂಭೋಗಿಸಿದರೆ ಸಾವಿರ ಪಣ ದಂಡವು ಸ್ತ್ರೀ ಸಮ್ಮತಿಯಿದ್ದರೆ ಐದು ನೂರು ಪಣ ದಂಡವು.

ಮೌಂಡ್ಯಂ ಪ್ರಾಣಾಂತಿಕೋ ದಂಡೋ ಬ್ರಾಹ್ಮಣಸ್ಯ ವಿಧೀಯತೇ ।
ಇತರೇಷಾಂ ತು ವರ್ಣಾನಾಂ ದಂಡಃ ಪ್ರಾಣಾಂತಿಕೋ ಭವೇತ್ ॥ ೩೭೯

ಬ್ರಾಹ್ಮಣನನ್ನು ತಲೆ ಬೋಳಿಸಿ ಬಿಡುವುದು ಲಜ್ಜಾಕರವಾಗಿ ಮರಣ ದಂಡನೆಗೆ ಸಮಾನವು. ಇತರರಿಗೆ ಮರಣವು.

ನ ಜಾತು ಬ್ರಾಹ್ಮಣಂ ಹನ್ಯಾತ್ಸರ್ವಪಾಪೇಷ್ವಪಿ ಸ್ಥಿತಂ ।
ರಾಷ್ಟ್ರಾದೇನಂ ಬಹಿಃ ಕುರ್ಯಾತ್ಸಮಗ್ರಧನಮಕ್ಷತಂ ॥ ೩೮೦

ಯಾವ ತಪ್ಪಿಗೂ ಬ್ರಾಹ್ಮಣನಿಗೆ ಮರಣವಿಲ್ಲ. ಅವನ ಧನಸಹಿತವಾಗಿ ದೇಹವನ್ನು ಪೀಡಿಸದೆ ಓಡಿಸಿ ಬಿಡುವುದು ಪರಮಾವಧಿ ದಂಡವು.

ನ ಬ್ರಾಹ್ಮಣವಧಾದ್ಭೂಯಾನಧರ್ಮೋ ವಿದ್ಯತೇ ಭುವಿ ।
ತಸ್ಮಾದಸ್ಯ ವಧಂ ರಾಜಾ ಮನಸಾಪಿ ನ ಚಿಂತಯೇತ್ ॥ ೩೮೧

ಬ್ರಹ್ಮಹತ್ಯೆಯು ಮಹಾಪಾಪವು. ಆದುದರಿಂದ ಅದನ್ನು ಸ್ಮರಿಸಲೂ ಬಾರದು.

ವೈಶ್ಯಶ್ಚೇತ್ಕ್ಷತ್ರಿಯಾಂ ಗುಪ್ತಾಂ ವೈಶ್ಯಾಂ ವಾ ಕ್ಷತ್ರಿಯೋ ವ್ರಜೇತ್ ।
ಯೋ ಬ್ರಾಹ್ಮಣ್ಯಾಮಗುಪ್ತಾಯಾಂ ತಾವುಭೌ ದಂಡಮರ್ಹತಃ ॥ ೩೮೨

ಕ್ಷತ್ರಿಯ ವೈಶ್ಯರು ರಕ್ಷಿತ ಪರಸ್ಪರ ಸ್ತ್ರೀಯರನ್ನು ದೂಷಿಸಿದರೆ ಸಾವಿರ ಪಣ ದಂಡನೆಯು.

ಸಹಸ್ರಂ ಬ್ರಾಹ್ಮಣೋ ದಂಡಂ ದಾಪ್ಯೋ ಗುಪ್ತೇ ತು ತೇ ವ್ರಜನ್ ।
ಶೂದ್ರಾಯಾಂ ಕ್ಷತ್ರಿಯವಿಶೋಃ ಸಾಹಸ್ರೋ ವೈ ಭವೇದ್ದಮಃ ॥ ೩೮೩

ರಕ್ಷಿತರಾದ ಕ್ಷತ್ರಿಯ ವೈಶ್ಯ ಸ್ತ್ರೀಯರ ಸಂಗದಿಂದ ಬ್ರಾಹ್ಮಣನಿಗೆ, ಶೂದ್ರ ಸ್ತ್ರೀಯ ಸಂಗದಿಂದ ಕ್ಷತ್ರಿಯ ವೈಶ್ಯರಿಗೂ ಸಾವಿರ ಪಣ ದಂಡನೆಯು.

ಕ್ಷತ್ರಿಯಾಯಾಮಗುಪ್ತಾಯಾಂ ವೈಶ್ಯೇ ಪಂಚಶತಂ ದಮಃ ।
ಮೂತ್ರೇಣ ಮೌಂಡ್ಯಮಿಚ್ಛೇತ್ತು ಕ್ಷತ್ರಿಯೋ ದಂಡಮೇವ ವಾ ॥ ೩೮೪

ಅನಾಥ ಕ್ಷತ್ರಿಯ ಸ್ತ್ರೀಯನ್ನು ವೈಶ್ಯನು ದೂಷಿಸಿದರೆ ಐನೂರು ಪಣ ದಂಡನೆಯು. ಕ್ಷತ್ರಿಯನು ದೂಷಿಸಿದರೆ ಮೂತ್ರದಿಂದ ವಪನ ಅಥವಾ ಧನ ದಂಡನೆ ತೆರಬೇಕು.

ಅಗುಪ್ತೇ ಕ್ಷತ್ರಿಯಾವೈಶ್ಯೇ ಶೂದ್ರಾಂ ವಾ ಬ್ರಾಹ್ಮಣೋ ವ್ರಜನ್ ।
ಶತಾನಿ ಪಂಚ ದಂಡ್ಯಃ ಸ್ಯಾತ್ಸಹಸ್ರಂ ತ್ವಂತ್ಯಜಸ್ತ್ರಿಯಂ ॥ ೩೮೫

ಬ್ರಾಹ್ಮಣನು ಅನಾಥ ಕ್ಷತ್ರಿಯ ವೈಶ್ಯ ಸ್ತ್ರೀಯರನ್ನು, ಶೂದ್ರ ಸ್ತ್ರೀಯನ್ನು ಭೋಗಿಸಿದರೆ ಆರುನೂರು ಪಣ ದಂಡನೆಯು. ಚಂಡಾಲ ಸ್ತ್ರೀಯನ್ನು ಭೋಗಿಸಿದರೆ ನಾವಿರ ಪಣ ದಂಡನೆಯು.

ಯಸ್ಯ ಸ್ತೇನಃ ಪುರೇ ನಾಸ್ತಿ ನಾನ್ಯಸ್ತ್ರೀಗೋ ನ ದುಷ್ಟವಾಕ್ ।
ನ ಸಾಹಸಿಕದಂಡಘ್ನೌ ಸ ರಾಜಾ ಶಕ್ರಲೋಕಭಾಕ್ ॥ ೩೮೬

ಯಾವ ಊರಿನಲ್ಲಿ ಕಳ್ಳರು, ಪರಸ್ತ್ರೀಜಾರರು, ದುಷ್ಟವಚನರು ಬಲಾತ್ಕಾರ ದೊಂಬಿ ಮಾಡುವವರು ಇಲ್ಲವೋ ಆ ಊರಿನ ರಾಜನು ಸ್ವರ್ಗಗಾಮಿಯು.

ಏತೇಷಾಂ ನಿಗ್ರಹೋ ರಾಜ್ಞಃ ಪಂಚಾನಾಂ ವಿಷಯೇ ಸ್ವಕೇ ।
ಸಾಮ್ರಾಜ್ಯಕೃತ್ಸಜಾತ್ಯೇಷು ಲೋಕೇ ಚೈವ ಯಶಸ್ಕರಃ ॥ ೩೮೭

ಇಂತಹ ಐದು ತರದ ಅಪರಾಧಿಗಳು ಇಲ್ಲದ ರಾಜನು ಕೀರ್ತಿಶಾಲಿಯು ಮತ್ತು ಸಾಮ್ರಾಜ್ಯ ಕಟ್ಟಬಲ್ಲವನು.

ಋತ್ವಿಜಂ ಯಸ್ತ್ಯಜೇದ್ಯಾಜ್ಯೋ ಯಾಜ್ಯಂ ಚರ್ತ್ವಿಕ್ತ್ಯಜೇದ್ಯದಿ ।
ಶಕ್ತಂ ಕರ್ಮಣ್ಯದುಷ್ಟಂ ಚ ತಯೋರ್ದಂಡಃ ಶತಂ ಶತಂ ॥ ೩೮೮

ನಿರ್ದಿಷ್ಟ ಕರ್ಮಶೂರ ಋತ್ವಿಜನನ್ನು ಯಾಜ್ಯನು, ಯಾಜ್ಯನನ್ನು ಋತ್ವಿಜನು ಬಿಟ್ಟರೆ ಅವರಿಗಿಬ್ಬರಿಗೂ ನೂರು ನೂರು ಪಣ ದಂಡ.

ನ ಮಾತಾ ನ ಪಿತಾ ನ ಸ್ತ್ರೀ ನ ಪುತ್ರಸ್ತ್ಯಾಗಮರ್ಹತಿ ।
ತ್ಯಜನ್ನಪತಿತಾನೇತಾನ್ರಾಜ್ಞಾ ದಂಡ್ಯಃ ಶತಾನಿ ಷಟ್ ॥ ೩೮೯

ತಾಯಿ, ತಂದೆ, ಹೆಂಡತಿ, ಮಗ ಇವರನ್ನು ಆಯಾ ರಕ್ಷಕರು ರಕ್ಷಿಸದೆ ಅನ್ನ, ವಸ್ತ್ರ ಕೊಡದೆ ಇರಬಾರದು. ನೀತಿ ಬಾಹ್ಯರಲ್ಲದೆ ಇದ್ದು ರಕ್ಷಣೆ, ಪೋಷಣೆ ಮಾಡದವರಿಗೆ ಆರುನೂರು ಪಣ ದಂಡನೆಯು.

ಆಶ್ರಮೇಷು ದ್ವಿಜಾತೀನಾಂ ಕಾರ್ಯೇ ವಿವದತಾಂ ಮಿಥಃ ।
ನ ವಿಬ್ರೂಯಾನ್ನೃಪೋ ಧರ್ಮಂ ಚಿಕೀರ್ಷನ್ಹಿತಮಾತ್ಮನಃ ॥ ೩೯೦

ದ್ವಿಜಾತಿಗಳು ಆಶ್ರಮ ಕಾರ್ಯದಲ್ಲಿ ಶಾಸ್ತ್ರಾರ್ಥವಿವಾದ ಮಾಡುತ್ತಿರುವಾಗ ಮಧ್ಯದಲ್ಲಿ ರಾಜನು ನಿರ್ಣಯಬೋಧೆಯನ್ನು ಆರಂಭಿಸುವುದು ರಾಜನಿಗೆ ಹಿತವಲ್ಲ.

ಯಥಾರ್ಹಮೇತಾನಭ್ಯರ್ಚ್ಯ ಬ್ರಾಹ್ಮಣೈಃ ಸಹ ಪಾರ್ಥಿವಃ ।
ಸಾಂತ್ವೇನ ಪ್ರಶಮಯ್ಯಾದೌ ಸ್ವಧರ್ಮಂ ಪ್ರತಿಪಾದಯೇತ್ ॥ ೩೯೧

ರಾಜನು ಅವರು ವಿವಾದ ಮಾಡುತ್ತಿರುವಾಗ ಮೊದಲು ಅವರನ್ನು ಸಮಾಧಾನಪಡಿಸಬೇಕು. ಪ್ರೀತಿಯಿಂದ ಸ್ವಧರ್ಮವನ್ನು ತಿಳಿಸಬೇಕು.

ಪ್ರಾತಿವೇಶ್ಯಾನುವೇಶ್ಯೌ ಚ ಕಲ್ಯಾಣೇ ವಿಂಶತಿದ್ವಿಜೇ ।
ಅರ್ಹಾವಭೋಜಯನ್ವಿಪ್ರೋ ದಂಡಮರ್ಹತಿ ಮಾಷಕಂ ॥ ೩೯೨

ನೆರೆಮನೆಯವನು (ಅಗ್ರಹಾರದವರು) ಮೂರನೆ ಮನೆಯವನು ಇವರಿಬ್ಬರನ್ನು ತನ್ನ ಮನೆಯ ಶುಭಕಾರ್ಯಕ್ಕೆ ಕರೆಯದಿರಬಾರದು. ಆಗ ಒಂದು ಮಾಷ ದಂಡನೆಯು.

ಶ್ರೋತ್ರಿಯಃ ಶ್ರೋತ್ರಿಯಂ ಸಾಧುಂ ಭೂತಿಕೃತ್ಯೇಷ್ವಭೋಜಯನ್ ।
ತದನ್ನಂ ದ್ವಿಗುಣಂ ದಾಪ್ಯೋ ಹಿರಣ್ಯಂ ಚೈವ ಮಾಷಕಂ ॥ ೩೯೩

ವೈದಿಕ ನೆರೆಯವರನ್ನು ಶುಭಶೋಭನಗಳಲ್ಲಿ, ಭೋಜನಕ್ಕೆ ಕರೆಯದಿದ್ದರೆ ಮಾಷ ಧನವೂ ಭೋಜನ ಪ್ರಮಾಣ ಧನವೂ ದಂಡನೆಯು.

ಅಂಧೋ ಜಡಃ ಪೀಠಸರ್ಪೀ ಸಪ್ತತ್ಯಾ ಸ್ಥವಿರಶ್ಚ ಯಃ ।
ಶ್ರೋತ್ರಿಯೇಷೂಪಕುರ್ವಂಶ್ಚ ನ ದಾಪ್ಯಾಃ ಕೇನಚಿತ್ಕರಂ ॥ ೩೯೪

ಕುರುಡ, ಕಿವುಡ, ಹೆಳವ, ಎಪ್ಪತ್ತರ ಮುದುಕ, ಶ್ರೋತ್ರಿಯರಿಗೆ ಸಹಾಯರು ಇವರಿಗೆ ಎಂದೂ ರಾಜದಾಯವಿಲ್ಲ.

ಶ್ರೋತ್ರಿಯಂ ವ್ಯಾಧಿತಾರ್ತೌ ಚ ಬಾಲವೃದ್ಧಾವಕಿಂಚನಂ ।
ಮಹಾಕುಲೀನಮಾರ್ಯಂ ಚ ರಾಜಾ ಸಂಪೂಜಯೇತ್ಸದಾ ॥ ೩೯೫

ವೈದಿಕ, ರೋಗಿ, ದುಃಖಿ, ಹುಡುಗ, ಮುದುಕ, ದರಿದ್ರ, ಕುಲೀನ ಇವರನ್ನು ಅನ್ನ–ವಸ್ತ್ರ ಪ್ರಶಂಸೆಗಳಿಂದ ಗೌರವಿಸಬೇಕು.

ಶಾಲ್ಮಲೀಫಲಕೇ ಶ್ಲಕ್ಷ್ಣೇ ನೇನಿಜ್ಯಾನ್ನೇಜಕಃ ಶನೈಃ ।
ನ ಚ ವಾಸಾಂಸಿ ವಾಸೋಭಿರ್ನಿರ್ಹರೇನ್ನ ಚ ವಾಸಯೇತ್ ॥ ೩೯೬

ಅಗಸನು ನುಣುಪಾದ ಬೂರುಗದ ಹಲಿಗೆಯಲ್ಲಿ ಬಟ್ಟೆ ಒಗೆಯಬೇಕು. ಅವರದನ್ನು ಇವರಿಗೆ ಬಟ್ಟೆ ಬದಲಿಸಬಾರದು. ಬೆರೆಸಬಾರದು, ಉಡಬಾರದು, ತಪ್ಪಿದರೆ ದಂಡವು.

ತಂತುವಾಯೋ ದಶಪಲಂ ದದ್ಯಾದೇಕಪಲಾಧಿಕಂ ।
ಅತೋಽನ್ಯಥಾ ವರ್ತಮಾನೋ ದಾಪ್ಯೋ ದ್ವಾದಶಕಂ ದಮಂ ॥ ೩೯೭

ಬಟ್ಟೆ ನೆಯ್ಯುವ ನೇಕಾರನು ಹತ್ತು ಪಲ ನೂಲಿಗೆ ಹನ್ನೊಂದು ಪಲ ಬಟ್ಟೆ ಕೊಡಬೇಕು. ತಪ್ಪಿದರೆ ಹನ್ನೆರಡು ಪಣ ದಂಡವು.

ಶುಲ್ಕಸ್ಥಾನೇಷು ಕುಶಲಾಃ ಸರ್ವಪಣ್ಯವಿಚಕ್ಷಣಾಃ ।
ಕುರ್ಯುರರ್ಘಂ ಯಥಾಪಣ್ಯಂ ತತೋ ವಿಂಶಂ ನೃಪೋ ಹರೇತ್ ॥ ೩೯೮

ರಾಜನು ಶುಲ್ಕ ವಸೂಲಿಗೆ ಆಯಾ ಸ್ಥಳಗಳಲ್ಲಿ ದಕ್ಷರನ್ನು ನಿಯಮಿಸಬೇಕು. ಅವರು ಸಾರಾಸಾರ ತಿಳಿದು ಬೆಲೆ ನಿಗದಿ ಮಾಡಿ ಮೂಲ್ಯದ ಇಪ್ಪತ್ತನೆ ಒಂದಂಶ ಶುಲ್ಕ ನಿಶ್ಚಯಿಸಿ ರಾಜಧನವಾಗಿ ಪಡೆಯಬೇಕು.

ರಾಜ್ಞಃ ಪ್ರಖ್ಯಾತಭಾಂಡಾನಿ ಪ್ರತಿಷಿದ್ಧಾನಿ ಯಾನಿ ಚ ।
ತಾನಿ ನಿರ್ಹರತೋ ಲೋಭಾತ್ಸರ್ವಹಾರಂ ಹರೇನ್ನೃಪಃ ॥ ೩೯೯

ರಾಜೋಚಿತವಾದ ಉಪಕರಣ ದ್ರವ್ಯಗಳು ನಿಷಿದ್ಧ ದ್ರವ್ಯಗಳು. ಅವುಗಳನ್ನು ನಿಯಮ ಮೀರಿ ಸಾಗಿಸಿದವನನ್ನು ಸರ್ವಸ್ವಹರಣ ಮಾಡಿ ದಂಡಿಸಬೇಕು.

ಶುಲ್ಕಸ್ಥಾನಂ ಪರಿಹರನ್ನಕಾಲೇ ಕ್ರಯವಿಕ್ರಯೀ ।
ಮಿಥ್ಯಾವಾದೀ ಚ ಸಂಖ್ಯಾನೇ ದಾಪ್ಯೋಽಷ್ಟಗುಣಮತ್ಯಯಂ ॥ ೪೦೦

ಶುಲ್ಕ ತಪ್ಪಿಸಲು ಅಕಾಲದಲ್ಲಿ ಮಾರಾಟ, ದಾರಿತಪ್ಪಿ ಹೋಗುವುದು, ಲೆಖ್ಖ ತಪ್ಪು ಹೇಳುವುದು ಇಂತಹ ಅಪರಾಧಗಳಲ್ಲಿ ಮೋಸಕ್ಕೆ ಉದ್ದೇಶಿಸಿದ ಹಣದ ಎಂಟು ಪಾಲು ದಂಡನೆಯು.

ಆಗಮಂ ನಿರ್ಗಮಂ ಸ್ಥಾನಂ ತಥಾ ವೃದ್ಧಿಕ್ಷಯಾವುಭೌ ।
ವಿಚಾರ್ಯ ಸರ್ವಪಣ್ಯಾನಾಂ ಕಾರಯೇತ್ಕ್ರಯವಿಕ್ರಯೌ ॥ ೪೦೧

ಮಾಲು ಬರುವ ದಾರಿ, ಹೋಗುವ ದಾರಿ, ಖರ್ಚು, ಬೆಲೆ ಇವುಗಳನ್ನು ನೋಡಿಕೊಂಡು ಗಿರಾಕಿಗೂ, ವ್ಯಾಪಾರಿಗೂ ನಷ್ಟವಾಗದಂತೆ ವಾಣಿಜ್ಯ ವ್ಯವಸ್ಥೆಯನ್ನು ನಿರ್ವಹಿಸಬೇಕು.

ಪಂಚರಾತ್ರೇ ಪಂಚರಾತ್ರೇ ಪಕ್ಷೇ ಪಕ್ಷೇಽಥವಾ ಗತೇ ।
ಕುರ್ವೀತ ಚೈಷಾಂ ಪ್ರತ್ಯಕ್ಷಮರ್ಘಸಂಸ್ಥಾಪನಂ ನೃಪಃ ॥ ೪೦೨

ಸರಕದ ಉತ್ಪತ್ತಿ ಖರ್ಚು ಬರುವುದು, ಹೋಗುವುದು ಆಗಾಗ ಬದಲಾಯಿಸುವುದರಿಂದ ಕ್ಷಣಿಕ ಬೆಲೆಯ ಸಾಮಾನಿಗೆ ಪ್ರತಿ ಐದು ದಿವಸಗಳಿಗೊಮ್ಮೆಯೂ, ಸ್ಥಿರಮೂಲ್ಯದ ಮಾಲಿಗೆ ಹದಿನೈದು ದಿನಗಳಿಗೊಮ್ಮೆಯೂ ವಾಣಿಜ್ಯೋದ್ಯಮಿಗಳ ಮೂಲ್ಯ ತಜ್ಞರ ಪ್ರತ್ಯಕ್ಷದಲ್ಲಿ ವಿಚಾರಿಸಿ ಬೆಲೆಯನ್ನು ನಿಶ್ಚಯಿಸಬೇಕು.

ತುಲಾಮಾನಂ ಪ್ರತೀಮಾನಂ ಸರ್ವಂ ಚ ಸ್ಯಾತ್ಸುಲಕ್ಷಿತಂ ।
ಷಟ್ಸು ಷಟ್ಸು ಚ ಮಾಸೇಷು ಪುನರೇವ ಪರೀಕ್ಷಯೇತ್ ॥ ೪೦೩

ತೂಕದ ಪಡಿಗಳು ದ್ರವ್ಯಮಾನದ ಸೇರು ಕಳಸೆ ವಗೈರೆ ಪ್ರತಿ ಆರು ತಿಂಗಳಿಗೊಮ್ಮೆ ವಣಿಜರಲ್ಲಿ ಪರೀಕ್ಷಿಸುವ ವ್ಯವಸ್ಥೆಯನ್ನು ಏರ್ಪಡಿಸಬೇಕು.

ಪಣಂ ಯಾನಂ ತರೇ ದಾಪ್ಯಂ ಪೌರುಷೋಽರ್ಧಪಣಂ ತರೇ ।
ಪಾದಂ ಪಶುಶ್ಚ ಯೋಷಿಚ್ಚ ಪಾದಾರ್ಧಂ ರಿಕ್ತಕಃ ಪುಮಾನ್ ॥ ೪೦೪

ವಾಹನಮಾರ್ಗ ಶುಲ್ಕವು ಹೀಗಿರಬೇಕು. ಖಾಲಿ ವಾಹನಕ್ಕೆ ಒಂದು ಪಣ, ಮನುಷ್ಯರ ಸವಾರಿ ವಾಹನಕ್ಕೆ ಅರ್ಧ ಪಣ, ಸ್ತ್ರೀ ಮೃಗಗಳ ವಾಹನಕ್ಕೆ ನಾಲ್ಕನೆ ಒಂದು ಪಣ, ಭಾರ ಕಡಿಮೆ ಇರುವ ಮನುಷ್ಯನಿಗೆ ಎಂಟನೆ ಒಂದು ಪಣ ಕರ (ರೋಡ್ ಫೀಸ್).

ಭಾಂಡಪೂರ್ಣಾನಿ ಯಾನಾನಿ ತಾರ್ಯಂ ದಾಪ್ಯಾನಿ ಸಾರತಃ ।
ರಿಕ್ತಭಾಂಡಾನಿ ಯತ್ಕಿಂಚಿತ್ಪುಮಾಂಸಶ್ಚಾಪರಿಚ್ಛದಾಃ ॥ ೪೦೫

ಸರಕು ತುಂಬಿದ ವಾಹನಗಳಿಗೆ ಸರಕುಗಳ ಬೆಲೆ ನೋಡಿ ಶುಲ್ಕವು. ಗೋಣಿ, ಕಂಬಳಿ ಮುಂತಾದುವಕ್ಕೆ ಸ್ವಲ್ಪ ಶುಲ್ಕವು ಬಡವರಿಗೂ ಕಡಿಮೆ ಶುಲ್ಕವು.

ದೀರ್ಘಾಧ್ವನಿ ಯಥಾದೇಶಂ ಯಥಾಕಾಲಂ ತರೋ ಭವೇತ್ ।
ನದೀತೀರೇಷು ತದ್ವಿದ್ಯಾತ್ಸಮುದ್ರೇ ನಾಸ್ತಿ ಲಕ್ಷಣಮ್ ॥ ೪೦೬

ದೂರದ ಯಾನಗಳಿದ್ದಾಗ ಹಡಗದ ಶುಲ್ಕವು ಸಮಯ ಮತ್ತು ಸ್ಥಳಗಳಿಗೆ ಅನುಸರಿಸಿ ಇರಬೇಕು. ಈ ನಿಯಮ ನದಿಗುಂಟದ ಯಾನಕ್ಕೆ ಅನ್ವಯಿಸುತ್ತದೆ. ಸಮುದ್ರಯಾನದ ಶುಲ್ಕವು ಇಂತಿಷ್ಟೇ ಎಂದು ನಿರ್ಧಾರವಿಲ್ಲ.

ಗರ್ಭಿಣೀ ತು ದ್ವಿಮಾಸಾದಿಸ್ತಥಾ ಪ್ರವ್ರಜಿತೋ ಮುನಿಃ ।
ಬ್ರಾಹ್ಮಣಾ ಲಿಂಗಿನಶ್ಚೈವ ನ ದಾಪ್ಯಾಸ್ತಾರಿಕಂ ತರೇ ॥ ೪೦೭

ಎರಡು ತಿಂಗಳಿಗಿಂತ ಹೆಚ್ಚಿನ ಗರ್ಭಿಣಿ, ಸನ್ಯಾಸಿ, ವನಸ್ಥ, ಬ್ರಾಹ್ಮಣ, ಬ್ರಹ್ಮಚಾರಿ ಇವರಿಗೆ ಶುಲ್ಕವಿಲ್ಲ.

ಯನ್ನಾವಿ ಕಿಂಚಿದ್ದಾಶಾನಾಂ ವಿಶೀರ್ಯೇತಾಪರಾಧತಃ ।
ತದ್ದಾಶೈರೇವ ದಾತವ್ಯಂ ಸಮಾಗಮ್ಯ ಸ್ವತೋಂಽಶತಃ ॥ ೪೦೮

ನೌಕೆಯಲ್ಲಿ ನಾವಿಕರ ಅಪರಾಧದಿಂದ ನಷ್ಟ ಉಂಟಾದರೆ ಆ ನಾವಿಕರೇ ತುಂಬಿಕೊಡಬೇಕು.

ಏಷ ನೌಯಾಯಿನಾಮುಕ್ತೋ ವ್ಯವಹಾರಸ್ಯ ನಿರ್ಣಯಃ ।
ದಾಶಾಪರಾಧತಸ್ತೋಯೇ ದೈವಿಕೇ ನಾಸ್ತಿ ನಿಗ್ರಹಃ ॥ ೪೦೯

ನೌಕೆಗೆ ಸುಂಟರಗಾಳಿ, ಮೀನು, ಬಂಡೆ ಮೊದಲಾದ ದೈವಿಕ ಅಪಘಾತ ದಿಂದ ನಷ್ಟವಾದರೆ ನಾವಿಕರು ಬಾಧ್ಯರಲ್ಲ.

ವಾಣಿಜ್ಯಂ ಕಾರಯೇದ್ವೈಶ್ಯಂ ಕುಸೀದಂ ಕೃಷಿಮೇವ ಚ ।
ಪಶೂನಾಂ ರಕ್ಷಣಂ ಚೈವ ದಾಸ್ಯಂ ಶೂದ್ರಂ ದ್ವಿಜನ್ಮನಾಂ ॥ ೪೧೦

ವೈಶ್ಯನು ವಾಣಿಜ್ಯ, ಕೃಷಿ, ಪಶುಪಾಲನೆ, ಬಡ್ಡಿಗೆ ಹಣ ಕೊಡುವುದು ಮುಂತಾದ ಉದ್ಯೋಗಗಳನ್ನು ಮಾಡಲು ನಿಯಮಿಸಬೇಕು. ಮಾಡದವರಿಗೆ ದಂಡನೆಯು. ಶೂದ್ರರನ್ನು ಎಲ್ಲ ಕೆಲಸ ಮಾಡುವ ದೇಶದ ಆಧಾರವಾಗಿ ನಿಯಮಿಸಬೇಕು.

ಕ್ಷತ್ರಿಯಂ ಚೈವ ವೈಶ್ಯಂ ಚ ಬ್ರಾಹ್ಮಣೋ ವೃತ್ತಿಕರ್ಶಿತೌ ।
ಬಿಭೃಯಾದಾನೃಶಂಸ್ಯೇನ ಸ್ವಾನಿ ಕರ್ಮಾಣಿ ಕಾರಯನ್ ॥ ೪೧೧

ತನ್ನನ್ನು ಹೊಂದಿದ ಕ್ಷತ್ರಿಯ ವೈಶ್ಯರನ್ನು ಬ್ರಾಹ್ಮಣನು ಅವರವರ ಕೆಲಸದಲ್ಲಿ ನಿಯಮಿಸಿ ತನ್ನ ನಿರ್ದೇಶನದಲ್ಲಿ ಬುದ್ಧಿ ದರಿದ್ರರಾದ ಅವರನ್ನು ಪೋಷಿಸಲು ತಪ್ಪಬಾರದು. ಇಲ್ಲವಾದರೆ ದಂಡನೆ.

ದಾಸ್ಯಂ ತು ಕಾರಯಂಲ್ಲೋಭಾದ್ಬ್ರಾಹ್ಮಣಃ ಸಂಸ್ಕೃತಾನ್ದ್ವಿಜಾನ್ ।
ಅನಿಚ್ಛತಃ ಪ್ರಾಭವತ್ಯಾದ್ರಾಜ್ಞಾ ದಂಡ್ಯಃ ಶತಾನಿ ಷಟ್ ॥ ೪೧೨

ಉಪನೀತರಾದ ಕ್ಷತ್ರಿಯ ವೈಶ್ಯರನ್ನು ಬ್ರಾಹ್ಮಣನು ಲೋಭದಿಂದ ಅವರ ಇಚ್ಛಾವಿರುದ್ಧವಾಗಿ ದಾಸಕಾರ್ಯದಲ್ಲಿ ನಿಯೋಗಿಸಬಾರದು ಆಗ, ಆರುನೂರು ಪಣ ದಂಡನೆಯು. ತನ್ನನ್ನು ಆಶ್ರಯಿಸಿದರು ಎಂದು ದರ್ಪದಿಂದ ಬ್ರಾಹ್ಮಣನು ವರ್ತಿಸಿ ವಿಹಿತವನ್ನು ಮೀರಬಾರದು.

ಶೂದ್ರಂ ತು ಕಾರಯೇದ್ದಾಸ್ಯಂ ಕ್ರೀತಮಕ್ರೀತಮೇವ ವಾ ।
ದಾಸ್ಯಾಯೈವ ಹಿ ಸೃಷ್ಟೋಽಸೌ ಬ್ರಾಹ್ಮಣಸ್ಯ ಸ್ವಯಂಭುವಾ ॥ ೪೧೩

ಶೂದ್ರನು ಸೇವೆಗಾಗಿ ಜನಿಸಿದವನು ಆದುದರಿಂದ ಬ್ರಾಹ್ಮಣನು ಅವನಿಂದ ಸೇವೆ ಮಾಡಿಸಿಕೊಳ್ಳಬಹುದು.

ನ ಸ್ವಾಮಿನಾ ನಿಸೃಷ್ಟೋಽಪಿ ಶೂದ್ರೋ ದಾಸ್ಯಾದ್ವಿಮುಚ್ಯತೇ ।
ನಿಸರ್ಗಜಂ ಹಿ ತತ್ತಸ್ಯ ಕಸ್ತಸ್ಮಾತ್ತದಪೋಹತಿ ॥ ೪೧೪

ಶೂದ್ರನು ಸ್ವಾಮಿಯಿಂದ ಪರಿತ್ಯಕ್ತನಾದರೂ ದಾಸ್ಯವಿಮುಕ್ತಿ ಹೊಂದುವುದಿಲ್ಲ. ಅವನ ಜನ್ಮದೊಡನೆ ಪ್ರಾಪ್ತವಾದ ದಾಸ್ಯವು ಅವನನ್ನು ಬಿಡದಿರುವುದರಿಂದ ದಾಸ್ಯದಹೊರತು ಅವನಿಗೆ ಬೇರೆ ಪುಣ್ಯಕಾರ್ಯವಿಲ್ಲ. ಪತ್ನಿಗೆ ಪತಿಸೇವೆಯಂತೆ ಶೂದ್ರನಿಗೆ ಬ್ರಾಹ್ಮಣ ಸೇವೆಯು ಸಕಲಪುರುಷಾರ್ಥ ದಾಯಕವು.

ಧ್ವಜಾಹೃತೋ ಭಕ್ತದಾಸೋ ಗೃಹಜಃ ಕ್ರೀತದತ್ತ್ರಿಮೌ ।
ಪೈತ್ರಿಕೋ ದಂಡದಾಸಶ್ಚ ಸಪ್ತೈತೇ ದಾಸಯೋನಯಃ ॥ ೪೧೫

ಯುದ್ಧದಲ್ಲಿ ಸೋತು ಸಿಕ್ಕಿದವನು, ಅನ್ನಕ್ಕಾಗಿ ಸೇರಿದವನು, ತನ್ನ ದಾಸೀಜಾತನು, ಕ್ರಯಕ್ಕೆ ಬಂದವನು, ದಾನ ಸಿಕ್ಕಿದವನು, ಪಿತೃವಿನ ದಾಸನು, ಅಪರಾಧದಿಂದ ದಂಡನೆ ಬಂದವನು ಈ ಏಳು ರೀತಿಯಲ್ಲಿ ದಾಸರಾಗುವರು.

ಭಾರ್ಯಾ ಪುತ್ರಶ್ಚ ದಾಸಶ್ಚ ತ್ರಯ ಏವಾಧನಾಃ ಸ್ಮೃತಾಃ ।
ಯತ್ತೇ ಸಮಧಿಗಚ್ಛಂತಿ ಯಸ್ಯ ತೇ ತಸ್ಯ ತದ್ಧನಂ ॥ ೪೧೬

ಹೆಂಡತಿ, ಮಗ, ಸೇವಕ ಇವರು ಮೂವರು ಸ್ವಾಮಿಯ ಸಮ್ಮತಿ ಯಿಂದ ಧನಾಧಿಕಾರವುಳ್ಳವರು. ಅವರು ದುಡಿದ ಅರ್ಜನೆಯು ಸ್ವಾಮಿ ಧನವಾಗುವುದು.

ವಿಸ್ರಬ್ಧಂ ಬ್ರಾಹ್ಮಣಃ ಶೂದ್ರಾದ್ದ್ರವ್ಯೋಪಾದಾನಮಾಚರೇತ್ ॥
ನಹಿ ತಸ್ಯಾಸ್ತಿ ಕಿಂಚಿತ್ಸ್ವಂ ಭರ್ತೃಹಾರ್ಯಧನೋ ಹಿ ಸಃ ॥ ೪೧೭

ಸ್ವಾಮಿಯು ಸೇವಕಧನವನ್ನು ನಿಃಸಂಶಯವಾಗಿ ಸ್ವೀಕರಿಸಬಹುದು. ಅವನಿಗೆ ಸ್ವಯಂಧನವಿಲ್ಲ. ಅವನು ಪೋಷ್ಯನು. ಆದುದರಿಂದ ಸ್ವಾಮಿಯು ದಂಡನೀಯಲ್ಲ.

ವೈಶ್ಯಶೂದ್ರೌ ಪ್ರಯತ್ನೇನ ಸ್ವಾನಿ ಕರ್ಮಾಣಿ ಕಾರಯೇತ್ ।
ತೌ ಹಿ ಚ್ಯುತೌ ಸ್ವಕರ್ಮಭ್ಯಃ ಕ್ಷೋಭಯೇತಾಮಿದಂ ಜಗತ್ ॥ ೪೧೮

ವೈಶ್ಯಶೂದ್ರರು ಸ್ವಕಾರ್ಯಗಳನ್ನು ಮಾಡಲು ಪ್ರೇರಣೆ ಮಾಡಬೇಕು. ಅವರು ಸ್ವಕರ್ಮಭ್ರಷ್ಟರಾದರೆ ದೇಶಕ್ಷೋಭೆಯಾಗುವುದು. ದೇಶದ ಎಲ್ಲ ಕೆಲಸವೂ ಹಿಂದೆ ಬೀಳಬಾರದು. ಉಳಿದು ಹೋದರೆ ಆ ಅಂಶದ ನ್ಯೂನತೆಯು ಬಾಧಿಸುವುದು.

ಅಹನ್ಯಹನ್ಯವೇಕ್ಷೇತ ಕರ್ಮಾಂತಾನ್ ವಾಹನಾನಿ ಚ ।
ಆಯವ್ಯಯೌ ಚ ನಿಯತಾವಾಕರಾನ್ ಕೋಶಮೇವ ಚ ॥ ೪೧೯

ಪರಲೋಕ ಸಾಧಕಕರ್ಮ, ಈ ಲೋಕದ ವಾಹನ, ಲಾಭ, ನಷ್ಟ, ಗನಿ-ಖಜಾನೆ ಉತ್ಪತ್ತಿ, ಖರ್ಚು ಮುಂತಾದ ಎಲ್ಲ ಕೆಲಸಗಳಿಗೂ ಯೋಗ್ಯ ಅಧಿಕಾರಿಗಳನ್ನು ನೇಮಿಸಿ ಪ್ರತಿದಿನ ಅವುಗಳ ಪರೀಕ್ಷೆಯನ್ನು ನಡೆಸಬೇಕು.

ಏವಂ ಸರ್ವಾನಿಮಾನ್ ರಾಜಾ ವ್ಯವಹಾರಾನ್ ಸಮಾಪಯನ್ ।
ವ್ಯಪೋಹ್ಯ ಕಿಲ್ಬಿಷಂ ಸರ್ವಂ ಪ್ರಾಪ್ನೋತಿ ಪರಮಾಂ ಗತಿಂ ॥ ೪೨೦

ಈ ವರೆಗೆ ಹೇಳಿದಂತೆ ಸಕಲ ವ್ಯವಹಾರಗಳನ್ನು ಯೋಗ್ಯವಾಗಿ ನಿರ್ವಹಿಸಿದರೆ ರಾಜನು ಪಾಪಶೂನ್ಯನಾಗಿ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉತ್ತಮ ಸ್ಥಾನವನ್ನು ಪಡೆಯುವನು.

# ಅಧ್ಯಾಯ ೯.

ಪುರುಷಸ್ಯ ಸ್ತ್ರಿಯಾಶ್ಚೈವ ಧರ್ಮೇ ವರ್ತ್ಮನಿ ತಿಷ್ಠತೋಃ ।
ಸಂಯೋಗೇ ವಿಪ್ರಯೋಗೇ ಚ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ॥ ೧

ಧರ್ಮಸಮ್ಮತವಾದ ವರ್ತನೆಯುಳ್ಳ ಸ್ತ್ರೀ-ಪುರುಷರು ಹೇಗೆ ಇರುವರು ಎಂಬುದನ್ನು ವಿವರಿಸುತ್ತೇನೆ. ಹೆಣ್ಣಿನ ಮತ್ತು ಗಂಡಿನ ವರ್ತನೆಯು ಯಾವ ರೀತಿಯಿದ್ದರೆ ಧರ್ಮವಿರುದ್ಧವಲ್ಲ, ಇಬ್ಬರ ಸುಖವೂ ಸಂಪೂರ್ಣವಾಗುವುದು, ಎನ್ನುವುದೇ ಈ ವಿವರದ ಉದ್ದೇಶವು. ರಾಜಧರ್ಮದಲ್ಲಿ ಈ ಪ್ರಕರಣವು ಅಂತರ್ಗತವಾಗಿರುವುದರಿಂದ ರಾಷ್ಟ್ರಶಾಸನವು ಈ ಅಭಿಪ್ರಾಯವನ್ನು ಒಳಗೊಂಡಿದ್ದರೆ ಮಾತ್ರ ಕ್ಷೇಮವು ದೊರೆಯುವುದೆಂದು ಮನುವಿನ ಆಶಯವು.

ಅಸ್ವತಂತ್ರಾಃ ಸ್ತ್ರಿಯಃ ಕಾರ್ಯಾಃ ಪುರುಷೈಃ ಸ್ವೈರ್ದಿವಾನಿಶಂ ।
ವಿಷಯೇಷು ಚ ಸಜ್ಜಂತ್ಯಃ ಸಂಸ್ಥಾಪ್ಯಾ ಆತ್ಮನೋ ವಶೇ ॥ ೨

ಪುರುಷರು ರಕ್ಷಣೆ ಮಾಡುವಾಗ ಸ್ತ್ರೀಯರು ಸ್ವತಂತ್ರರಾಗುವ ಅವಶ್ಯವಿಲ್ಲ. ಗೃಹಕೃತ್ಯಗಳಲ್ಲಿ ಸ್ತ್ರೀಯರು ಯುಕ್ತರೀತಿಯಲ್ಲಿ ಗಮನಕೊಟ್ಟು ಅನ್ಯೋನ್ಯ ನಿರ್ವಹಣೆಯಲ್ಲಿ ಮನಸ್ಸು ವ್ಯಾಪೃತವಾಗಿರುವಾಗ ಸ್ತ್ರೀಯರು ಅನಾಯಾಸದಿಂದ ಪುರುಷವಶವರ್ತಿಗಳಾಗುವರು. ಇದು ಪುರುಷನು ಸ್ತ್ರೀಯನ್ನು ವಶೀಕರಿಸುವ ವಿಧಾನವು. ಅಸ್ವತಂತ್ರಳಾಗಿರುವ ಸ್ವರೂಪವು. ಗಿಣಿಯನ್ನು ಗೂಡಿನಲ್ಲಿಡುವಂತೆ ಸ್ತ್ರೀಯನ್ನು ಮನೆಯಲ್ಲಿ ತುಂಬಿಡಬೇಕೆಂದು ಅಭಿಪ್ರಾಯವಲ್ಲ. ಸುಖ-ದುಃಖ ಆಯವ್ಯಯ ಅನ್ನಪಾನಗಳನ್ನು ಅವಳು ತನ್ನ ನೇತೃತ್ವದಲ್ಲಿ ನಿರ್ವಹಿಸಲು ಮುಂದಾಗುವಳು. ವಿವಾಹ ಪ್ರಕರಣದ

ಯತ್ರನಾರ್ಯಸ್ತುಪೂಜ್ಯಂತೇ ಎಂಬ ಪ್ರಶಂಸೆಯನ್ನು ಮರೆತು ಹೇಳುವ ಕಿವಿ ಮಾತು ಇದಲ್ಲ. ಸ್ತ್ರೀಗುಣವು ಸ್ಪಷ್ಟವು. ಸ್ತ್ರೀ ಸಂತುಷ್ಟಿಯಿಂದ ಪುರುಷನು ಅದನ್ನು ಸಾಧಿಸುವ ಸಲಹೆಯಿದು. ಸ್ತ್ರೀ ಸ್ವಾತಂತ್ರ್ಯವಾದಿಗಳು ರಾಜಕೀಯ ಅಧಿಕಾರ, ಉದ್ಯೋಗ, ಧನಾರ್ಜನೆಗಳನ್ನು ಗಂಡಸಿನಂತೆ ಹೆಂಗಸು ಮಾಡಲಿ ಎನ್ನುವರು. ಆದರೆ ಸಮಯ, ಸೌಕರ್ಯ, ಯೋಗ್ಯತೆ ಇರುವವರು ಸತ್ಯವಾಗಿ ಹೆಂಗಸರು ಆ ಕರ್ತವ್ಯಗಳನ್ನು ನಿರ್ವಹಿಸಬೇಕು. ತಿಳಿದಿರಬೇಕು. ದಾಂಪತ್ಯ ಸುಖ, ಸಂತತಿ, ಪೋಷಣೆ, ಪಾಲನೆ, ಪ್ರಸವ, ವಿಶ್ರಾಂತಿಗಳನ್ನು ಕೂಲಿಯವಳಿಂದ ತುಂಬಿಕೊಳ್ಳಬಾರದು. ಇದನ್ನು ಹೆರುವವಳು ಮಾಡಿದಂತೆ ಇತರರು ಮಾಡಲಾರರು. ಈ ಕೆಲಸವನ್ನು ಬೇರೆಯವರಿಂದ ಮಾಡಿಸಿ ತಾನು ಉದ್ಯೋಗ ಮಾಡುವುದು ಸರ್ವಥಾ ಸುಂದರವಲ್ಲ. ರಾಣಿಯಾಗಿ, ರಾಜನ ತಾಯಿಯಾಗಿ, ಮನೆಯೊಡತಿಯಾಗಿ, ವೀರಾಧಿವೀರನ ನೆಚ್ಚಿನ ಮಡದಿಯಾಗಿ ದೇಶದ ಕಾರ್ಯದಲ್ಲಿ ಪಾಲ್ಗೊಂಡ ಮಹಿಳೆಯರು ಹಿಂದೆ ಆಗಿದ್ದಾರೆ, ಇನ್ನೂ ಆಗುವರು. ಈಗಲೂ ಅಂತಹವರು ಇರುವರು. ಎಲ್ಲ ಹೆಣ್ಣಿಗೂ ಅಂತಹ ಸುಸಂದರ್ಭ ಒದಗುವುದಿಲ್ಲ. ಎಂಬುದನ್ನು ಮರೆಯಬಾರದು. ಕಟ್ಟೋಣದೊಳಗೆ ಆಸನದ ಮೇಲೆ ಕುಳಿತು ದಾಖಲೆ ನೋಡುವುದೇ ಉದ್ಯೋಗವೆಂದು ಭ್ರಮಿಸಿದವರು ಬಹುಮಂದಿ. ಬಟ್ಟೆ ನೇಯುವುದು, ಮಡಿಕೆ ಮಾಡುವುದು, ಸಸಿ ನಡುವುದು ಕಟ್ಟಿಗೆ ತರುವುದು, ಚಾಪೆ ಹೆಣೆಯುವುದು, ಭಾರಹೊರುವುದು, ಅಂಗಡಿ ನಡೆಸುವುದು, ಮನೆಯನ್ನು ಒಪ್ಪಓರಣವಾಗಿಡುವುದು, ಮಕ್ಕಳನ್ನು ಸಾಕುವುದು, ಗಂಡನನ್ನು ಮೆಚ್ಚಿಸುವುದು ಹೆಂಗಸು ಮಾಡುತ್ತಿರುವ ಉದ್ಯೋಗವಲ್ಲವೆ ? ಕುಟುಂಬದೊಳಗೆ ಎಲ್ಲರೂ ಪ್ರತಿಯೊಬ್ಬನ ಅಭಿಪ್ರಾಯವನ್ನು ಹೊಂದಿಕೊಂಡೇ ಇರಬೇಕಾಗುವುದು. ಗೃಹಪತಿಯೂ ಇದಕ್ಕೆ ಅಪವಾದವಲ್ಲ. ಸ್ತ್ರೀತುಷ್ಟಿಯೂ ಪುರುಷ ಕರ್ತವ್ಯದಲ್ಲಿ ಸೇರಿದ ಮೇಲೆ ಸ್ತ್ರೀಯ ಸ್ವಾತಂತ್ರ್ಯವು ಬೇರೆ ಅದಾವುದು ? ದುರಾಗ್ರಹ.

ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ ೩

ಸ್ತ್ರೀಯನ್ನು ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ಮುಪ್ಪಿನಲ್ಲಿ

ಮಕ್ಕಳು ರಕ್ಷಿಸುತ್ತಾರೆ. ಆದುದರಿಂದ ಸ್ತ್ರೀಯು ಸ್ವಾತಂತ್ರ್ಯವಹಿಸುವ ಪ್ರಸಂಗ ವಿಲ್ಲ. ಎಲ್ಲ ಹೆಂಗಸರಿಗೂ ತಪ್ಪದೆ ರಕ್ಷಕರು ಸಿಗುವುದಿಲ್ಲ. ಆಗ ಯಥೋಚಿತ ವಾಗಿ ಗೃಹಭಾರವನ್ನು ಪುರುಷ ಮುಖವಾಗಿ ಸ್ತ್ರೀಯು ಹೊರಬೇಕಾಗುವುದು. ಕುಂತಿಯು ಗಂಡನನ್ನು ಕಳಕೊಂಡು ಮಕ್ಕಳನ್ನು ಸಾಕಿದಳು. ಕುಂತಿಯು ಪಾಂಡವರಿಗೆ ನಿರ್ದೇಶಕಳಾಗಿದ್ದಳು.

ಕಾಲೇಽದಾತಾ ಪಿತಾ ವಾಚ್ಯೋ ವಾಚ್ಯಶ್ಚಾನುಪಯನ್‌ಪತಿಃ ।
ಮೃತೇ ಭರ್ತರಿ ಪುತ್ರಸ್ತು ವಾಚ್ಯೋ ಮಾತುರರಕ್ಷಿತಾ ॥ ೪

ವಿವಾಹ ಕಾಲ ಬಂದೊಡನೆ ತಂದೆಯು ಮದುವೆ ಮಾಡಬೇಕು. ಗಂಡನು ಅವಳನ್ನು ಸಂತೋಷಪಡಿಸಬೇಕು. ಗಂಡ ಸತ್ತು ಮಕ್ಕಳು ಪ್ರಬುದ್ಧರಾಗಿ ರುವಾಗ ಸಾಕಬೇಕು. ಈ ಮೂವರೂ ಆ ಕಾಲದ ಲೋಪಕ್ಕೆ ಅಪರಾಧಿ ಗಳು. ಈ ಪ್ರಕರಣವು ಪುರುಷನಿಗೆ ಮನುವು ಕೊಡುವ ಸಲಹೆಯಾಗಿದೆ. ಸ್ತ್ರೀಯನ್ನು ಈ ರೀತಿ ನಡೆಸಿಕೊಂಡರೆ ಕ್ಷೇಮವು ಎಲ್ಲರಿಗೂ ಸೇರುವುದು. ನಿಂದೆಯು ಗುರಿಯಲ್ಲ.

ಸೂಕ್ಷ್ಮೇಭ್ಯೋಽಪಿ ಪ್ರಸಂಗೇಭ್ಯಃ ಸ್ತ್ರಿಯೋ ರಕ್ಷ್ಯಾ ವಿಶೇಷತಃ ।
ದ್ವಯೋರ್ಹಿ ಕುಲಯೋಃ ಶೋಕಮಾವಹೇಯುರರಕ್ಷಿತಾಃ ॥ ೫

ಸ್ತ್ರೀಯ ಮನಸ್ಸನ್ನು ತಿಳಿದು ಸಾಧ್ಯಾ ಸಾಧ್ಯತೆಯನ್ನು ವಿವರಿಸಿ ಯುಕ್ತಾಯುಕ್ತತೆಯನ್ನು ಅವಳು ತಿಳಿಯುವಂತೆ ಪುರುಷನು ಮಾಡಿದರೆ ಸ್ತ್ರೀಯು ಪ್ರಸನ್ನಳಾಗುವಳು. ಅತಿ ಚಿಕ್ಕ ಸಂದರ್ಭದಲ್ಲಿಯೂ ಅವಳ ರಕ್ಷಣೆಯು ಸುಗಮವಾಗುವುದು. ಅವಳು ದುಃಖಿಸಿದರೆ ಎರಡು ಕುಲವೂ ದುಃಖಿಪಡಬೇಕಾಗುವುದು.

ಇಮಂ ಹಿ ಸರ್ವವರ್ಣಾನಾಂ ಪಶ್ಯಂತೋ ಧರ್ಮಮುತ್ತಮಂ ।
ಯತಂತೇ ರಕ್ಷಿತುಂ ಭಾರ್ಯಾಂ ಭರ್ತಾರೋ ದುರ್ಬಲಾ ಅಪಿ ॥ ೬

ಹಿಂದೆ ಹೇಳಿದುದು ಪ್ರತಿ ಮನುಷ್ಯನಿಗೂ ಉತ್ತಮ ಧರ್ಮವು. ಅದರ ಅನುಸಾರ ದುರ್ಬಲ ಗಂಡಂದಿರು ಕೂಡ ಹೆಂಡತಿಯ ರಕ್ಷಣೆಯಲ್ಲಿ ಜಾಗರೂಕತೆ ವಹಿಸುತ್ತಾರೆ.

ಸ್ವಾಂ ಪ್ರಸೂತಿಂ ಚರಿತ್ರಂ ಚ ಕುಲಮಾತ್ಮಾನಮೇವ ಚ ।
ಸ್ವಂ ಚ ಧರ್ಮಂ ಪ್ರಯತ್ನೇನ ಜಾಯಾಂ ರಕ್ಷನ್ಹಿ ರಕ್ಷತಿ ॥ ೭

ಹೆಂಡತಿಯು ಸಂತುಷ್ಟಳಾಗಿದ್ದರೆ ತನ್ನ ಸಂತತಿ, ಶೀಲ, ಕುಲ, ಧರ್ಮ ಎಲ್ಲವೂ ರಕ್ಷಿಸಿದಂತಾಗುವುದು.

ಪತಿರ್ಭಾರ್ಯಾಂ ಸಂಪ್ರವಿಶ್ಯ ಗರ್ಭೋ ಭೂತ್ವೇಹ ಜಾಯತೇ ।
ಜಾಯಾಯಾಸ್ತದ್ಧಿ ಜಾಯಾತ್ವಂ ಯದಸ್ಯಾಂ ಜಾಯತೇ ಪುನಃ ॥ ೮

ಗಂಡನು ಹೆಂಡತಿಯ ಹೊಟ್ಟೆಯಲ್ಲಿ ಗರ್ಭವಾಗಿ ಜನಿಸುತ್ತಾನೆ. ಆದುದರಿಂದ ಜಾಯಾ=ಜನ್ಮಭೂಮಿ ಎಂದು ಹೇಳುತ್ತಾರೆ.

ಯಾದೃಶಂ ಭಜತೇ ಹಿ ಸ್ತ್ರೀ ಸುತಂ ಸೂತೇ ತಥಾವಿಧಂ ।
ತಸ್ಮಾತ್ಪ್ರಜಾವಿಶುದ್ಧ್ಯರ್ಥಂ ಸ್ತ್ರಿಯಂ ರಕ್ಷೇತ್ಪ್ರಯತ್ನತಃ ॥ ೯

ಸ್ತ್ರೀಯು ಮನಸ್ಸಿನಿಂದ ಎಂತಹ ಪುರುಷನನ್ನು ಭಜಿಸುವಳೋ ಅಂತಹ ಸಂತತಿಯು ಜನಿಸುವುದು. ಆದುದರಿಂದ ಪರಿಶುದ್ಧ ಸಂತಾನಕ್ಕಾಗಿ ಸ್ತ್ರೀಯು ಪ್ರಸನ್ನಚಿತ್ತಳಾಗಿ ಪತಿಪ್ರಿಯಳಾಗಬೇಕು.

ನ ಕಶ್ಚಿದ್ಯೋಷಿತಃ ಶಕ್ತಃ ಪ್ರಸಹ್ಯ ಪರಿರಕ್ಷಿತುಂ ।
ಏತೈರುಪಾಯಯೋಗೈಸ್ತು ಶಕ್ಯಾಸ್ತಾಃ ಪರಿರಕ್ಷಿತುಂ ॥ ೧೦

ಮನುಷ್ಯನು ಮನಸ್ಸಿನಿಂದ ಪ್ರವೃತ್ತಿಯುಳ್ಳವನು. ಶಾರೀರಿಕ ಕ್ರಿಯೆಯ ನಿಯಮನವು ಮನಸ್ಸಿನ ಪರಿವರ್ತನೆ ಮೂಲಕವೇ ಆಗಬಲ್ಲುದು. ದೇಹವನ್ನು ಬಲಾತ್ಕಾರದಿಂದ ಕಲ್ಲು ಕಟ್ಟಿಗೆಯಂತೆ ಬಂಧಿಸಿದರೆ ಫಲವಿಲ್ಲ. ಅನರ್ಥವು. ಆತ್ಮಹತ್ಯೆ, ಕೊರಗು ಉಂಟಾಗಬಹುದು. ಆದುದರಿಂದ ರಕ್ಷಣೋಪಾಯಗಳನ್ನು ತಿಳಿಸುತ್ತೇನೆ.

ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್ ।
ಶೌಚೇ ಧರ್ಮೇಽನ್ನಪಕ್ತ್ಯಾಂ ಚ ಪಾರಿಣಾಹ್ಯಸ್ಯ ವೇಕ್ಷಣೇ ॥ ೧೧

ಸ್ತ್ರೀಯರ ಅಧಿಕಾರ, ಉದ್ಯೋಗ ದಾಹವು ಮನುವಿಗೆ ತಿಳಿದಿದೆ. ಗಂಡನ ಉದ್ಯೋಗದಲ್ಲಿ ಸಂಪೂರ್ಣ ಸಹಕಾರವು ಸ್ತ್ರೀಯು ದ್ರವ್ಯಾರ್ಜನೆಯು.

ದೂರ ಸರಿದು ಹೊಸ ಉದ್ಯೋಗವನ್ನು ಸ್ತ್ರೀಯು ಆರಂಭಿಸಿದರೆ ಸಹ ಜೀವನಕ್ಕೆ ಧಕ್ಕೆ. ಮನುಷ್ಯ ಜೀವನದ ಕೆಲವಂಶವನ್ನು ಗಂಡನು ಮತ್ತೆ ಕೆಲವನ್ನು ಹೆಂಡತಿಯು ಪರಿಪೂರ್ಣಗೊಳಿಸಿದರೆ ಅದು ಸ್ತ್ರೀಯ ಉದ್ಯೋಗವು ಏಕೆ ಅಲ್ಲ. ಕುಟುಂಬದ ಖರ್ಚನ್ನು ದೇಹ, ಬಟ್ಟೆ, ಪಾತ್ರೆ, ಮನೆ, ಸೊತ್ತುಗಳ ಶುಚಿ, ಧರ್ಮ, ಶುಚಿರುಚಿ—ಆಹಾರ ಇವುಗಳನ್ನು ಯಥಾನುಕೂಲ ತಾನು ಅಥವಾ ಸೇವಕರ ಮೂಲಕ ಸಾಧಿಸಿಕೊಳ್ಳಬಹುದು. ಮನಸ್ಸಿಗೆ ಕೆಲಸವಿಲ್ಲದಿರಬಾರದು; ಇದು ಅವಳು ಮಾಡುವ ಒಳ್ಳೆ ಕೆಲಸ.

ಅರಕ್ಷಿತಾ ಗೃಹೇ ರುದ್ಧಾಃ ಪುರುಷೈರಾಪ್ತಕಾರಿಭಿಃ |
ಆತ್ಮಾನಮಾತ್ಮನಾ ಯಾಸ್ತು ರಕ್ಷೇಯುಸ್ತಾಃ ಸುರಕ್ಷಿತಾಃ || ೧೨

ಹಿತದಾಯಕರಾದ ಆಪ್ತಪುರುಷರು ಮನೆಯೊಳಗೆ ಬಂಧಿಸಿದರೂ ಸ್ತ್ರೀಯರ ರಕ್ಷಣೆಯಾಗಲಿಲ್ಲ. ಸ್ತ್ರೀಯರು ಸ್ವೇಚ್ಛೆಯಿಂದ ಸ್ವರಕ್ಷಣೆ ಮಾಡಿಕೊಳ್ಳುವ ಮನೋವೃತ್ತಿಯನ್ನು ಗಂಡನು ಹೆಂಗುಸಿಗೆ ಉಂಟುಮಾಡಬೇಕು. ಪಾತಿವ್ರತ್ಯ, ಪರಪುರುಷಾಕ್ರಮಣ, ಚಿತ್ತಚಾಂಚಲ್ಯಗಳಿಗೆ ವಶರಾಗಬಾರದು. ಇದೆಲ್ಲ ಉತ್ತಮ ಮನಃಶಾಸ್ತ್ರ ಸೂತ್ರಗಳ ಪರಿಣಾಮದ ಸಲಹೆಯಾಗಿದೆ. ವಿದ್ಯಾಭ್ಯಾಸ ಸಂದರ್ಭಕ್ಕೆ ಸರಿಯಾಗಿ ಪಾರಾಗುವ ಉಪಾಯ, ಭವಿಷ್ಯತ್ ಎಲ್ಲವನ್ನು ಸ್ತ್ರೀಯರಿಗೆ ತಿಳಿಸುವುದನ್ನು ಮನುವು ಸಮರ್ಥಿಸುತ್ತಾನೆ.

ಪಾನಂ ದುರ್ಜನಸಂಸರ್ಗಃ ಪತ್ಯಾ ಚ ವಿರಹೋಽಟನಂ |
ಸ್ವಪ್ನೋಽನ್ಯಗೇಹವಾಸಶ್ಚ ನಾರೀಸಂದೂಷಣಾನಿ ಷಟ್ || ೧೩

ಮದ್ಯಪಾನ, ದುಷ್ಟಸಹವಾಸ, ಪತಿವಿರಹ, ಅಲೆತ, ನಿದ್ದೆ, ಪರಗೃಹವಾಸ ಇವುಗಳು ಸ್ತ್ರೀ ಶೀಲವನ್ನು ಕೆಡಿಸುವ ಸುಲಭ ಮಾರ್ಗಗಳು.

ನೈತಾ ರೂಪಂ ಪರೀಕ್ಷಂತೇ ನಾಸಾಂ ವಯಸಿ ಸಂಸ್ಥಿತಿಃ |
ಸುರೂಪಂ ವಾ ವಿರೂಪಂ ವಾ ಪುಮಾನಿತ್ಯೇವ ಭುಂಜತೇ || ೧೪

ಸ್ತ್ರೀಯರ ಕಾಮುಕತನವು ಸೌಂದರ್ಯ, ವಯಸ್ಸು ಒಂದನ್ನೂ ಗಣಿಸುವುದಿಲ್ಲ. ಕುರೂಪಿಗೂ, ಮುದುಕನಿಗೂ, ಹುಡುಗನಿಗೂ ಒಲಿಯುತ್ತಾರೆ.

ಹೌಂಶ್ಚಲ್ಯಾಚ್ಚಲಚಿತ್ತಾಚ್ಚ ನೈಸ್ನೇಹ್ಯಾಚ್ಚ ಸ್ವಭಾವತಃ ।
ರಕ್ಷಿತಾ ಯತ್ನತೋಽಪೀಹ ಭರ್ತೃಷ್ವೇತಾ ವಿಕುರ್ವತೇ ॥ ೧೫

ಸ್ತ್ರೀಯರ ಮನಸ್ಸು ಪುರುಷಗತಿಯುಳ್ಳದ್ದು, ಚಂಚಲ, ಸ್ನೇಹಹೀನ. ಈ ಸ್ವಭಾವವು ಜನ್ಮಸಿದ್ಧವಾದುದರಿಂದ ಹೆಂಗಸರು ಮನೆಯೊಳಗಿದ್ದರೂ ಗಂಡನಲ್ಲಿ ವಿಕಾರಹೊಂದುತ್ತಾರೆ

ಏವಂ ಸ್ವಭಾವಂ ಜ್ಞಾತ್ವಾಸಾಂ ಪ್ರಜಾಪತಿನಿಸರ್ಗಜಂ ।
ಪರಮಂ ಯತ್ನಮಾತಿಷ್ಠೇತ್ಪುರುಷೋ ರಕ್ಷಣಂ ಪ್ರತಿ ॥ ೧೬

ಸ್ತ್ರೀಯರ ಈ ಸ್ವಭಾವವನ್ನು ತಿಳಿದುಕೊಂಡು ರಕ್ಷಣೆಯನ್ನು ಜತನದಿಂದ ಗಂಡಸು ಮಾಡಬೇಕು.

ಶಯ್ಯಾಸನಮಲಂಕಾರಂ ಕಾಮಂ ಕ್ರೋಧಮನಾರ್ಜವಂ ।
ದ್ರೋಹಭಾವಂ ಕುಚರ್ಯಾಂ ಚ ಸ್ತ್ರೀಭ್ಯೋ ಮನುರಕಲ್ಪಯತ್ ॥ ೧೭

ಮಲಗುವುದು, ಕುಳಿತುಕೊಳ್ಳುವುದು ಅಲಂಕಾರಗಳಲ್ಲಿ ಪ್ರೀತಿಯು, ಕಾಮ, ಕ್ರೋಧ, ಕಪಟ, ದ್ರೋಹ, ದುರ್ವರ್ತನೆ ಮನೋವಿಕಾರಗಳೂ ಸ್ತ್ರೀಯರಿಗೆ ಜನ್ಮಸಿದ್ಧಗಳು.

ನಾಸ್ತಿ ಸ್ತ್ರೀಣಾಂ ಕ್ರಿಯಾ ಮಂತ್ರೈರಿತಿ ಧರ್ಮೇ ವ್ಯವಸ್ಥಿತಿಃ ।
ನಿರಿಂದ್ರಿಯಾ ಹ್ಯಮಂತ್ರಾಶ್ಚ ಸ್ತ್ರಿಯೋಽನೃತಮಿತಿ ಸ್ಥಿತಿಃ ॥ ೧೮

ಸ್ತ್ರೀಯರಿಗೆ ಸಂಸ್ಕಾರವು ಮಂತ್ರಹೀನವಾಗಿರಬೇಕೆಂದು ಧರ್ಮ ನಿಯಮವು. ಧರ್ಮಪ್ರಮಾಣ ಜ್ಞಾನವೂ ಮಂತ್ರಜಪವೂ ಇಲ್ಲದ ಸ್ತ್ರೀಯರು ಪಾಪ ಪರಿಹಾರ ಉಳ್ಳವರಲ್ಲ.

ತಥಾ ಚ ಶ್ರುತಯೋ ಬಹ್ವ್ಯೋ ನಿಗೀತಾ ನಿಗಮೇಷ್ವಪಿ ।
ಸ್ವಾಲಕ್ಷಣ್ಯಪರೀಕ್ಷಾರ್ಥಂ ತಾಸಾಂ ಶೃಣುತ ನಿಷ್ಕೃತೀಃ ॥ ೧೯

ವೇದದೊಳಗಿನ ಮಂತ್ರಗಳು ಇಂತಹ ಅರ್ಥವುಳ್ಳವುಗಳು. ಅವರ ವಿಶೇಷ ಲಕ್ಷಣವಾದ ಪಾಪ ನಿವೃತ್ತಿಯ ಉಪಾಯವು. ಅವುಗಳಲ್ಲಿ ಕಾಣಬರುವುವು.

ಯನ್ಮೇ ಮಾತಾ ಪ್ರಲುಲುಭೇ ವಿಚರಂತ್ಯಪತಿವ್ರತಾ ।
ತನ್ಮೇ ರೇತಃ ಪಿತಾ ವೃಙ್ಕ್ತಾಮಿತ್ಯಸ್ಯೈತನ್ನಿದರ್ಶನಂ ॥ ೨೦

ನನ್ನ ತಾಯಿ ಅಪತಿವ್ರತೆಯಾಗಿ ಸಂಚರಿಸುತ್ತ ಪರರಿಗೆ ಆಸೆಪಟ್ಟು ದುಷ್ಟವಾದ ನನ್ನ ಶರೀರ ರೂಪವಾದ ಮಾತೃರೇತಸ್ಸನ್ನು ನನ್ನ ತಂದೆ ಶುದ್ಧೀಕರಿಸಲಿ ಎಂಬುದು ಸ್ತ್ರೀಯ ಚಂಚಲ ಬುದ್ಧಿಯನ್ನು ಸೂಚಿಸುವುದು.

ಧ್ಯಾಯತ್ಯನಿಷ್ಟಂ ಯತ್ಕಿಂಚಿತ್ಪಾಣಿಗ್ರಾಹಸ್ಯ ಚೇತಸಾ ।
ತಸ್ಯೈಷ ವ್ಯಭಿಚಾರಸ್ಯ ನಿಹ್ನವಃ ಸಮ್ಯಗುಚ್ಯತೇ ॥ ೨೧

ತನ್ನ ಧರ್ಮಪತಿಯ ಮೇಲೆ ಅನಿಷ್ಟ ಧ್ಯಾನರೂಪವಾದ ವ್ಯಭಿಚಾರದ ವಿಮೋಚನೆಯು ಈ ಮಂತ್ರದಿಂದ ಹೇಳಲ್ಪಡುವುದು.

ಯಾದೃಗ್ಗುಣೇನ ಭರ್ತ್ರಾ ಸ್ತ್ರೀ ಸಂಯುಜ್ಯೇತ ಯಥಾವಿಧಿ ।
ತಾದೃಗ್ಗುಣಾ ಸಾ ಭವತಿ ಸಮುದ್ರೇಣೇವ ನಿಮ್ನಗಾ ॥ ೨೨

ಸಮುದ್ರ ಸೇರಿದ ನದೀನೀರು ಉಪ್ಪಾದಂತೆ ಪತಿಯ ಸಮಾನ ಗುಣವು ಸ್ತ್ರೀಯಲ್ಲಿ ಒಡಮೂಡುವುದು. ಸಮರ್ಥ ಪುರುಷನು ಸ್ತ್ರೀಯನ್ನು ಸಮುದ್ರದಂತೆ ಒಲಿಸಿ ತನ್ನವಳನ್ನಾಗಿ ಮಾಡಿಕೊಳ್ಳುವನು. ತನ್ನ ಪ್ರಭಾವವನ್ನು ಬೀರುವನು.

ಅಕ್ಷಮಾಲಾ ವಸಿಷ್ಠೇನ ಸಂಯುಕ್ತಾಧಮಯೋನಿಜಾ ।
ಶಾರಂಗೀ ಮಂದಪಾಲೇನ ಜಗಾಮಾಭ್ಯರ್ಹಣೀಯತಾಂ ॥ ೨೩

ಅಕ್ಷಮಾಲೆಯು ವಸಿಷ್ಠನ ಸಂಬಂಧದಿಂದ, ಶಾರಂಗಿಯು ಮಂದಪಾಲನ ವಿವಾಹದಿಂದ, ಪೂಜ್ಯ ಗುಣವುಳ್ಳವರಾದರು. ಜನ್ಮದಿಂದ ಅವರು ಉತ್ತಮರಲ್ಲ.

ಏತಾಶ್ಚಾನ್ಯಾಶ್ಚ ಲೋಕೇಽಸ್ಮಿನ್ನಪಕೃಷ್ಟಪ್ರಸೂತಯಃ ।
ಉತ್ಕರ್ಷಂ ಯೋಷಿತಃ ಪ್ರಾಪ್ತಾಃ ಸ್ವೈಃ ಸ್ವೈರ್ಭರ್ತೃಗುಣೈಃ ಶುಭೈಃ ॥ ೨೪

ನಿಕೃಷ್ಟ ಜಾತಿಯ ಅನೇಕ ಸ್ತ್ರೀಯರು ಪತಿಗುಣಗಳ ಸಂಪತ್ತಿನಿಂದ ತಾವು ಉತ್ಕೃಷ್ಟ ಗುಣಗಳಿಂದ ಅಲಂಕೃತರಾದರು.

ಏಷೋದಿತಾ ಲೋಕಯಾತ್ರಾ ನಿತ್ಯಂ ಸ್ತ್ರೀಪುಂಸಯೋಃ ಶುಭಾ ।
ಪ್ರೇತ್ಯೇಹ ಚ ಸುಖೋದರ್ಕಾನ್ ಪ್ರಜಾಧರ್ಮಾನ್ನಿಬೋಧತ ॥ ೨೫

ಸ್ತ್ರೀ-ಪುರುಷರ ಸುಖಮಯ ಜೀವನಯಾತ್ರೆಯು ಈ ಪರ್ಯಂತ ವರ್ಣಿಸಲ್ಪಟ್ಟಿತು. ಜೀವನ ದಿಗ್ದರ್ಶನವನ್ನು ಈ ವಿವರವು ಮಾಡಬಲ್ಲುದು. ಇನ್ನು ಸಂತತಿಯು ಸುಖಾಂತವಾಗುವ ಧರ್ಮಗಳನ್ನು ಹೇಳುತ್ತೇನೆ.

ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ ।
ಸ್ತ್ರಿಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ ॥ ೨೬

ಮನೆಯೊಳಗೆ ಒಂದು ಉರಿಯುವ ದೀಪವು ಭಾಗ್ಯಲಕ್ಷ್ಮಿಯ ಲಕ್ಷಣವು. ಅದರಂತೆ ಸ್ತ್ರೀಯು ಪೂಜಾರ್ಹವಾದ ಮನೆಯ ಒಂದು ಸೊತ್ತು. ಸಂತತಿಯು ಅದರ ಮಹಾಫಲ. ಗರ್ಭಧಾರಣೆಯನ್ನು ಬೇರಾರೂ ಮಾಡಲಾರರು. ಆದುದರಿಂದ ಪ್ರಜಾಂಕುರವು ಪ್ರಿಯವಾದಷ್ಟು ಸ್ತ್ರೀಯೂ ಗೌರವಾರ್ಹಳು.

ಉತ್ಪಾದನಮಪತ್ಯಸ್ಯ ಜಾತಸ್ಯ ಪರಿಪಾಲನಂ ।
ಪ್ರತ್ಯಹಂ ಲೋಕಯಾತ್ರಾಯಾಃ ಪ್ರತ್ಯಕ್ಷಂ ಸ್ತ್ರೀನಿಬಂಧನಂ ॥ ೨೭

ಲೋಕಯಾತ್ರೆಯ ಮುಖ್ಯಭಾಗಗಳಾದ ಅಪತ್ಯೋತ್ಪತ್ತಿ ಪಾಲನೆಗಳು ಸ್ತ್ರೀಯ ಅಧೀನವಾಗಿರುವುದು ಪ್ರತ್ಯಕ್ಷವು.

ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ ।
ದಾರಾಧೀನಸ್ತಥಾ ಸ್ವರ್ಗಃ ಪಿತೄಣಾಮಾತ್ಮನಶ್ಚ ಹ ॥ ೨೮

ಸಂತತಿ, ಧರ್ಮಕಾರ್ಯ (ಪಂಚಯಜ್ಞ) ದೇಹೋಪಚಾರ, ಉತ್ತಮ ರತಿ ತನಗೆ ಮತ್ತು ಪಿತೃಗಳಿಗೆ ಸ್ವರ್ಗಪ್ರಾಪ್ತಿ, ಎಲ್ಲವೂ ಹೆಂಡತಿಯಿಂದ ಲಭಿಸುವವುಗಳು.

ಪತಿಂ ಯಾ ನಾಭಿಚರತಿ ಮನೋವಾಗ್ದೇಹಸಂಯುತಾ ।
ಸಾ ಭರ್ತೃಲೋಕಮಾಪ್ನೋತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ॥ ೨೯

ಯಾವಳು ಮನಸ್ಸು, ವಚನ, ದೇಹಗಳಿಂದ ಪತಿಯನ್ನು ಅತಿಕ್ರಮಿಸುವುದಿಲ್ಲವೊ ಅವಳು ಸಾಧ್ವೀಶಿರೋಮಣಿಯು ಮರಣಾನಂತರವೂ ಪತಿಯ ಜೆನ್ನು ಬಿಡುವವಳಲ್ಲ.

ವ್ಯಭಿಚಾರಾತ್ತು ಭರ್ತುಃ ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಂ ।
ಶೃಗಾಲಯೋನಿಂ ಚ ಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥ ೩೦

ಒಬ್ಬನನ್ನಲ್ಲದೆ ಅನೇಕರನ್ನು ಪ್ರೀತಿಸುವುದರಿಂದ ಸ್ತ್ರೀಯು ನಿಂದ್ಯಳಾಗುವಳು. ಕಾಲಾಂತರದಲ್ಲಿ ಭಯಂಕರ ರೋಗಕ್ಕೆ ತುತ್ತಾಗುವಳು. ನರಿಯಾಗಿಯೂ ಹುಟ್ಟುವಳು.

ಪುತ್ರಂ ಪ್ರತ್ಯುದಿತಂ ಸದ್ಭಿಃ ಪೂರ್ವಜೈಶ್ಚ ಮಹರ್ಷಿಭಿಃ ।
ವಿಶ್ವಜನ್ಯಮಿಮಂ ಪುಣ್ಯಮುಪನ್ಯಾಸಂ ನಿಬೋಧತ ॥ ೩೧

ಸಜ್ಜನರು, ಮಹರ್ಷಿಗಳು, ಪೂರ್ವಜರು ಇವರಿಂದ ಸಂತತಿಯ ಕುರಿತಾಗಿ ಮಾಡಲ್ಪಟ್ಟ ಉಪನ್ಯಾಸವನ್ನು ಕೇಳಿರಿ. ಅದು ದೇಶದ ಎಲ್ಲ ಜನರಿಗೂ ಪುಣ್ಯಕರವಾದುದು. ಹಿತೋಪದೇಶವಾಗಿರುವುದು.

ಭರ್ತುಃ ಪುತ್ರಂ ವಿಜಾನಂತಿ ಶ್ರುತಿದ್ವೈಧಂ ತು ಭರ್ತರಿ ।
ಆಹುರುತ್ಪಾದಕಂ ಕೇಚಿದಪರೇ ಕ್ಷೇತ್ರಿಣಂ ವಿದುಃ ॥ ೩೨

ಪ್ರಜೆಯು ಸಾಕಿದವನ ಸೊತ್ತು. ಸಾಕುವವನು ಎರಡು ತರ. ಪುತ್ರನ ತಾಯಿಗೆ ಗಂಡನಾಗಿ, ಉತ್ಪಾದಕನಾಗಿ ಸಾಕುವವನು, ಒಬ್ಬನು. ತಾಯಿಯನ್ನು ಮದುವೆಯಾಗದೆ ಮಗನಿಗೆ ಜನಕನಾಗಿ ಪುತ್ರವಂತನು, ಮದುವೆಯಾದ ತಾಯಿಯ ಮಗುವಿನಿಂದ ಪುತ್ರವಂತನು ಜನಕನು ಬೇರಾರಾದರೂ ಇರಬಹುದು. ಔರಸ, ಕ್ಷೇತ್ರಜ ಎಂದು ದ್ವಿವಿಧ ಸಂತತಿ. ತಾನು ಔರಸನ ಜನಕನಾದರೂ ಗರ್ಭಿಣಿಯ ವಿವಾಹವು ಬೇರೊಬ್ಬನೊಡನಾದರೆ ಬಹಿರಂಗದಲ್ಲಿ ವಿವಾಹಿತನ ಕ್ಷೇತ್ರಜ ಅಥವಾ ಸಹೋಢಜ ಪುತ್ರನು.

ಕ್ಷೇತ್ರಭೂತಾ ಸ್ಮೃತಾ ನಾರೀ ಬೀಜಭೂತಃ ಸ್ಮೃತಃ ಪುಮಾನ್ ।
ಕ್ಷೇತ್ರಬೀಜಸಮಾಯೋಗಾತ್ಸಂಭವಃ ಸರ್ವದೇಹಿನಾಂ ॥ ೩೩

ಹೆಣ್ಣು ಬೆಳೆಯುವ ನೆಲದಂತೆ. ಗಂಡು ಬೀಜದಂತೆ. ಬೀಜವು ಕ್ಷೇತ್ರ ಸಂಬಂಧಹೊಂದಿಯೇ ಸಂತತಿಯಾಗುವುದು ಆದುದರಿಂದ ಬೀಜಸ್ವಾಮಿಯು ಫಲಸ್ವಾಮಿಯೋ ಅಲ್ಲ ಕ್ಷೇತ್ರ ಸ್ವಾಮಿಯೋ ಎಂಬ ವಿವಾದವು ಸಾಧುವಾಗಿದೆ.

ವಿಶಿಷ್ಟಂ ಕುತ್ರಚಿದ್ಬೀಜಂ ಸ್ತ್ರೀಯೋನಿಸ್ತ್ವೇವ ಕುತ್ರಚಿತ್ ।
ಉಭಯಂ ತು ಸಮಂ ಯತ್ರ ಸಾ ಪ್ರಸೂತಿಃ ಪ್ರಶಸ್ಯತೇ ॥ ೩೪

ಒಮ್ಮೆ ಬೀಜವು ಬಲಿಷ್ಠವಾದುದೂ ಇದೆ. ವಿಭಾಂಡಕನಿಂದ ಮೃಗ ಗರ್ಭದಲ್ಲಿ ಜನಿಸಿದ ಋಷ್ಯಶೃಂಗನು ಮನುಷ್ಯನು. ವಿಭಾಂಡಕ ಪುತ್ರನು. ಕೆಲವೊಮ್ಮೆ ಕ್ಷೇತ್ರಬಲವೂ ವಿಶೇಷವಾಗುವುದು. ಧೃತರಾಷ್ಟ್ರಾದಿಯು ಬ್ರಾಹ್ಮಣ ಬೀಜವಾದರೂ ಕ್ಷತ್ರಿಯರು. ಬಹುಶಃ ಉದ್ದೇಶವೇ ಪ್ರಬಲವು. ಸ್ತ್ರೀ-ಪುರುಷರು ಸಮಪ್ರಧಾನರಾದರೆ ಆ ಸಂತತಿಯು ಪ್ರಶಸ್ತವು.

ಬೀಜಸ್ಯ ಚೈವ ಯೋನ್ಯಾಶ್ಚ ಬೀಜಮುತ್ಕೃಷ್ಟಮುಚ್ಯತೇ ।
ಸರ್ವಭೂತಪ್ರಸೂತಿರ್ಹಿ ಬೀಜಲಕ್ಷಣಲಕ್ಷಿತಾ ॥ ೩೫

ಬೀಜಕ್ಷೇತ್ರಗಳನ್ನು ನೋಡಿದರೆ ಬೀಜವೇ ಉತ್ಕೃಷ್ಟವೆಂದು ತೋರುವುದು. ಯಾಕೆಂದರೆ ಬೆಳೆಯಲ್ಲಿ ಬೀಜಲಕ್ಷಣವೇ ಪ್ರಧಾನ.

ಯಾದೃಶಂ ತೂಪ್ಯತೇ ಬೀಜಂ ಕ್ಷೇತ್ರೇ ಕಾಲೋಪಪಾದಿತೇ ।
ತಾದೃಗ್ರೋಹತಿ ತತ್ತಸ್ಮಿನ್ಬೀಜಂ ಸ್ವೈರ್ವ್ಯಂಜಿತಂ ಗುಣೈಃ ॥ ೩೬

ಉಚಿತ ಕಾಲದಲ್ಲಿ ಸಿದ್ಧಗೊಳಿಸಿದ ಕ್ಷೇತ್ರದಲ್ಲಿ ಯಾವುದೇ ಬೀಜವನ್ನು ಬಿತ್ತಲಿ, ಆ ಬೀಜಗುಣಗಳ ವೈಲಕ್ಷಣ್ಯಗಳನ್ನೊಳಗೊಂಡ ಸಸಿಯೇ ಹುಟ್ಟಿ ಬರುವದು.

ಇಯಂ ಭೂಮಿರ್ಹಿ ಭೂತಾನಾಂ ಶಾಶ್ವತೀ ಯೋನಿರುಚ್ಯತೇ ।
ನ ಚ ಯೋನಿಗುಣಾನ್ ಕಾಂಶ್ಚಿದ್ ಬೀಜಂ ಪುಷ್ಯತಿ ಪುಷ್ಟಿಷು ॥ ೩೭

ಈ ಭೂಮಿಯು ಸಕಲಪ್ರಾಣಿಗಳಿಗೂ ಕಾರಣವು. ಬೀಜ ಪುಷ್ಟಿಯು ಭೂಗುಣವನ್ನು ಅವಲಂಬಿಸಿಲ್ಲ. ಉದಾಹರಣೆ ಮುಂದಿದೆ.

ಭೂಮಾವಪ್ಯೇಕಕೇದಾರೇ ಕಾಲೋಪ್ತಾನಿ ಕೃಷೀವಲೈಃ ।
ನಾನಾರೂಪಾಣಿ ಜಾಯಂತೇ ಬೀಜಾನೀಹ ಸ್ವಭಾವತಃ ॥ ೩೮

ಒಂದೇ ಗದ್ದೆಯಲ್ಲಿ ಒಂದೇ ಕಾಲದಲ್ಲಿ ಬಿತ್ತಿದ ನಾನಾ ರೂಪದ ಬೀಜಗಳು ಬೇರೆ ಬೇರೆ ತರದ ಗಿಡಗಳು ಕಾಳುಗಳು ಆಗುತ್ತವೆ.

ವ್ರೀಹಯಃ ಶಾಲಯೋ ಮುದ್ಗಾಸ್ತಿಲಾ ಮಾಷಾಸ್ತಥಾ ಯವಾಃ ।
ಯಥಾಬೀಜಂ ಪ್ರರೋಹಂತಿ ಲಶುನಾನೀಕ್ಷವಸ್ತಥಾ ॥ ೩೯

ಭತ್ತ, ಹೆಸರು, ಎಳ್ಳು, ಉದ್ದು, ಯವ, ಬೆಳ್ಳುಳ್ಳಿ ಕಬ್ಬು ಇವುಗಳನ್ನು ನೆಟ್ಟರೆ ಒಂದೇ ಗದ್ದೆಯಾದರೂ ಗಿಡವೂ ಬೇರೆ. ಫಲವೂ ಬೇರೆ. ಕ್ಷೇತ್ರ ಪ್ರಾಧಾನ್ಯವಿದ್ದರೆ ಒಂದೇ ಆಗಬೇಕಿತ್ತು.

ಅನ್ಯದುಪ್ತಂ ಜಾತಮನ್ಯದಿತ್ಯೇತನ್ನೋಪಪದ್ಯತೇ ।
ಉಪ್ಯತೇ ಯದ್ಧಿ ಯದ್ಬೀಜಂ ತತ್ತದೇವ ಪ್ರರೋಹತಿ ॥ ೪೦

ಒಂದು ಬಿತ್ತಿದರೆ ಮತ್ತೊಂದು ಬೆಳೆಯುವುದಿಲ್ಲ. ಬಿತ್ತಿದ ಬೀಜವೇ ಅದರ ಬೆಳೆಕೊಡುವುದು. ಯವಾಃ ಪ್ರಕೀರ್ಣಾನಭವಂತಿ ಶಾಲಯಃ

ತತ್ಪ್ರಾಜ್ಞೇನ ವಿನೀತೇನ ಜ್ಞಾನವಿಜ್ಞಾನವೇದಿನಾ ।
ಆಯುಷ್ಕಾಮೇನ ವಪ್ತವ್ಯಂ ನ ಜಾತು ಪರಯೋಷಿತಿ ॥ ೪೧

ಆದುದರಿಂದ ತನ್ನ ಸೊತ್ತು ಅನ್ಯಹಸ್ತಗತವಾಗುವ ಕಾರಣ ಪರ ಸ್ತ್ರೀಯಲ್ಲಿ ಪ್ರಜಾಜನನ ಮಾಡಬಾರದು. ಅಂತಹ ಕಾರ್ಯವು ಪ್ರಜ್ಞೆ, ವಿನಯ, ವೇದಲೋಕ, ಜ್ಞಾನಗಳಿಗೆ ಯೋಗ್ಯವಲ್ಲ. ಆಯುರ್ನಾಶಕವೂ ಹೌದು. ಕುಪಿತ ಪತಿಯಿಂದ ಪ್ರಾಣಾಪಾಯ.

ಅತ್ರಗಾಥಾ ವಾಯುಗೀತಾಃ ಕೀರ್ತಯಂತಿ ಪುರಾವಿದಃ ।
ಯಥಾ ಬೀಜಂ ನ ವಪ್ತವ್ಯಂ ಪುಂಸಾ ಪರಪರಿಗ್ರಹೇ ॥ ೪೨

ಈ ವಿಷಯದಲ್ಲಿ ಪೂರ್ವಪರಿಜ್ಞಾನವುಳ್ಳವರು ಹೇಳುವ ವಾಯು ಗೀತ ಗಳನ್ನು ಪರಾಮರ್ಶಿಸಬಹುದು.

ನಶ್ಯತೀಷುರ್ಯಥಾ ವಿದ್ಧಃ ಖೇ ವಿದ್ಧಮನುವಿಧ್ಯತಃ ।
ತಥಾ ನಶ್ಯತಿ ವೈ ಕ್ಷಿಪ್ರಂ ಬೀಜಂ ಪರಪರಿಗ್ರಹೇ ॥ ೪೩

ಒಂದು ಬಾಣತಾಗಿದ ಮೃಗಕ್ಕೆ ಇನ್ನೊಬ್ಬನು ಹೊಡೆದ ಬಾಣವು ವೃಥಾ ಆಗುವುದು. ಮೃಗವು ಸಿಗಲಾರದು. ಆದರಂತೆ ಇನ್ನೊಬ್ಬನ ಹೆಂಡತಿಯು ಗರ್ಭಧರಿಸಿದರೆ ಪ್ರಜೆಯು ತನ್ನದಾಗದು.

ಪೃಥೋರಪೀಮಾಂ ಪೃಥಿವೀಂ ಭಾರ್ಯಾಂ ಪೂರ್ವವಿದೋ ವಿದುಃ ।
ಸ್ಥಾಣುಚ್ಛೇದಸ್ಯ ಕೇದಾರಮಾಹುಃ ಶಲ್ಯವತೋ ಮೃಗಂ ॥ ೪೪

ಈ ಭೂಮಿಯು ಮೊದಲು ಪೃಥುರಾಜನಿಂದ ಆಳಲ್ಪಟ್ಟಿದೆ. ಪೃಥುವಿನ ಹೆಂಡತಿಯೆಂದೇ ಭೂಮಿಯನ್ನು ಹೇಳುವರು. ಮುಳ್ಳುಗಿಡ ಕಡಿದವನು ಹೊಲದ ಹಕ್ಕುದಾರನು. ಬಾಣ ಹೊಡೆದವನಿಗೆ ಮೃಗದ ಹಕ್ಕು. ಇದರಂತೆ ವಿವಾಹವಾದವನು ಹೆಣ್ಣಿಗೆ ಹಕ್ಕುದಾರನು. ಅಕ್ರಮಸಂಬಂಧವು ಸ್ವತ್ವವನ್ನು ಉಂಟು ಮಾಡುವುದಿಲ್ಲ.

ಏತಾವಾನೇವ ಪುರುಷೋ ಯಜ್ಜಾಯಾತ್ಮಾ ಪ್ರಜೇತಿ ಹ ।
ವಿಪ್ರಾಃ ಪ್ರಾಹುಸ್ತಥಾ ಚೈತದ್ಯೋ ಭರ್ತಾ ಸಾ ಸ್ಮೃತಾಂಗನಾ ॥ ೪೫

ಗಂಡು, ಹೆಣ್ಣು, ಸಂತತಿ ಮೂರು ಕೂಡಿ ಒಂದು ಜನ ಎಂದು ಪರಿಗಣಿತವಾಗುವುದು. ಇಲ್ಲವಾದರೆ ಅಪೂರ್ಣ ಗಂಡ, ಹೆಂಡತಿ, ಮಕ್ಕಳು ಒಂದು ಸಮಷ್ಟಿ. ಸಂಸಾರವು ಈ ರೂಪದಿಂದ ನಿರಂತರವಾಗಿ ಪ್ರಗತಿಯುಳ್ಳದ್ದು. ಸೃಷ್ಟಿಯು ಒಂದರಿಂದ ಈಡೇರುವುದಿಲ್ಲ. ಗಂಡು ಅರ್ಧ ಹೆಂಡತಿ ಮಕ್ಕಳು ಅರ್ಧ ಎರಡೂ ಆದರೆ ಪೂರ್ಣತೆಯು. ಅನುಭವವೂ ಪರಿಪೂರ್ಣ ಆಗುವುದೂ ಆಗಲೇ. ಹೆಂಡತಿಯಿದ್ದರೆ ಗಂಡು ಗಂಡನು, ಗಂಡಿನ ಸಂಬಂಧದಿಂದಲೇ ಹೆಣ್ಣು ಹೆಂಡತಿಯು. ಗಂಡ-ಹೆಂಡಿರ ಅಂಗಾಂಗಿ ಭಾವದಿಂದ ಪರಕ್ಷೇತ್ರದ ಸಂತತಿಯಲ್ಲಿ ಸ್ವಾಮಿತ್ವವು ಉತ್ಪಾದಕನಿಗೆ ಬರುವುದಿಲ್ಲ.

ನ ನಿಷ್ಕ್ರಯವಿಸರ್ಗಾಭ್ಯಾಂ ಭರ್ತುರ್ಭಾರ್ಯಾ ವಿಮುಚ್ಯತೇ ।
ಏವಂ ಧರ್ಮಂ ವಿಜಾನೀಮಃ ಪ್ರಾಕ್ಪ್ರಜಾಪತಿನಿರ್ಮಿತಂ ॥ ೪೬

ಗಂಡನು ಮಾರಾಟ ಮಾಡಿ ಬೇಡವೆಂದು ಬಿಟ್ಟು ಹೆಂಡತಿಯಲ್ಲವೆಂದು ವಿಮೋಚನೆಯಿರುವುದಿಲ್ಲ. ಅದರಂತೆ ಕ್ರಯಕ್ಕೆ ಹೆಂಡತಿಯನ್ನು ಪಡೆಯಲೂ ಆಗುವುದಿಲ್ಲ. ವಿವಾಹ ಸಂಸ್ಕಾರವು ಧೃಢವೆಂದು ಬ್ರಹ್ಮಸೃಷ್ಟಿಯ ಧರ್ಮವು. ವಿವಾಹವಿಚ್ಛೇದವು ಮೃಗಜೀವನ.

ಸಕೃದಂಶೋ ನಿಪತತಿ ಸಕೃತ್ಕನ್ಯಾ ಪ್ರದೀಯತೇ ।
ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸತಾಂ ಸಕೃತ್ ॥ ೪೭

ಒಂದು ವಸ್ತುವಿನ ವ್ಯಾವಹಾರಿಕ ದಾನವು ಒಮ್ಮೆಯೇ. ಪುನಃ ತೆಕ್ಕೊಂಡು ಮತ್ತೊಬ್ಬನಿಗೆ ಕೊಡುವುದೆಂಬುದಿಲ್ಲ. ಪಿತೃಧನದ ದಾನವು ಅದರಂತೆ ಮಕ್ಕಳಿಗೆ ಒಮ್ಮೆ. ಕನ್ಯಾದಾನವೂ ಒಮ್ಮೆಯೇ ಆದುದರಿಂದ ಒಬ್ಬನ ಹೆಂಡತಿಯಾದ ಮೇಲೆ ಅದರ ಪರಿವರ್ತನೆಯು ಸಜ್ಜನ ಸಮ್ಮತವಲ್ಲ.

ಯಥಾ ಗೋಽಶ್ವೋಷ್ಟ್ರದಾಸೀಷು ಮಹಿಷ್ಯಜಾವಿಕಾಸು ಚ ।
ನೋತ್ಪಾದಕಃ ಪ್ರಜಾಭಾಗೀ ತಥೈವಾನ್ಯಾಂಗನಾಸ್ವಪಿ ॥ ೪೮

ಗೋವು, ಒಂಟೆ, ಎಮ್ಮೆ, ಆಡು, ಕುರಿಗಳಲ್ಲಿ ಹುಟ್ಟಿದ ಸಂತತಿಯು ಸ್ತ್ರೀ ಗೋಸ್ವಾಮಿಗೆ ಸೇರುವುದು. ಗಂಡುಪಶುವಿನ ಸ್ವಾಮಿಗೆ ಸಿಗುವುದಿಲ್ಲ. ಅದರಂತೆ ಹೆಂಗುಸರಲ್ಲಿ ಅದೇ ನ್ಯಾಯವು

ಯೇಽಕ್ಷೇತ್ರಿಣೋ ಬೀಜವಂತಃ ಪರಕ್ಷೇತ್ರಪ್ರವಾಪಿಣಃ ।
ತೇ ವೈ ಸಸ್ಯಸ್ಯ ಜಾತಸ್ಯ ನ ಲಭಂತೇ ಫಲಂ ಕ್ವಚಿತ್ ॥ ೪೯

ಧಾನ್ಯವನ್ನು ಯಾರ ಹೊಲದಲ್ಲಿ ಬೆಳೆಸುವರೋ ಅವರಿಗೆ ಬೆಳೆಯು. ಬೀಜವು ಯಾರದಾದರೂ ಅವರಿಗೆ ಬೆಳೆಯಿಲ್ಲ.

ಯದನ್ಯಗೋಷು ವೃಷಭೋ ವತ್ಸಾನಾಂ ಜನಯೇಚ್ಛತಂ ।
ಗೋಮಿನಾಮೇವ ತೇ ವತ್ಸಾ ಮೋಘಂ ಸ್ಕಂದಿತಮಾರ್ಷಭಂ ॥ ೫೦

ಬೀಜದ ಎತ್ತು ಎಷ್ಟೋ ಹಸುಗಳಿಗೆ ಜೋಡಿಯಾಗಿ ಕರುವಿಳಿಸಬಹುದು. ಆ ಕರು ಹಸುವಿನ ಮಾಲಕನಿಗಲ್ಲದೆ ಎತ್ತಿನ ಮಾಲಕನಿಗೆ ಸಿಗುವುದಿಲ್ಲ. ವೀರ್ಯಪಾತವು ನಿಷ್ಫಲ.

ತಥೈವಾಕ್ಷೇತ್ರಿಣೋ ಬೀಜಂ ಪರಕ್ಷೇತ್ರಪ್ರವಾಪಿಣಃ ।
ಕುರ್ವಂತಿ ಕ್ಷೇತ್ರಿಣಾಮರ್ಥಂ ನ ಬೀಜೀ ಲಭತೇ ಫಲಂ ॥ ೫೧

ಬೀಜವಿದ್ದರೂ ಹೊಲವಿಲ್ಲದೆ ಬೆಳೆಯಾಗುವುದಿಲ್ಲ. ಬೀಜವಿದೆಯೆಂದು

ಬೇರೆಯವರ ಹೊಲದಲ್ಲಿ ಬಿತ್ತಿದರೆ ಬೆಳೆ ಕೊಯ್ಯಲು ಸಾಧ್ಯವಿಲ್ಲದಿರುವಂತೆ ಪರಸ್ತ್ರೀಯಲ್ಲಿ ಗರ್ಭವಾದರೆ ಸಂತತಿಯು ತನಗಿಲ್ಲ.

ಫಲಂ ತ್ವನಭಿಸಂಧಾಯ ಕ್ಷೇತ್ರಿಣಾಂ ಬೀಜಿನಾಂ ತಥಾ ।
ಪ್ರತ್ಯಕ್ಷಂ ಕ್ಷೇತ್ರಿಣಾಮರ್ಥೋ ಬೀಜಾದ್ಯೋನಿರ್ಗರೀಯಸೀ ॥ ೫೨

ಇವಳಲ್ಲಿ ಹುಟ್ಟಿದ ಸಂತತಿಯು ನನಗೂ ನಿನಗೂ ಮಗುವು ಎಂಬ ಒಡಂಬಡಿಕೆಯಿಂದ ಮಾತ್ರ ಬೇರೆಯವನ ಹೆಂಡತಿಯು ಹೆತ್ತ ಮಗು ತನಗಾಗುವುದರಿಂದ ಕ್ಷೇತ್ರ ಪ್ರಾಧಾನ್ಯವು ಪ್ರತ್ಯಕ್ಷವು.

ಕ್ರಿಯಾಭ್ಯುಪಗಮಾತ್ತ್ವೇತದ್ಬೀಜಾರ್ಥಂ ಯತ್ಪ್ರದೀಯತೇ ।
ತಸ್ಯೇಹ ಭಾಗಿನೌ ದೃಷ್ಟೌ ಬೀಜೀ ಕ್ಷೇತ್ರಿಕ ಏವ ಚ ॥ ೫೩

ಹೊಲವನ್ನು ಬೆಳೆಯ ಒಡಂಬಡಿಕೆಯಿಂದ ಬಿತ್ತುವವನಿಗೆ ಕೊಟ್ಟಾಗ ಬೆಳೆಯು ಇಬ್ಬರಿಗೂ ಸೇರುವುದರಿಂದ ಬೀಜಸ್ವಾಮಿಯು ಬೀಜದ ಹಕ್ಕಿನಿಂದ ಬೆಳೆಯನ್ನು ಪಡೆಯದಿರುವುದು ಸ್ಪಷ್ಟ.

ಓಘವಾತಾಹೃತಂ ಬೀಜಂ ಯಸ್ಯ ಕ್ಷೇತ್ರೇ ಪುರೋಹತಿ ।
ಕ್ಷೇತ್ರಿಕಸ್ಯೈವ ತದ್ಬೀಜಂ ನ ವಪ್ತಾ ಲಭತೇ ಫಲಂ ॥ ೫೪

ಗಾಳಿಗೆ ಹಾರಿಬಂದ, ಹೊಳೆಯಲ್ಲಿ ತೇಲಿಬಂದ ಬೀಜವು ಯಾರ ಗದ್ದೆಯಲ್ಲಿ ಬೆಳೆಯುವುದೋ ಆ ಗದ್ದೆಯವನಿಗೆ ಬೆಳೆಯ ಹಕ್ಕುಬರುವುದು. ಬೀಜವು ಯಾರದೋ ಅವನಿಗಿಲ್ಲ.

ಏಷ ಧರ್ಮೋ ಗವಾಶ್ವಸ್ಯ ದಾಸ್ಯುಷ್ಟ್ರಾಜಾವಿಕಸ್ಯ ಚ ।
ವಿಹಂಗಮಹಿಷೀಣಾಂ ಚ ವಿಜ್ಞೇಯಃ ಪ್ರಸವಂ ಪ್ರತಿ ॥ ೫೫

ಗೋ, ಅಶ್ವ, ಒಂಟೆ, ಆಡು, ಕುರಿ, ಹಕ್ಕಿ, ಎಮ್ಮೆಗಳಲ್ಲಿ ಸಂತತಿಯು ಸ್ತ್ರೀಯನ್ನು ಅನುಸರಿಸುವುದು ಧರ್ಮವು. ಗುಣಕ್ಕೆ ಬೀಜವು ಪ್ರಬಲ. ಸಂತತಿ ಫಲಗಳಿಗೆ ಕ್ಷೇತ್ರವು ನಿಯಾಮಕವೆಂದು ವಿವೇಚನೆಯಾಗುವುದು.

ಏತದ್ವಃ ಸಾರಫಲ್ಗುತ್ವಂ ಬೀಜಯೋನ್ಯೋಃ ಪ್ರಕೀರ್ತಿತಂ ।
ಅತಃ ಪರಂ ಪ್ರವಕ್ಷ್ಯಾಮಿ ಯೋಷಿತಾಂ ಧರ್ಮಮಾಪದಿ ॥ ೫೬

ಈ ವರೆಗೆ ಕ್ಷೇತ್ರ ಬೀಜಗಪ್ರಾಧಾನ್ಯದ ಕುರಿತು ಸಾಧಕ-ಬಾಧಕಗಳನ್ನು ತಿಳಿಸಿದುದಾಯಿತು. ಸ್ತ್ರೀಯರ ಆಪದ್ಧರ್ಮವನ್ನು ಇನ್ನು ಹೇಳುತ್ತೇನೆ.

ಭ್ರಾತುರ್ಜ್ಯೇಷ್ಠಸ್ಯ ಭಾರ್ಯಾ ಯಾ ಗುರುಪತ್ನ್ಯನುಜಸ್ಯ ಸಾ ।
ಯವೀಯಸಸ್ತು ಯಾ ಭಾರ್ಯಾ ಸ್ನುಷಾ ಜ್ಯೇಷ್ಠಸ್ಯ ಸಾ ಸ್ಮೃತಾ ॥ ೫೭

ಅಣ್ಣನ ಹೆಂಡತಿಯು ತಮ್ಮನಿಗೆ ಗುರುಪತ್ನೀ ಸಮಾನಳು. ತಮ್ಮನ ಹೆಂಡತಿಯು ಅಣ್ಣನಿಗೆ ಸೊಸೆ-ಮಗನ ಹೆಂಡತಿಯಂತೆ. ಆದುದರಿಂದ ಈ ರೀತಿಯಲ್ಲಿ ಅವರವರು ಅಗಲಿದಾಗ ಉಳಿದವರು ಸಂರಕ್ಷಣೆ ಮಾಡಬೇಕು.

ಜ್ಯೇಷ್ಠೋ ಯವೀಯಸೋ ಭಾರ್ಯಾಂ ಯವೀಯಾನ್ವಾಗ್ರಜಸ್ತ್ರಿಯಂ ।
ಪತಿತೌ ಭವತೋ ಗತ್ವಾ ನಿಯುಕ್ತಾವಪ್ಯನಾಪದಿ ॥ ೫೮

ಸೋದರರು ಸೋದರರ ಪತ್ನಿಯರ ಅಂಗಸಂಗವನ್ನು ಮಾಡಿದರೆ ಧರ್ಮಪತಿತರಾಗುವರು. ಸಂತಾನಕ್ಕಾಗಿ ವಿನಾಯತಿಯಿದೆ.

ದೇವರಾದ್ವಾ ಸಪಿಂಡಾದ್ವಾ ಸ್ತ್ರಿಯಾ ಸಮ್ಯಙ್ನಿಯುಕ್ತಯಾ ।
ಪ್ರಜೇಪ್ಸಿತಾಧಿಗಂತವ್ಯಾ ಸಂತಾನಸ್ಯ ಪರಿಕ್ಷಯೇ ॥ ೫೯

ಅಣ್ಣ–ತಮ್ಮಂದಿರಲ್ಲಿ ಯಾರಿಗೂ ಸಂತತಿಯಿಲ್ಲವಾದಾಗ ಸೋದರ ಪತ್ನಿಯಲ್ಲಿ ಸೋದರನಿಂದ ವಾ ಸಪಿಂಡನಿಂದ ಯುಕ್ತಸಂತಾನವಾಗುವಲ್ಲಿವರೆಗೆ ಸಂಬಂಧವು ನಿಷಿದ್ಧವಲ್ಲ.

ವಿಧವಾಯಾಂ ನಿಯುಕ್ತಸ್ತು ಘೃತಾಕ್ತೋ ವಾಗ್ಯತೋ ನಿಶಿ ।
ಏಕಮುತ್ಪಾದಯೇತ್ಪುತ್ರಂ ನ ದ್ವಿತೀಯಂ ಕಥಂಚನ ॥ ೬೦

ಹಿಂದೆ ಹೇಳಿದ ನಿಯೋಗ ವಿಧಿಯ ವಿವರವು: ಇದು ಸೋದರ ಪತ್ನೀ ವಿಧವೆಯಲ್ಲಿ ಸಂತಾನಕ್ಕಾಗಿ ನಿಯುಕ್ತನು ಗೋಘೃತವನ್ನು ಮೈಗೆ ಹಚ್ಚಿ ಕೊಂಡು ಮೌನವಾಗಿ ರಾತ್ರಿಯಲ್ಲಿ ಋತುಕಾಲದಲ್ಲಿ ಗರ್ಭದರ್ಶನ ಪರ್ಯಂತ ಸಹವಾಸ ಮಾಡಬೇಕು. ದ್ವಿತೀಯ ಸಂತತಿಯು ನಿಷಿದ್ಧ.

ದ್ವಿತೀಯಮೇಕೇ ಪ್ರಜನಂ ಮನ್ಯಂತೇ ಸ್ತ್ರೀಷು ತದ್ವಿದಃ ।
ಅನಿರ್ವೃತಂ ನಿಯೋಗಾರ್ಥಂ ಪಶ್ಯಂತೋ ಧರ್ಮತಸ್ತಯೋಃ ॥ ೬೧

ಕೆಲಮಂದಿ ಆಚಾರ್ಯರು ನಿಯೋಗದಿಂದ ಎರಡು ಸಂತತಿಯನ್ನು ಸಮ್ಮತಿಸುತ್ತಾರೆ. ಆಯುಸ್ಸು ಅನಿಶ್ಚಿತವಾದುದರಿಂದ ಒಂದು ಸಂತತಿಯು ನಿಯೋಗದ ಉದ್ದೇಶವನ್ನು ಪೂರ್ಣಗೊಳಿಸಿಲ್ಲ ಎಂದು ಅವರ ಅಭಿಪ್ರಾಯವು.

ವಿಧವಾಯಾಂ ನಿಯೋಗಾರ್ಥೇ ನಿರ್ವೃತ್ತೇ ತು ಯಥಾವಿಧಿ ।
ಗುರುವಚ್ಚ ಸ್ನುಷಾವಚ್ಚ ವರ್ತೇಯಾತಾಂ ಪರಸ್ಪರಂ ॥ ೬೨

ನಿಯೋಗವು ಸಂತತಿಯಿಂದ ಪೂರೈಸಿದ ಮೇಲೆ ಆ ಸ್ತ್ರೀ–ಪುರುಷರು ಮೊದಲಿನಂತೆ ಗುರು ಸ್ನುಷಾಭಾವದಿಂದ ವ್ಯವಹರಿಸಬೇಕು.

ನಿಯುಕ್ತೌ ಯೌ ವಿಧಿಂ ಹಿತ್ವಾ ವರ್ತೇಯಾತಾಂ ತು ಕಾಮತಃ ।
ತಾವುಭೌ ಪತಿತೌ ಸ್ಯಾತಾಂ ಸ್ನುಷಾಗಗುರುತಲ್ಪಗೌ ॥ ೬೩

ನಿಯೋಗ ವಿಧಿಯಲ್ಲಿ ಅವರು ಕಾಮಪ್ರವೃತ್ತರಾದರೆ ಅದು ಪಾಪವು ವಿಧಿಯನ್ನು ಮೀರಬಾರದು.

ನಾನ್ಯಸ್ಮಿನ್ವಿಧವಾ ನಾರೀ ನಿಯೋಕ್ತವ್ಯಾ ದ್ವಿಜಾತಿಭಿಃ ।
ಅನ್ಯಸ್ಮಿನ್ಹಿ ನಿಯುಂಜಾನಾ ಧರ್ಮಂ ಹನ್ಯುಃ ಸನಾತನಂ ॥ ೬೪

ದ್ವಿಜಾತಿ ವಿಧವೆಯು ಅನ್ಯಸಂಬಂಧ ಹೊಂದುವುದು ಧರ್ಮವಲ್ಲ.

ನೋದ್ವಾಹಿಕೇಷು ಮಂತ್ರೇಷು ನಿಯೋಗಃ ಕೀರ್ತ್ಯತೇ ಕ್ವಚಿತ್ ।
ನ ವಿವಾಹವಿಧಾವುಕ್ತಂ ವಿಧವಾವೇದನಂ ಪುನಃ ॥ ೬೫

ಮದುವೆಯ ಮಂತ್ರಗಳಲ್ಲಿ ನಿಯೋಗದ ವಿಷಯವಿಲ್ಲ. ವಿವಾಹ ವಿಧಾಯಕ ಶಾಸ್ತ್ರದಲ್ಲಿಯೂ ವಿಧವಾ ವೇದನವು ಬರುವುದಿಲ್ಲ.

ಅಯಂ ದ್ವಿಜೈರ್ಹಿ ವಿದ್ವದ್ಭಿಃ ಪಶುಧರ್ಮೋ ವಿಗರ್ಹಿತಃ ।
ಮನುಷ್ಯಾಣಾಮಪಿ ಪ್ರೋಕ್ತೋ ವೇನೇ ರಾಜ್ಯಂ ಪ್ರಶಾಸತಿ ॥ ೬೬

ವೇನನು ರಾಜನಾಗಿರುವಾಗ ಮೃಗಗಳಂತೆ ಈ ನಿಯೋಗವನ್ನು ಮನುಷ್ಯರು ಆಚರಿಸಬಹುದೆಂದು ಸಮ್ಮತಿಸಿದನು ಆದರೆ ಪಶುಧರ್ಮವಾದ ಇದನ್ನು ವಿದ್ವಾಂಸರು ಮನ್ನಿಸುವುದಿಲ್ಲ.

ಸ ಮಹೀಮಖಿಲಾಂ ಭುಂಜನ್ ರಾಜರ್ಷಿಪ್ರವರಃ ಪುರಾ ।
ವರ್ಣಾನಾಂ ಸಂಕರಂ ಚಕ್ರೇ ಕಾಮೋಪಹತಚೇತನಃ ॥ ೬೭

ವೇನನು ಅಖಿಲ ಭೂಮಂಡಲ ಪತಿಯಾಗಿ ನಿರಂಕುಶ ರಾಜರ್ಷಿಯಾಗಿದ್ದನು. ಕಾಮಬುದ್ಧಿಯ ವರ್ಣಸಂಕರವು ಧರ್ಮಬುದ್ಧಿಯಿಲ್ಲದ ಕಾರಣ ಆವನಿಗೆ ಪ್ರಿಯವಾಯಿತು.

ತತಃ ಪ್ರಭೃತಿ ಯೋ ಮೋಹಾತ್ಪ್ರಮೀತಪತಿಕಾಂ ಸ್ತ್ರಿಯಂ ।
ನಿಯೋಜಯತ್ಯಪತ್ಯಾರ್ಥಂ ತಂ ವಿಗರ್ಹಂತಿ ಸಾಧವಃ ॥ ೬೮

ವೇನನ ಬಳಿಕ ಆಚರಣೆಗೆ ಬಂದ ಈ ನಿಯೋಗವನ್ನು ಸಾಧುಗಳು ನಿಂದಿಸುತ್ತಾರೆ. ಕಲಿಯುಗದಲ್ಲಿ ಕಾರ್ಯ ಸಾಧ್ಯವಲ್ಲ.

ಯಸ್ಯಾ ಮ್ರಿಯೇತ ಕನ್ಯಾಯಾ ವಾಚಾ ಸತ್ಯೇ ಕೃತೇ ಪತಿಃ ।
ತಾಮನೇನ ವಿಧಾನೇನ ನಿಜೋ ವಿಂದೇತ ದೇವರಃ ॥ ೬೯

ಒಂದು ಕನ್ಯೆಗೆ ವಾಗ್ದಾನದ ನಂತರ ಸಂಕಲ್ಪದ ಪತಿಯು ಮೃತನಾದರೆ ಮೃತನ ಸೋದರನಿಗೆ ಅವಳನ್ನು ಕೊಡಬಹುದು.

ಯಥಾವಿಧ್ಯಧಿಗಮ್ಯೈನಾಂ ಶುಕ್ಲವಸ್ತ್ರಾಂ ಶುಚಿವ್ರತಾಂ ।
ಮಿಥೋ ಭಜೇತಾಪ್ರಸವಾತ್ಸಕೃತ್ಸಕೃದೃತಾವೃತೌ ॥ ೭೦

ಅಂತಹ ವಾಗ್ದಾನ ಸಮನಂತರ ಮೃತ ಸೋದರನ ಕನ್ಯೆಯನ್ನು ಸೋದರನು ವಿವಾಹವಾಗಿ ಪರಿಗ್ರಹಿಸಬೇಕು. ಆದರೆ ಅವಳು ಬಿಳಿ ಬಟ್ಟೆಯುಟ್ಟು ದೇಹಮನಃ ಶುಚಿಯಾಗಿರಬೇಕು. ಋತುರಾತ್ರಿಯಲ್ಲಿ ಒಂದು ಬಾರಿ ಮಾತ್ರ ಪ್ರತಿ ಋತುವಿನಲ್ಲಿ ಪ್ರಸವಪರ್ಯಂತ ಭೋಗಿಸಬೇಕು. ಸಂತತಿಯು ಮೃತನದಾಗುವುದು.

ನ ದತ್ವಾ ಕಸ್ಯಚಿತ್ಕನ್ಯಾಂ ಪುನರ್ದದ್ಯಾದ್ವಿಚಕ್ಷಣಃ ।
ದತ್ವಾ ಪುನಃ ಪ್ರಯಚ್ಛನ್ಹಿ ಪ್ರಾಪ್ನೋತಿ ಪುರುಷಾನೃತಂ ॥ ೭೧

ಹುಡುಗಿಯನ್ನು ಮೊದಲು ಒಬ್ಬನಿಗೆ ಕೊಟ್ಟು, ಬಳಿಕ ಇನ್ನೊಬ್ಬನಿಗೆ ಕೊಟ್ಟರೆ ಸುಳ್ಳಾಡಿದ ದಂಡನೆಗೆ ತಂದೆಯು ಪಾತ್ರನಾಗುವನು.

ವಿಧಿವತ್ಪ್ರತಿಗೃಹ್ಯಾಪಿ ತ್ಯಜೇತ್ಕನ್ಯಾಂ ವಿಗರ್ಹಿತಾಂ ।
ವ್ಯಾಧಿತಾಂ ವಿಪ್ರದುಷ್ಟಾಂ ವಾ ಛದ್ಮನಾ ಚೋಪಪಾದಿತಾಂ ॥ ೭೨

ಧಾರಾದತ್ತಳಾಗಿ ಸ್ವೀಕೃತಕನ್ಯೆಯು ಸಪ್ತಪದಿಯ ಮೊದಲು ರೋಗದ ದುರ್ಲಕ್ಷಣಗಳನ್ನು ಅಡಗಿಸಿದುದು ತಿಳಿದರೆ ಅವಳನ್ನು ಬಿಟ್ಟರೆ ಪಾಪವಿಲ್ಲ. ಪೋಷಿಸಬೇಕು.

ಯಸ್ತು ದೋಷವತೀಂ ಕನ್ಯಾಮನಾಖ್ಯಾಯೋಪಪಾದಯೇತ್ ।
ತಸ್ಯ ತದ್ವಿತಥಂ ಕುರ್ಯಾತ್ಕನ್ಯಾದಾತುರ್ದುರಾತ್ಮನಃ ॥ ೭೩

ಹುಡುಗಿಯ ದೋಷವನ್ನು ಅಡಗಿಸಿ ಮದುವೆ ಮಾಡಿದ ತಂದೆಗೆ ಕೆಟ್ಟತನದ ಪ್ರದರ್ಶನಕ್ಕೆ ಅವಳನ್ನು ಹಿಂದಿರುಗಿಸಿದರೂ ತಪ್ಪಲ್ಲ. ಆದರೆ ಅವಳನ್ನು ಸಾಕುವುದು ವಿವಾಹಿತನ ಕರ್ತವ್ಯ.

ವಿಧಾಯ ವೃತ್ತಿಂ ಭಾರ್ಯಾಯಾಃ ಪ್ರವಸೇತ್ಕಾರ್ಯವಾನ್ನರಃ ।
ಅವೃತ್ತಿಕರ್ಷಿತಾ ಹಿ ಸ್ತ್ರೀ ಪ್ರದುಷ್ಯೇತ್ಸ್ಥಿತಿಮತ್ಯಪಿ ॥ ೭೪

ದೂರದೇಶಕ್ಕೆ ಪ್ರಯಾಣ ಮಾಡುವ ಗಂಡನು ಹೆಂಡತಿಗೆ ಜೀವನಾಂಶವನ್ನು ಒದಗಿಸಿ ಹೋಗಬೇಕು. ಜೀವನಕ್ಕಿಲ್ಲದ ಹೆಂಗಸು ಶೀಲವನ್ನು ಕಾಪಾಡುವುದು ಪ್ರಯಾಸಕರ.

ವಿಧಾಯ ಪ್ರೋಷಿತೇ ವೃತ್ತಿಂ ಜೀವೇನ್ನಿಯಮಮಾಸ್ಥಿತಾ ।
ಪ್ರೋಷಿತೇ ತ್ವವಿಧಾಯೈವ ಜೀವೇಚ್ಛಿಲ್ಪೈರಗರ್ಹಿತೈಃ ॥ ೭೫

ಗಂಡನು ಜೀವನಕ್ಕೆ ಕೊಟ್ಟು ಪರಊರಿಗೆ ಹೋದಾಗ ನಿಯಮದಂತೆ ಇರಬೇಕು. ಜೀವನಕ್ಕೆ ಕೊಡದೆ ಹೋದರೆ ಶಿಲ್ಪಿಗಳಿಂದ ಹಣಗಳಿಸಿ ಜೀವನವನ್ನು ನಿರ್ವಹಿಸಬಹುದು. ದೋಷವಿಲ್ಲ.

ಪ್ರೋಷಿತೋ ಧರ್ಮಕಾರ್ಯಾರ್ಥಂ ಪ್ರತೀಕ್ಷ್ಯೋಽಷ್ಟೌ ನರಃ ಸಮಾಃ ।
ವಿದ್ಯಾರ್ಥಂ ಷಟ್ ಯಶೋರ್ಥಂ ವಾ ಕಾಮಾರ್ಥಂ ತ್ರೀಂಸ್ತು ವತ್ಸರಾನ್॥ ೭೬

ಗಂಡನು ಧರ್ಮಕಾರ್ಯಕ್ಕೆ ಹೋದರೆ ಎರಡು ವರ್ಷ, ವಿದ್ಯೆಗಾಗಿ ಆರುವರ್ಷ, ಕೀರ್ತಿಗೆ ಆರುವರ್ಷ, ಕಾಮಕ್ಕೆ ಮೂರು ವರ್ಷ, ಕಾದು ಮತ್ತೆ ಅವನಿದ್ದಲ್ಲಿಗೆ ಹೋಗಬೇಕು.

ಸಂವತ್ಸರಂ ಪ್ರತೀಕ್ಷೇತ ದ್ವಿಷಂತೀಂ ಯೋಷಿತಂ ಪತಿಃ ।
ಊರ್ಧ್ವಂ ಸಂವತ್ಸರಾತ್ತ್ವೇನಾಂ ದಾಯಂ ಹೃತ್ವಾ ನ ಸಂವಸೇತ್ ॥ ೭೭

ಹೆಂಡತಿಯು ಕಾಮಾಭಿಲಾಷೆಯಿಲ್ಲದೆ ಗಂಡನನ್ನು ದ್ವೇಷಿಸುವುದಾದರೆ ಒಂದು ವರ್ಷ ಪರೀಕ್ಷಿಸಿ ಅವಳು ಪ್ರೀತಿಪಡದಿದ್ದರೆ ಅವಳಿಗೆ ಅನ್ನ ವಸ್ತ್ರ ಮಾತ್ರ ಕೊಡುತ್ತಿದ್ದು. ತಾನು ಬೇರೆ ಮದುವೆ ಆಗಬಹುದು, ಸುಖಪಡ ಬಹುದು.

ಅತಿಕ್ರಾಮೇತ್ಪ್ರಮತ್ತಂ ಯಾ ಮತ್ತಂ ರೋಗಾರ್ತಮೇವ ವಾ ।
ಸಾ ತ್ರೀನ್‌ಮಾಸಾನ್ ಪರಿತ್ಯಾಜ್ಯಾ ವಿಭೂಷಣಪರಿಚ್ಛದಾ ॥ ೭೮

ಒಂದು ಹೆಂಗಸು ರೋಗ, ಮದ್ಯ, ದ್ಯೂತಾದಿವ್ಯಸನಿಯಾದ ಗಂಡನನ್ನು ಪರಿಚರ್ಯೆ ಮಾಡದೆ ಅವಮಾನ ಮಾಡುವುದಾದರೆ ಅವಳಿಗೆ ಮೂರು ತಿಂಗಳುವರೆಗೆ ಅಲಂಕಾರ ಹಾಸುಗೆ ಕೊಡದೆ ನರಳಿಸಬೇಕು.

ಉನ್ಮತ್ತಂ ಪತಿತಂ ಕ್ಲೀಬಮಬೀಜಂ ಪಾಪರೋಗಿಣಂ ॥
ನ ತ್ಯಾಗೋಽಸ್ತಿ ದ್ವಿಷಂತ್ಯಾಶ್ಚ ನ ಚ ದಾಯಾಪವರ್ತನಂ ॥ ೭೯

ಹುಚ್ಚು, ಪಾತಕ, ನಪುಂಸಕತನ, ರೋಗ ಇರುವ ಗಂಡನ ಉಪಚಾರ ಮಾಡದ ಹೆಂಡತಿಯು ಅಪರಾಧಿಯಲ್ಲ.

ಮದ್ಯಪಾ ಸಾಧುವೃತ್ತಾ ಚ ಪ್ರತಿಕೂಲಾ ಚ ಯಾ ಭವೇತ್ ।
ವ್ಯಾಧಿತಾ ವಾಧಿವೇತ್ತವ್ಯಾ ಹಿಂಸ್ರಾರ್ಥಘ್ನೀ ಚ ಸರ್ವದಾ ॥ ೮೦

ಮದ್ಯಪಾನ, ದುಃಶೀಲ, ವಿರುದ್ಧ ವರ್ತನೆ, ರೋಗ, ಸೇವಕರನ್ನು ಪೀಡಿಸುವವಳು ದುರ್ವ್ಯಯ ಮಾಡುವ ಹೆಂಡತಿಯನ್ನು ಬಿಟ್ಟು ಬೇರೆ ಮದುವೆಯಾಗಬೇಕು. ಬಿಡುವುದೆಂದರೆ ಓಡಿಸುವುದಲ್ಲ. ಅನ್ನ, ಬಟ್ಟೆ ಕೊಡಬೇಕು. ಅಂತರಂಗಬಾಹ್ಯಳಾಗಿ ಸೇವಕಳಂತೆ ಇರಗೊಡಿಸುವುದು.

ವಂಧ್ಯಾಷ್ಟಮೇಽಧಿವೇದ್ಯಾಬ್ದೇ ದಶಮೇ ತು ಮೃತಪ್ರಜಾ ।
ಏಕಾದಶೇ ಸ್ತ್ರೀಜನನೀ ಸದ್ಯಸ್ತ್ವಪ್ರಿಯವಾದಿನೀ ॥ ೮೧

ಗರ್ಭಿಣಿಯಾಗದವಳನ್ನು ಎಂಟುವರ್ಷ, ಹುಟ್ಟಿ ಸಾಯುವ ಮಕ್ಕಳನ್ನು

ಹೆರುವವಳನ್ನು ಹತ್ತುವರ್ಷ, ಹೆಣ್ಣು ಹೆರುವವಳನ್ನು ಹನ್ನೊಂದು ವರ್ಷ ವರೆಗೆ ಕಾದು ಮತ್ತೆ ಬೇರೆ ಮದುವೆಯಾಗಬೇಕು. ವಿರುದ್ಧ ಮಾತಾಡುವ ಪರುಷ ವಚನದವಳನ್ನು ಕೂಡಲೆ ಬಿಡಬೇಕು.

ಯಾ ರೋಗಿಣೀ ಸ್ಯಾತ್ತು ಹಿತಾ ಸಂಪನ್ನಾ ಚೈವ ಶೀಲತಃ ।
ಸಾನುಜ್ಞಾಪ್ಯಾಧಿವೇತ್ತವ್ಯಾ ನಾವಮಾನ್ಯಾ ಚ ಕರ್ಹಿಚಿತ್ ॥ ೮೨

ಗುಣವತಿ, ಶೀಲವತಿಯಾದ ಹೆಂಡತಿ ದೀರ್ಘರೋಗಿಯಾದರೆ ಅವಳ ಸಮ್ಮತಿಯಿಂದ ಪುನರ್ವಿವಾಹವಾಗಬೇಕು. ಅವಳಿಗೆ ಎಂದೂ ಅವಮಾನ ಅಸಮಾಧಾನಗಳನ್ನು ಮಾಡಬಾರದು.

ಅಧಿವಿನ್ನಾ ತು ಯಾ ನಾರೀ ನಿರ್ಗಚ್ಛೇದ್ರುಷಿತಾ ಗೃಹಾತ್ ।
ಸಾ ಸದ್ಯಃ ಸನ್ನಿರೋದ್ಧವ್ಯಾ ತ್ಯಾಜ್ಯಾ ವಾ ಕುಲಸನ್ನಿಧೌ ॥ ೮೩

ಗಂಡನು ಪುನರ್ವಿವಾಹವಾದಾಗ ಮೊದಲಿನ ಹೆಂಡತಿ ಸಿಟ್ಟುಗೊಂಡು ಓಡುತ್ತಾಳಾದರೆ ಅವಳನ್ನು ಹಗ್ಗದಿಂದ ಬಿಗಿಯಬೇಕು. ಅಥವಾ ತವರು ಮನೆಯಲ್ಲಿ ಬಿಡಬೇಕು.

ಪ್ರತಿಷಿದ್ಧಾಪಿ ಚೇದ್ಯಾ ತು ಮದ್ಯಮಭ್ಯುದಯೇಷ್ವಪಿ ।
ಪ್ರೇಕ್ಷಾಸಮಾಜಂ ಗಚ್ಛೇದ್ವಾ ಸಾ ದಂಡ್ಯಾ ಕೃಷ್ಣಲಾನಿ ಷಟ್ ॥ ೮೪

ಶುಭಸಮಾರಂಭಗಳಲ್ಲಿ ಹೆಂಗಸು ಮದ್ಯಪಾನವನ್ನು ಬೇಡವೆಂದ ಮೇಲೂ ಮಾಡುತ್ತ, ನರ್ತಿಸುವ ಪರಪುರುಷರ ಗೋಷ್ಠಿಗೆ ಹೋಗುತ್ತಾಳೋ ಅವಳಿಗೆ ಆರುಕೃಷ್ಣಲ ದಂಡನೆಯು.

ಯದಿ ಸ್ವಾಶ್ಚಾಪರಾಶ್ಚೈವ ವಿಂದೇರನ್ ಯೋಷಿತೋ ದ್ವಿಜಾಃ ।
ತಾಸಾಂ ವರ್ಣಕ್ರಮೇಣ ಸ್ಯಾಜ್ಜ್ಯೈಷ್ಠ್ಯಂ ಪೂಜಾ ಚ ವೇಶ್ಮ ಚ ॥ ೮೫

ದ್ವಿಜರು ತುಂಬ ಹೆಂಡಿರುಳ್ಳವಳಾದರೆ ಜಾತಿಕ್ರಮದಿಂದ ಹಿರಿಮೆಯನ್ನು ತಿಳಿಯಬೇಕು ತನ್ನ ಜಾತಿವಳು ದೇಹೋಪಚಾರ ಧರ್ಮಕಾರ್ಯಗಳನ್ನು ಮಾಡಬೇಕು. ಎಂದೂ ಪರಜಾತಿಯವಳಿಂದ ಅದನ್ನು ಮಾಡಿಸಬಾರದು.

ಯಸ್ತು ತತ್ಕಾರಯೇನ್ಮೋಹಾತ್ಸಜಾತ್ಯಾ ಸ್ಥಿತಯಾನ್ಯಯಾ ।
ಯಥಾ ಬ್ರಾಹ್ಮಣಚಾಂಡಾಲಃ ಪೂರ್ವದೃಷ್ಟಸ್ತಥೈವ ಸಃ ॥ ೮೭

ತನ್ನ ಜಾತಿಯವಳನ್ನು ಅನಾದರಿಸಿ ಪರಕೀಯಳಿಂದ ಮಾಡಿಸಿಕೊಂಡವನು ಚಂಡಾಲನೆಂದು ಮುನಿಗಳು ತಿಳಿಯುತ್ತಾರೆ.

ಉತ್ಕೃಷ್ಟಾಯಾಭಿರೂಪಾಯ ವರಾಯ ಸದೃಶಾಯ ಚ ।
ಅಪ್ರಾಪ್ತಾಮಪಿ ತಾಂ ತಸ್ಮೈ ಕನ್ಯಾಂ ದದ್ಯಾದ್ಯಥಾವಿಧಿ ॥ ೮೮

ಗುಣರೂಪಗಳಿಂದ ಪ್ರಶಸ್ತ ಸ್ವಜಾತಿಯ ಅನುರೂಪ ವರನು ಒದಗಿದರೆ ವಿವಾಹಕಾಲ ಬಾರದ ಹುಡುಗಿಯನ್ನು ಮದುವೆ ಮಾಡಬಹುದು.

ಕಾಮಮಾಮರಣಾತ್ತಿಷ್ಠೇದ್ಗೃಹೇ ಕನ್ಯರ್ತುಮತ್ಯಪಿ ।
ನಚೈವೈನಾಂ ಪ್ರಯಚ್ಛೇತ್ತು ಗುಣಹೀನಾಯ ಕರ್ಹಿಚಿತ್ ॥ ೮೯

ಹುಡುಗಿಯು ಋತುಮತಿಯಾಗಿ ಮರಣಪರ್ಯಂತವೂ ಮನೆಯಲ್ಲಿರಲಿ ಆದರೂ ಗುಣಹೀನನಿಗೆ ಕೊಡಬಾರದು ಎಂದು ತಂದೆ, ಅಣ್ಣ, ತಮ್ಮ, ತಾಯಿ ಅಪೇಕ್ಷಿಸುತ್ತಾರೆ.

ತ್ರೀಣಿ ವರ್ಷಾಣ್ಯುದೀಕ್ಷೇತ ಕುಮಾರ್ಯೃತುಮತೀ ಸತೀ ।
ಊರ್ಧ್ವಂ ತು ಕಾಲಾದೇತಸ್ಮಾದ್ವಿಂದೇತ ಸದೃಶಂ ಪತಿಂ ॥ ೯೦

ಆದರೆ ಹುಡುಗಿಯು ಋತುಮತಿಯಾಗಿ ಮೂರು ವರ್ಷ ಕಾದಿದ್ದ ಮೇಲೆ ತನಗೆ ಅನುರೂಪ ಪತಿಯನ್ನು ತಾನು ವರಿಸಬಹುದು. ಆ ಮೇಲೆ ಹಿರಿಯರನ್ನು ನಿರೀಕ್ಷಿಸುವುದು ಬೇಡ.

ಅದೀಯಮಾನಾ ಭರ್ತಾರಮಧಿಗಚ್ಛೇದ್ಯದಿ ಸ್ವಯಂ ।
ನೈನಃ ಕಿಂಚಿದವಾಪ್ನೋತಿ ನ ಚ ಯಂ ಸಾಧಿಗಚ್ಛತಿ ॥ ೯೧

ಹಿರಿಯರು ಕೊಡದೆ ತಾನೇ ಗಂಡನನ್ನು ವರಿಸಿದರೆ ಅವಳಿಗೂ ಅವಳನ್ನು ವರಿಸಿದವನಿಗೂ ಪಾಪವಿಲ್ಲ.

ಅಲಂಕಾರಂ ನಾದದೀತ ಪಿತ್ರ್ಯಂ ಕನ್ಯಾ ಸ್ವಯಂವರಾ ।
ಮಾತೃಕಂ ಭ್ರಾತೃದತ್ತಂ ವಾ ಸ್ತೇನಾ ಸ್ಯಾದ್ಯದಿ ತಂ ಹರೇತ್ ॥ ೯೨

ತಾನೇ ಸ್ವಯಂವರ ಮಾಡಿಕೊಂಡ ಹುಡುಗಿಯು ಹಿರಿಯರ ಅಲಂಕಾರ ಗಳನ್ನು ತಕ್ಕೊಂಡರೆ ಕದ್ದಂತಾಗುವುದು.

ಪಿತ್ರೇ ನ ದದ್ಯಾಚ್ಛುಲ್ಕಂ ತು ಕನ್ಯಾಮೃತುಮತೀಂ ಹರನ್ ।
ಸ ಹಿ ಸ್ವಾಮ್ಯಾದತಿಕ್ರಾಮೇದೃತೂನಾಂ ಪ್ರತಿರೋಧನಾತ್ ॥ ೯೩

ಋತುಮತೀ ವಿವಾಹವಾಗುವಾಗ ತಂದೆಗೆ ಕನ್ಯಾಶುಲ್ಕವನ್ನು ಕೊಡು ವುದು ಬೇಡ. ಆವರೆಗೆ ಮದುವೆ ಮಾಡದೆ ಅವನು ತಪ್ಪುಗಾರನು. ಋತು ಭಂಗವು ಅವನಿಂದಾಗಿದೆ.

ತ್ರಿಂಶದ್ವರ್ಷೋದ್ವಹೇತ್ಕನ್ಯಾಂ ಹೃದ್ಯಾಂ ದ್ವಾದಶವಾರ್ಷಿಕೀಂ ।
ತ್ರ್ಯಷ್ಟವರ್ಷೋಽಷ್ಟವರ್ಷಾಂ ವಾ ಧರ್ಮೇ ಸೀದತಿ ಸತ್ವರಃ ॥ ೯೪

ಮೂವತ್ತು ವಯಸ್ಸಿನ ಹುಡುಗನು ಹನ್ನೆರಡು ವರ್ಷದ ಹುಡುಗಿ ಯನ್ನು ಮದುವೆಯಾಗಬಹುದು. ಅವಳು ತನ್ನ ಮನಸ್ಸಿಗೆ ಒಪ್ಪಿದವಳಾಗ ಬೇಕು. ಇಪ್ಪತ್ತನಾಲ್ಕರ ಯುವಕನಿಗೆ ಎಂಟು ವಯಸ್ಸಿನವಳೂ ಆಗ ಬಹುದು. ಗಂಡಿಗಿಂತ ಅರ್ಧಕ್ಕಿಂತಲೂ ಕಡಿಮೆ ವಯಸ್ಸಿನವಳಾದ ಹುಡು ಗಿಯು ಬುದ್ಧಿಯಲ್ಲಿ ಕಿರಿಯವಳು. ಗಂಡನನ್ನು ಮನಃಪೂರ್ವಕ ಅನುವರ್ತಿ ಸುವಳು. ಗಂಡು, ಹೆಣ್ಣು ಸಮವಯಸ್ಸಿನವರಾದರೆ ಹೆಣ್ಣು ಗಂಡನನ್ನು ಹೀಯಾಳಿಸುವ ಪ್ರಸಂಗವು ಹೆಚ್ಚು. ವಯಸ್ಸಿನ ಅಂತರವು ಬಹಳವಾದರೆ ಹುಡುಗಿ ಇಪ್ಪತ್ತು ವಯಸ್ಸಿಗೆ ಕಡಿಮೆಯವಳಾದರೆ ಗಂಡಸಿನ ಅಂಗಸಂಗದಿಂದ ಕೆಡುವಳು, ಶರೀರ ಹಾಳಾಗುವುದು, ಕೋಮಲ ಹೂ ಸೂರ್ಯನ ಪ್ರಖರ ಕಿರಣಕ್ಕೆ ಬಾಡುವಂತೆ—ಎಂದು ಕೆಲವರ ಭ್ರಮೆ. ಇದು ಕೆಲವು ಹೆಂಗುಸರೂ, ಗಂಡಸರೂ ಕಾಮಶಾಸ್ತ್ರ, ದೇಹಶಾಸ್ತ್ರ ತಿಳಿಯದೆ ಮಾಡಿಕೊಳ್ಳುವ ಕುಕಲ್ಪ ನೆಯು. ಹಣ ಸಂತತಿಗಳ ಅನುಕೂಲಕ್ಕೆ ವಿವಾಹವನ್ನು ಹೆಂಗಸಿಗೆ ಮುಂದೂಡ ಬೇಕೆಂದು ಈ ಕಾಲದ ಅಭಿಮತ. ವಿವಾಹವಾಗಿ ಹಣ ದುಡಿಯಬಾರದೆಂದು ಏನು? ದುಡಿಯುವುದು (ಹೊಲದಲ್ಲಿ) ಅವಮಾನ ಅಪರಾಧಕ್ಕೆ ಮರಣದಂಡನೆ ಬೇಡ ಮುಂತಾದ ವಿಕೃತಿಯಿಂದ ಹಣದಕೊರತೆ, ಸಂತತಿ ದ್ವೇಷಗಳು ಹುಟ್ಟು ವುವು. ಸತ್ಸಂತತಿಯು ಭೂಭಾರವಾಗಲಾರದು. ದುಃಸಂತತಿಯನ್ನು ಮಿತ

ವಾಗಿ ರಕ್ಷಿಸಿದರೂ ಕ್ಷೇಮವು ಸಂಶಯ. ದೈವಪ್ರಾಬಲ್ಯವಾದಿಗಳು ಪೌರುಷ ವಾದವನ್ನು ಸಕಾರಣವಾಗಿ ನಿರಾಕರಿಸುತ್ತಾರೆ. ಬಾಲ್ಯವಿವಾಹವಾಗಿ ಕೂಡಲೆ ಪತಿ ಮರಣಗೊಂಡರೆ ಹೆಂಗಸಿನ ಜೀವನವು ವ್ಯಥಾ ಆಗುವುದಾದರೆ ಮದುವೆ ಯಾಗದೆ ಸಂತತಿ ಬೇಡ. ಉದ್ಯೋಗ ದೊರಕಲಿ ಎಂದು ಸಂಯಮದಿಂದಿರು ವಾಗ ಜೀವನವು ಹೇಗೆ ಸಫಲ ? ಇಂತಹ ಸಾಫಲ್ಯಕ್ಕೆ ಮರಣೋತ್ತರದಲ್ಲಿ ಯಾವ ವಿಘ್ನವಿದೆ ? ದುರದೃಷ್ಟದ ದೋಷ.

ದೇವದತ್ತಾಂ ಪತಿರ್ಭಾರ್ಯಾಂ ವಿಂದತೇ ನೇಚ್ಛಯಾತ್ಮನಃ ।
ತಾಂ ಸಾಧ್ವೀಂ ಬಿಭೃಯಾನ್ನಿತ್ಯಂ ದೇವಾನಾಂ ಪ್ರಿಯಮಾಚರನ್ ॥ ೯೫

ಪತಿಪತ್ನೀ ಭಾವವು ದೈವಕಲ್ಪಿತವು, ಸ್ವೇಚ್ಛೆಯಿಲ್ಲ ಆದರಲ್ಲಿ. ಆದುದ ರಿಂದ ಸಾಧ್ವಿಯನ್ನು ಪೋಷಿಸಿ ದೇವತೆಗಳ ಪ್ರೀತಿಪಾತ್ರನಾಗಬೇಕು.

ಪ್ರಜನಾರ್ಥಂ ಸ್ತ್ರಿಯಃ ಸೃಷ್ಟಾಃ ಸಂತಾನಾರ್ಥಂ ಚ ಮಾನವಾಃ ।
ತಸ್ಮಾತ್ಸಾಧಾರಣೋ ಧರ್ಮಃ ಶ್ರುತೌ ಪತ್ನ್ಯಾ ಸಹೋದಿತಃ ॥ ೯೬

ಗರ್ಭಗ್ರಹಣಕ್ಕಾಗಿ ಸ್ತ್ರೀ ಸೃಷ್ಟಿಯು, ಗರ್ಭೋತ್ಪತ್ತಿಗಾಗಿ ಪುರುಷ ಸೃಷ್ಟಿಯು. ಆದುದರಿಂದ ಸ್ತ್ರೀ–ಪುರುಷರಿಗೆ ಸಹಧರ್ಮವು ವೇದ ಪ್ರಸಿದ್ಧ ವಾಗಿದೆ. ಯುಕ್ತಿ ಯುಕ್ತವಾಗಿದೆ.

ಕನ್ಯಾಯಾಂ ದತ್ತಶುಲ್ಕಾಯಾಂ ಮ್ರಿಯೇತ ಯದಿ ಶುಲ್ಕದಃ ।
ದೇವರಾಯ ಪ್ರದಾತವ್ಯಾ ಯದಿ ಕನ್ಯಾನುಮನ್ಯತೇ ॥ ೯೭

ಶುಲ್ಕಕೊಟ್ಟವರನು ಮರಣಹೊಂದಿದರೆ ಅವನ ಸೋದರನು ಆ ಹುಡು ಗಿಯ ಸಮ್ಮತಿಯಿದ್ದರೆ ಮದುವೆಯಾಗಬಹುದು.

ಆದದೀತ ನ ಶೂದ್ರೋऽಪಿ ಶುಲ್ಕಂ ದುಹಿತರಂ ದದನ್ ।
ಶುಲ್ಕಂ ಹಿ ಗೃಹ್ಣನ್ ಕುರುತೇ ಛನ್ನಂ ದುಹಿತೃವಿಕ್ರಯಂ ॥ ೯೮

ಶೂದ್ರನೂ ಕೂಡ ಮಗಳನ್ನು ಕೊಡುವಾಗ ಶುಲ್ಕ ತೆಗೆದುಕೊಳ್ಳ ಬಾರದು. ಅದು ಮಾರಾಟವೇ ಆಗುವುದು.

ಏತತ್ತು ನ ಪರೇ ಚಕ್ರುರ್ನಾಪರೇ ಜಾತು ಸಾಧವಃ ।
ಯದನ್ಯಸ್ಯ ಪ್ರತಿಜ್ಞಾಯ ಪುನರನ್ಯಸ್ಯ ದೀಯತೇ ॥ ೯೯

ಕನ್ಯಾದಾನಕ್ಕೆ ಒಬ್ಬನಿಗೆ ಸಮ್ಮತಿಸಿ ಶುಲ್ಕ ತೆಗೆದುಕೊಂಡು ಮತ್ತೊಬ್ಬನಿಗೆ ಕೊಡುವುದನ್ನು ಒಳ್ಳೆಯವರು ಯಾರೂ ಮಾಡುವುದಿಲ್ಲ.

ನಾನುಶುಶ್ರುಮ ಜಾತ್ವೇತತ್ಪೂರ್ವೇಷ್ವಪಿ ಹಿ ಜನ್ಮಸು ।
ಶುಲ್ಕಸಂಜ್ಞೇನ ಮೂಲ್ಯೇನ ಛನ್ನಂ ದುಹಿತೃವಿಕ್ರಯಂ ॥ ೧೦೦

ಕನ್ಯಾಶುಲ್ಕವು ಪೂರ್ವಕಾಲದಲ್ಲಿಯೂ ಇತ್ತೆಂದು ನಾವು ಕೇಳಲಿಲ್ಲ. ಆದುದರಿಂದ ಈ ಕಾಲದ ಈ ಕನ್ಯಾವಿಕ್ರಯವು ಅಸಾಧು.

ಅನ್ಯೋನ್ಯಸ್ಯಾವ್ಯಭೀಚಾರೋ ಭವೇದಾಮರಣಾಂತಿಕಃ ।
ಏಷ ಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ ॥ ೧೦೧

ಕಾಯವಾಙ್ಮನಸ್ಸುಗಳಲ್ಲಿ ದಂಪತಿಗಳು ಅನ್ಯೋನ್ಯ. ಅತಿಕ್ರಮಿಸದಿರುವುದೇ ಧರ್ಮದ ಮರ್ಮವಾಗಿದೆ. ಆಮರಣವಾದ ಈ ಧರ್ಮವು ಸ್ಥಿರ ಬುದ್ಧಿಯ ಪವಿತ್ರ ಸಂಕೇತವಾಗಿದೆ.

ತಥಾ ನಿತ್ಯಂ ಯತೇಯಾತಾಂ ಸ್ತ್ರೀಪುಂಸೌ ತು ಕೃತಕ್ರಿಯೌ ।
ಯಥಾ ನಾಭಿಚರೇತಾಂ ತೌ ವಿಯುಕ್ತಾವಿತರೇತರಂ ॥ ೧೦೨

ವಿವಾಹಿತರಾದ ಸ್ತ್ರೀ–ಪುರುಷರು ಪರಸ್ಪರ ವಿರಹವಿಲ್ಲದಂತೆ ಜೀವನವು ಪೂರ್ಣವಾಗಲು ಪ್ರಯತ್ನಿಸಬೇಕು.

ಏಷ ಸ್ತ್ರೀಪುಂಸಯೋರುಕ್ತೋ ಧರ್ಮೋ ವೋ ರತಿಸಂಹಿತಃ ।
ಆಪದ್ಯಪತ್ಯಪ್ರಾಪ್ತಿಶ್ಚ ದಾಯಭಾಗಂ ನಿಬೋಧತ ॥ ೧೦೩

ಅನ್ಯೋನ್ಯಾನುರಾಗ ಇರುವ ಸ್ತ್ರೀ–ಪುರುಷರ ಧರ್ಮವು ಆಪದ್ಧರ್ಮವು ಉಕ್ತವಾಗಿದೆ. ಇನ್ನು ದಾಯಭಾಗವು ಹೇಳಲ್ಪಡುವುದು.

ಊರ್ಧ್ವಂ ಪಿತುಶ್ಚ ಮಾತುಶ್ಚ ಸಮೇತ್ಯ ಭ್ರಾತರಃ ಸಮಂ ।
ಭಜೇರನ್ ಪೈತೃಕಂ ರಿಕ್ಥಮನೀಶಾಸ್ತೇ ಹಿ ಜೀವತೋಃ ॥ ೧೦೪

ತಂದೆ ತಾಯಿ ಸತ್ತಮೇಲೆ ಸೋದರರು ಸ್ಥಿರಚರ ಸೊತ್ತನ್ನು ಪಾಲು ಮಾಡಿಕೊಳ್ಳಬಹುದು. ತಾಯ್ತಂದೆ ಬದುಕಿರುವಾಗ ಅವರ ಇಚ್ಛೆಯಂತೆ ದಾಯಭಾಗವು. ಅವರ ಇಚ್ಛೆಯ ಧರ್ಮವನ್ನು ಮುಂದೆ ತಿಳಿಸುತ್ತಾರೆ. ಜ್ಯೇಷ್ಠನು ಪೂರ್ಣಸೊತ್ತನ್ನು ತಂದೆಯಂತೆ ನೋಡಿಕೊಂಡು ಸೋದರರನ್ನು ಪೋಷಿಸುವುದು ಒಂದು ಪದ್ಧತಿ. ಪೋಷಣೆಯ ಭಾರವನ್ನು ಸ್ವೇಚ್ಛೆಯಿಂದ ಬಿಟ್ಟು ವಿಶೇಷವಾದ ಒಂದಂಶವನ್ನು ಉದ್ಧಾರವಾಗಿ ಪಡೆದು ಉಳಿದುದನ್ನು ಸಮವಾಗಿ ವಿಭಾಗಿಸಿಕೊಳ್ಳುವುದು ಇನ್ನೊಂದು ಪದ್ಧತಿ. ಇದೆರಡು ಪ್ರಾಚೀನ ಭಾರತೀಯ ಪದ್ಧತಿ. ಈಗ ಶಾಸನವು ಸಮಭಾಗವನ್ನು ಸರ್ವಥಾ ಸರಿಯೆನ್ನುತ್ತದೆ. ಅದರ ದುಷ್ಪರಿಣಾಮವು ಪ್ರತ್ಯಕ್ಷವಾಗಿ ಮನುವು ಪ್ರಶಂಸಿಸಿದ, ಪೂರ್ವದಲ್ಲಿ ಅತ್ಯಂತ ಪ್ರಚಾರದಲ್ಲಿದ್ದ ಜ್ಯೇಷ್ಠದಾಯಭಾಗ ಅಥವಾ ಅವಿಭಕ್ತ ಕುಟುಂಬ ಪದ್ಧತಿಯು ಎಲ್ಲ ಕಾಲಕ್ಕೂ ನ್ಯಾಯವೆಂದು ಈಗ ಬಲು ಮಂದಿ ವಿಚಾರವಂತರ ಮನೋಭಿತ್ತಿಯಲ್ಲಿ ಉದ್ಬುದ್ಧವಾಗಿದೆ. ಹಿರಿಯನು ಪಿತೃಸಮ. ಇತರರು ಕಾಮಜರಾದುದರಿಂದ ಪಿತೃಗಳೂ ಧರ್ಮವೂ ಅವರನ್ನು ಹಿರಿಯನ ಸಮ್ಮತಿಯಿಲ್ಲದೆ ಅಧಿಕರಿಸುವುದಿಲ್ಲ ಎಂದು ಭಾರತರಾಮಾಯಣಗಳ ಸಾಕ್ಷಿಯಿದೆ. ಭಾರತಧರ್ಮದ ಮೇಲ್ಮೆಯು ಅದಾಗಿದೆ. ಭೂಸುಧಾರಣೆ, ಸಮತಾವಾದ, ಆರ್ಥಿಕ, ಅವನತಿ, ಅನ್ನಾಭಾವ, ಜನಾಧಿಕ್ಯ ಮುಂತಾದ ಗಂಡಾಂತರಗಳ ವಿಷಮಕಾಲದಲ್ಲಿ ಈ ಜ್ಯೇಷ್ಠಪಾರಮ್ಯವು ಉತ್ತಮ ಸಂಜೀವಿನಿಯಾಗಿದೆ. ಮಿತಾಕ್ಷರಾದಲ್ಲಿ ವಿಜ್ಞಾನೇಶ್ವರನು ಸಮದಾಯಭಾಗಕ್ಕೆ ಕೊಡುವ ಕಾರಣವು ದುರ್ಬಲವಾಗಿದೆ. ಅಸಮರ್ಪಕವಾಗಿದೆ. ಲೋಕವಿದ್ವಿಷ್ಟತ್ವವು ಅವನಕಾರಣ. ಒಂದು ತಾಯ್ತಂದೆಗೆ ಒಬ್ಬನೇ ಹಿರಿಮಗ, ಇತರರು ಕಿರಿಯರು ಆದುದರಿಂದ ಲೋಕದಲ್ಲಿ ಬಹುಜನರು ಕಿರಿಯರು. ಅವರು ಅರ್ಥ, ದೃಷ್ಟಿ, ಜ್ಯೇಷ್ಠಮಾನಲೋಭ ಇವುಗಳಿಂದ ಸಮದಾಯಭಾಗವನ್ನು ಸಮರ್ಥಿಸುವರು. ಅರ್ಥಶಾಸ್ತ್ರವು ಸಮದಾಯ ಭಾಗವನ್ನು ಪೋಷಿಸುವುದಿಲ್ಲ. ಭೂಮಿಯು ಅನುಭವ, ರಕ್ಷಣೆ, ಅಧಿಕಫಲಗಳಿಗೆ ಚಿಕ್ಕ ಚೂರಾಗುವುದು ಲಾಭದಾಯಕವಲ್ಲ ಆರ್ಥಿಕ ಅವನತಿಯಿಂದ ಪರಕೀಯರ ಹಸ್ತಗತವಾಗುವುದು. ಜನ್ಮತಃ ಪಿತೃಧನದಲ್ಲಿ ಜೀವನದ ಹಕ್ಕು ಹೊರತು ಅಧಿಕಲಾಭ, ಕೀರ್ತಿ, ಸ್ವೇಚ್ಛೆಗಳಿಗೆ ಅವಕಾಶವಿಲ್ಲದ ಪ್ರಜೆಯು ತನಗೆ ಪ್ರಿಯ

ವಾದ ಉದ್ಯೋಗ, ಕಸುಬು, ಶಿಲ್ಪ, ವಿದ್ಯೆ ಆಶ್ರಯಿಸಿ ಕಾರ್ಯಕ್ಷೇತ್ರವನ್ನು ವಿಸ್ತರಿಸಲು ಅನುಕೂಲವಿದೆ. ಕುಟುಂಬದ ಸ್ಥಾನಮಾನಗಳ ಭಾರವಿಲ್ಲದ ತಾನು ಹೊಸದಕ್ಕೆ ಹೊಂದಲು ಅನುಕೂಲ ಹೆಚ್ಚು. ಎರಡನ್ನು ಸ್ವಲ್ಪ ಸ್ವಲ್ಪ ಹೊಂದಿಸುವುದು ಅಸಾಧ್ಯ. ಲಾಭವು ಮೂರನೆ ಮಧ್ಯವರ್ತಿಗೆ. ಹೀಗೆ ಮನಃಶಾಸ್ತ್ರವೂ ಅವಿಭಕ್ತ ಪದ್ಧತಿಯನ್ನು ಬಲಪಡಿಸುವುದು. ಮೇಲಿನ ವಿವೇಚನೆಯಿಂದ ಇದು ಸ್ಪಷ್ಟವಾಗುವುದು.

ಜ್ಯೇಷ್ಠ ಏವ ತು ಗೃಹ್ಣೀಯಾತ್ಪಿತ್ರ್ಯಂ ಧನಮಶೇಷತಃ ।
ಶೇಷಾಸ್ತಮುಪಜೀವೇಯುರ್ಯಥೈವ ಪಿತರಂ ತಥಾ ॥ ೧೦೫

ಸೀಮಂತ ಕುಮಾರನಾದ ಅಥವಾ ಜೀವಂತರಲ್ಲಿ ಹಿರಿಯನಾದ ಜ್ಯೇಷ್ಠ ಪುತ್ರನು ತಂದೆಯ ಎಲ್ಲ ಸೊತ್ತನ್ನು ತಕ್ಕೊಳ್ಳಬೇಕು. ಕಿರಿಯರು ಅವನನ್ನು ಹೊಂದಿಕೊಂಡು ತಂದೆಯಲ್ಲಿ ಹೇಗೋ ಹಾಗೆ ಬಾಳಬೇಕು. ಇದರ ಕಾರಣ ಗಳು ಮುಂದೆ ಬರುವುವು.

ಜ್ಯೇಷ್ಠೇನ ಜಾತಮಾತ್ರೇಣ ಪುತ್ರೀ ಭವತಿ ಮಾನವಃ ।
ಪಿತೄಣಾಮನೃಣಶ್ಚೈವ ಸ ತಸ್ಮಾತ್ಸರ್ವಮರ್ಹತಿ ॥ ೧೦೬

ಮೊದಲನೆ ಮಗ ಹುಟ್ಟಿದ ಕೂಡಲೆ ತಂದೆಯು ಪುತ್ರವಂತನಾದನು. ಪಿತೃಋಣ ವಿಮೋಚನೆಯಾಯಿತು. ಆದುದರಿಂದ ತಂದೆಯ ಸಕಲಸೊತ್ತಿಗೂ ಹಿರಿಯವನೇ ಅಧಿಕಾರಿಯಾಗುವುದು ನ್ಯಾಯವು.

ಯಸ್ಮಿನ್ ಋಣಂ ಸನ್ನಯತಿ ಯೇನ ಚಾನಂತ್ಯಮಶ್ನುತೇ ।
ಸ ಏವ ಧರ್ಮಜಃ ಪುತ್ರಃ ಕಾಮಜಾನಿತರಾನ್‌ವಿದುಃ ॥ ೧೦೭

ಪಿತೃಗಳ ಮತ್ತು ತಂದೆಯ ಪಿಂಡದಾನ ಸದ್ಗತಿಗಳು ಹಿರಿಯನನ್ನು ಅನುಸರಿಸಿವೆ. ಅವನು ಧರ್ಮವೃದ್ಧಿಗೆ ಜನಿಸಿದವನು. ಇತರರು ತಾಯ್ತಂದೆಯ ಕಾಮತೃಪ್ತಿಯಿಂದ ಜನಿಸುವವರು. ಆದುದರಿಂದ ಧಾರ್ಮಿಕ ನಿರ್ಬಂಧವು ಅವರಿಗಿಲ್ಲ. ಅವರು ಸ್ವೈರಿಗಳು.

ಪಿತೇವ ಪಾಲಯೇತ್ಪುತ್ರಾನ್ ಜ್ಯೇಷ್ಠೋ ಭ್ರಾತೄನ್ ಯವೀಯಸಃ ।
ಪುತ್ರವಚ್ಚಾಪಿ ವರ್ತೇರನ್ ಜ್ಯೇಷ್ಠೇ ಭ್ರಾತರಿ ಧರ್ಮತಃ ॥ ೧೦೮

ಜ್ಯೇಷ್ಠಪುತ್ರನು ತಂದೆಯಂತೆ ತಮ್ಮಂದಿರನ್ನು ಪಾಲಿಸಬೇಕು. ಅವರು ಮಕ್ಕಳಂತೆ ಪ್ರೀತಿವಿಶ್ವಾಸಗಳಿಂದ ಅಣ್ಣನ ವಿಧೇಯರಾಗಿರಬೇಕು.

ಜ್ಯೇಷ್ಠಃ ಕುಲಂ ವರ್ಧಯತಿ ವಿನಾಶಯತಿ ವಾ ಪುನಃ ।
ಜ್ಯೇಷ್ಠಃ ಪೂಜ್ಯತಮೋ ಲೋಕೇ ಜ್ಯೇಷ್ಠಃ ಸದ್ಭಿರಗರ್ಹಿತಃ ॥ ೧೦೯

ಜ್ಯೇಷ್ಠನು ಕುಲವರ್ಧಕನು. ನಾಶಪಡಿಸಿದರೆ ಪಾಪ ಭಾಜನನೂ ಅವನೇ. ಪೂಜಾಪ್ರಶಂಸೆಗಳಿಗೆ ಅವನೇ ಪಾತ್ರನು. ಕಿರಿಯರಿಗೆ ಆದರ ಗೊಡವೆ ಬೇಡ.

ಯೋ ಜ್ಯೇಷ್ಠೋ ಜ್ಯೇಷ್ಠವೃತ್ತಿಃ ಸ್ಯಾನ್ಮಾತೇವ ಸ ಪಿತೇವ ಸಃ ।
ಅಜ್ಯೇಷ್ಠವೃತ್ತಿರ್ಯಸ್ತು ಸ್ಯಾತ್ಸ ಸಂಪೂಜ್ಯಸ್ತು ಬಂಧುವತ್ ॥ ೧೧೦

ತಂದೆಯಂತೆ ಪಾಲನೆ ಪೋಷಣೆ ಮಾಡಿದರೆ ತಾಯ್ತಂದೆಯಂತೆಯೆ ಪೂಜ್ಯನು. ಇಲ್ಲವಾದರೂ ಸೋದರ ಮಾವನಂತೆ ಪೂಜ್ಯನು.

ಏವಂ ಸಹ ವಸೇಯುರ್ವಾ ಪೃಥಗ್ವಾ ಧರ್ಮಕಾಮ್ಯಯಾ ।
ಪೃಥಗ್ವಿವರ್ಧತೇ ಧರ್ಮಸ್ತಸ್ಮಾದ್ಧರ್ಮ್ಯಾ ಪೃಥಕ್ಕ್ರಿಯಾ ॥ ೧೧೧

ಮೇಲೆ ಹೇಳಿದ ರೀತಿಯಲ್ಲಿ ಒಟ್ಟಿಗೆ ಜೀವಿಸಬಹುದು. ಒಂದೇ ಮನೆಯಲ್ಲಿ ಪಿತೃಶ್ರಾದ್ಧ, ದೇವತಾರ್ಚನೆ ಅತಿಥಿಸತ್ಕಾರಗಳನ್ನು ಬೇರೆ ಬೇರೆ ಮಾಡಕೂಡದು ಬೇರೆ ಬೇರೆ ಮನೆಮಾಡಿದರೆ ಇದನ್ನೆಲ್ಲ ಮಾಡಬೇಕು. ಈ ಧರ್ಮವೃದ್ಧಿಯ ಉದ್ದೇಶ ಬಿಟ್ಟು ಸುಖಜೀವನ ಸ್ವೇಚ್ಛೆಯ ಅವಕಾಶಕ್ಕಾಗಿ ಧರ್ಮಜ್ಞರು ವಿಭಾಗವನ್ನು ಸಮ್ಮತಿಸಲಿಲ್ಲ. ಆದುದರಿಂದ ಈಗ ಸುಖಜೀವನಕ್ಕೆ ಅವಿಭಕ್ತ ಕುಟುಂಬವು ಸಹಾಯವಲ್ಲವೆಂದು ವಿಭಾಗವಾಗುವುದು ಧರ್ಮಸಮ್ಮತವಲ್ಲ. ಈ ಸಮಭಾಗಾಧಿಕಾರವು, ಕಿರಿಯರು ಹಿರಿಯರನ್ನು ಯಾವ ಕಾರಣಕ್ಕೂ ಗೌರವಿಸುವುದು ಬೇಡ ವಿಧೇಯರಾಗುವುದು ಬೇಡ. ಹಿರಿಯನ ಪ್ರತಿವರ್ತನೆಯನ್ನು ವಿಮರ್ಶಿಸುವ ಆತಂಕಪಡಿಸುವ ಅವನನ್ನು ಧಿಕ್ಕರಿಸಿ ಸ್ವತಂತ್ರವಾಗಿ ಬಾಳುವ ಹಕ್ಕು ನಮಗಿದೆ ಎಂಬ ದುರವಕಾಶವನ್ನು ಅವರು ಪೂರ್ಣ ಸದುಪಯೋಗಪಡಿಸಲು ಮುಕ್ತದ್ವಾರವಾಗಿದೆ. ಒಂದು

ತಂದೆಗೆ ನಾಲ್ಕಾರು ಮಕ್ಕಳಾದಂತೆ ಕೆಲವೇ ವರ್ಷಗಳಲ್ಲಿ ಜೀವನವು ದುರ್ಭರ ವಾಗಿ ಆ ಚೂರು ಭೂಮಿ ಪರರ ಆಕ್ರಮಣಕ್ಕೆ ಒಳಪಡುವುದು. ಮತ್ತು ಸ್ವತಂತ್ರ ಉದ್ಯೋಗ ಲಾಭ ಪ್ರಯತ್ನಗಳಗೊಡವೆ ಬಿಟ್ಟು ಮತ್ಸರ ಮನೋ ವೃತ್ತಿಯು ಪರಿಪೋಷಣೆ ಹೊಂದುವುದು.

ಜ್ಯೇಷ್ಠಸ್ಯ ವಿಂಶ ಉದ್ಧಾರಃ ಸರ್ವದ್ರವ್ಯಾಚ್ಚ ಯದ್ವರಂ ।
ತತೋರ್ಧಂ ಮಧ್ಯಮಸ್ಯ ಸ್ಯಾತ್ತುರೀಯಂ ತು ಯವೀಯಸಃ ॥ ೧೧೨

ಕಿರಿಯರಿಗೆ ಜೀವನವನ್ನು ಒದಗಿಸುವ ಜವಾಬ್ದಾರಿಯನ್ನು ಸಂತೋಷ ದಿಂದ ತಪ್ಪಿಸಿಕೊಳ್ಳಲು ಇಷ್ಟಪಡುವ ಹಿರಿಯನ ಸಮ್ಮತಿಯಿಂದ ದಾಯ ಭಾಗವು ಆಗುವುದಾದರೆ ಉದ್ಧಾರಕೊಡಬೇಕು. ಪಿತೃಧನದಲ್ಲಿ ಉತ್ತಮ ವಾದ ಸೊತ್ತು, ಇಪ್ಪತ್ತನೆ ಒಂದು ಅಂಶ ಮೂಲ್ಯಕ್ಕೆ ಸರಿಬರುವುದು ಹಿರಿಯನ ಉದ್ಧಾರದ್ರವ್ಯ. ಅದನ್ನು ತೆಗೆದು ಬೇರೆ ಇಟ್ಟು ಉಳಿದುದರಲ್ಲಿ ಸಮಭಾಗವು. ಅದರಂತೆ ತುಂಬ ಸೋದರರಿರುವಾಗ ನಲವತ್ತನೆಒಂದಂಶ, ಎಂಬತ್ತನೆಒಂದಂಶ, ಹೀಗೆ ಕೊಡಬೇಕು ಉದ್ಧಾರವನ್ನು.

ಜ್ಯೇಷ್ಠಶ್ಚೈವ ಕನಿಷ್ಠಶ್ಚ ಸಂಹರೇತಾಂ ಯಥೋದಿತಂ ।
ಯೇಽನ್ಯೇ ಜ್ಯೇಷ್ಠಕನಿಷ್ಠಾಭ್ಯಾಂ ತೇಷಾಂ ಸ್ಯಾನ್ಮಧ್ಯಮಂ ಧನಂ ॥ ೧೧೩

ಕಿರಿಯನು ಮತ್ತು ಹಿರಿಯನು ಇಪ್ಪತ್ತನೆ ಒಂದು ಎಂಬತ್ತನೆ ಒಂದು ಉದ್ಧಾರಧನವನ್ನು ಪೂರ್ಣಪಡೆಯಬೇಕು. ಮಧ್ಯಮರು ತುಂಬ ಇದ್ದರೂ ಆ ನಲವತ್ತನೆ ಒಂದಂಶವನ್ನು ಮಾತ್ರ ಸಮಾಂಶದಿಂದ ಅವರೆಲ್ಲ ನಡುವಿನವರು ಹೊಂದಬೇಕು.

ಸರ್ವೇಷಾಂ ಧನಜಾತಾನಾಮಾದದೀತಾಗ್ರ್ಯಮಗ್ರಜಃ ।
ಯಚ್ಚ ಸಾತಿಶಯಂ ಕಿಂಚಿದ್ದಶತಶ್ಚಾಪ್ನುಯಾದ್ವರಂ ॥ ೧೧೪

ಹಿಂದೆ ಹೇಳಿದ ಇಪ್ಪತ್ತನೆ ಒಂದಂಶ ಉದ್ಧಾರವಲ್ಲದೆ ತಂದೆಯ ಸೊತ್ತಿ ನಲ್ಲಿ ಉತ್ಕೃಷ್ಟವಾದುದು ಇದ್ದರೆ ಅದೂ ಅಗ್ರಜನಿಗೆ. ಮತ್ತು ಒಂದು ವಸ್ತು ಉತ್ತಮವಾದುದು ವಿಭಾಗಕ್ಕೆ ಸಾಧ್ಯವಿಲ್ಲದುದು ಅದು ಅಗ್ರಜ ಹಿರಿ ಯನಿಗೆ. ಮತ್ತು ತುಂಬ ಗೋವಿರುವಾಗ ಪ್ರತಿಹತ್ತು ಗೋವಿಗೆ ಒಂದರಂತೆ

ಒಳ್ಳೆ ಗೋವು ಹಿರಿಯಣ್ಣನಿಗೆ. ಇದೆಲ್ಲ ಉದ್ಧಾರಕ್ಕೆ ಹಿರಿಯಣ್ಣನು ಅಧಿಕಾರಿಯು.

ಉದ್ಧಾರೋ ನ ದಶಸ್ವಸ್ತಿ ಸಂಪನ್ನಾನಾಂ ಸ್ವಕರ್ಮಸು ।
ಯತ್ಕಿಂಚಿದೇವ ದೇಯಂ ತು ಜ್ಯಾಯಸೇ ಮಾನವರ್ಧನಂ ॥ ೧೧೫

ಸೋದರರರೆಲ್ಲ ಸ್ವಕರ್ಮನಿರತರಾಗಿದ್ದರೆ ಹತ್ತಕ್ಕೊಂದರಂತೆ ಕೊಡುವ ಹಿಂದಿನ ಉದ್ಧಾರವು ಬೇಡ. ಸ್ಥಾನಲೋಪವಾಗದಂತೆ ಏನಾದರೂ ಕೊಡಬಹುದು.

ಏವಂ ಸಮುದ್ಧೃತೋದ್ಧಾರೇ ಸಮಾನಂಶಾನ್ ಪ್ರಕಲ್ಪಯೇತ್ ।
ಉದ್ಧಾರೇಽನುದ್ಧೃತೇ ತ್ವೇಷಾಮಿಯಂ ಸ್ಯಾದಂಶಕಲ್ಪನಾ ॥ ೧೧೬

ಈಗ ಹೇಳಿದಂತೆ ಉದ್ಧಾರ ತೆಗೆದಿಟ್ಟು ಉಳಿದ ಸೊತ್ತನ್ನು ಸಮಭಾಗ ಮಾಡಬೇಕು. ಇದು ಎರಡನೆ ದಾಯಭಾಗ ವಿಧಾನವು. ಉದ್ಧಾರ ತೆಗೆಯದಿದ್ದರೆ ವಿಭಾಗಕ್ರಮವು ಮೂರನೆಯದು. ಅದನ್ನಿನ್ನುಮೇಲೆ ಹೇಳಲಾಗುವುದು.

ಏಕಾಧಿಕಂ ಹರೇಜ್ಜ್ಯೇಷ್ಠಃ ಪುತ್ರೋಽಧ್ಯರ್ಧಂ ತತೋಽನುಜಃ ।
ಅಂಶಮಂಶಂ ಯವೀಯಾಂಸ ಇತಿ ಧರ್ಮೋ ವ್ಯವಸ್ಥಿತಃ ॥ ೧೧೭

ಎಲ್ಲರಿಗೂ ಒಂದೊಂದು ಪಾಲಿನಂತೆ ಕೊಡುವುದಲ್ಲದೆ ಅಂತಹ ಒಂದು ಪಾಲು ಹಿರಿಯನ ಉದ್ಧಾರಭಾಗ ಅದರರ್ಧ ಅದರರ್ಧ ಎಂದು ಮತ್ತಿನವರು ಎಂದು ಮೂರನೆ ಪದ್ಧತಿಯು.

ಸ್ವೇಭ್ಯೋಂಽಶೇಭ್ಯಸ್ತು ಕನ್ಯಾಭ್ಯಃ ಪ್ರದದ್ಯುರ್ಭ್ರಾತರಃ ಪೃಥಕ್ ।
ಸ್ವಾತ್ಸ್ವಾದಂಶಾಚ್ಚತುರ್ಭಾಗಂ ಪತಿತಾಃ ಸ್ಯುರದಿತ್ಸವಃ ॥ ೧೧೮

ಎಲ್ಲ ಸೋದರರು ಅವರವರ ಭಾಗದಿಂದ ಸೋದರಿಯರಿಗೆ ಬೇರೆ ಬೇರೆಯಾಗಿ ಕೊಡಬೇಕು. ಆ ಭಾಗವು ಅದರಂಶದ ನಾಲ್ಕನೆ ಒಂದು ಭಾಗಕ್ಕೆ ಕಡಿಮೆ ಇಲ್ಲದಷ್ಟು ಇರಬೇಕು. ಕೊಡದಿದ್ದರೆ ಅಪರಾಧಿಗಳು.

ಅಜಾವಿಕಂ ಸೈಕಶಫಂ ನ ಜಾತು ವಿಷಮಂ ಭಜೇತ್ ।
ಅಜಾವಿಕಂ ತು ವಿಷಮಂ ಜ್ಯೇಷ್ಠಸ್ಯೈವ ವಿಧೀಯತೇ ॥ ೧೧೯

ಕುರಿ, ಆಡು, ಕುದುರೆ ಇವುಗಳು ಭಾಗಸಮ ಸಂಖ್ಯೆಯಾಗಿ ಇಲ್ಲವಾದರೆ ವಿಭಾಗವೇ ಬೇಡ. ಅಂತಹುದು ಜ್ಯೇಷ್ಠನಿಗೆ.

ಯವೀಯಾನ್ ಜ್ಯೇಷ್ಠಭಾರ್ಯಾಯಾಂ ಪುತ್ರಮುತ್ಪಾದಯೇದ್ಯದಿ ।
ಸಮಸ್ತತ್ರ ವಿಭಾಗಃ ಸ್ಯಾದಿತಿ ಧರ್ಮೋ ವ್ಯವಸ್ಥಿತಃ ॥ ೧೨೦

ಕಿರಿಯವನು ಅಣ್ಣನ ಹೆಂಡತಿಯಲ್ಲಿ ನಿಯೋಗದಿಂದ ಸಂತಾನ ಮಾಡಿದರೆ ಅವನಿಗೂ ತನಗೂ ಧರ್ಮನಿರ್ಣಯದಂತೆ ಸಮಾಂಶ ವಿಭಾಗವು

ಉಪಸರ್ಜನಂ ಪ್ರಧಾನಸ್ಯ ಧರ್ಮತೋ ನೋಪಪದ್ಯತೇ ।
ಪಿತಾ ಪ್ರಧಾನಂ ಪ್ರಜನೇ ತಸ್ಮಾದ್ಧರ್ಮೇಣ ತಂ ಭಜೇತ್ ॥ ೧೨೧

ಅಪ್ರಧಾನ ಕ್ಷೇತ್ರಜ ಪುತ್ರನು ತಂದೆಯ ಧರ್ಮವಾದ ಉದ್ಧಾರಕ್ಕೆ ಅಧಿಕಾರಿಯಾಗುವುದಿಲ್ಲ. ಜನ್ಮದಲ್ಲಿ ತಂದೆಯೇ ಪ್ರಧಾನನು. ಆದುದರಿಂದ ಇವರ ವಿಭಾಗದಲ್ಲಿ ಹಿಂದೆ ಹೇಳಿದುದೇ ಧರ್ಮವು

ಪುತ್ರಃ ಕನಿಷ್ಠೋ ಜ್ಯೇಷ್ಠಾಯಾಂ ಕನಿಷ್ಠಾಯಾಂ ಚ ಪೂರ್ವಜಃ ।
ಕಥಂ ತತ್ರ ವಿಭಾಗಃ ಸ್ಯಾದಿತಿ ಚೇತ್ಸಂಶಯೋ ಭವೇತ್ ॥ ೧೨೨

ಒಬ್ಬನ ಅನೇಕ ಹೆಂಡತಿಯರಲ್ಲಿ ಕಿರಿಯಳು ಮೊದಲು ಹೆತ್ತು, ಹಿರಿಯಳು ಮತ್ತೆ ಹೆತ್ತು ಇಬ್ಬರು ಮಕ್ಕಳಲ್ಲಿ ಜೇಷ್ಠತ್ವವು-ವಿಭಾಗವು ಹೇಗೆಂದು ಸಂಶಯವು ಉಂಟಾಗುವುದು.

ಏಕಂ ವೃಷಭಮುದ್ಧಾರಂ ಸಂಹರೇತ ಸ ಪೂರ್ವಜಃ ।
ತತೋಽಪರೇ ಜ್ಯೇಷ್ಠವೃಷಾಸ್ತದೂನಾನಾಂ ಸ್ವಮಾತೃತಃ ॥ ೧೨೩

ಹಿರಿಯ ಹೆಂಡತಿಯ ಮಗನಿಗೆ ಒಂದು ಒಳ್ಳೆ ಎತ್ತು ಉದ್ಧಾರವು. ಉಳಿದವರಿಗೆ ಉಳಿದುದು ವಿವಾಹಕ್ರಮದಿಂದಲೇ ಜ್ಯೇಷ್ಠತ್ವವು.

ಜ್ಯೇಷ್ಠಸ್ತು ಜಾತೋ ಜ್ಯೇಷ್ಠಾಯಾಂ ಹರೇದ್ವೃಷಭಷೋಡಶಾಃ ।
ತತಃ ಸ್ವಮಾತೃತಃ ಶೇಷಾ ಭಜೇರನ್ನಿತಿ ಧಾರಣಾ ॥ ೧೨೪

ಹಿರಿಹೆಂಡತಿಯಲ್ಲಿ ಹಿರಿಯನು ಹುಟ್ಟಿದರೆ ಅವನಿಗೆ ಒಂದು ಎತ್ತು ಹದಿನೈದು ಹಸುಗಳು ಒಟ್ಟು ಹದಿನಾರು ಕೊಡಬೇಕು. ಉಳಿದವರಿಗೆ ಉಳಿದುದು.

ಸದೃಶಸ್ತ್ರೀಷು ಜಾತಾನಾಂ ಪುತ್ರಾಣಾಮವಿಶೇಷತಃ ।
ನ ಮಾತೃತೋ ಜ್ಯೈಷ್ಠ್ಯಮಸ್ತಿ ಜನ್ಮತೋ ಜ್ಯೈಷ್ಠ್ಯಮುಚ್ಯತೇ ॥ ೧೨೫

ಹೆಂಡಿರು ಸವರ್ಣಸ್ತ್ರೀಯರಾದರೆ ಅವರ ಸಂತತಿಯಲ್ಲಿ ಮೊದಲಿನವನು ಹಿರಿಯವನು. ವಿವಾಹಕ್ರಮವಿಲ್ಲ.

ಜನ್ಮಜ್ಯೇಷ್ಠೇನ ಚಾಹ್ವಾನಂ ಸುಬ್ರಹ್ಮಣ್ಯಾಸ್ವಪಿ ಸ್ಮೃತಂ ।
ಯಮಯೋಶ್ಚೈವ ಗರ್ಭೇಷು ಜನ್ಮತೋ ಜ್ಯೇಷ್ಠತಾ ಸ್ಮೃತಾ ॥ ೧೨೬

ಸುಬ್ರಹ್ಮಣ್ಯ ಮಂತ್ರದಲ್ಲಿ ಪ್ರಥಮ ಪುತ್ರನು ಆಮಂತ್ರಿಸುವವನು. ಯಮಲ ಗರ್ಭದಲ್ಲಿಯೂ ಜನ್ಮಕ್ರಮದಿಂದ ಹಿರಿತನವು. ಆದುದರಿಂದ ತಾಯಿಯ ವಿವಾಹಕ್ರಮದಿಂದ ಜ್ಯೇಷ್ಠತ್ವವು ಪುತ್ರನಿಗೆ ಸವರ್ಣಸ್ತ್ರೀಯರಲ್ಲಿ ಇಲ್ಲ.

ಅಪುತ್ರೋಽನೇನ ವಿಧಿನಾ ಸುತಾಂ ಕುರ್ವೀತ ಪುತ್ರಿಕಾಂ ।
ಯದಪತ್ಯಂ ಭವೇದಸ್ಯಾಂ ತನ್ಮಮ ಸ್ಯಾತ್ಸ್ವಧಾಕರಂ ॥ ೧೨೭

ಗಂಡು ಮಕ್ಕಳಿಲ್ಲದವರು ಮಗಳನ್ನು ಪುತ್ರಿಕೆಯೆಂದು ಅಂಗೀಕರಿಸಬಹುದು. ಇವಳಲ್ಲಿ ಜನಿಸುವ ಗಂಡುಮಗು ನನಗೆ ಪಿಂಡದಾಯಿಯಾಗಲಿ ಎಂಬ ಸಂಕಲ್ಪವು. ಈ ಸಂಕಲ್ಪಪೂರ್ವಕವಾಗಿ ಮಗಳ ವಿವಾಹವನ್ನು ಮಾಡಬೇಕು.

ಅಭ್ರಾತೃಕಾಂ ಪ್ರದಾಸ್ಯಾಮಿ ತುಭ್ಯಂ ಕನ್ಯಾಮಲಂಕೃತಾಂ ।
ಅಸ್ಯಾಂ ಯೋ ಜಾಯತೇ ಪುತ್ರಃ ಸ ಮೇ ಪುತ್ರೋ ಭವೇದಿತಿ ॥ ೧೨೭ ಅ

ಸೋದರರಿಲ್ಲದ ಈ ಹುಡುಗಿಯನ್ನು ಅಲಂಕರಿಸಿ ನಿನಗೆ ಕೊಡುತ್ತೇನೆ. ಇವಳಲ್ಲಿ ನಿನಗೆ ಜನಿಸುವ ಪುತ್ರನು ನನಗೆ ಮಗನಾಗಲಿ ಎಂದು ಅವರಿಬ್ಬರ ಒಪ್ಪಂದವು.

ಅನೇನ ತು ವಿಧಾನೇನ ಪುರಾ ಚಕ್ರೇಽಥ ಪುತ್ರಿಕಾಃ ।
ವಿವೃಧ್ಯರ್ಥಂ ಸ್ವವಂಶಸ್ಯ ಸ್ವಯಂ ದಕ್ಷಃ ಪ್ರಜಾಪತಿಃ ॥ ೧೨೮

ಈ ರೀತಿಯಿಂದ ಮೊದಲು ದಕ್ಷಪ್ರಜಾಪತಿಯು ಸ್ವವಂಶವೃದ್ಧಿಗಾಗಿ ಮಗಳನ್ನು ಪುತ್ರಿಕೆಯಾಗಿ ಮಾಡಿಕೊಂಡನು.

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ಸೋಮಾಯ ರಾಜ್ಞೇ ಸತ್ಕೃತ್ಯ ಪ್ರೀತಾತ್ಮಾ ಸಪ್ತವಿಂಶತಿಂ ॥ ೧೨೯

ಆ ದಕ್ಷಪ್ರಜಾಪತಿಯು ಹತ್ತುಮಗಳನ್ನು ಧರ್ಮನಿಗೂ ಹದಿಮೂರನ್ನು ಕಶ್ಯಪನಿಗೂ, ಚಂದ್ರನಿಗೆ ಇಪ್ಪತ್ತೇಳು ಮಂದಿಯನ್ನು ಸಂತೋಷದಿಂದ ಸತ್ಕರಿಸಿ ಕೊಟ್ಟನು.

ಯಥೈವಾತ್ಮಾ ತಥಾ ಪುತ್ರಃ ಪುತ್ರೇಣ ದುಹಿತಾ ಸಮಾ ।
ತಸ್ಯಾಮಾತ್ಮನಿ ತಿಷ್ಠಂತ್ಯಾಂ ಕಥಮನ್ಯೋ ಧನಂ ಹರೇತ್ ॥ ೧೩೦

ತಾನು ತನ್ನ ಮಗ ಮಗಳು ಮೂರು ಮಂದಿಯೂ ಸಮಾನರು. ಆದುದರಿಂದ ತನ್ನ ಪ್ರತಿನಿಧಿಯಾದ ಮಗಳು ಇರುವಾಗ ಪಿತೃಧನವನ್ನು ಬೇರೆ ಯಾರೂ ಸ್ವೀಕರಿಸಬಾರದು

ಮಾತುಸ್ತು ಯೌತಕಂ ಯತ್ಸ್ಯಾತ್ಕುಮಾರೀಭಾಗ ಏವ ಸಃ ।
ದೌಹಿತ್ರ ಏವ ಚ ಹರೇತ್ ಅಪುತ್ರಸ್ಯಾಖಿಲಂ ಧನಂ ॥ ೧೩೧

ತಾಯಿಯ ಧನವಿದ್ದರೆ ಅದು ಮದುವೆಯಾಗದ ಹುಡುಗಿಯರಿಗೆ, ಗಂಡು ಮಕ್ಕಳಿಗೆ ಅದರಲ್ಲಿ ಹಕ್ಕಿಲ್ಲ. ತಾಯಿಯ ತಂದೆಯ ಧನವು ಸಂಪೂರ್ಣ ಮಗಳ ಮಗನಿಗೆ ಸೇರತಕ್ಕದ್ದು. ಮಕ್ಕಳಿದ್ದರೆ ಅವರಿಗೆ.

ದೌಹಿತ್ರೋ ಹ್ಯಖಿಲಂ ರಿಕ್ಥಮಪುತ್ರಸ್ಯ ಪಿತುರ್ಹರೇತ್ ।
ಸ ಏವ ದದ್ಯಾದ್ದ್ವೌ ಪಿಂಡೌ ಪಿತ್ರೇ ಮಾತಾಮಹಾಯ ಚ ॥ ೧೩೨

ದೌಹಿತ್ರನು ತನ್ನ ಅಜ್ಜನ ಧನಕ್ಕೆ ಅಧಿಕಾರಿಯಾದಂತೆ ತಂದೆಯ ಸೊತ್ತಿಗೂ ಹಕ್ಕುದಾರನು. ಅವರಿಬ್ಬರಿಗೂ ಪಿಂಡದಾಯಿಯು.

ಪೌತ್ರದೌಹಿತ್ರಯೋರ್ಲೋಕೇ ನ ವಿಶೇಷೋऽಸ್ತಿ ಧರ್ಮತಃ ।
ತಯೋರ್ಹಿ ಮಾತಾಪಿತರೌ ಸಂಭೂತೌ ತಸ್ಯ ದೇಹತಃ ॥ ೧೩೩

ಪೌತ್ರನು ದೌಹಿತ್ರನು ಇವರಿಗೆ ಧರ್ಮದೃಷ್ಟಿಯಿಂದ ವಿಶೇಷವಿಲ್ಲ. ಪೌತ್ರನ ತಂದೆ, ದೌಹಿತ್ರನ ತಾಯಿ ಮೊದಲನೆಯ ಅಜ್ಜಂದಿರಿಂದ ಹುಟ್ಟಿದವರು.

ಪುತ್ರಿಕಾಯಾಂ ಕೃತಾಯಾಂ ತು ಯದಿ ಪುತ್ರೋऽನು ಜಾಯತೇ ।
ಸಮಸ್ತತ್ರ ವಿಭಾಗಃ ಸ್ಯಾಜ್ಜ್ಯೇಷ್ಠತಾ ನಾಸ್ತಿ ಹಿ ಸ್ತ್ರಿಯಾಃ ॥ ೧೩೪

ಮಗಳನ್ನು ಮಗನಂತೆ ಮಾಡಿಕೊಂಡರೆ ಆಮೇಲೆ ಹುಟ್ಟಿದ ಮಗನು ಅವರಿಬ್ಬರಿಗೆ ಸಮಭಾಗವು ಉದ್ಧಾರವಿಲ್ಲ.

ಅಪುತ್ರಾಯಾಂ ಮೃತಾಯಾಂ ತು ಪುತ್ರಿಕಾಯಾಂ ಕಥಂಚನ ।
ಧನಂ ತತ್ಪುತ್ರಿಕಾಭರ್ತಾ ಹರೇತೈವಾವಿಚಾರಯನ್ ॥ ೧೩೫

ಆ ಪುತ್ರಿಕೆಯು ಮಕ್ಕಳಿಲ್ಲದೆ ಸತ್ತರೆ ಆಗ ಅವಳ ಗಂಡನು ಸ್ಥಿರಚರ ಸೊತ್ತನ್ನು ಸ್ವಾಧೀನ ಮಾಡಬಹುದು

ಅಕೃತಾ ವಾ ಕೃತಾ ವಾಪಿ ಯಂ ವಿಂದೇತ್ಸದೃಶಾತ್ಸುತಂ ।
ಪೌತ್ರೀ ಮಾತಾಮಹಸ್ತೇನ ದದ್ಯಾತ್ಪಿಂಡಂ ಹರೇದ್ಧನಂ ॥ ೧೩೬

ಪುತ್ರಿಕೆಯಾದರೂ ಆಗದಿದ್ದರೂ ಸವರ್ಣಪತಿಯಲ್ಲಿ ಪುತ್ರವಂತಳಾದರೆ ಆ ಪುತ್ರನು ಧನಾಧಿಕಾರಿಯಾಗುವನು. ಮಾತಾಮಹನು ಪೌತ್ರನುಳ್ಳವನು ಆಗುವನು. ಪಿಂಡದಾಯಕನು ಪೌತ್ರನು.

ಪುತ್ರೇಣ ಲೋಕಾನ್ ಜಯತಿ ಪೌತ್ರೇಣಾನಂತ್ಯಮಶ್ನುತೇ ।
ಅಥ ಪುತ್ರಸ್ಯ ಪೌತ್ರೇಣ ಬ್ರಧ್ನಸ್ಯಾಪ್ನೋತಿ ವಿಷ್ಟಪಂ ॥ ೧೩೭

ಪುತ್ರ, ಪೌತ್ರ, ಪುತ್ರಪೌತ್ರ ಇವರಿಂದ ಕುಲವು ಸ್ಥಿರವಾಗಿ ಶ್ರೇಯಸ್ಸು ಉಂಟಾಗುವುದು. ಅವರೇ ಧನಾಧಿಕಾರಿಗಳು. ಹೆಂಡತಿಯಲ್ಲ.

ಪುನ್ನಾಮ್ನೋ ನರಕಾದ್ಯಸ್ಮಾತ್ತ್ರಾಯತೇ ಪಿತರಂ ಸುತಃ ।
ತಸ್ಮಾತ್ ಪುತ್ರ ಇತಿ ಪ್ರೋಕ್ತಃ ಸ್ವಯಮೇವ ಸ್ವಯಂಭುವಾ ॥ ೧೩೮

ಪುತ್ ಎಂಬ ನರಕದಿಂದ ರಕ್ಷಿಸುವವನು ಪುತ್ರನು ಎಂದು ಬ್ರಹ್ಮನು ಮಾಡಿದ ಸಂಜ್ಞೆಯು.

ಪೌತ್ರದೌಹಿತ್ರಯೋರ್ಲೋಕೇ ವಿಶೇಷೋ ನೋಪಪದ್ಯತೇ ।
ದೌಹಿತ್ರೋಽಪಿ ಹ್ಯಮುತ್ರೈನಂ ಸಂತಾರಯತಿ ಪೌತ್ರವತ್ ॥ ೧೩೯

ಮಗನ ಮಗನು, ಮಗಳ ಮಗನು ವಿಶೇಷವುಳ್ಳವರಲ್ಲ. ದೌಹಿತ್ರನು ಮಾತಾಮಹನನ್ನು ಉದ್ಧರಿಸುತ್ತಾನೆ.

ಮಾತುಃ ಪ್ರಥಮತಃ ಪಿಂಡಂ ನಿರ್ವಪೇತ್ಪುತ್ರಿಕಾಸುತಃ ।
ದ್ವಿತೀಯಂ ತು ಪಿತುಸ್ತಸ್ಯಾಸ್ತೃತೀಯಂ ತತ್ಪಿತುಃ ಪಿತುಃ ॥ ೧೪೦

ಪುತ್ರಿಕಾ ಸುತನು ತಾಯಿ, ತಾಯಿಯ ತಂದೆ, ತಂದೆಯ ತಂದೆ ಹೀಗೆ ಮೂವರಿಗೆ ಶ್ರಾದ್ಧದಲ್ಲಿ ಪಿಂಡಹಾಕುವುದು.

ಉಪಪನ್ನೋ ಗುಣೈಃ ಸರ್ವೈಃ ಪುತ್ರೋ ಯಸ್ಯ ತು ದತ್ತ್ರಿಮಃ ।
ಸ ಹರೇತೈವ ತದ್ರಿಕ್ಥಂ ಸಂಪ್ರಾಪ್ತೋಽಪ್ಯನ್ಯಗೋತ್ರತಃ ॥ ೧೪೧

ಒಂದು ತಂದೆಗೆ ಅನೇಕ ವಿಧ ಪುತ್ರರು ಇರುವಾಗ ದತ್ತಪುತ್ರನು ವಿದ್ಯಾ ವಿನಯ ಸತ್ಯ, ದಯೆ, ಶಾಂತಿಗುಣಗಣಮಂಡಿತನಾಗಿದ್ದರೆ ಅವನು ಪರಗೋತ್ರದವನಾದರೂ ಪಿತೃಧನವನ್ನು ಸ್ವೀಕರಿಸಬಹುದು. ಔರಸಪುತ್ರನಾದರೂ ಗುಣಹೀನನು ಅಂಶಪ್ರಕಾರ ಪಡೆಯಬೇಕು.

ಗೋತ್ರರಿಕ್ಥೇ ಜನಯಿತುರ್ನ ಹರೇದ್ದತ್ತ್ರಿಮಃ ಕ್ವಚಿತ್ ।
ಗೋತ್ರರಿಕ್ಥಾನುಗಃ ಪಿಂಡೋ ವ್ಯಪೈತಿ ದದತಃ ಸ್ವಧಾ ॥ ೧೪೨

ದತ್ತಪುತ್ರನು ತನ್ನ ಜನಕನ ಗೋತ್ರವನ್ನು ಧನವನ್ನು ಹೊಂದುವುದಿಲ್ಲ. ಪಿಂಡವು ಗೋತ್ರವನ್ನು ಧನವನ್ನು ಅನುಸರಿಸುವುದು. ಆದುದರಿಂದ ದಾನದ ಮೂಲಕ ಜನಕನು ಪಿಂಡವನ್ನು ಆ ಪುತ್ರನಿಂದ ಕಳೆದುಕೊಳ್ಳುವನು. ಸ್ವೀಕಾರ ಮಾಡಿದವನಿಗೆ ಪಿಂಡಾಧಿಕಾರಿಯು.

ಅನಿಯುಕ್ತಾಸುತಶ್ಚೈವ ಪುತ್ರಿಣ್ಯಾಪ್ತಶ್ಚ ದೇವರಾತ್ ।
ಉಭೌ ತೌ ನಾರ್ಹತೋ ಭಾಗಂ ಜಾರಜಾತಕಕಾಮಜೌ ॥ ೧೪೩

ನಿಯೋಗವನ್ನು ಮೀರಿ ಜನಿಸಿದವನು ಮೊದಲು ಪುತ್ರವತಿಯಾಗಿಯೂ ಪತಿ ಸೋದರರನಿಂದ ಜನಿಸಿದವನು ಇವರಿಬ್ಬರು ತಾಯಿಯ ಗಂಡನ ಧನಭಾಗಕ್ಕೆ ಅರ್ಹರಲ್ಲ. ಮೊದಲಿನವನು ಜಾರತನದಿಂದ ಜನಿಸಿದವನು. ಎರಡನೆಯವನು ಕಾಮುಕತನದಿಂದ ಆದವನು. ಹೀಗೆ ಅನ್ಯಾಯ ಜನ್ಮಕ್ಕೆ ಧನಾಧಿಕಾರವು ಬೇಡ.

ನಿಯುಕ್ತಾಯಾಮಪಿ ಪುಮಾನ್ನಾರ್ಯಾಂ ಜಾತೋಽವಿಧಾನತಃ ।
ನೈವಾರ್ಹಃ ಪೈತೃಕಂ ರಿಕ್ಥಂ ಪತಿತೋತ್ಪಾದಿತೋ ಹಿ ಸಃ ॥ ೧೪೪

ನಿಯೋಗ ವಿಧಿಯನ್ನು ಸಂಪೂರ್ಣ ಆಚರಿಸದೆ ಹುಟ್ಟಿದವನೂ ಕೂಡ ಕ್ಷೇತ್ರಿಕಪಿತೃವಿನ ಧನಕ್ಕೆ ಅರ್ಹನಲ್ಲ. ಪತಿತಜಾತನು.

ಹರೇತ್ತತ್ರ ನಿಯುಕ್ತಾಯಾಂ ಜಾತಃ ಪುತ್ರೋ ಯಥೌರಸಃ ।
ಕ್ಷೇತ್ರಿಕಸ್ಯ ತು ತದ್ಬೀಜಂ ಧರ್ಮತಃ ಪ್ರಸವಶ್ಚ ಸಃ ॥ ೧೪೫

ಔರಸಪುತ್ರನಂತೆ ನಿಯೋಗಸಂಜಾತ ಪುತ್ರನು ಧನಾಧಿಕಾರಿಯಾಗುವನು. ಧರ್ಮಬಂಧನದಿಂದ ಅವನು ಕ್ಷೇತ್ರಿಕಪಿತೃವಿನ ಸಂತತಿಯೂ ಬೀಜವೂ ಆಗುವನು.

ಧನಂ ಯೋ ಬಿಭೃಯಾದ್ ಭ್ರಾತುರ್ಮೃತಸ್ಯ ಸ್ತ್ರಿಯಮೇವ ಚ ।
ಸೋಽಪತ್ಯಂ ಭ್ರಾತುರುತ್ಪಾದ್ಯ ದದ್ಯಾತ್ತಸ್ಯೈವ ತದ್ಧನಂ ॥ ೧೪೬

ವಿಭಕ್ತಸೋದರನು ಮೃತನಾದ ಮೇಲೆ ಅವನ ಹೆಂಡತಿಯನ್ನು ಮತ್ತು ಸೊತ್ತನ್ನು ರಕ್ಷಿಸಿದ ಸೋದರನು ನಿಯೋಗದಿಂದ ಪುತ್ರೋತ್ಪಾದನೆ ಮಾಡಿದರೆ ಅವನ ಧನವನ್ನು ಆ ಕುಮಾರನಿಗೆ ಕೊಡಬೇಕು. ವಿಭಾಗವಾಗದೆ ನಿಯೋಗ ಜನ್ಯನಿಗೆ ವಿಭಾಗವಿಧಿಯು ಹೇಳಲ್ಪಟ್ಟಿದೆ.

ಯಾ ನಿಯುಕ್ತಾನ್ಯತಃ ಪುತ್ರಂ ದೇವರಾದ್ವಾಪ್ಯವಾಪ್ನುಯಾತ್ ।
ತಂ ಕಾಮಜಮರಿಕ್ಥೀಯಂ ವೃಥೋತ್ಪನ್ನಂ ಪ್ರಚಕ್ಷತೇ ॥ ೧೪೭

ನಿಯೋಗವು ಗುರುವಿಹಿತವಾಗಿ ಪುತ್ರನು ಜನಿಸಿದರೂ ಜನನಕಾಲದಲ್ಲಿ ಆ ಸ್ತ್ರೀ-ಪುರುಷರು ಕಾಮಭಾವದುಷ್ಟರಾಗಿದ್ದರೆ ಜನಿಸಿದವನು ಧನಾಧಿಕಾರಿಯಾಗುವುದು ಬೇಡ. ಅವನ ಜನ್ಮವೃಥಾ

ಏತದ್ವಿಧಾನಂ ವಿಜ್ಞೇಯಂ ವಿಭಾಗಸ್ಯೈಕಯೋನಿಷು ।
ಬಹ್ವೀಷು ಚೈಕಜಾತಾನಾಂ ನಾನಾಸ್ತ್ರೀಷು ನಿಬೋಧತ ॥ ೧೪೮

ಈ ವರೆಗೆ ಹೇಳಿದ ವಿಭಾಗ ಕ್ರಮವು ಒಂದೇ ತಾಯಿಯ ಸಂತತಿಯವರಿಗೆ. ಬೇರೆ ಬೇರೆ ಜಾತಿಯ ತಾಯಿಯ ಮಕ್ಕಳು ಒಂದೇ ತಾಯಿಯ ಸೊತ್ತನ್ನು ವಿಭಾಗಿಸುವ ಕ್ರಮವನ್ನು ಹೇಳಲಾಗುವುದು.

ಬ್ರಾಹ್ಮಣಸ್ಯಾನುಪೂರ್ವ್ಯೇಣ ಚತಸ್ರಸ್ತು ಯದಿ ಸ್ತ್ರಿಯಃ ।
ತಾಸಾಂ ಪುತ್ರೇಷು ಜಾತೇಷು ವಿಭಾಗೇಽಯಂ ವಿಧಿಃ ಸ್ಮೃತಃ ॥ ೧೪೯

ಬ್ರಾಹ್ಮಣನಿಗೆ ಕ್ರಮವಾಗಿ ನಾಲ್ಕು ಜಾತಿಯ ನಾಲ್ಕು ಹೆಂಡಿರು ಇರಬಹುದು. ಅವರಲ್ಲಿ ಮಕ್ಕಳಿದ್ದರೆ ದಾಯಭಾಗಕ್ರಮವು ಈ ರೀತಿ—

ಕೀನಾಶೋ ಗೋವೃಷೋ ಯಾನಮಲಂಕಾರಶ್ಚ ವೇಶ್ಮ ಚ ।
ವಿಪ್ರಸ್ಯೌದ್ಧಾರಿಕಂ ದೇಯಮೇಕಾಂಶಶ್ಚ ಪ್ರಧಾನತಃ ॥ ೧೫೦

ಕೂಲಿಜನ, ಜೋಡಿಗಾಗುವ ಎತ್ತು, ವಾಹನ, ಆಭರಣ, ಮನೆ ಇವುಗಳ ಪ್ರಧಾನಾಂಶವು ಬ್ರಾಹ್ಮಣೀ ಪುತ್ರನಿಗೆ ಉದ್ಧಾರವಾಗಿ ಸಿಗಬೇಕು. ಉಳಿದುದನ್ನು ಮುಂದೆ ಹೇಳುವಂತೆ ವಿಭಾಗಿಸುವುದು.

ತ್ರ್ಯಂಶಂ ದಾಯಾದ್ಧರೇದ್ವಿಪ್ರೋ ದ್ವಾವಂಶೌ ಕ್ಷತ್ರಿಯಾಸುತಃ ।
ವೈಶ್ಯಾಜಃ ಸಾರ್ಧಮೇವಾಂಶಂ ಅಂಶಂ ಶೂದ್ರಾಸುತೋ ಹರೇತ್ ॥ ೧೫೧

ಸಮಗ್ರಪಿತೃಧನದಲ್ಲಿ ಪುತ್ರಸಂಖ್ಯೆಯನುಸಾರ ವಿಭಾಗಿಸಿ ಬ್ರಾಹ್ಮಣನಿಗೆ ಮೂರಂಶ, ಕ್ಷತ್ರಿಯನಿಗೆ ಎರಡಂಶ, ವೈಶ್ಯನಿಗೆ ಒಂದುವರೆ ಅಂಶ, ಶೂದ್ರನಿಗೆ ಒಂದಂಶ ಧನವನ್ನು ಕೊಡಬೇಕು.

ಸರ್ವಂ ವಾ ರಿಕ್ಥಜಾತಂ ತದ್ದಶಧಾ ಪರಿಕಲ್ಪ್ಯ ಚ ।
ಧರ್ಮ್ಯಂ ವಿಭಾಗಂ ಕುರ್ವೀತ ವಿಧಿನಾನೇನ ಧರ್ಮವಿತ್ ॥ ೧೫೨

ಇದು ಇನ್ನೊಂದು ವಿಭಾಗ ಪ್ರಕಾರವು. ಪಿತೃಧನವನ್ನು ಹತ್ತುಪಾಲು ಮಾಡಿ ಮುಂದೆ ಹೇಳುವಂತೆ ಕೊಡುವುದು ಒಂದು ಧರ್ಮವು.

ಚತುರೋಽಂಶಾನ್ ಹರೇದ್ವಿಪ್ರಸ್ತ್ರೀನಂಶಾನ್ ಕ್ಷತ್ರಿಯಾಸುತಃ |
ವೈಶ್ಯಾಪುತ್ರೋ ಹರೇದ್ದ್ವ್ಯಂಶಮಂಶಂ ಶೂದ್ರಾಸುತೋ ಹರೇತ್ || ೧೫೩

ಹತ್ತುಪಾಲಿನಲ್ಲಿ ನಾಲ್ಕು ಬ್ರಾಹ್ಮಣನಿಗೆ, ಮೂರು ಕ್ಷತ್ರಿಯನಿಗೆ, ಎರಡು ವೈಶ್ಯನಿಗೆ, ಒಂದು ಶೂದ್ರಾಪುತ್ರನಿಗೆ ಎಂದು ಇದು ಎರಡನೇ ರೀತಿ.

ಯದ್ಯಪಿ ಸ್ಯಾತ್ತು ಸತ್ಪುತ್ರೋಽಪ್ಯಸತ್ಪುತ್ರೋಽಪಿ ವಾ ಭವೇತ್ |
ನಾಧಿಕಂ ದಶಮಾದ್ದದ್ಯಾಚ್ಛೂದ್ರಾಪುತ್ರಾಯ ಧರ್ಮತಃ || ೧೫೪

ಬಹುವಿವಾಹವಾದ ಬ್ರಾಹ್ಮಣನಿಗೆ ಎಲ್ಲ ಹೆಂಡಿರಲ್ಲಿ ಮಕ್ಕಳಿರಲಿ ಇಲ್ಲದಿರಲಿ, ಶೂದ್ರಾಪುತ್ರನಿಗೆ ಹತ್ತರಲ್ಲೊಂದು ಪಾಲಲ್ಲದೆ ಅಧಿಕವನ್ನು ಕೊಡಕೂಡದು.

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಪುತ್ರೋ ನ ರಿಕ್ಥಭಾಕ್ |
ಯದೇವಾಸ್ಯ ಪಿತಾ ದದ್ಯಾತ್ ತದೇವಾಸ್ಯ ಧನಂ ಭವೇತ್ || ೧೫೫

ತ್ರೈವರ್ಣಿಕರು ಶೂದ್ರಸ್ತ್ರೀಸಂತತಿಗೆ ಪಾಲುಕೊಡದೆ ಸಂತೋಷದ ಸ್ವಲ್ಪ ಧನ ಕೊಡುವುದು ಒಳ್ಳೆದು.

ಸಮವರ್ಣಾಸು ಯೇ ಜಾತಾಃ ಸರ್ವೇ ಪುತ್ರಾ ದ್ವಿಜನ್ಮನಾಂ |
ಉದ್ಧಾರಂ ಜ್ಯಾಯಸೇ ದತ್ವಾ ಭಜೇರನ್ನಿತರೇ ಸಮಂ || ೧೫೬

ತ್ರೈವರ್ಣಿಕರಿಗೆ ಸ್ವವರ್ಣದ ಅನೇಕ ಸ್ತ್ರೀಯರಲ್ಲಿ ಎಷ್ಟು ಸಂತತಿಯಿದ್ದರೂ ಅವರು ಹಿರಿಯನಿಗೆ ಉದ್ಧಾರಕೊಟ್ಟು ಉಳಿದುದನ್ನು ಸಮವಾಗಿ ಹಂಚಿಕೊಳ್ಳಬೇಕು.

ಶೂದ್ರಸ್ಯ ತು ಸವರ್ಣೈವ ನಾನ್ಯಾ ಭಾರ್ಯಾ ವಿಧೀಯತೇ |
ತಸ್ಯಾಂ ಜಾತಾಃ ಸಮಾಂಶಾಃ ಸ್ಯುರ್ಯದಿ ಪುತ್ರಶತಂ ಭವೇತ್ || ೧೫೭

ಶೂದ್ರನಿಗೆ ಧರ್ಮತಃ ಸ್ವಜಾತಿ ಸ್ತ್ರೀಯರು ಮಾತ್ರ ಹೆಂಡಿರು. ಅವರ ಮಕ್ಕಳು ಸಮಭಾಗ ತಕ್ಕೊಳ್ಳುವುದು.

ಪುತ್ರಾನ್ ದ್ವಾದಶ ಯಾನಾಹ ನೃಣಾಂ ಸ್ವಾಯಂಭುವೋ ಮನುಃ ।
ತೇಷಾಂ ಷಡ್ ಬಂಧುದಾಯಾದಾಃ ಷಡದಾಯಾದಬಾಂಧವಾಃ ॥ ೧೫೮

ಹನ್ನೆರಡು ವಿಧ ಪುತ್ರರು ಎಂದು ಮನುಮತವು. ಅವರು ತಂದೆಯ ಸೊತ್ತಿಗೆ ಹಕ್ಕುದಾರರು. ಒಂದನೆ ವರ್ಗದ ಆರು ಮಂದಿ ಸಪಿಂಡರು, ಸೋದಕರು, ಪಿಂಡದಾನ, ಉದಕದಾನ ಮಾಡುವವರು. ಉತ್ತರಾಧಿಕಾರಿಯಿಲ್ಲದ ಸಪಿಂಡರ ಧನಕ್ಕೂ ಅಧಿಕಾರಿಗಳು. ಎರಡನೆ ವರ್ಗದವರು ಉತ್ತರಾಧಿಕಾರಿಯಿಲ್ಲದ ಕುಟುಂಬದ ಹಣಕ್ಕೆ ಹಕ್ಕುದಾರಿಕೆ ಒಂದು ಹೊರತು ಮತ್ತೆಲ್ಲ ಅರ್ಹತೆಯುಳ್ಳವರು.

ಔರಸಃ ಕ್ಷೇತ್ರಜಶ್ಚೈವ ದತ್ತಃ ಕೃತ್ರಿಮ ಏವ ಚ ।
ಗೂಢೋತ್ಪನ್ನೋಽಪವಿದ್ಧಶ್ಚ ದಾಯಾದಾ ಬಾಂಧವಾಶ್ಚ ಷಟ್ ॥ ೧೫೯

ಒಂದನೆ ವರ್ಗದ ಆರುಮಂದಿಯ ಹೆಸರು-ವಿವರ ಮುಂದಿದೆ.

ಕಾನೀನಶ್ಚ ಸಹೋಢಶ್ಚ ಕ್ರೀತಃ ಪೌನರ್ಭವಸ್ತಥಾ ।
ಸ್ವಯಂ ದತ್ತಶ್ಚ ಶೌದ್ರಶ್ಚ ಷಡದಾಯಾದಬಾಂಧವಾಃ ॥ ೧೬೦

ಇವರು ಎರಡನ ವರ್ಗದ ಆರು ಮಂದಿ.

ಯಾದೃಶಂ ಫಲಮಾಪ್ನೋತಿ ಕುಪ್ಲವೈಃ ಸಂತರನ್ಜಲಂ ।
ತಾದೃಶಂ ಫಲಮಾಪ್ನೋತಿ ಕುಪುತ್ರೈಃ ಸಂತರಂಸ್ತಮಃ ॥ ೧೬೧

ಒಡಕು ದೋಣಿಯಿಂದ ನೀರನ್ನು ದಾಟಿದರೆ ಸುಖವಾಗಿ ದಡ ಸೇರುವುದು ಸಂಶಯ. ಆದರಂತ ಕೆಟ್ಟ ಸಂತತಿಯಿಂದ ಒಳ್ಳೆ ಫಲವಿಲ್ಲ. ಪರಲೋಕದಲ್ಲಿ ದುಃಖವಿದೆ. ಔರಸನು ಶ್ರೇಷ್ಠನು.

ಯದ್ಯೇಕರಿಕ್ಥಿನೌ ಸ್ಯಾತಾಮೌರಸಕ್ಷೇತ್ರಜೌ ಸುತೌ ।
ಯಸ್ಯ ಯತ್ಪೈತೃಕಂ ರಿಕ್ಥಂ ಸ ತದ್ಗೃಹ್ಣೀತ ನೇತರಃ ॥ ೧೬೨

ಒಬ್ಬನಿಗೆ ಕ್ಷೇತ್ರಜ ಪುತ್ರನಾದ ಮೇಲೆ ಔರಸಪುತ್ರನು ಜನಿಸಬಹುದು. ಆಗ ಅವರು ಒಂದೇ ತಂದೆಯ ಧನಕ್ಕೆ ಇಬ್ಬರು ಹಕ್ಕುದಾರರು. ಆದರೂ ಔರಸಪುತ್ರನು ತನ್ನ ತಂದೆಯ ಸಂಪೂರ್ಣ ಧನವನ್ನು ಹೊಂದಬೇಕು. ಅವನ

ಕ್ಷೇತ್ರಜ ಸೋದರನಿಗೆ ಕೊಡಬೇಕಾಗಿಲ್ಲ. ಆ ಕ್ಷೇತ್ರಜ ಪುತ್ರನು ಕ್ಷೇತ್ರಿಕ ಪಿತೃವಿನ ಧನವನ್ನು ಬಿಟ್ಟು ತನ್ನ ಜನಕನ ಧನವನ್ನು ಪಡೆಯಬಹುದು. ಕ್ಷೇತ್ರಜ ಪುತ್ರನು ಕ್ಷೇತ್ರಿಕಪಿತೃವಿಗೂ ಜನಕ ಪಿತೃವಿಗೂ ಔರಸರು ಇಲ್ಲದೆ ಹೋದರೆ ಇಬ್ಬರ ಧನವನ್ನೂ ತಕ್ಕೊಂಡು ಇಬ್ಬರಿಗೂ ಪಿಂಡಹಾಕಬಹುದು.

ಏಕ ಏವೌರಸಃ ಪುತ್ರಃ ಪಿತ್ರ್ಯಸ್ಯ ವಸುನಃ ಪ್ರಭುಃ ।
ಶೇಷಾಣಾಮಾನೃಶಂಸ್ಯಾರ್ಥಂ ಪ್ರದದ್ಯಾತ್ತು ಪ್ರಜೀವನಂ ॥ ೧೬೩

ಔರಸಪುತ್ರನು ತಂದೆಯ ಸಕಲದ್ರವ್ಯ ಸ್ವಾಮಿಯಾದರೂ ದತ್ತಕೃತ್ರಿಮಾದಿ ಪುತ್ರರಿಗೆ ದಯೆಯಿಂದ ಜೀವನಾಂಶ ಕೊಡಬೇಕು.

ಷಷ್ಠಂ ತು ಕ್ಷೇತ್ರಜಸ್ಯಾಂಶಂ ಪ್ರದದ್ಯಾತ್ಪೈತೃಕಾದ್ಧನಾತ್ ।
ಔರಸೋ ವಿಭಜನ್ ದಾಯಂ ಪಿತ್ರ್ಯಂ ಪಂಚಮಮೇವ ವಾ ॥ ೧೬೪

ಕ್ಷೇತ್ರಜಪುತ್ರನು ತನ್ನ ಜನಕನಿಗೆ ಬಹುಸಂತತಿಯೂ ಕ್ಷೇತ್ರಕಪಿತೃವಿಗೆ ಔರಸಪುತ್ರನೂ ಇರುವಾಗ ಕ್ಷೇತ್ರಿಕಪಿತೃದ್ರವ್ಯದಿಂದ ಔರಸ ಸೋದರನು ಕೊಟ್ಟು ಆರನೆ ಒಂದಂಶ, ಐದನೆ ಒಂದಂಶವನ್ನು ಹೊಂದಲು ಅಧಿಕಾರಿಯಾಗುವನು. ವಿದ್ಯಾವಿನಯ ಗುಣವಂತನಿಗೆ ಹೆಚ್ಚು. ಗುಣಹೀನನಿಗೆ ಕಡಿಮೆ.

ಔರಸಕ್ಷೇತ್ರಜೌ ಪುತ್ರೌ ಪಿತೃರಿಕ್ಥಸ್ಯ ಭಾಗಿನೌ ।
ದಶಾಪರೇ ತು ಕ್ರಮಶೋ ಗೋತ್ರರಿಕ್ಥಾಂಶ ಭಾಗಿನಃ ॥ ೧೬೫

ಔರಸನು ಕ್ಷೇತ್ರಜನು ಇಬ್ಬರು ಹಿಂದೆ ಹೇಳಿದಂತೆ ವಿಶೇಷ ಸಂದರ್ಭದಲ್ಲಿ ಪಿತೃಧನಾಧಿಕಾರವುಳ್ಳವರು, ಉಳಿದ ಹತ್ತುಮಂದಿ ಸಪಿಂಡರ ಗೋತ್ರಜರ ಧನವನ್ನು ಹೊಂದುವರು.

ಸ್ವಕ್ಷೇತ್ರೇ ಸಂಸ್ಕೃತಾಯಾಂ ತು ಸ್ವಯಮುತ್ಪಾದಯೇದ್ಧಿ ಯಂ ।
ತಮೌರಸಂ ವಿಜಾನೀಯಾತ್ಪುತ್ರಂ ಪ್ರಥಮಕಲ್ಪಿಕಂ ॥ ೧೬೬

ಸವರ್ಣಳೂ, ಮಂತ್ರಸಂಸ್ಕೃತಳೂ ಆದ ಹೆಂಡತಿಯಲ್ಲಿ ತನ್ನಿಂದ ಜನಿಸಿದವನು ಔರಸಪುತ್ರನು. ಹನ್ನೆರಡು ವಿಧರಲ್ಲಿ ಪ್ರಧಾನನು. ಉಳಿದವರು ಆಪತ್ಪುತ್ರರು. ಅಮುಖ್ಯರು.

ಯಸ್ತಲ್ಪಜಃ ಪ್ರಮೀತಸ್ಯ ಕ್ಲೀಬಸ್ಯ ವ್ಯಾಧಿತಸ್ಯ ವಾ ।
ಸ್ವಧರ್ಮೇಣ ನಿಯುಕ್ತಾಯಾಂ ಸ ಪುತ್ರಃ ಕ್ಷೇತ್ರಜಃ ಸ್ಮೃತಃ ॥ ೧೬೭

ಗಂಡನು ನಪುಂಸಕನೂ ರೋಗಿಯೂ ಆಗಿ ನಿಃಸಂತತಿಯಾದಾಗ ಗುರು ಸಮ್ಮತಿಯಿಂದ ಯೋಗ್ಯ ಸಪಿಂಡ ದೇವರಾದಿಗಳ ಮೂಲಕ ಜನಿಸಿದವನು ಕ್ಷೇತ್ರಜನು. ನಿಯೋಗದಿಂದ ಸ್ವಸ್ತ್ರೀಯಲ್ಲಿ.

ಮಾತಾ ಪಿತಾ ವಾ ದದ್ಯಾತಾಂ ಯಮದ್ಭಿಃ ಪುತ್ರಮಾಪದಿ ।
ಸದೃಶಂ ಪ್ರೀತಿಸಂಯುಕ್ತಂ ಸ ಜ್ಞೇಯೋ ದತ್ರಿಮಃ ಸುತಃ ॥ ೧೬೮

ಮಕ್ಕಳಿಲ್ಲದವನಿಗೆ ಪ್ರೀತಿಪೂರ್ವಕ ತಾಯ್ತಂದೆಗಳ ಉದಕದಾನ ಸಹಿತವಾಗಿ ಮಗನನ್ನು ಕೊಟ್ಟರೆ ಅವನು ದತ್ತಸ್ವೀಕೃತಪುತ್ರನು.

ಸದೃಶಂ ತು ಪ್ರಕುರ್ಯಾದ್ಯಂ ಗುಣದೋಷವಿಚಕ್ಷಣಂ ।
ಪುತ್ರಂ ಪುತ್ರಗುಣೈರ್ಯುಕ್ತಂ ಸ ವಿಜ್ಞೇಯಶ್ಚ ಕೃತ್ರಿಮಃ ॥ ೧೬೯

ಪಿಂಡದಾನದಿಂದ ಗುಣದೋಷಗಳನ್ನು ತಿಳಿದವನಾದ, ಮಾತಾಪಿತೃ ಪರಿಚರ್ಯಾ ಭಕ್ತಿಸಂಪನ್ನನಾದ, ಸವರ್ಣನು ಸಂತತಿಹೀನರಿಂದ ಪುತ್ರಭಾವ ಪಾತ್ರನಾದರೆ ಅವನು ಕೃತ್ರಿಮ ಪುತ್ರನು.

ಉತ್ಪದ್ಯತೇ ಗೃಹೇ ಯಸ್ಯ ನ ಚ ಜ್ಞಾಯೇತ ಕಸ್ಯ ಸಃ ।
ಸ ಗೃಹೇ ಗೂಢ ಉತ್ಪನ್ನಸ್ತಸ್ಯ ಸ್ಯಾದ್ಯಸ್ಯ ತಲ್ಪಜಃ ॥ ೧೭೦

ತನ್ನ ಹೆಂಡತಿಯು ತಿಳಿಯದಂತೆ ಬೇರೆಯಾರಿಂದಾದರೂ ಪ್ರಸವಿಸಿದರೆ ತನ್ನ ಮನೆಯಲ್ಲಿ ವಾಸವಾಗಿದ್ದರೂ ಅಂತಹ ಪ್ರಜೆಯು ಗೂಢೋತ್ಪನ್ನ ಪುತ್ರನು, ಕ್ಷೇತ್ರಜನು.

ಮಾತಾಪಿತೃಭ್ಯಾಮುತ್ಸೃಷ್ಟಂ ತಯೋರನ್ಯತರೇಣ ವಾ ।
ಯಂ ಪುತ್ರಂ ಪರಿಗೃಹ್ಣೀಯಾದಪವಿದ್ಧಃ ಸ ಉಚ್ಯತೇ ॥ ೧೭೧

ಸತ್ತು ಅಥವಾ ಬಿಟ್ಟು ಅನಾಥವಾದ ಮಗುವನ್ನು ಪುತ್ರಭಾವದಿಂದ ಸ್ವೀಕರಿಸಿ ಪೋಷಿಸಲ್ಪಟ್ಟ ಮಗು ಅಪವಿದ್ಧ ಪುತ್ರನು.

ಪಿತೃವೇಶ್ಮನಿ ಕನ್ಯಾ ತು ಯಂ ಪುತ್ರಂ ಜನಯೇದ್ರಹಃ ।
ತಂ ಕಾನೀನಂ ವದೇನ್ನಾಮ್ನಾ ವೋಢುಃ ಕನ್ಯಾಸಮುದ್ಭವಂ ॥ ೧೭೨

ಹುಡುಗಿಯು ತಂದೆ ಮನೆಯಲ್ಲಿರುವಾಗ ಗುಟ್ಟಾಗಿ ಹುಟ್ಟಿದ ಮಗುವಿನೊಡನೆ ಮದುವೆಯಾದರೆ ಆ ಮಗು ವಿವಾಹಿತನಿಗೆ ಕಾನೀನ ಕ್ಷೇತ್ರಜಪುತ್ರನು.

ಯಾ ಗರ್ಭಿಣೀ ಸಂಸ್ಕ್ರಿಯತೇ ಜ್ಞಾತಾಜ್ಞಾತಾಪಿ ವಾ ಸತೀ ।
ವೋಢುಃ ಸ ಗರ್ಭೋ ಭವತಿ ಸಹೋಢ ಇತಿ ಚೋಚ್ಯತೇ ॥ ೧೭೩

ತಿಳಿದೋ ತಿಳಿಯದೆಯೋ ಗರ್ಭಿಣಿಗೆ ವಿವಾಹಸಂಸ್ಕಾರವಾದರೆ ಜನಿಸಿದ ಶಿಶುವು ಮದುವೆಯಾದವನಿಗೆ ಸಹೋಢ ಪುತ್ರನು.

ಕ್ರೀಣೀಯಾದ್ಯಸ್ತ್ವಪತ್ಯಾರ್ಥಂ ಮಾತಾಪಿತ್ರೋರ್ಯಮಂತಿಕಾತ್ ।
ಸ ಕ್ರೀತಕಃ ಸುತಸ್ತಸ್ಯ ಸದೃಶೋಽಸದೃಶೋಽಪಿ ವಾ ॥ ೧೭೪

ಮಾತಾಪಿತೃಗಳಿಂದ ಕ್ರಯಕ್ಕೆ ಪಡೆದ ಶಿಶುವು ಕ್ರೀತಪುತ್ರನು.

ಯಾ ಪತ್ಯಾ ವಾ ಪರಿತ್ಯಕ್ತಾ ವಿಧವಾ ವಾ ಸ್ವಯೇಚ್ಛಯಾ ।
ಉತ್ಪಾದಯೇತ್ಪುನರ್ಭೂತ್ವಾ ಸ ಪೌನರ್ಭವ ಉಚ್ಯತೇ ॥ ೧೭೫

ವಿಧವೆ ಅಥವಾ ಗಂಡನಿಂದ ಬಿಡಲ್ಪಟ್ಟವಳಿಗೆ ಪುನಃ ಬೇರೆಯವನಿಂದ ಹುಟ್ಟಿದ ಮಗು ಆ ಜನಕನಿಗೆ ಪೌನರ್ಭವ ಪುತ್ರನು.

ಸಾ ಚೇದಕ್ಷತಯೋನಿಃ ಸ್ಯಾದ್ಗತಪ್ರತ್ಯಾಗತಾಪಿ ವಾ ।
ಪೌನರ್ಭವೇನ ಭರ್ತ್ರಾ ಸಾ ಪುನಃ ಸಂಸ್ಕಾರಮರ್ಹತಿ ॥ ೧೭೬

ಹಿಂದೆ ಹೇಳಿದಂತೆ ಪರಪುರುಷನೊಡನೆ ಸೇರಿದವಳು ಋತುಮತಿಯಲ್ಲವಾಗಿದ್ದರೆ ಈ ಗಂಡನೊಡನೆ ಅವಳಿಗೆ ಪುನಃ ಮಂತ್ರಪೂರ್ವಕ ವಿವಾಹ ಮಾಡಬಹುದು.

ಮಾತಾಪಿತೃವಿಹೀನೋ ಯಸ್ತ್ಯಕ್ತೋ ವಾ ಸ್ಯಾದಕಾರಣಾತ್ ।
ಆತ್ಮಾನಂ ಸ್ಪರ್ಶಯೇದ್ಯಸ್ಮೈ ಸ್ವಯಂದತ್ತಸ್ತು ಸ ಸ್ಮೃತಃ ॥ ೧೭೭

ತಾಯ್ತಂದೆ ಸತ್ತರೆ, ಇದ್ದೂ ಅವರು ಬಿಟ್ಟರೆ, ಆ ಮಗು ಯಾರ ಸಂಬಂಧ ಪಡೆಯುವುದೋ ಅದು ಅವನಿಗೆ ಸ್ವಯಂದತ್ತನು.

ಯಂ ಬ್ರಾಹ್ಮಣಸ್ತು ಶೂದ್ರಾಯಾಂ ಕಾಮಾದುತ್ಪಾದಯೇತ್ಸುತಂ ।
ಸ ಪಾರಯನ್ನೇವ ಶವಸ್ತಸ್ಮಾತ್ಪಾರಶವಃ ಸ್ಮೃತಃ ॥ ೧೭೮

ಬ್ರಾಹ್ಮಣನಿಗೆ ಶೂದ್ರಸ್ತ್ರೀಯರಲ್ಲಿ ಕಾಮಜನ್ಯ ಪುತ್ರನು ಪಾರಶವನು.

ದಾಸ್ಯಾಂ ವಾ ದಾಸದಾಸ್ಯಾಂ ವಾ ಯಃ ಶೂದ್ರಸ್ಯ ಸುತೋ ಭವೇತ್ ।
ಸೋಽನುಜ್ಞಾತೋ ಹರೇದಂಶಮಿತಿ ಧರ್ಮೋ ವ್ಯವಸ್ಥಿತಃ ॥ ೧೭೯

ಶೂದ್ರನಿಗೆ ದಾಸಿಯಲ್ಲಿ, ದಾಸಸ್ತ್ರೀಯಲ್ಲಿ ಜನಿಸಿದ ಪುತ್ರನಿಗೆ ಪಿತೃ ಸಮ್ಮತಿಯಿಂದ ಪಿತೃದ್ರವ್ಯದಲ್ಲಿ ಸಮಭಾಗವಿದೆ.

ಕ್ಷೇತ್ರಜಾದೀನ್ ಸುತಾನೇತಾನೇಕಾದಶ ಯಥೋದಿತಾನ್ ।
ಪುತ್ರಪ್ರತಿನಿಧೀನಾಹುಃ ಕ್ರಿಯಾಲೋಪಾನ್ಮನೀಷಿಣಃ ॥ ೧೮೦

ಔರಸನ ಹೊರತು ಉಳಿದ ಹನ್ನೊಂದು ವಿಧಪುತ್ರರು ಪುತ್ರಪ್ರತಿನಿಧಿಗಳು. ಧನಾಧಿಕಾರ ಶ್ರಾದ್ಧಾಧಿಕಾರಗಳ ಪ್ರಾಪ್ತಿಗೆ ಪುತ್ರರಾದವರು. ಮುಖ್ಯ ಪುತ್ರರಲ್ಲ ಜಾತ-ಕರ್ಮಾದಿ ಸಂಸ್ಕಾರವೂ ಇಲ್ಲ.

ಯ ಏತೇಽಭಿಹಿತಾಃ ಪುತ್ರಾಃ ಪ್ರಸಂಗಾದನ್ಯಬೀಜಜಾಃ ।
ಯಸ್ಯ ತೇ ಬೀಜತೋ ಜಾತಾಸ್ತಸ್ಯ ತೇ ನೇತರಸ್ಯ ತು ॥ ೧೮೧

ಪುತ್ರಪ್ರಕರಣದಲ್ಲಿ ಹೇಳಿದ ಈ ಹನ್ನೊಂದು ಪುತ್ರರು ಯಥಾರ್ಥವಾಗಿ ಜನಕನಿಗೆ ಪುತ್ರರಾಗದಿರುವುದರಿಂದ ಔರಸಪುತ್ರನು ಪುತ್ರಿಕೆಯು ಇರುವಾಗ ಇಂತವರು ಪುತ್ರಸ್ಥಾನಕ್ಕೆ ಅರ್ಹರಲ್ಲ.

ಭ್ರಾತೃಣಾಮೇಕಜಾತಾನಾಮೇಕಶ್ಚೇತ್ಪುತ್ರವಾನ್ ಭವೇತ್ ।
ಸರ್ವಾಂಸ್ತಾನ್ ತೇನ ಪುತ್ರೇಣ ಪುತ್ರಿಣೋ ಮನುರಬ್ರವೀತ್ ॥ ೧೮೨

ಒಂದೇ ತಂದೆಯ ಅನೇಕ ಸೋದರರಲ್ಲಿ ಒಬ್ಬನಿಗೆ ಸಂತತಿಯಿದ್ದರೆ

ಅವನು ಎಲ್ಲರಿಗೂ ಮಗನಾಗಿ ಪಿಂಡದಾಯಕನೂ ಧನಾಧಿಕಾರಿಯೂ ಆಗುವನಾದುದರಿಂದ ಕ್ಷೇತ್ರಜಾದಿಪುತ್ರ ಕಲ್ಪನೆಯು ಬೇಡ.

ಸರ್ವಾಸಾಮೇಕಪತ್ನೀನಾಮೇಕಾ ಚೇತ್ಪುತ್ರಿಣೀ ಭವೇತ್ ।
ಸರ್ವಾಸ್ತಾಸ್ತೇನ ಪುತ್ರೇಣ ಪ್ರಾಹ ಪುತ್ರವತೀರ್ಮನುಃ ॥ ೧೮೩

ಒಬ್ಬನ ಅನೇಕ ಹೆಂಡಿರಲ್ಲಿ ಒಬ್ಬಳಿಗೆ ಮಕ್ಕಳಿದ್ದರೆ ಅವರೆಲ್ಲರಿಗೂ ಅವನೇ ಮಗನಾಗುವನು.

ಶ್ರೇಯಸಃ ಶ್ರೇಯಸೋಽಲಾಭೇ ಪಾಪೀಯಾನ್ ರಿಕ್ಥಮರ್ಹತಿ ।
ಬಹವಶ್ಚೇತ್ತು ಸದೃಶಾಃ ಸರ್ವೇ ರಿಕ್ಥಸ್ಯ ಭಾಗಿನಃ ॥ ೧೮೪

ಹಿಂದೆ ಹೇಳಿದ ದ್ವಾದಶ ವಿಧಪುತ್ರರಲ್ಲಿ ಮೊದಲು ಮೊದಲಿನವರು ಶ್ರೇಷ್ಠರು. ಶ್ರೇಷ್ಠರಿರುವಾಗ ಇತರರಿಗೆ ಧನಾರ್ಹತೆಯಿಲ್ಲ. ಸಮಾನರು ಬಹುಮಂದಿಯಿದ್ದರೆ ಅವರೆಲ್ಲರಿಗೂ ಧನವಿದೆ.

ನ ಭ್ರಾತರೋ ನ ಪಿತರಃ ಪುತ್ರಾ ರಿಕ್ಥಹರಾಃ ಪಿತುಃ ।
ಪಿತಾ ಹರೇದಪುತ್ರಸ್ಯ ರಿಕ್ಥಂ ಭ್ರಾತರ ಏವ ಚ ॥ ೧೮೫

ಔರಸಪುತ್ರನಿಲ್ಲದವನ ಸೋದರ ಭ್ರಾತೃಗಳು ತಂದೆಯ ಸೋದರರು ಧನಾಧಿಕಾರಿಗಳಲ್ಲ. ಗೌಣಪುತ್ರರಿದ್ದರೆ ಅವರೇ ಅರ್ಹರು. ಅಂತಹವರು ಇಲ್ಲದಿದ್ದರೆ ಪುತ್ರಹೀನನ ತಂದೆಯು ಹಕ್ಕುದಾರನು. ಅವನಿಲ್ಲದೆ ಹೋದರೆ ತಂದೆಯ ಸೋದರರು ಧನಕ್ಕೆ ಅರ್ಹರು.

ತ್ರಯಾಣಾಮುದಕಂ ಕಾರ್ಯಂ ತ್ರಿಷು ಪಿಂಡಃ ಪ್ರವರ್ತತೇ ।
ಚತುರ್ಥಃ ಸಂಪ್ರದಾತೈಷಾಂ ಪಂಚಮೋ ನೋಪಪದ್ಯತೇ ॥ ೧೮೬

ತಂದೆ, ಅವನ ತಂದೆ, ಅವನ ತಂದೆ ಹೀಗೆ ಮೂವರಿಗೆ ಮಗನಾದ ನಾಲ್ಕನೆಯವನು ಆ ಮೂವರಿಗೆ ಪಿಂಡದಾಯಕನು. ಆದುದರಿಂದ ಪಿಂಡೋದ್ದೇಶ್ಯ ಪಿತೃಗಳು ಯಾರು ಸಂತತಿಹೀನರಾದರೂ ಅವರ ದ್ರವ್ಯವು ಪಿಂಡದಾಯಕನಿಗೆ ಸೇರಬಹುದು.

ಅನಂತರಃ ಸಪಿಂಡಾದ್ಯಸ್ತಸ್ಯ ತಸ್ಯ ಧನಂ ಭವೇತ್ ।
ಅತ ಊರ್ಧ್ವಂ ಸಕುಲ್ಯಃ ಸ್ಯಾದಾಚಾರ್ಯಃ ಶಿಷ್ಯ ಏವ ವಾ ॥ ೧೮೭

ಸಪಿಂಡರಲ್ಲಿ ಮತ್ತೆ-ಮತ್ತಿನವರು ಹಿರಿಯರ ಧನಕ್ಕೆ ಹಕ್ಕು ಉಳ್ಳವರು. ಸಪಿಂಡರು ಇಲ್ಲವಾದರೆ ಸೋದಕರು, ಆಚಾರ್ಯರು ಶಿಷ್ಯನು ಇವರೆಲ್ಲ ದ್ರವ್ಯ ಭೋಕ್ತೃಗಳು. ತನ್ನ ಹೆಂಡತಿ ತಾಯಿ ಇವರೆಲ್ಲ ಹಕ್ಕು ಉಳ್ಳವರು.

ಸರ್ವೇಷಾಮಪ್ಯಭಾವೇ ತು ಬ್ರಾಹ್ಮಣಾ ರಿಕ್ಥಭಾಗಿನಃ ।
ತ್ರೈವಿದ್ಯಾಃ ಶುಚಯೋ ದಾಂತಾಸ್ತಥಾ ಧರ್ಮೋ ನ ಹೀಯತೇ ॥ ೧೮೮

ಹಿಂದೆ ಹೇಳಿದ ಉತ್ತರಾಧಿಕಾರಿಗಳು ಯಾರೂ ಇಲ್ಲವಾದರೆ ಬ್ರಾಹ್ಮಣರು ಯೋಗ್ಯರಾದವರು ನಿರ್ಗತಿಗಳ ಧನವನ್ನು ಸ್ವೀಕರಿಸಬಹುದು.

ಅಹಾರ್ಯಂ ಬ್ರಾಹ್ಮಣದ್ರವ್ಯಂ ರಾಜ್ಞಾ ನಿತ್ಯಮಿತಿ ಸ್ಥಿತಿಃ ।
ಇತರೇಷಾಂ ತು ವರ್ಣಾನಾಂ ಸರ್ವಾಭಾವೇ ಹರೇನ್ನೃಪಃ ॥ ೧೮೯

ರಾಜನಿಗೆ ಬ್ರಾಹ್ಮಣ ದ್ರವ್ಯವು ಸ್ವೀಕಾರ್ಯವಲ್ಲ. ಯಾರೂ ಇಲ್ಲದಾಗ ರಾಜಕೋಶದಲ್ಲಿ ವಿಲಯನವಾಗಬಹುದು.

ಸಂಸ್ಥಿತಸ್ಯಾನಪತ್ಯಸ್ಯ ಸಗೋತ್ರಾತ್ಪುತ್ರಮಾಹರೇತ್ ।
ತತ್ರ ಯದ್ರಿಕ್ಥಜಾತಂ ಸ್ಯಾತ್ತತ್ತಸ್ಮಿನ್ ಪ್ರತಿಪಾದಯೇತ್ ॥ ೧೯೦

ಸಂತತಿಯಿಲ್ಲದೆ ಸತ್ತವನ ಹೆಂಡತಿಯು ಸಗೋತ್ರದವನಿಂದ ಸಂತತಿ ಪಡೆಯಬಹುದು. ಆ ಸಂತತಿಗೆ ಮೃತನ ದ್ರವ್ಯವು ಕೊಡಲ್ಪಡತಕ್ಕದ್ದು.

ದ್ವೌ ತು ಯೌ ವಿವದೇಯಾತಾಂ ದ್ವಾಭ್ಯಾಂ ಜಾತೌ ಸ್ತ್ರಿಯಾ ಧನೇ ।
ತಯೋರ್ಯದ್ಯಸ್ಯ ಪಿತ್ರ್ಯಂ ಸ್ಯಾತ್ತತ್ಸ ಗೃಹ್ಣೀತ ನೇತರಃ ॥ ೧೯೧

ಮೃತನಿಗೆ ಮಗುವಿದ್ದೂ ಕೂಡ ಹೆಂಡತಿಯು ಬೇರೊಬ್ಬನಿಂದ ಸಂತತಿ ಯುಳ್ಳವಳಾದರೆ ಆಗ ತಾಯಿಯ ವಶ ಇರುವ ತಂದೆಯ ಸೊತ್ತು ಅವನ ಮಗನಾದವನಿಗಲ್ಲದೆ ಬೇರೊಬ್ಬನಿಗೆ ಜನಿಸಿದ ಸೋದರನಿಗೆ ಕೊಡಕೂಡದು.

ಜನನ್ಯಾಂ ಸಂಸ್ಥಿತಾಯಾಂ ತು ಸಮಂ ಸರ್ವೇ ಸಹೋದರಾಃ ।
ಭಜೇರನ್ಮಾತೃಕಂ ರಿಕ್ಥಂ ಭಗಿನ್ಯಶ್ಚ ಸನಾಭಯಃ ॥ ೧೯೨

ತಾಯಿ ಸತ್ತಕೂಡಲೆ ಸೋದರರು ಸೋದರಿಯರು ಎಲ್ಲರೂ ತಾಯಿಯ ದ್ರವ್ಯವನ್ನು ಪಾಲುಮಾಡಿಕೊಳ್ಳಬೇಕು.

ಯಾಸ್ತಾಸಾಂ ಸ್ಯುರ್ದುಹಿತರಸ್ತಾಸಾಮಪಿ ಯಥಾರ್ಹತಃ ।
ಮಾತಾಮಹ್ಯಾ ಧನಾತ್ಕಿಂಚಿತ್ ಪ್ರದೇಯಂ ಪ್ರೀತಿಪೂರ್ವಕಂ ॥ ೧೯೩

ಸೋದರಿಯರ ಹೆಣ್ಣುಮಕ್ಕಳಿದ್ದರೆ ಅವರಿಗೆ ಅಜ್ಜಿಯ ಹಣ ಸ್ವಲ್ಪವಾದರೂ ಅಂಶಪ್ರಕಾರ ಪ್ರೀತಿಯಿಂದ ಕೊಡಬೇಕು.

ಅಧ್ಯಗ್ನ್ಯಧ್ಯಾವಾಹನಿಕಂ ದತ್ತಂ ಚ ಪ್ರೀತಿಕರ್ಮಣಿ ।
ಭ್ರಾತೃ ಮಾತೃ ಪಿತೃ ಪ್ರಾಪ್ತಂ ಷಡ್ವಿಧಂ ಸ್ತ್ರೀಧನಂ ಸ್ಮೃತಂ ॥ ೧೯೪

ವಿವಾಹಾಗ್ನಿ ಸಮೀಪ, ಪತಿಗೃಹಗಮನ ಕಾಲದಲ್ಲಿ, ಗಂಡ, ಸೋದರ ತಾಯಿ-ತಂದೆ ಇವರು ಯಾವುದೇ ಸಂದರ್ಭದಲ್ಲಿ ಪ್ರೀತಿಪೂರ್ವಕ ಕೊಟ್ಟದ್ದು ಇಂತಹ ಆರು ವಿಧದ ದ್ರವ್ಯವು ಸ್ತ್ರೀಧನವು ಅದರ ವಿಭಾಗಕ್ರಮವು ಹಿಂದೆ ಹೇಳಿದಂತೆ.

ಅನ್ವಾಧೇಯಂ ಚ ಯದ್ದತ್ತಂ ಪತ್ಯಾ ಪ್ರೀತೇನ ಚೈವ ಯತ್ ।
ಪತ್ಯೌ ಜೀವತಿ ವೃತ್ತಾಯಾಃ ಪ್ರಜಾಯಾಸ್ತದ್ಧನಂ ಭವೇತ್ ॥ ೧೯೫

ಮದುವೆಯ ಬಳಿಕ ಗಂಡ, ನೆಂಟರು, ಇಷ್ಟರು ಪ್ರೀತಿಯಿಂದ ಕೊಟ್ಟ ಹಣವು ಗಂಡನಿರುವಾಗ ಸತ್ತವಳ ಮಕ್ಕಳಿಗೆ ಸೇರುವುದು.

ಬ್ರಾಹ್ಮದೈವಾರ್ಷಗಾಂಧರ್ವಪ್ರಾಜಾಪತ್ಯೇಷು ಯದ್ವಸು ।
ಅಪ್ರಜಾಯಾಮತೀತಾಯಾಂ ಭರ್ತುರೇವ ತದಿಷ್ಯತೇ ॥ ೧೯೬

ಈ ಐದು ವಿಧವಿವಾಹಗಳಿಂದ ಮದುವೆಯಾದ ಹೆಂಡತಿಯು ಮಕ್ಕಳಿಲ್ಲದೆ ಸತ್ತರೆ ಅವರ ಹಣವು ಗಂಡನಿಗೆ ಸೇರುವುದು.

ಯತ್ತ್ವಸ್ಯಾಃ ಸ್ಯಾದ್ಧನಂ ದತ್ತಂ ವಿವಾಹೇಷ್ವಾಸುರಾದಿಷು ।
ಅಪ್ರಜಾಯಾಮತೀತಾಯಾಂ ಮಾತಾಪಿತ್ರೋಸ್ತದಿಷ್ಯತೇ ॥ ೧೯೭

ಇತರ ವಿಧ ವಿವಾಹದಿಂದ ಹೆಂಡತಿಯಾದವಳು ಸ್ತ್ರೀಧನವುಳ್ಳವಳಾದರೆ ಅವಳು ಮಕ್ಕಳಿಲ್ಲದೆ ಮೃತಳಾದ ಮೇಲೆ ಸ್ತ್ರೀಧನವು ತಾಯ್ತಂದೆಗೆ ಹೋಗಬೇಕು. ಗಂಡನಿಗಿಲ್ಲ.

ಸ್ತ್ರಿಯಾಂ ತು ಯದ್ಭವೇದ್ವಿತ್ತಂ ಪಿತ್ರಾ ದತ್ತಂ ಕಥಂಚನ ।
ಬ್ರಾಹ್ಮಣೀ ತದ್ಧರೇತ್ಕನ್ಯಾ ತದಪತ್ಯಸ್ಯ ವಾ ಭವೇತ್ ॥ ೧೯೮

ಒಬ್ಬ ಗಂಡನ ಬಹುಸ್ತ್ರೀಯರು ಮಕ್ಕಳಿಲ್ಲದೆ ಸತ್ತರೆ ಅವರ ಸ್ತ್ರೀ ಧನವು ಬ್ರಾಹ್ಮಣ ಸ್ತ್ರೀಯ ಮಗಳ ಹಕ್ಕಾಗುವುದು.

ನ ನಿರ್ಹಾರಂ ಸ್ತ್ರಿಯಃ ಕುರ್ಯುಃ ಕುಟುಂಬಾದ್ ಬಹುಮಧ್ಯಗಾತ್ ।
ಸ್ವಕಾದಪಿ ಚ ವಿತ್ತಾದ್ಧಿ ಸ್ವಸ್ಯ ಭರ್ತುರನಾಜ್ಞಯಾ ॥ ೧೯೯

ಸಮಷ್ಟಿ ಕುಟುಂಬದಲ್ಲಿ ಜೀವಿಸುವ ಹೆಂಗಸು ಕೈಗಂಟು ಮಾಡಬಾರದು. ಗಂಡನ ಸಮ್ಮತಿಯಿಲ್ಲದೆ ತಮ್ಮ ಸೊತ್ತಿನಿಂದಲೂ ವಿಭಾಗಿಸಿಡಬಾರದು.

ಪತ್ಯೌ ಜೀವತಿ ಯಃ ಸ್ತ್ರೀಭಿರಲಂಕಾರೋ ಧೃತೋ ಭವೇತ್ ।
ನ ತಂ ಭಜೇರನ್ದಾಯಾದಾ ಭಜಮಾನಾಃ ಪತಂತಿ ತೇ ॥ ೨೦೦

ಗಂಡನು ಬದುಕಿರುವಾಗ ಧರಿಸುತ್ತಿದ್ದ ಅಲಂಕಾರವನ್ನು ವಿಭಾಗ ದ್ರವ್ಯವೆಂದು ಪರಿಗಣಿಸಿ ವಿಭಾಗಿಸಿದರೆ ಪಾಪವು.

ಅನಂಶೌ ಕ್ಲೀಬಪತಿತೌ ಜಾತ್ಯಂಧಬಧಿರೌ ತಥಾ ।
ಉನ್ಮತ್ತಜಡಮೂಕಾಶ್ಚ ಯೇ ಚ ಕೇಚಿನ್ನಿರಿಂದ್ರಿಯಾಃ ॥ ೨೦೧

ನಪುಂಸಕ, ಮಹಾಪಾತಕಿ, ಕುರುಡ, ಕಿವುಡ, ಹುಚ್ಚು, ಹೆಡ್ಡ, ಮೂಗ, ಹೆಳವ ಇಂತಹವರಿಗೆ ಪಿತೃಧನದಲ್ಲಿ ಅಂಶವಿಲ್ಲ. ಜೀವನಾಂಶವಿದೆ.

ಸರ್ವೇಷಾಮಪಿ ತು ನ್ಯಾಯ್ಯಂ ದಾತುಂ ಶಕ್ತ್ಯಾ ಮನೀಷಿಣಾ ।
ಗ್ರಾಸಾಚ್ಛಾದನಮತ್ಯಂತಂ ಪತಿತೋ ಹ್ಯದದದ್ಭವೇತ್ ॥ ೨೦೨

ಧರ್ಮಬದ್ಧವಾದ ಪಿತೃಧನಾಧಿಕಾರಿಯು ಅನಂಶರಾದ ಕ್ಲೀಬಾದಿಗಳಿಗೆ ಅನ್ನ-ಬಟ್ಟೆಗಳನ್ನು ಶಕ್ತ್ಯನುಸಾರ ಕೊಡದಿದ್ದರೆ ಪಾಪವಿದೆ.

ಯದ್ಯರ್ಥಿತಾ ತು ದಾರೈಃ ಸ್ಯಾತ್ಕ್ಲೀಬಾದೀನಾಂ ಕಥಂಚನ ।
ತೇಷಾಮುತ್ಪನ್ನತಂತೂನಾಮಪತ್ಯಂ ದಾಯಮರ್ಹತಿ ॥ ೨೦೩

ಅಂಗಹೀನರು ವಿವಾಹವಾದರೆ ಅವರ ಮಕ್ಕಳಿಗೆ ಭಾಗವಿದೆ,

ಯತ್ಕಿಂಚಿತ್ಪಿತರಿ ಪ್ರೇತೇ ಧನಂ ಜ್ಯೇಷ್ಠೋಽಧಿಗಚ್ಛತಿ ।
ಭಾಗೋ ಯವೀಯಸಾಂ ತತ್ರ ಯದಿ ವಿದ್ಯಾನುಪಾಲಿತಃ ॥ ೨೦೪

ಪಿತೃಮರಣಾನಂತರ ಅವಿಭಾಗಾವಸ್ಥೆಯಲ್ಲಿ ಹಿರಿಯವನು ತನ್ನ ಉಪಾಯದಿಂದ ಏನಾದರೂ ಧನಾರ್ಜನೆ ಮಾಡಿದರೆ ತಮ್ಮಂದಿರು ವಿದ್ಯಾವಂತರಾದರೆ ಮಾತ್ರ ಅವರಿಗೆ ಅದರಲ್ಲಿ ಭಾಗವು.

ಅವಿದ್ಯಾನಾಂ ತು ಸರ್ವೇಷಾಮೀಹಾತಶ್ಚೇದ್ಧನಂ ಭವೇತ್ ।
ಸಮಸ್ತತ್ರ ವಿಭಾಗಃ ಸ್ಯಾದಪಿತ್ರ್ಯ ಇತಿ ಧಾರಣಾ ॥ ೨೦೫

ವಿದ್ಯಾಹೀನರಾದ ಸೋದರರರು ಕೃಷಿವಾಣಿಜ್ಯಾದಿಗಳಿಂದ ಧನಾರ್ಜನೆ ಮಾಡಿದ ಧನದಲ್ಲಿ ಪಿತ್ರಾರ್ಜಿತವಲ್ಲದ ಕಾರಣ ಸಮವಿಭಾಗವು ಎಂದು ನ್ಯಾಯವು.

ವಿದ್ಯಾಧನಂ ತು ಯದ್ಯಸ್ಯ ತತ್ತಸ್ಯೈವ ಧನಂ ಭವೇತ್ ।
ಮೈತ್ರ್ಯಮೌದ್ವಾಹಿಕಂ ಚೈವ ಮಾಧುಪರ್ಕಿಕಮೇವ ಚ ॥ ೨೦೬

ವರಾರ್ಚನ ಇತರ ಸಂದರ್ಭದ ಮಧುಪರ್ಕ ಸತ್ಕಾರದಲ್ಲಿ ಸಿಕ್ಕಿದ ಹಣ, ಗೆಳೆತನದಿಂದ ಬಂದ ಹಣ, ಮದುವೆಯಲ್ಲಿ ಸಿಕ್ಕಿದ ಹಣ, ವಿದ್ಯಾಬಲದಿಂದ ಲಭಿಸಿದ ಹಣ ಸ್ವಾರ್ಜಿತವು, ವಿಭಾಜ್ಯವಲ್ಲ.

ಭ್ರಾತೄಣಾಂ ಯಸ್ತು ನೇಹೇತ ಧನಂ ಶಕ್ತಃ ಸ್ವಕರ್ಮಣಾ ।
ಸ ನಿರ್ಭಾಜ್ಯಃ ಸ್ವಕಾದಂಶಾತ್ಕಿಂಚಿದ್ದತ್ತ್ವೋಪಜೀವನಂ ॥ ೨೦೭

ಅರ್ಥಾರ್ಜನ ಸಾಮರ್ಥ್ಯವುಳ್ಳವನು ಪಿತೃಧನವನ್ನು ಅಪೇಕ್ಷಿಸದಿದ್ದರೂ ಅವನಿಗೆ ಸ್ವಲ್ಪ ಕೊಟ್ಟು ವಿಭಾಗಿಸಬೇಕು.

ಅನುಪಘ್ನನ್ ಪಿತೃದ್ರವ್ಯಂ ಶ್ರಮೇಣ ಯದುಪಾರ್ಜಿತಂ ।
ಸ್ವಯಮೀಹಿತಲಬ್ಧಂ ತನ್ನಾಕಾಮೋ ದಾತುಮರ್ಹತಿ ॥ ೨೦೮

ಪಿತೃಧನವನ್ನು ಪೀಡಿಸದೆ ಸ್ವಶ್ರಮದಿಂದ ಸಂಪಾದಿಸಿದ ಧನವು ಸ್ವಾರ್ಜಿತವಾದುರಿಂದ ಸೋದರರಿಗೆ ಕೊಡಬೇಕಾಗಿಲ್ಲ.

ಪೈತೃಕಂ ತು ಪಿ - ದ್ರವ್ಯಮನವಾಪ್ತಂ ಯದಾಪ್ನುಯಾತ್ ।
ನ ತತ್ಪುತ್ರೈರ್ಭಜೇತ್ಸಾರ್ಧಮಕಾಮಃ ಸ್ವಯಮರ್ಜಿತಂ ॥ ೨೦೯

ಪಿತೃಧನವಾದರೂ ತಂದೆಗೆ ದೊರೆಯದೆ ತನಗೆ ಲಭ್ಯವಾದರೆ ಅದು ಕೂಡ ಸ್ವಾರ್ಜಿತವಾಗಿ ಸಮಷ್ಟಿಯಲ್ಲಿ ಸೇರುವುದು ಬೇಡ.

ವಿಭಕ್ತಾಃ ಸಹ ಜೀವಂತೋ ವಿಭಜೇರನ್ ಪುನರ್ಯದಿ ।
ಸಮಸ್ತತ್ರ ವಿಭಾಗಃ ಸ್ಯಾಜ್ಜ್ಯೈಷ್ಠ್ಯಂ ತತ್ರ ನ ವಿದ್ಯತೇ ॥ ೨೧೦

ವಿಭಾಗವಾದ ಬಳಿಕ ಪುನಃ ಸಹಜೀವನ ನಡೆಸಿದ ಮೇಲೆ ಎರಡನೆ ವಿಭಾಗದಲ್ಲಿ ಉದ್ಧಾರವು ಇರುವುದಿಲ್ಲ.

ಯೇಷಾಂ ಜ್ಯೇಷ್ಠಃ ಕನಿಷ್ಠೋ ವಾ ಹೀಯೇತಾಂಶಪ್ರದಾನತಃ ।
ಮ್ರಿಯೇತಾನ್ಯತರೋ ವಾಪಿ ತಸ್ಯ ಭಾಗೋ ನ ಲುಪ್ಯತೇ ॥ ೨೧೧

ಸೋದರರಲ್ಲಿ ಒಬ್ಬನು ವಿಭಾಗಕಾಲದಲ್ಲಿ ಯಾವುದಾದರೂ ಕಾರಣ ದಿಂದ ಭಾಗಸ್ವೀಕರಿಸದೆ ಉಳಿದರೆ, ಸತ್ತರೆ ಅವನ ಅಂಶವು ಲೋಪಹೊಂದು ವುದಿಲ್ಲ.

ಸೋದರ್ಯಾ ವಿಭಜೇರಂಸ್ತಂ ಸಮೇತ್ಯ ಸಹಿತಾಃ ಸಮಂ ।
ಭ್ರಾತರೋ ಯೇ ಚ ಸಂಸೃಷ್ಟಾ ಭಗಿನ್ಯಶ್ಚ ಸನಾಭಯಃ ॥ ೨೧೨

ಸೋದರರು, ಸೋದರಿಯರು, ಸಪತ್ನೀ ಸೋದರರು ಎಲ್ಲ ಅಂಶ ಸ್ವೀಕ ರಿಸದ ಧನವನ್ನು ವಿಭಾಗಿಸಿಕೊಳ್ಳಬಹುದು.

ಯೋ ಜ್ಯೇಷ್ಠೋ ವಿನಿಕುರ್ವೀತ ಲೋಭಾದ್ಭ್ರಾತೄನ್ ಯವೀಯಸಃ ।
ಸೋಽಜ್ಯೇಷ್ಠಃ ಸ್ಯಾದಭಾಗಶ್ಚ ನಿಯಂತವ್ಯಶ್ಚ ರಾಜಭಿಃ ॥ ೨೧೩

ಅಣ್ಣನು ಲೋಭದಿಂದ ಕಿರಿಯರಿಗೆ ಮೋಸ ಮಾಡಿದರೆ ಅವನಿಗೆ ಉದ್ಧಾರವಿಲ್ಲ ರಾಜನಿಂದಲೂ ದಂಡಾರ್ಹನು.

ಸರ್ವ ಏವ ವಿಕರ್ಮಸ್ಥಾ ನಾರ್ಹಂತಿ ಭ್ರಾತರೋ ಧನಂ ।
ನ ಚಾದತ್ವಾ ಕನಿಷ್ಠೇಭ್ಯೋ ಜ್ಯೇಷ್ಠಃ ಕುರ್ವೀತ ಯೌತಕಂ ॥ ೨೧೪

ಜೂಜು, ಮದ್ಯ, ವೇಶ್ಯಾ ಇವುಗಳಲ್ಲಿ ಆಸಕ್ತರಾದವರು ಸೋದರರಾದರೂ ಧನಾಧಿಕಾರಿಗಳಲ್ಲ. ಅಣ್ಣನು ಸಮಷ್ಟಿಯಿಂದ ತೆಗೆದು ಬೇರೆ ಇಟ್ಟುಕೊಂಡು ಕಿರಿಯರಿಗೆ ಕೊಡದಿರಬಾರದು.

ಭ್ರಾತೄಣಾಮವಿಭಕ್ತಾನಾಂ ಯದ್ಯುತ್ಥಾನಂ ಭವೇತ್ಸಹ ।
ನ ಪುತ್ರಭಾಗಂ ವಿಷಮಂ ಪಿತಾ ದದ್ಯಾತ್ಕಥಂಚನ ॥ ೨೧೫

ಸೋದರರರು ವಿಭಾಗದ ಮೊದಲು ಒಡನೆಯೇ ಉತ್ಪಾದನೆ ಮಾಡುತ್ತಿದ್ದರೆ ತಂದೆಯು ಮಕ್ಕಳಿಗೆ ಸಮಾಂಶವನ್ನೇ ಕೊಡತಕ್ಕದ್ದು.

ಊರ್ಧ್ವಂ ವಿಭಾಗಾಜ್ಜಾತಸ್ತು ಪಿತ್ರ್ಯಮೇವ ಹರೇದ್ಧನಂ ।
ಸಂಸೃಷ್ಟಾಸ್ತೇನ ವಾ ಯೆ ಸ್ಯುರ್ವಿಭಜೇತ ಸ ತೈಃ ಸಹ ॥ ೨೧೬

ವಿಭಾಗದ ಬಳಿಕ ಹುಟ್ಟಿದವನು ತಂದೆಯ ಧನವನ್ನು ಮಾತ್ರ ಹೊಂದುವನು. ಪಾಲಾಗಿ ಒಟ್ಟಿಗೆ ಇದ್ದವರು ಪುನಃ ಸಮಭಾಗ ಮಾಡಿಕೊಳ್ಳಬಹುದು.

ಅನಪತ್ಯಸ್ಯ ಪುತ್ರಸ್ಯ ಮಾತಾ ದಾಯಮವಾಪ್ನುಯಾತ್ ।
ಮಾತರ್ಯಪಿ ಚ ವೃತ್ತಾಯಾಂ ಪಿತುರ್ಮಾತಾ ಹರೇದ್ಧನಂ ॥ ೨೧೭

ಮಕ್ಕಳಿಲ್ಲದ ತಂದೆಯ ದ್ರವ್ಯಕ್ಕೆ ಅವನ ತಾಯಿಯು ಹಕ್ಕುದಾರಳು ತಾಯಿಯಿಲ್ಲದಿದ್ದರೆ ತಂದೆಯ ತಾಯಿಯೂ ಹಕ್ಕುದಾರಳು.

ಋಣೇ ಧನೇ ಚ ಸರ್ವಸ್ಮಿನ್ ಪ್ರವಿಭಕ್ತೇ ಯಥಾವಿಧಿ ।
ಪಶ್ಚಾದ್ದೃಶ್ಯೇತ ಯತ್ಕಿಂಚಿತ್ ತತ್ಸರ್ವಂ ಸಮತಾಂ ನಯೇತ್ ॥ ೨೧೮

ಸಾಲ–ಮೂಲ ಎಲ್ಲ ಪಾಲು ಮಾಡಿದ ಮೇಲೆ, ಮತ್ತು ಗೊತ್ತು ಹತ್ತಿದ ಸೊತ್ತನ್ನು ಸಮಭಾಗ ಮಾಡಬೇಕು.

ವಸ್ತ್ರಂ ಪತ್ರಮಲಂಕಾರಂ ಕೃತಾನ್ನಮುದಕಂ ಸ್ತ್ರಿಯಃ ।
ಯೋಗಕ್ಷೇಮಂ ಪಚಾರಂ ಚ ನ ವಿಭಾಜ್ಯಂ ಪ್ರಚಕ್ಷತೇ ॥ ೨೧೯

ಬಟ್ಟೆ, ವಾಹನ, ಆಭರಣ, ಆಹಾರ, ನೀರು, ದಾಸಿ, ಪುರೋಹಿತ, ಗೋಚರಾವು ಇವು ವಿಭಾಗ ಯೋಗ್ಯಗಳಲ್ಲ.

ಅಯಮುಕ್ತೋ ವಿಭಾಗೋ ವಾ ಪುತ್ರಾಣಾಂ ಚ ಕ್ರಿಯಾವಿಧಿಃ ।
ಕ್ರಮಶಃ ಕ್ಷೇತ್ರಜಾದೀನಾಂ ದ್ಯೂತಧರ್ಮಂ ನಿಬೋಧತ ॥ ೨೨೦

ಈ ವರೆಗೆ ವಿಭಾಗ ಪದ್ಧತಿ ಹಾಗು ಮಕ್ಕಳ ಸಂಸ್ಕಾರ ಕ್ರಮವನ್ನು ಹೇಳಿದುದಾಯಿತು. ಇನ್ನು ಮೇಲೆ ದ್ಯೂತ ಧರ್ಮವನ್ನು ಹೇಳಲಾಗುವುದು.

ದ್ಯೂತಂ ಸಮಾಹ್ವಯಂ ಚೈವ ರಾಜಾ ರಾಷ್ಟ್ರಾನ್ನಿವಾರಯೇತ್ ।
ರಾಜ್ಯಾಂತಕರಣಾವೇತೌ ದ್ವೌ ದೋಷೌ ಪೃಥಿವೀಕ್ಷಿತಾಂ ॥ ೨೨೧

ಜೂಜು, ಸಮಾಹ್ವಯ ಎರಡೂ ತನ್ನ ರಾಜ್ಯದಲ್ಲಿ ನಡೆಯದಂತೆ ನೋಡಿಕೊಳ್ಳಬೇಕು. ಈ ಎರಡು ದೋಷಗಳು ರಾಜನಿಗೂ ರಾಷ್ಟ್ರಕ್ಕೂ ವಿನಾಶಕಾರಿಗಳು.

ಪ್ರಕಾಶಮೇತತ್ತಾಸ್ಕರ್ಯಂ ಯದ್ದೇವನಸಮಾಹ್ವಯೌ ।
ತಯೋರ್ನಿತ್ಯಂ ಪ್ರತೀಘಾತೇ ನೃಪತಿರ್ಯತ್ನವಾನ್ಭವೇತ್ ॥ ೨೨೨

ಜೂಜು ಎಂದರೆ ಹಗಲುಗಳ್ಳತನವು. ರಾಜನು ಸದಾಕಾಲವು ಅದರ ನಿವಾರಣೆಗಾಗಿ ಪ್ರಯತ್ನಿಸಬೇಕು.

ಅಪ್ರಾಣಿಭಿರ್ಯತ್ಕ್ರಿಯತೇ ತಲ್ಲೋಕೇ ದ್ಯೂತಮುಚ್ಯತೇ ।
ಪ್ರಾಣಿಭಿಃ ಕ್ರಿಯತೇ ಯಸ್ತು ಸ ವಿಜ್ಞೇಯಃ ಸಮಾಹ್ವಯಃ ॥ ೨೨೩

ಪ್ರಾಣಿಯಲ್ಲದ ಸಾಮಗ್ರಿಗಳಿಂದ ಆಡುವುದು ಜೂಜು. ಪ್ರಾಣಿಗಳಿಂದ ಆಡುವುದು ಸಮಾಹ್ವಯವು.

ದ್ಯೂತಂ ಸಮಾಹ್ವಯಂ ಚೈವ ಯಃ ಕುರ್ಯಾತ್ಕಾರಯೇತ ವಾ ।
ತಾನ್ ಸರ್ವಾನ್ ಘಾತಯೇದ್ರಾಜಾ ಶೂದ್ರಾಂಶ್ಚ ದ್ವಿಜಲಿಂಗಿನಃ ॥ ೨೨೪

ಎಲ್ಲ ವಿಧದ ಜೂಜೂ ಇರಬಾರದು. ಬೇರೆಯವರ ವೇಶವನ್ನು ಧರಿಸುವವರನ್ನು ಅವರ ದುರ್ವೃತ್ತಿಯ ಉದ್ದೇಶದ ಗಾಢತೆಗೆ ಸರಿಯಾಗಿ ಕ್ರೂರವಾದ ದಂಡನೆಯನ್ನು ವಿಧಿಸಬೇಕು.

ಕಿತವಾನ್ ಕುಶೀಲವಾನ್ ಕ್ರೂರಾನ್ ಪಾಷಂಡಸ್ಥಾಂಶ್ಚ ಮಾನವಾನ್ ।
ವಿಕರ್ಮಸ್ಥಾನ್ ಶೌಂಡಿಕಾಂಶ್ಚ ಕ್ಷಿಪ್ರಂ ನಿರ್ವಾಸಯೇತ್ಪುರಾತ್ ॥ ೨೨೫

ಜೂಜುಗಾರರು, ವೇಶಧಾರಿಗಳು, ವೇದವಿರೋಧಿಗಳು, ವಿರೋಧಿ ವೃತಿಗಳು, ನಿಷ್ಕಾರಣವಾಗಿ ಅನ್ಯರ ವೃತ್ತಿಯನ್ನು ಮಾಡುವವರು, ಮದ್ಯ ಕಾರರು ಇವರು ಊರಲ್ಲಿರಬಾರದು.

ಏತೇ ರಾಷ್ಟ್ರೇ ವರ್ತಮಾನಾ ರಾಜ್ಞಃ ಪ್ರಚ್ಛನ್ನತಸ್ಕರಾಃ ।
ವಿಕರ್ಮಕ್ರಿಯಯಾ ನಿತ್ಯಂ ಬಾಧಂತೇ ಭದ್ರಿಕಾಃ ಪ್ರಜಾಃ ॥ ೨೨೬

ಹಿಂದೆ ಹೇಳಿದವರು ಊರಿನಲ್ಲಿದ್ದರೆ ಜನರನ್ನು ಪೀಡಿಸುತ್ತಾರೆ. ಯಥಾರ್ಥ ಕಳ್ಳರಲ್ಲದಿದ್ದರೂ ಸೂರೆ ಮಾಡುವರು. ಉತ್ಪಾದಕರಲ್ಲದ ಪರೋಪಜೀವಿಗಳು ಪ್ರಜೆಗಳಿಗೆ ಹೊರೆಯಾಗುವರು.

ದ್ಯೂತಮೇತತ್ ಪುರಾ ಕಲ್ಪೇ ದೃಷ್ಟಂ ವೈರಕರಂ ಮಹತ್ ।
ತಸ್ಮಾದ್ ದ್ಯೂತಂ ನ ಸೇವೇತ ಹಾಸ್ಯಾರ್ಥಮಪಿ ಬುದ್ಧಿಮಾನ್ ॥ ೨೨೭

ಈ ದ್ಯೂತದಿಂದ ಪ್ರಬಲ ವೈರ ಬೆಳೆದ ಉದಾಹರಣೆ ಪೂರ್ವಕಾಲ ದಲ್ಲೇ ಹೇರಳ ದೊರೆತಿದೆ. ಆದುದರಿಂದ ವಿನೋದಕ್ಕಾಗಿಯೂ ದ್ಯೂತ ವನ್ನು ಸೇವಿಸಬಾರದು. ಅದು ಬುದ್ಧಿವಂತರ ಲಕ್ಷಣ.

ಪ್ರಚ್ಛನ್ನಂ ವಾ ಪ್ರಕಾಶಂ ವಾ ತನ್ನಿಷೇವೇತ ಯೋ ನರಃ ।
ತಸ್ಯ ದಂಡವಿಕಲ್ಪಃ ಸ್ಯಾದ್ಯಥೇಷ್ಟಂ ನೃಪತೇಸ್ತಥಾ ॥ ೨೨೮

ದ್ಯೂತವು ಗುಟ್ಟಾಗಿ ವಾ ಬಹಿರಂಗವಾಗಿ ನಡೆಯಲಿ, ಅದಕ್ಕೆ ದಂಡನೆ ಯನ್ನು ರಾಜನು ಸ್ವೇಚ್ಛೆಯಿಂದ ವಿಧಿಸಬಹುದು.

ಕ್ಷತ್ರವಿಟ್ಶೂದ್ರಯೋನಿಸ್ತು ದಂಡಂ ದಾತುಮಶಕ್ನುವನ್ ।
ಆನೃಣ್ಯಂ ಕರ್ಮಣಾ ಗಚ್ಛೇತ್ ವಿಪ್ರೋ ದದ್ಯಾಚ್ಛನೈಃ ಶನೈಃ ॥ ೨೨೯

ದ್ಯೂತದಲ್ಲಿ ಸೋತವರು ಹಣಕೊಡಲು ಸಾಧ್ಯವಿಲ್ಲದವರಾದರೆ ಕೆಲಸ ಮಾಡಿ ಸಲ್ಲಿಸಬಹುದು. ಬ್ರಾಹ್ಮಣನು ಸ್ವಲ್ಪ ಸ್ವಲ್ಪವೇ ಕೊಡುತ್ತಾ ಬರಬೇಕು.

ಸ್ತ್ರೀಬಾಲೋನ್ಮತ್ತವೃದ್ಧಾನಾಂ ದರಿದ್ರಾಣಾಂ ಚ ರೋಗಿಣಾಂ ।
ಶಿಫಾವಿದಲರಜ್ಜ್ವಾದ್ಯೈರ್ವಿದಧ್ಯಾನ್ನೃಪತಿರ್ದಮಂ ॥ ೨೩೦

ಹೆಂಗುಸರು, ಮಕ್ಕಳು, ಹುಚ್ಚರು, ಮುದುಕರು, ಬಡವರು, ರೋಗಿಗಳು ಇಂಥವರಿಗೆ ಧನದಂಡನೆ ಸಾಧ್ಯವಿಲ್ಲದಾಗ ಬೀಳಲು, ಸಿಗುಳು ಬಳ್ಳಿಗಳಿಂದ ಏಟು ಹಾಕುವ ದಂಡನೆಯನ್ನು ರಾಜನು ಮಾಡಬಹುದು.

ಯೇ ನಿಯುಕ್ತಾಸ್ತು ಕಾರ್ಯೇಷು ಹನ್ಯುಃ ಕಾರ್ಯಾಣಿ ಕಾರ್ಯಿಣಾಂ ।
ಧನೋಷ್ಮಣಾ ಪಚ್ಯಮಾನಾಸ್ತಾನ್ನಿಃಸ್ವಾನ್ ಕಾರಯೇನ್ನೃಪಃ ॥ ೨೩೧

ರಾಜಕಾರ್ಯದಲ್ಲಿ ನಿಯುಕ್ತರಾದ ನೌಕರರು ಹಣದ ಆಸೆಯಿಂದ ಕಾರ್ಯಾರ್ಥಿಗಳಾದ ಪ್ರಜೆಗಳ ಕಾರ್ಯಗಳನ್ನು ಅಡ್ಡಿಮಾಡಿ ಪೀಡಿಸಿದರೆ ಅಂಥವರನ್ನು ಆಸ್ತಿ-ಪಾಸ್ತಿ ಸುಲಿದು ಬರಿಮೈಯಲ್ಲಿ ಬಿಡಬೇಕು.

ಕೂಟಶಾಸನಕರ್ತೄಂಶ್ಚ ಪ್ರಕೃತೀನಾಂ ಚ ದೂಷಕಾನ್ ।
ಸ್ತ್ರೀಬಾಲಬ್ರಾಹ್ಮಣಘ್ನಾಂಶ್ಚ ಹನ್ಯಾದ್ದ್ವಿಟ್ ಸೇವಿನಸ್ತಥಾ ॥ ೨೩೨

ಸುಳ್ಳು ಲೇಖಗಳನ್ನು ತಯಾರಿಸುವವರು, ಮಂತ್ರಿಗಳಿಗೆ ಕಲಹ ಉಂಟು ಮಾಡುವವರು, ಹೆಂಗಸು, ಮಗು, ಬ್ರಾಹ್ಮಣರನ್ನು ಕೊಲ್ಲುವವರು, ಶತ್ರುಗಳಿಗೆ ಸಹಾಯ ಮಾಡುವವರು ಇಂತಹವರನ್ನು ಕೊಲ್ಲಬೇಕು.

ತೀರಿತಂ ಚಾನುಶಿಷ್ಟಂ ಚ ಯತ್ರ ಕ್ವಚನ ಯದ್ಭವೇತ್ ।
ಕೃತಂ ತದ್ಧರ್ಮತೋ ವಿದ್ಯಾನ್ನ ತದ್ಭೂಯೋ ನಿವರ್ತಯೇತ್ ॥ ೨೩೩

ಸಾಲ ಮುಂತಾದ ವಿವಾದವು ನ್ಯಾಯವಾಗಿ ಸಮಾಪ್ತವಾದರೆ ದಂಡನೆಯಿಂದ ವಿಮೋಚನೆ ಹೊಂದಿದ್ದಾದರೆ ಪುನಃ ಅಂತಹ ವಿವಾದವನ್ನು ಎತ್ತಬಾರದು.

ಅಮಾತ್ಯಾಃ ಪ್ರಾಡ್ವಿವಾಕೋ ವಾ ಯತ್ಕುರ್ಯುಃ ಕಾರ್ಯಮನ್ಯಥಾ ।
ತತ್ಸ್ವಯಂ ನೃಪತಿಃ ಕುರ್ಯಾತ್ ತಾನ್ ಸಹಸ್ರಂ ಚ ದಂಡಯೇತ್ ॥ ೨೩೪

ಮಂತ್ರಿಗಳು, ನ್ಯಾಯಾಧಿಪತಿಯು, ಇವರು ಕಾರ್ಯವನ್ನು ವಿರುದ್ಧವಾಗಿ ನ್ಯಾಯಮೀರಿ ನಿರ್ಣಯ ಮಾಡಿದರೆ ಅಂತಹ ವಿಷಯವನ್ನು ರಾಜನು ಸ್ವಯಂ ಸರಿಪಡಿಸಬೇಕು. ಅವರಿಗೆ ಸಾವಿರ ಹಣ ದಂಡನೆಯನ್ನು ವಿಧಿಸಬೇಕು.

ಬ್ರಹ್ಮಹಾ ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಏತೇ ಸರ್ವೇ ಪೃಥಗ್ ಜ್ಞೇಯಾ ಮಹಾಪಾತಕಿನೋ ನರಾಃ ॥ ೨೩೫

ಬ್ರಾಹ್ಮಣನನ್ನು ಕೊಂದವನು, ಸುರಾಪಾನ ಮಾಡಿದವನು, ಕಳ್ಳನು, ಗುರುಸ್ತ್ರೀಯನ್ನು ಪ್ರೀತಿಸಿದವನು ಇವರು ಮಹಾಪಾತಕಿಗಳು.

ಚತುರ್ಣಾಮಪಿ ಚೈತೇಷಾಂ ಪ್ರಾಯಶ್ಚಿತ್ತಮಕುರ್ವತಾಂ ।
ಶಾರೀರಂ ಧನಸಂಯುಕ್ತಂ ದಂಡಂ ಧರ್ಮ್ಯಂ ಪ್ರಕಲ್ಪಯೇತ್ ॥ ೨೩೬

ಮೇಲೆ ಹೇಳಿದ ಮಹಾಪಾತಕಿಗಳು ಪ್ರಾಯಶ್ಚಿತ್ತ ಮಾಡಿಕೊಳ್ಳಲು ನಿರಾಕರಿಸಿದರೆ ಶರೀರದಂಡನೆ, ಧನದಂಡನೆಯೆರಡನ್ನು ಅನುಭವಿಸಬೇಕು.

ಗುರುತಲ್ಪೇ ಭಗಃ ಕಾರ್ಯಃ ಸುರಾಪಾನೇ ಸುರಾಧ್ವಜಃ ।
ಸ್ತೇಯೇ ಚ ಶ್ವಪದಂ ಕಾರ್ಯಂ ಬ್ರಹ್ಮಣ್ಯಶಿರಾಃ ಪುಮಾನ್ ॥ ೨೩೭

ಗುರುತಲ್ಪಗಮನ ಮಾಡಿದ ಅಪರಾಧಿಯ ಹಣೆಯಲ್ಲಿ ಸ್ತ್ರೀಮರ್ಮಾಂಗಾಕಾರದಲ್ಲಿ ಕಬ್ಬಿಣದ ಸರಿಗೆ ಕಾಯಿಸಿ ಇಟ್ಟು ವ್ರಣ ಉಂಟುಮಾಡಿ ಮರಣಾಂತ ಚಿಹ್ನಮಾಡಬೇಕು. ಹೀಗೆ ಮದ್ಯಪಾಯಿಗೆ ಮದ್ಯಧ್ವಜದ, ಚಿನ್ನಕಳ್ಳನಿಗೆ ನಾಯಿ ಕಾಲಿನ, ಬ್ರಹ್ಮಹತ್ಯಾ ಮಾಡಿದವನಿಗೆ ತಲೆಯಿಲ್ಲದ ಮನುಷ್ಯ ದೇಹದ ಗುರುತುಮಾಡಬೇಕು.

ಅಸಂಭೋಜ್ಯಾ ಹ್ಯಸಂಯಾಜ್ಯಾ ಅಸಂಪಾಠ್ಯಾವಿವಾಹಿನಃ ।
ಚರೇಯುಃ ಪೃಥಿವೀಂ ದೀನಾಃ ಸರ್ವಧರ್ಮಬಹಿಷ್ಕೃತಾಃ ॥ ೨೩೮

ಇಂತಹ ಅಪರಾಧಿಗಳಿಗೆ ಅನ್ನ, ಯಾಗ, ವಿದ್ಯೆ, ವಿವಾಹಗಳ ಸಂಬಂಧ ಮಾಡದೆ ಧರ್ಮಹೀನರಾಗಿ ದೀನಜೀವನದಲ್ಲಿರುವಂತೆ ಮಾಡಬೇಕು.

ಜ್ಞಾತಿಸಂಬಂಧಿಭಿಸ್ತ್ವೇತೇ ತ್ಯಕ್ತವ್ಯಾಃ ಕೃತಲಕ್ಷಣಾಃ ।
ನಿರ್ದಯಾ ನಿರ್ನಮಸ್ಕಾರಾಸ್ತನ್ಮನೋರನುಶಾಸನಂ ॥ ೨೩೯

ಆ ಮಹಾಪಾತಕಿಗಳಿಗೆ ಬಂಧು-ಬಾಂಧವರು ಆಶ್ರಯಕೊಡಬಾರದು, ನಮಸ್ಕರಿಸಬಾರದು, ದಯೆದೋರಬಾರದು ಎಂದು ಮನುಮತ.

ಪ್ರಾಯಶ್ಚಿತ್ತಂ ತು ಕುರ್ವಾಣಾಃ ಸರ್ವವರ್ಣಾ ಯಥೋದಿತಂ ।
ನಾಂಕ್ಯಾ ರಾಜ್ಞಾ ಲಲಾಟೇ ಸ್ಯುರ್ದಾಪ್ಯಾಸ್ತೂತ್ತಮಸಾಹಸಂ ॥ ೨೪೦

ಮಹಾಪಾತಕಿಗಳು ಪ್ರಾಯಶ್ಚಿತ್ತ ಮಾಡಿಕೊಂಡರೆ ಚಿಹ್ನೆ ಮಾಡುವ ದೇಹದಂಡನೆಯಿಂದ ವಿನಾಯತಿಯು. ಉತ್ತಮ ಸಾಹಸ ಧನದಂಡನೆಯಿದೆ.

ಆಗಃಸ್ಸು ಬ್ರಾಹ್ಮಣಸ್ಯೈವ ಕಾರ್ಯೋ ಮಧ್ಯಮಸಾಹಸಃ ।
ವಿವಾಸ್ಯೋ ವಾ ಭವೇದ್ರಾಷ್ಟ್ರಾತ್ಸದ್ರವ್ಯಃ ಸಪರಿಚ್ಛದಃ ॥ ೨೪೧

ಅಪರಾಧಿ ಬ್ರಾಹ್ಮಣನಿಗೆ ಮಧ್ಯಮ ಸಾಹಸದಂಡನೆಯು. ಅವನ ಚರಸೊತ್ತು ಸಮೇತ ಊರಿನಿಂದ ಓಡಿಸಬಹುದು.

ಇತರೇ ಕೃತವಂತಸ್ತು ಪಾಪಾನ್ಯೇತಾನ್ಯಕಾಮತಃ ।
ಸರ್ವಸ್ವಹಾರಮರ್ಹಂತಿ ಕಾಮತಸ್ತು ಪ್ರವಾಸನಂ ॥ ೨೪೨

ಇತರರು ಮಹಾಪಾತಕವನ್ನು ಬುದ್ಧಿಪೂರ್ವಕ ಮಾಡಿದರೆ ಒಮ್ಮೆ ಅವರನ್ನು ನಿರ್ಧನರನ್ನಾಗಿ ಮಾಡುವುದು. ಉದ್ದೇಶ ಪೂರ್ವಕ ಮಾಡಿದರೆ ಓಡಿಸುವುದು.

ನಾದದೀತ ನೃಪಃ ಸಾಧುರ್ಮಹಾಪಾತಕಿನೋ ಧನಂ ।
ಆದದಾನಸ್ತು ತಲ್ಲೋಭಾತ್ ತೇನ ದೋಷೇಣ ಲಿಪ್ಯತೇ ॥ ೨೪೩

ಒಳ್ಳೆ ರಾಜನು ಮಹಾಪಾತಕಿಗಳ ದಂಡಧನವನ್ನು ತಾನು ತಕ್ಕೊಳ್ಳಬಾರದು. ಆ ಧನ ಸ್ವೀಕರಿಸಿದರೆ ಆ ಪಾಪವು ತನಗೂ ಬರುವುದು.

ಅಪ್ಸು ಪ್ರವೇಶ್ಯ ತಂ ದಂಡಂ ವರುಣಾಯೋಪಪಾದಯೇತ್ ।
ಶ್ರುತವೃತ್ತೋಪಪನ್ನೇ ವಾ ಬ್ರಾಹ್ಮಣೇ ಪ್ರತಿಪಾದಯೇತ್ ॥ ೨೪೪

ಆ ದಂಡಧನವನ್ನು ನೀರಿಗೆ ಹಾಕಿ ಧರ್ಮಪತಿಯಾದ ವರುಣನಿಗೆ ತಲುಪಿಸಬಹುದು. ಶಾಸ್ತ್ರಸದಾಚಾರ ಸಂಪನ್ನನಿಗೂ ಕೊಡಬಹುದು.

ಈಶೋ ದಂಡಸ್ಯ ವರುಣೋ ರಾಜ್ಞಾಂ ದಂಡಧರೋ ಹಿ ಸಃ ।
ಈಶಃ ಸರ್ವಸ್ಯ ಜಗತೋ ಬ್ರಾಹ್ಮಣೋ ವೇದಪಾರಗಃ ॥ ೨೪೫

ರಾಜರು ಸಂಗ್ರಹಿಸಿದ ದಂಡಧನಕ್ಕೆ ವರುಣನು ಸ್ವಾಮಿಯು. ವೇದ ಪಾರಂಗತನಾದ ಬ್ರಾಹ್ಮಣನು ಅಖಿಲಜಗತ್ತಿಗೂ ಪ್ರಭುವು.

ಯತ್ರ ವರ್ಜಯತೇ ರಾಜಾ ಪಾಪಕೃದ್ಭ್ಯೋ ಧನಾಗಮಂ ।
ತತ್ರ ಕಾಲೇನ ಜಾಯಂತೇ ಮಾನವಾ ದೀರ್ಘಜೀವಿನಃ ॥ ೨೪೬

ನಿಷ್ಪದ್ಯಂತೇ ಚ ಸಸ್ಯಾನಿ ಯಥೋಪ್ತಾನಿ ವಿಶಾಂ ಪೃಥಕ್ ।
ಬಾಲಾಶ್ಚ ನ ಪ್ರಮೀಯಂತೇ ವಿಕೃತಂ ನ ಚ ಜಾಯತೇ ॥ ೨೪೭

ರಾಜರು ಪಾಪಧನವನ್ನು ಸ್ವೀಕರಿಸದಿದ್ದರೆ ಆ ಊರಿನಲ್ಲಿ ಜನರು ದೀರ್ಘಾಯುಸ್ಸು ಉಳ್ಳವರಾಗುವರು. ಸಸ್ಯಸಂಪತ್ತು ಸಮೃದ್ಧವಾಗುವುದು. ಅಕಾಲಮೃತ್ಯು ಅಂಗಹೀನತೆಯು ಆಗಲಾರದು.

ಬ್ರಾಹ್ಮಣಾನ್ ಬಾಧಮಾನಂ ತು ಕಾಮಾದವರವರ್ಣಜಂ ।
ಹನ್ಯಾಚ್ಚಿತ್ರೈರ್ವಧೋಪಾಯೈರುದ್ವೇಜನಕರೈರ್ನೃಪಃ ॥ ೨೪೮

ಬ್ರಾಹ್ಮಣರನ್ನು ಪೀಡಿಸುವ ನೀಚನನ್ನು ಚಿತ್ರಹಿಂಸೆಗೆ ರಾಜನು ಗುರಿ ಮಾಡಬೇಕು.

ಯಾವಾನವಧ್ಯಸ್ಯ ವಧೇ ತಾವಾನ್ವಧ್ಯಸ್ಯ ಮೋಕ್ಷಣೇ ।
ಅಧರ್ಮೋ ನೃಪತೇರ್ದೃಷ್ಟೋ ಧರ್ಮಸ್ತು ವಿನಿಯಚ್ಛತಃ ॥ ೨೪೯

ಅಪರಾಧಹೀನನ ದಂಡನೆ ಅಪರಾಧಿಯ ವಿಮೋಚನೆ ಇವೆರಡರಿಂದಲೂ ರಾಜನಿಗೆ ಅಧರ್ಮವಿದೆ. ನ್ಯಾಯಪರಿಪಾಲನೆಯಲ್ಲಿ ಧರ್ಮವಿದೆ.

ಉದಿತೋಽಯಂ ವಿಸ್ತರಶೋ ಮಿಥೋ ವಿವದಮಾನಯೋಃ ।
ಅಷ್ಟಾದಶಸು ಮಾರ್ಗೇಷು ವ್ಯವಹಾರಸ್ಯ ನಿರ್ಣಯಃ ॥ ೨೫೦

ಈ ವರೆಗೆ ಹದಿನೆಂಟು ವಿಷಯಗಳಲ್ಲಿ ನಿರ್ಣಯ ವಿಧಾನವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿತು.

ಏವಂ ಧರ್ಮ್ಯಾಣಿ ಕಾರ್ಯಾಣಿ ಸಮ್ಯಕ್ಕುರ್ವನ್ ಮಹೀಪತಿಃ ।
ದೇಶಾನಲಬ್ಧಾನ್ ಲಿಪ್ಸೇತ ಲಬ್ಧಾಂಶ್ಚ ಪರಿಪಾಲಯೇತ್ ॥ ೨೫೧

ಧರ್ಮಹಿತವಾದ ಕಾರ್ಯಗಳಲ್ಲಿ ನಿರತನಾಗಿದ್ದುಕೊಂಡು, ರಾಜ್ಯವನ್ನು ವಿಸ್ತರಿಸಬಹುದು. ಸ್ವಾಧೀನವಾದ ರಾಜ್ಯವನ್ನು ಚೆನ್ನಾಗಿ ಪರಿಪಾಲಿಸಬೇಕು. ಇಲ್ಲವಾದರೆ ಶ್ರಮವು ನಿಷ್ಫಲ. ಪಾಪವಿದೆ.

ಸಮ್ಯಙ್ನಿವಿಷ್ಟದೇಶಸ್ತು ಕೃತದುರ್ಗಶ್ಚ ಶಾಸ್ತ್ರತಃ ।
ಕಂಟಕೋದ್ಧರಣೇ ನಿತ್ಯಂ ಆತಿಷ್ಠೇದ್ಯತ್ನಮುತ್ತಮಂ ॥ ೨೫೨

ಒಳ್ಳೆ ಜಾಗದಲ್ಲಿ ಅರಮನೆ ಕಟ್ಟಿ ಕೋಟೆ ಮಾಡಿಕೊಂಡು ಕಳ್ಳ ಅಪರಾಧಿ ಶತ್ರುಗಳ ನಿವಾರಣೆಯಲ್ಲಿ ಅತ್ಯಂತ ಪ್ರಯತ್ನವುಳ್ಳವನಾಗಬೇಕು.

ರಕ್ಷಣಾದಾರ್ಯವೃತ್ತಾನಾಂ ಕಂಟಕಾನಾಂ ಚ ಶೋಧನಾತ್ ।
ನರೇಂದ್ರಾಸ್ತ್ರಿದಿವಂ ಯಾಂತಿ ಪ್ರಜಾಪಾಲನತತ್ಪರಾಃ ॥ ೨೫೩

ಸಜ್ಜನರ ಪರಿಪಾಲನೆ ದುಷ್ಟದಮನಗಳನ್ನು ಸರಿಯಾಗಿ ಮಾಡುವ ರಾಜರು ಸದ್ಗತಿಯನ್ನು ಹೊಂದುವರು. ಅವರಿಗೆ ಪ್ರಜಾಪಾಲನೆಯು ಪ್ರಧಾನವಲ್ಲದೆ ಸುಖಭೋಗವು ಮುಖ್ಯವಲ್ಲ. ಅಂತವರು ಬೇಗನೆ ಕೆಡುತ್ತಾರೆ. ರಾಜನಿಗೂ ರಾಜಪ್ರತಿನಿಧಿ ಅಧಿಕಾರಿಗಳಿಗೂ ಈ ನಿಯಮವು ಸಮಾನವಾಗಿದೆ.

ಅಶಾಸಂಸ್ತಸ್ಕರಾನ್ಯಸ್ತು ಬಲಿಂ ಗೃಹ್ಣಾತಿ ಪಾರ್ಥಿವಃ ।
ತಸ್ಯ ಪ್ರಕ್ಷುಭ್ಯತೇ ರಾಷ್ಟ್ರಂ ಸ್ವರ್ಗಾಚ್ಚ ಪರಿಹೀಯತೇ ॥ ೨೫೪

ಪ್ರತ್ಯಕ್ಷ ಪರೋಕ್ಷಗಳಲ್ಲಿ ಪ್ರಜಾಪೀಡಕರ ನಿವಾರಣೆ ಮಾಡದೆ ಕರ ವಸೂಲು ಮಾಡುವ ರಾಜನ ರಾಜ್ಯವು ಅಶಾಂತವಾಗಿ ಕೆರಳುವುದು.

ನಿರ್ಭಯಂ ತು ಭವೇದ್ಯಸ್ಯ ರಾಷ್ಟ್ರಂ ಬಾಹುಬಲಾಶ್ರಿತಂ ।
ತಸ್ಯ ತದ್ವರ್ಧತೇ ನಿತ್ಯಂ ಸಿಚ್ಯಮಾನ ಇವ ದ್ರುಮಃ ॥ ೨೫೫

ನೀರೆರೆದ ಮರವು ಹುಲುಸಾಗಿ ಬೆಳೆಯುವಂತೆ ರಾಜನ ರಕ್ಷಣೆಯಲ್ಲಿರುವ ರಾಜ್ಯವು ಸಕಲಾಂಗದಲ್ಲಿ ತುಂಬು ಸುಖವುಳ್ಳದ್ದಾಗುವುದು.

ದ್ವಿವಿಧಾನ್ ತಸ್ಕರಾನ್ ವಿದ್ಯಾತ್ ಪರದ್ರವ್ಯಾಪಹಾರಕಾನ್ ।
ಪ್ರಕಾಶಾಂಶ್ಚಾಪ್ರಕಾಶಾಂಶ್ಚ ಚಾರಚಕ್ಷುರ್ಮಹೀಪತಿಃ ॥ ೨೫೬

ಕಳ್ಳರು ಎರಡು ವಿಧ. ಹಗಲುಗಳ್ಳರು, ಕತ್ತಲು ಕಳ್ಳರು. ಇವರಿಬ್ಬರು ಮಾಡುವ ಹೆರವರ ಶ್ರಮಾರ್ಜಿತ ಸೊತ್ತಿನ ಅಪಹಾರವನ್ನು ರಾಜನು ಗೂಢಚಾರರಿಂದ ತಿಳಿದುಕೊಳ್ಳಬೇಕು.

ಪ್ರಕಾಶವಂಚಕಾಸ್ತೇಷಾಂ ನಾನಾಪಣ್ಯೋಪಜೀವಿನಃ ।
ಪ್ರಚ್ಛನ್ನವಂಚಕಾಸ್ತ್ವೇತೇ ಯೇ ಸ್ತೇನಾಟವಿಕಾದಯಃ ॥ ೨೫೭

ನಾನಾ ವಿಧ ವಾಣಿಜ್ಯವೃತ್ತಿಯಲ್ಲಿರುವವರು ಹಗಲುಗಳ್ಳರು. ಅವರು ಮೂಲ ಬೆಲೆಗಿಂತ ಅಧಿಕಲಾಭಾಂಶವನ್ನು ವಸ್ತುವಿನ ಬೆಲೆಯಾಗಿ ಹಣವನ್ನು ಪ್ರಜೆಗಳಿಂದ ಸುಲಿದು ತಾವು ಆಯಾಸವಿಲ್ಲದೆ ಕೂಡಿಹಾಕುವರು. ರಾತ್ರಿ ತಿಳಿಯದಂತೆ ಸೊತ್ತಿನ ಅಪಹಾರ ಮಾಡುವ ಪುಂಡರು ರಾತ್ರಿಗಳ್ಳರು. ಬಹು ಶ್ರಮವನ್ನು ಅಲ್ಪಶ್ರಮದಿಂದ ದುರುಪಯೋಗಗೊಳಿಸುವುದು ಅವರ ಉದ್ದೇಶ.

ಉತ್ಕೋಚಕಾಶ್ಚೋಪಧಿಕಾ ವಂಚಕಾಃ ಕಿತವಾಸ್ತಥಾ ।
ಮಂಗಲಾದೇಶವೃತ್ತಾಶ್ಚ ಭದ್ರಾಶ್ಚಕ್ಷಣಿಕೈಃ ಸಹ ॥ ೨೫೮

ಅಸಮ್ಯಕ್ಕಾರಿಣಶ್ಚೈವ ಮಹಾಮಾತ್ರಾಶ್ಚಿಕಿತ್ಸಕಾಃ ।
ಶಿಲ್ಪೋಪಚಾರಯುಕ್ತಾಶ್ಚ ನಿಪುಣಾಃ ಪಣ್ಯಯೋಷಿತಃ ॥ ೨೫೯

ಏವಮಾದೀನ್ ವಿಜಾನೀಯಾತ್ಪ್ರಕಾಶಾಂಲ್ಲೋಕಕಂಟಕಾನ್ ।
ನಿಗೂಢಚಾರಿಣಶ್ಚಾನ್ಯಾನನಾರ್ಯಾನಾರ್ಯಲಿಂಗಿನಃ ॥ ೨೬೦

ಲಂಚ, ಹೆದರಿಸಿ ಹಣ ಪಡೆಯುವವರು, ಚಿನ್ನ ಹಾಲು ಕಲಬೆರಕೆ

ದಾರರು, ಜೂಜುಗೋರರು, ಶಕುನಹೇಳಿ ಹಣತಿನ್ನುವವರು, ಸಾಮುದ್ರಿಕರು, ಆನೆಮಾವಟಿಗರು, ಚಿಕಿತ್ಸಕರು ಕಪಟಿಗಳಾದರೆ ಅವರು, ಚಿತ್ರಾದಿಕಲಾವಿದರು, ಸೂಳೆಯರು ಇವರೆಲ್ಲ ಮರುಳು ಮಾಡಿ ಹಣ ಪಡೆಯುವವರು. ಒಳ್ಳೆಯವರಂತೆ ನಟಿಸುವ ದುರ್ವೃತ್ತಿಯ ಹಲವರು ಇರಬಹುದು. ಅವರನ್ನು ತಿಳಿದು ದಂಡಿಸಬೇಕು.

ತಾನ್ವಿದಿತ್ವಾ ಸುಚರಿತ್ರೈರ್ಗೂಢೈಸ್ತತ್ಕರ್ಮಕಾರಿಭಿಃ ।
ಚಾರೈಶ್ಚಾನೇಕಸಂಸ್ಥಾನೈಃ ಪ್ರೋತ್ಸಾದ್ಯ ವಶಮಾನಯೇತ್ ॥ ೨೬೧

ವಿಶ್ವಾಸಾರ್ಹಸಚ್ಚರಿತ್ರ ಗೂಢಚಾರರಿಂದ ಅವರಂತೆ ಉದ್ಯೋಗ ಮಾಡುವ ಮೂಲಕ ತಿಳಿದು ದಂಡಿಸಬೇಕು.

ತೇಷಾಂ ದೋಷಾನಭಿಖ್ಯಾಪ್ಯ ಸ್ವೇ ಸ್ವೇ ಕರ್ಮಣಿ ತತ್ತ್ವತಃ ।
ಕುರ್ವೀತ ಶಾಸನಂ ರಾಜಾ ಸಮ್ಯಕ್‌ಸಾರಾಪರಾಧತಃ ॥ ೨೬೨

ಅಂತವರ ಅಪರಾಧವನ್ನು ಪ್ರಚಾರಗೊಳಿಸಿ ಉಚಿತವಾದ ದಂಡನೆಯನ್ನು ವಿಧಿಸಬೇಕು.

ನಹಿ ದಂಡಾದೃತೇ ಶಕ್ಯಃ ಕರ್ತುಂ ಪಾಪವಿನಿಗ್ರಹಃ ।
ಸ್ತೇನಾನಾಂ ಪಾಪಬುದ್ಧೀನಾಂ ನಿಭೃತಂ ಚರತಾಂ ಕ್ಷಿತೌ ॥ ೨೬೩

ಪಾಪಬುದ್ಧಿಯವರಾದ ಕಳ್ಳರನ್ನು ದಂಡನೆಯಿಲ್ಲದೆ ಅಡಗಿಸಲು ಸಾಧ್ಯವಾಗಲಾರದು.

ಸಭಾಪ್ರಪಾಪೂಪಶಾಲಾವೇಶಮದ್ಯಾನ್ನವಿಕ್ರಯಾಃ ।
ಚತುಷ್ಪಥಾಶ್ಚೈತ್ಯವೃಕ್ಷಾಃ ಸಮಾಜಾಃ ಪ್ರೇಕ್ಷಣಾನಿ ಚ ॥ ೨೬೪

ಜೀರ್ಣೋದ್ಯಾನಾನ್ಯರಣ್ಯಾನಿ ಕಾರುಕಾವೇಶನಾನಿ ಚ ।
ಶೂನ್ಯಾನಿ ಚಾಪ್ಯಗಾರಾಣಿ ವನಾನ್ಯುಪವನಾನಿ ಚ ॥ ೨೬೫

ಏವಂವಿಧಾನ್ನೃಪೋ ದೇಶಾನ್ ಗುಲ್ಮೈಃ ಸ್ಥಾವರಜಂಗಮೈಃ ।
ತಸ್ಕರಪ್ರತಿಷೇಧಾರ್ಥಂ ಚಾರೈಶ್ಚಾಪ್ಯನುಚಾರಯೇತ್ ॥ ೨೬೬

ಜನಸಂದಣಿ, ಅರವಟ್ಟಿಗೆ, ತಿನಸಿನಂಗಡಿ, ಸೂಳೆಮನೆ, ಕಳ್ಳಿನಂಗಡಿ, ಹೆದ್ದಾರಿ, ದೊಡ್ಡಮರ, ತೋಟ, ಕಾಡು, ಖಾಲಿ ಮನೆ, ಶಿಲ್ಪಶಾಲಾ ಇಂತಹ ಸ್ಥಳಗಳಲ್ಲಿ ರಾಜಪುರುಷರು ಸಂಚರಿಸುತ್ತಿರಬೇಕು.

ತತ್ಸಹಾಯ್ಯೈರನುಗತ್ಯೈರ್ನಾನಾಕರ್ಮಪ್ರವೇದಿಭಿಃ ।
ವಿದ್ಯಾದುತ್ಪಾದಯೇಚ್ಚೈವ ನಿಪುಣೈಃ ಪೂರ್ವತಸ್ಕರೈಃ ॥ ೨೬೭

ಗಸ್ತಿ ತಿರುಗುವವರಿಂದಲೂ, ಗೂಢಚಾರರಿಂದಲೂ ತಿಳಿದು ಅಂತವರನ್ನು ಓಡಿಸಬೇಕು.

ಭಕ್ಷ್ಯಭೋಜ್ಯೋಪದೇಶೈಶ್ಚ ಬ್ರಾಹ್ಮಣಾನಾಂ ಚ ದರ್ಶನೈಃ ।
ಶೌರ್ಯಕರ್ಮಾಪದೇಶೈಶ್ಚ ಕುರ್ಯುಸ್ತೇಷಾಂ ಸಮಾಗಮಂ ॥ ೨೬೮

ತಿಂಡಿ-ತಿನಸು, ಮಹಾತ್ಮ್ಯದರ್ಶನ, ಶೂರಸಾಹಸ ಇತ್ಯಾದಿಗಳನ್ನು ನೋಡುವ ನೆವದಿಂದ ಕಪಟಿಗಳನ್ನು ಕರೆತಂದು ಹಿಡಿಯಬೇಕು.

ಯೇ ತತ್ರ ನೋಪಸರ್ಪೇಯುರ್ಮೂಲಪ್ರಣಿಹಿತಾಶ್ಚ ಯೇ ।
ತಾನ್ಪ್ರಸಹ್ಯ ನೃಪೋ ಹನ್ಯಾತ್ಸಮಿತ್ರಜ್ಞಾತಿಬಾಂಧವಾನ್ ॥ ೨೬೯

ಹಾಗೆ ಕರೆದಲ್ಲಿ ಬರಲು ಅಡಗುವವರು, ಕಾಪಟಿಕಚಾರರ ಸಹಾಯಕ ವಿಶ್ವಾಸವಂತರು ಅಂತವರನ್ನು ಬಂಧುಮಿತ್ರ ಸಹಿತರಾಗಿ ಕೊಲ್ಲಬೇಕು.

ನ ಹೋಢೇನ ವಿನಾ ಚೌರಂ ಘಾತಯೇದ್ಧಾರ್ಮಿಕೋ ನೃಪಃ ।
ಸಹೋಢಂ ಸೋಪಕರಣಂ ಘಾತಯೇದವಿಚಾರಯನ್ ॥ ೨೭೦

ಕನ್ನಹೊಡೆಯುವ ಇತ್ಯಾದಿ ಉಪಕರಣ ಸಹಿತನನ್ನು ಅಪರಾಧಿಯೆಂದು ನಿಶ್ಚಯಿಸಿ ವಧಿಸಬೇಕು.

ಗ್ರಾಮೇಷ್ವಪಿ ಚ ಯೇ ಕೇಚಿಚ್ಚೌರಾಣಾಂ ಭಕ್ತದಾಯಕಾಃ ।
ಭಾಂಡಾವಕಾಶದಾಶ್ಚೈವ ಸರ್ವಾಂಸ್ತಾನಪಿ ಘಾತಯೇತ್ ॥ ೨೭೧

ಕಳ್ಳರಿಗೆ ಸಹಾಯಕರಾದ ಊರಜನರನ್ನು ಎಚ್ಚರಿಸಿಯೂ ಸಹಾಯ ಬಿಡಲಾರದವರಾದರೆ ಅವರನ್ನು ಕೊಲ್ಲಬೇಕು

ರಾಷ್ಟ್ರೇಷು ರಕ್ಷಾಧಿಕೃತಾನ್ ಸಾಮಂತಾಂಶ್ಚೈವ ಚೋದಿತಾನ್ ।
ಅಭ್ಯಾಘಾತೇಷು ಮಧ್ಯಸ್ಥಾನ್ ಶಿಷ್ಯಾಚ್ಚೌರಾನಿವ ದ್ರುತಂ ॥ ೨೭೨

ರಕ್ಷಣಾ ವಿಭಾಗದವರು, ಗಡಿನಾಡಿನವರು, ಕಳ್ಳತನ ಮುಂತಾದ ಹೇಯ ಕೃತ್ಯಗಳಿಗೆ ಸಹಾಯಕರಾದರೆ ಅವರನ್ನು ದಮನಿಸಬೇಕು.

ಯಶ್ಚಾಪಿ ಧರ್ಮಸಮಯಾತ್ ಪ್ರಚ್ಯುತೋ ಧರ್ಮಜೀವಿನಃ ।
ದಂಡೇನೈವ ತಮಪ್ಯೋಷೇತ್ ಸ್ವಕಾದ್ಧರ್ಮಾದ್ಧಿ ವಿಚ್ಯುತಂ ॥ ೨೭೩

ಯಜ್ಞಯಾಗ ವಿದ್ಯೆರೂಪವಾದ ಧರ್ಮಕಾರ್ಯದಿಂದ ಜೀವಿಸುವ ಬ್ರಾಹ್ಮಣನೂ ಧರ್ಮವನ್ನು ಅತಿಕ್ರಮಿಸಿದರೆ ಅವನಿಗೂ ರಾಜನು ದಂಡನೆ ವಿಧಿಸಬೇಕು.

ಗ್ರಾಮಘಾತೇ ಹಿತಾಭಂಗೇ ಪಥಿ ಮೋಷಾಭಿದರ್ಶನೇ ।
ಶಕ್ತಿತೋ ನಾಭಿಧಾವಂಯೋ ನಿರ್ವಾಸ್ಯಾಃ ಸಪರಿಚ್ಛದಾಃ ॥ ೨೭೪

ಊರಿನ ದರೋಡೆ, ಕೆರೆ, ಕಾಲುವೆ, ಬೆಳೆ ಮುಂತಾದ ಹಿತನಾಶನ ಉದ್ಯೋಗ ಮುಂತಾದ ಕುಕರ್ಮಗಳನ್ನು ಬಂಧಿಸಲು ಸಹಾಯ ಮಾಡದವರನ್ನು ಪರಿವಾರಸಮೇತ ಓಡಿಸಬೇಕು.

ರಾಜ್ಞಃ ಕೋಷಾಪಹರ್ತೄಂಶ್ಚ ಪ್ರತಿಕೂಲೇಷು ಚ ಸ್ಥಿತಾನ್ ।
ಘಾತಯೇದ್ವಿವಿಧೈರ್ದಂಡೈರರೀಣಾಂ ಚೋಪಜಾಪಕಾನ್ ॥ ೨೭೫

ರಾಜಕೋಶದಿಂದ ಧನಾಪಹಾರ, ಆಜ್ಞಾಭಂಗ, ಶತ್ರುಗಳಿಗೆ ರಹಸ್ಯ ದಾಯಕರು ಇಂತವರನ್ನು ಕ್ರೂರವಾಗಿ ದಂಡಿಸಬೇಕು.

ಸಂಧಿಂ ಭಿತ್ವಾ ತು ಯೇ ಚೌರ್ಯಂ ರಾತ್ರೌ ಕುರ್ವಂತಿ ತಸ್ಕರಾಃ ।
ತೇಷಾಂ ಛಿತ್ವಾ ನೃಪೋ ಹಸ್ತೌ ತೀಕ್ಷ್ಣೇ ಶೂಲೇ ನಿವೇಶಯೇತ್ ॥ ೨೭೬

ರಾತ್ರಿ ಬಾಗಿಲು ಮುರಿದು ಕದಿಯುವ ಕಳ್ಳರ ಕೈ ಕಡಿದು ಶೂಲಕ್ಕೇರಿಸಬೇಕು. ಆದರಿಂದ ಪುನಃ ಇಂತಹ ಅಪರಾಧ ಮಾಡಲಾರನು.

ಅಂಗುಲೀರ್ಗ್ರಂಥಿಭೇದಸ್ಯ ಛೇದಯೇತ್ಪ್ರಥಮೇ ಗ್ರಹೇ ।
ದ್ವಿತೀಯೇ ಹಸ್ತಚರಣೌ ತೃತೀಯೇ ವಧಮರ್ಹತಿ ॥ ೨೭೭

ಕಿಸೆ, ಗಂಟು ಕಡಿಯುವವನು ಮೊದಲ ಬಾರಿ ಸಿಕ್ಕಿದಾಗ ಬೆರಳು ಕಡಿಯಬೇಕು, ಎರಡನೆ ಬಾರಿ ಕೈಕಾಲು ಕಡಿಯುವುದು, ಮೂರನೆ ಬಾರಿ ಮಾಡಿದವನನ್ನು ಕೊಲ್ಲುವುದು.

ಅಗ್ನಿದಾನ್ ಭಕ್ತದಾಂಶ್ಚೈವ ತಥಾ ಶಸ್ತ್ರಾವಕಾಶದಾನ್ ।
ಸನ್ನಿಧಾತ್ರೃಂಶ್ಚ ಮೋಷಸ್ಯ ಹನ್ಯಾಚ್ಚೌರಮಿವೇಶ್ವರಃ ॥ ೨೭೮

ಕಳ್ಳರಿಗೆ ಅನ್ನ, ಮನೆ ಕೊಡುವವರು, ಕಳ್ಳಮಾಲು ಕಾಯುವವರು ಇವರನ್ನು ಕಳ್ಳರಂತೆ ದಂಡಿಸಬೇಕು.

ತಡಾಗಭೇದಕಂ ಹನ್ಯಾದಪ್ಸು ಶುದ್ಧವಧೇನ ವಾ ।
ಯದ್ವಾಪಿ ಪ್ರತಿಸಂಸ್ಕುರ್ಯಾದ್ದಾಪ್ಯಸ್ತೂತ್ತಮಸಾಹಸಂ ॥ ೨೭೯

ಕೆರೆ, ಬಾವಿ ಹಾಳು ಮಾಡಿದವನನ್ನು ನೀರಲ್ಲಿ ಮುಳುಗಿಸಿ ಕೊಲ್ಲಬಹುದು. ಅಥವಾ ಬೇರೆ ರೀತಿಯಲ್ಲಿ ಕೊಲ್ಲಬಹುದು. ಅವರು ಹಾಳು ಮಾಡಿದ್ದನ್ನು ಸರಿಪಡಿಸಿದರೆ ಉತ್ತಮ ಸಾಹಸ ದಂಡನೆಯು ಸಾಕು.

ಕೋಷ್ಠಾಗಾರಾಯುಧಾಗಾರದೇವತಾಗಾರಭೇದಕಾನ್ ।
ಹಸ್ತ್ಯಶ್ವರಥಹರ್ತೃಂಶ್ಚ ಹನ್ಯಾದೇವಾವಿಚಾರಯನ್ ॥ ೨೮೦

ಧಾನ್ಯದ, ಆಯುಧದ, ದೇವರ ಉಗ್ರಾಣಗಳನ್ನು ಒಡೆಯುವುದು, ಆನೆ, ಕುದುರೆ, ಗಾಡಿ ಕದಿಯುವುದು ಇಂತಹರನ್ನು ವಿಚಾರವಿಲ್ಲದೆ ಕೊಲ್ಲಬೇಕು.

ಯಸ್ತು ಪೂರ್ವನಿವಿಷ್ಟಸ್ಯ ತಡಾಗಸ್ಯೋದಕಂ ಹರೇತ್ ।
ಆಗಮಂ ವಾಪ್ಯಪಾಂ ಭಿದ್ಯಾತ್ಸ ದಾಪ್ಯಃ ಪೂರ್ವಸಾಹಸಂ ॥ ೨೮೧

ಕೆರೆ ನೀರನ್ನು ಕದಿಯುವುದು, ಕಾಲುವೆ ಕಡಿಯುವುದು ಮಾಡಿದರೆ ಪೂರ್ವಸಾಹಸ ದಂಡನೆಯು.

ಸಮುತ್ಸೃಜೇದ್ರಾಜಮಾರ್ಗೇ ಯಸ್ತ್ವಮೇಧ್ಯಮನಾಪದಿ ।
ಸ ದ್ವೌ ಕಾರ್ಷಾಪಣೌ ದದ್ಯಾದಮೇಧ್ಯಂ ಚಾಶು ಶೋಧಯೇತ್ ॥ ೨೮೨

ರೋಗಾದಿ ಕಾರಣವಿಲ್ಲದೆ ರಾಜಮಾರ್ಗದಲ್ಲಿ ಮಲವಿಸರ್ಜನ ಮಾಡಿದರೆ ಶುಚಿಗೊಳಿಸುವುದಲ್ಲದೆ ಎರಡು ಕಾರ್ಷಾಪಣ ದಂಡನೆಯು.

ಆಪದ್ಗತೋಽಥ ವಾ ವೃದ್ಧಾ ಗರ್ಭಿಣೀ ಬಾಲ ಏವ ವಾ ।
ಪರಿಭಾಷಣಮರ್ಹಂತಿ ತಚ್ಚ ಶೋಧ್ಯಮಿತಿ ಸ್ಥಿತಿಃ ॥ ೨೮೩

ರೋಗಿ, ಮುದುಕಿ, ಗರ್ಭಿಣಿ, ಮಗು ಇವರು ರಾಜಮಾರ್ಗದಲ್ಲಿ ಮಲ ವಿಸರ್ಜನೆ ಮಾಡಿದರೆ ಯಾಕೆ ಮಾಡಿದೆಯೆಂದು ಕೇಳಬೇಕು. ಅವರೇ ಶುಚಿ ಮಾಡಬೇಕು.

ಚಿಕಿತ್ಸಕಾನಾಂ ಸರ್ವೇಷಾಂ ಮಿಥ್ಯಾ ಪ್ರಚರತಾಂ ದಮಃ ।
ಅಮಾನುಷೇಷು ಪ್ರಥಮೋ ಮಾನುಷೇಷು ತು ಮಧ್ಯಮಃ ॥ ೨೮೪

ಕಾಯಶಲ್ಯ ಚಿಕಿತ್ಸಾ ಮಾಡುವ ವೈದ್ಯರು ಮೋಸ ಮಾಡಿದರೆ ದಂಡನೆಯು. ಮನುಷ್ಯರಿಗೆ ಅಪಚಾರವಾದರೆ ಮಧ್ಯಮಸಾಹಸ. ಪ್ರಾಣಿಗಳಿಗೆ ದೋಷವಾದರೆ ಪ್ರಥಮಸಾಹಸವು.

ಸಂಕ್ರಮಧ್ವಜಯಷ್ಟೀನಾಂ ಪ್ರತಿಮಾನಾಂ ಚ ಭೇದಕಃ ।
ಪ್ರತಿಕುರ್ಯಾಚ್ಚ ತತ್ಸರ್ವಂ ಪಂಚ ದದ್ಯಾಚ್ಛತಾನಿ ಚ ॥ ೨೮೫

ಸಂಕ (ಹೊಳೆ ದಾಟುವ), ರಾಷ್ಟ್ರಧ್ವಜ, ಸ್ನಾನಘಟ್ಟದ ಮೆಟ್ಟಿಲು, ದೇವತಾಪ್ರತಿಮೆ ಮುಂತಾದುವುಗಳನ್ನು ಕೆಡಿಸಿದರೆ ಅದನ್ನು ಸರಿಪಡಿಸುವುದಲ್ಲದೆ ಐನೂರು ಪಣ ದಂಡನೆಯನ್ನು ತೆರಬೇಕು.

ಅದೂಷಿತಾನಾಂ ದ್ರವ್ಯಾಣಾಂ ದೂಷಣೇ ಭೇದನೇ ತಥಾ ।
ಮಣೀನಾಮಪವೇಧೇ ಚ ದಂಡಃ ಪ್ರಥಮಸಾಹಸಃ ॥ ೨೮೬

ಒಳ್ಳೆ ಸಾಮಾನಿನೊಡನೆ ಹಾಳು ಸಾಮಾನು ವಾ ಕಲ್ಲು, ಕಸ ಬೆರಕೆ ಮಾಡಿದರೆ ಮಣಿಗಳನ್ನು ಒಡೆದು ಕೊರದು ಕೆಡಿಸಿದರೆ ಮುತ್ತು ಮುಂತಾದು

ವಕ್ಕೆ ತೂತು ತಪ್ಪಾಗಿ ಕೊರೆದು ಕೆಡಿಸಿದರೆ ಸ್ವಾಮಿಗೆ ಒಳ್ಳೆ ದ್ರವ್ಯ ಕೊಡುವು ದಲ್ಲದೆ ಪ್ರಥಮಸಾಹಸ ದಂಡನೆಯು.

ಸಮೈರ್ಹಿ ವಿಷಮಂ ಯಸ್ತು ಚರೇದ್ವೈ ಮೂಲ್ಯತೋಽಪಿ ವಾ ।
ಸಮಾಪ್ನುಯಾದ್ದಮಂ ಪೂರ್ವಂ ನರೋ ಮಧ್ಯಮಮೇವ ವಾ ॥ ೨೮೭

ಒಂದು ಬೆಲೆಯ ವಸ್ತುವಿಗೆ ಹೆಚ್ಚು ಕಡಿಮೆ ಬೆಲೆ ಹೇಳುವುದು ಅಥವಾ ನ್ಯಾಯವಾದ ಬೆಲೆಗೆ ಹಾಳು ಯಾ ಒಳ್ಳೆ ಸಾಮಾನು ಬದಲಾಯಿಸುವುದು ಇಂತಹ ಅಪರಾಧಕ್ಕೆ ಪ್ರಥಮಸಾಹಸ ಮಧ್ಯಮಸಾಹಸ ಒಂದು ದಂಡ ನೆಯು.

ಬಂಧನಾನಿ ಚ ಸರ್ವಾಣಿ ರಾಜಾ ಮಾರ್ಗೇ ನಿವೇಶಯೇತ್ ।
ದುಃಖಿತಾ ಯತ್ರ ದೃಶ್ಯೇರನ್ ವಿಕೃತಾಃ ಪಾಪಕಾರಿಣಃ ॥ ೨೮೮

ಪ್ರಾಕಾರಸ್ಯ ಚ ಭೇತ್ತಾರಂ ಪರಿಖಾಣಾಂ ಚ ಪೂರಕಂ ।
ದ್ವಾರಾಣಾಂ ಚೈವ ಭಂಕ್ತಾರಂ ಕ್ಷಿಪ್ರಮೇವ ಪ್ರವಾಸಯೇತ್ ॥ ೨೮೯

ಜೈಲು, ಬಂಧನಗಳೆಲ್ಲ ಹೆದ್ದಾರಿಗಳ ಬದಿಯಲ್ಲಿದ್ದು ಆ ಬಂಧಿಗಳು ದುಃಖಿಸುವುದನ್ನು ದೇಶದ ಜನರು ನೋಡುವಂತೆ ಮಾಡಿರಬೇಕು. ಕೋಟೆ ಒಡೆಯುವುದು, ಅಗಳು ಮುಚ್ಚುವುದು, ಬಾಗಿಲು ಒಡೆಯುವುದು ಇಂಥವ ರನ್ನು ಊರಿಂದ ಓಡಿಸಬೇಕು.

ಅಭಿಚಾರೇಷು ಸರ್ವೇಷು ಕರ್ತವ್ಯೋ ದ್ವಿಶತೋ ದಮಃ ।
ಮೂಲಕರ್ಮಣಿ ಚಾನಾಪ್ತೇಃ ಕೃತ್ಯಾಸು ವಿವಿಧಾಸು ಚ ॥ ೨೯೦

ಅಭಿಚಾರ ಹೋಮದಿಂದ ಇತರರಿಗೆ ಕೇಡು ಬಗೆದರೆ ಮರಣವಾಗದಿ ದ್ದರೆ ಇನ್ನೂರು ಪಣ ದಂಡನೆಯು. ಮರಣವಾದರೆ ಮರಣಾಪರಾಧದಂತೆ ಸುಳ್ಳು, ಮೋಸಗಳಿಂದ ವಶೀಕರಣ, ಹಣ, ಉಪದ್ರವ ಮಾಡಿದರೆ ಇದೇ ಇನ್ನೂರು ಹಣ ದಂಡನೆಯು.

ಅಬೀಜವಿಕ್ರಯೀ ಚೈವ ಬೀಜೋತ್ಕೃಷ್ಟಂ ತಥೈವ ಚ ।
ಮರ್ಯಾದಾಭೇದಕಶ್ಚೈವ ವಿಕೃತಂ ಪ್ರಾಪ್ನುಯಾದ್ವಧಂ ॥ ೨೯೧

ಹಾಳುಧಾನ್ಯವನ್ನು ಒಳ್ಳೆ ಬೀಜವೆಂದು, ಹಾಳಿನೊಟ್ಟಿಗೆ ಒಳ್ಳೆ ಬೀಜ ಬೆರಸಿ ಒಳ್ಳೆಯದೆಂದು ಮಾರುವುದು, ಗಡಿ ನಿಶಾನಿಗಳನ್ನು ನಾಶಗೊಳಿಸುವುದು ಇಂತಹ ಅಪರಾಧಕ್ಕೆ ಅಂಗಗಳನ್ನು ಕತ್ತರಿಸುವ ಚಿತ್ರಹಿಂಸೆ ಕೊಡಬೇಕು.

ಸರ್ವಕಂಟಕಪಾಪಿಷ್ಠಂ ಹೇಮಕಾರಂ ತು ಪಾರ್ಥಿವಃ ।
ಪ್ರವರ್ತಮಾನಮನ್ಯಾಯೇ ಛೇದಯೇಲ್ಲವಶಃ ಕ್ಷುರೈಃ ॥ ೨೯೨

ಉಪದ್ರವಕಾರಿಗಳಲ್ಲಿ ಒಂದನೆಯವನಾದ ಸೊನೆಗಾರನು ತೂಕದ ಮೋಸ, ಹಾಳು ಬೆರಕೆ, ತೂಕದ ಕಲ್ಲು ಕಡಿಮೆ ಮಾಡುವುದು ಮುಂತಾಗಿ ಚಿನ್ನ ಕದಿಯುವವನಿಗೆ ಬಾಳಿನಿಂದ ಮೈಯನ್ನು ಚೂರು ಚೂರೇ ಕೊಯ್ದು ನೋಯಿಸಬೇಕು.

ಸೀತಾದ್ರವ್ಯಾಪಹರಣೇ ಶಸ್ತ್ರಾಣಾಮೌಷಧಸ್ಯ ಚ ।
ಕಾಲಮಾಸಾದ್ಯ ಕಾರ್ಯಂ ಚ ರಾಜಾ ದಂಡಂ ಪ್ರಕಲ್ಪಯೇತ್ ॥ ೨೯೩

ನೇಗಿಲು, ನೊಗ ಮೊದಲಾದ ಉಳುಮೆ ಸಾಧನ, ಕೋವಿ, ಕತ್ತಿ ಮುಂತಾದ ಆಯುಧ, ಮದ್ದು, ರಸಭಸ್ಮ ಆಸವಾರಿಷ್ಟ ಘೃತ ಮುಂತಾದುವನ್ನು ಕದ್ದರೆ ದೇಶ ಕಾಲ ಮೂಲ್ಯಗಳನ್ನು ನೋಡಿ ರಾಜನು ದಂಡನೆ ವಿಧಿಸಬೇಕು.

ಸ್ವಾಮ್ಯಮಾತ್ಯೌ ಪುರಂ ರಾಷ್ಟ್ರಂ ಕೋಶದಂಡೌ ಸುಹೃತ್ತಥಾ ।
ಸಪ್ತ ಪ್ರಕೃತಯೋ ಹ್ಯೇತಾಃ ಸಪ್ತಾಂಗಂ ರಾಜ್ಯಮುಚ್ಯತೇ ॥ ೨೯೪

ರಾಜ, ಮಂತ್ರಿ, ರಾಜಧಾನಿ, ದೇಶ, ಖಜಾನೆ, ಸೇನೆ, ಮಿತ್ರ ಇವೇಳು ರಾಜ್ಯಾಂಗಗಳು. ಪ್ರಕೃತಿಯೆಂದೂ ಹೆಸರಿದೆ.

ಸಪ್ತಾನಾಂ ಪ್ರಕೃತೀನಾಂ ತು ರಾಜ್ಯಸ್ಯಾಸಾಂ ಯಥಾಕ್ರಮಂ ।
ಪೂರ್ವಂ ಪೂರ್ವಂ ಗುರುತರಂ ಜಾನೀಯಾದ್ವ್ಯಸನಂ ಮಹತ್ ॥ ೨೯೫

ಆ ಸಪ್ತ ಪ್ರಕೃತಿಗಳಲ್ಲಿ ಮೊದಲು ಮೊದಲಿನದು ಬೆಲೆಯುಳ್ಳದ್ದು.

ಸಪ್ತಾಂಗಸ್ಯೇಹ ರಾಜ್ಯಸ್ಯ ವಿಷ್ಟಬ್ಧಸ್ಯ ತ್ರಿದಂಡವತ್ ।
ಅನ್ಯೋನ್ಯಗುಣವೈಶೇಷ್ಯಾತ್ ನಕಿಂಚಿದತಿರಿಚ್ಯತೇ ॥ ೨೯೬

ಮೂರು ಗಳಗಳಿಗೆ ತುದಿಗೆ ಒಂದು ಕಟ್ಟು ಹಾಕಿ ಮೂರು ಕಡೆ ಮೂರನ್ನು ಚಾಚಿ ನಿಲ್ಲಿಸಿದರೆ ಮುಕ್ಕಾಲು. ಅದು ಅನ್ಯೋನ್ಯ ಸಮಬಲದ ಆಧಾರವಾಗುವುದು. ಒಂದೊಂದಕ್ಕೂ ತಾರತಮ್ಯವಿಲ್ಲ. ಅದರಂತೆ ರಾಜ್ಯಾಂಗ ಏಳರಲ್ಲಿ ಬೆಲೆ ಹೆಚ್ಚು ಕಡಿಮೆಯಿಲ್ಲ. ಹಾಳಾದುದರ ಬಾಧೆಯು ಉಳಿದುದಕ್ಕೆ ಇದ್ದೇ ಇರುವುದು.

ತೇಷು ತೇಷು ತು ಕೃತ್ಯೇಷು ತತ್ತದಂಗಂ ವಿಶಿಷ್ಯತೇ |
ಯೇನ ಯತ್ಸಾಧ್ಯತೇ ಕಾರ್ಯಂ ತತ್ತಸ್ಮಿನ್ ಶ್ರೇಷ್ಠಮುಚ್ಯತೇ || ೨೯೭

ಅದರದರ ಕೆಲಸದಲ್ಲಿ ಆದದು ವಿಶೇಷತೆಯುಳ್ಳದ್ದು. ಅದರ ಕೆಲಸ ಇನ್ನೊಂದರಿಂದಾಗುವುದಿಲ್ಲ.

ಚಾರೇಣೋತ್ಸಾಹಯೋಗೇನ ಕ್ರಿಯಯೈವ ಚ ಕರ್ಮಣಾಂ |
ಸ್ವಶಕ್ತಿಂ ಪರಶಕ್ತಿಂ ಚ ನಿತ್ಯಂ ವಿದ್ಯಾನ್ ಮಹೀಪತಿಃ || ೨೯೮

ಗೂಢಚಾರ ಸಂಸ್ಥೆ, ವಿವಿಧ ಸೇನಾಬಲ ಮುಂತಾದ ರೀತಿಯಲ್ಲಿ ತನ್ನ ಮತ್ತು ಶತ್ರುಗಳ ಬಲವನ್ನು ಪರೀಕ್ಷಿಸುತ್ತ ಇರಬೇಕು.

ಪೀಡನಾನಿ ಚ ಸರ್ವಾಣಿ ವ್ಯಸನಾನಿ ತಥೈವ ಚ |
ಆರಭೇತ ತತಃ ಕಾರ್ಯಂ ಸಂಚಿಂತ್ಯ ಗುರುಲಾಘವಂ || ೨೯೯

ದುಃಖಗಳು, ದುಃಖಕಾರಣಗಳು ಇವುಗಳನ್ನು ತನ್ನ ಮತ್ತು ಶತ್ರುಪಕ್ಷ ದಲ್ಲಿ ನೋಡಿ ಸಂಧಿವಿಗ್ರಹಾದಿಗಳನ್ನು ಮಾಡಿಕೊಳ್ಳಬೇಕು.

ಆರಭೇತೈವ ಕರ್ಮಾಣಿ ಶ್ರಾಂತಃ ಶ್ರಾಂತಃ ಪುನಃ ಪುನಃ |
ಕರ್ಮಾಣ್ಯಾರಭಮಾಣಂ ಹಿ ಪುರುಷಂ ಶ್ರೀರ್ನಿಷೇವತೇ || ೩೦೦

ತನ್ನ ವೃದ್ಧಿ ಶತ್ರುಕ್ಷೀಣತೆ ಆಗುವ ಕರ್ಮಗಳು ವಿಫಲಗಳಾದರೂ ಧೃತಿಗೆಡದೆ ಪುನಃ ಪುನಃ ಮಾಡಬೇಕು. ಪ್ರಯತ್ನಿಸುತ್ತ ಇದ್ದರೆ ಒಮ್ಮೆ ಫಲದೊರೆಯದಿರುವುದಿಲ್ಲ.

ಕೃತಂ ತ್ರೇತಾಯುಗಂ ಚೈವ ದ್ವಾಪರಂ ಕಲಿರೇವ ಚ |
ರಾಜ್ಞೋ ವೃತ್ತಾನಿ ಸರ್ವಾಣಿ ರಾಜಾ ಹಿ ಯುಗಮುಚ್ಯತೇ || ೩೦೧

ಧರ್ಮಸುಖಗಳ ವೃದ್ಧಿಯು ರಾಜನ ಪ್ರಯತ್ನವನ್ನೇ ಅವಲಂಬಿಸಿದೆ. ಕೃತ, ತ್ರೇತ, ದ್ವಾಪರ, ಕಲಿಯುಗಗಳಲ್ಲಿ ವರ್ಣಿಸಲ್ಪಡುವ ಧರ್ಮ-ಕರ್ಮಗಳ ತಾರತಮ್ಯವು ರಾಜನ ಅಧೀನವು. ಆದುದರಿಂದ ರಾಜನೇ ಯುಗವು.

**ಕಲಿಃ ಪ್ರಸುಪ್ತೋ ಭವತಿ ಸ ಜಾಗ್ರದ್ದ್ವಾಪರಂ ಯುಗಂ ।**
**ಕರ್ಮಸ್ವಭ್ಯುದ್ಯತಸ್ತ್ರೇತಾ ವಿಚರಂಸ್ತು ಕೃತಂ ಯುಗಂ ॥ ೩೦೨**

ರಾಜನು ಈ ಧರ್ಮಶಾಸ್ತ್ರದಲ್ಲಿ ಹೇಳಿದ ಕರ್ತವ್ಯವಿಮುಖನಾದಾಗ ಕಲಿಕಾಲವು. ಎಚ್ಚರ ಮಾತ್ರವಿದ್ದಾಗ ಅಧಿಕಾರಿಗಳು ಸ್ವಲ್ಪ ಎಚ್ಚರದಿಂದಿರುವುದರಿಂದ ಸ್ವಲ್ಪ ಒಳ್ಳೆ ಕಾಲ. ಕರ್ಮಪರನಾದರೆ ಅದಕ್ಕೂ ಒಳ್ಳೆ ಕಾಲ. ಶಾಸ್ತ್ರ ಸಿದ್ಧ ಸಕಲ ಕರ್ಮವ್ಯಾಪೃತನಾದಾಗ ಪೂರ್ಣಸುಭಿಕ್ಷವು.

**ಇಂದ್ರಸ್ಯಾರ್ಕಸ್ಯ ವಾಯೋಶ್ಚ ಯಮಸ್ಯ ವರುಣಸ್ಯ ಚ ।**
**ಚಂದ್ರಸ್ಯಾಗ್ನೇಃ ಪೃಥಿವ್ಯಾಶ್ಚ ತೇಜೋವೃತ್ತಂ ನೃಪಶ್ಚರೇತ್ ॥ ೩೦೩**

ಇಂದ್ರಾದಿ ದೇವತೆಗಳಂತೆ ವಿಶೇಷವಾದ ಕ್ರಿಯಾಪರನಾಗಬೇಕು.

**ವಾರ್ಷಿಕಾಂಶ್ಚತುರೋ ಮಾಸಾನ್ ಯಥೇಂದ್ರೋಽಭಿಪ್ರವರ್ಷತಿ ।**
**ತಥಾಭಿವರ್ಷೇತ್ಸ್ವಂ ರಾಷ್ಟ್ರಂ ಕಾಮೈರಿಂದ್ರವ್ರತಂ ಚರನ್ ॥ ೩೦೪**

ಮಳೆಗಾಲದ ನಾಲ್ಕು ತಿಂಗಳು ಇಂದ್ರನು ಮಳೆ ಸುರಿಸಿ ತಣ್ಣಗೆ ಮಾಡುವಂತೆ ರಾಜನು ಸಜ್ಜನರ ಆಶೆಯನ್ನು ಪೂರೈಸಬೇಕು. ಆಗ ಸಸ್ಯ ಬೆಳೆದಂತೆ ಸುಖದ ಬೆಳೆ ಬೆಳೆಯುವುದು. ಊರಿನ ಸಜ್ಜನರು ನೆರೆಹೊರೆಯವರಿಗೆ ಒಳ್ಳೆ ನಡತೆಯನ್ನು ತೋರಿಸಿ ಎಚ್ಚರಿಸಿ ರಾಜನನ್ನು ಆದರ್ಶವಾಗಿ ಹೊಗಳಿ ಕೊಂಡಾಡುವುದರಿಂದ ಪ್ರಜೆಗಳು ಪ್ರೀತಿ ಭಯಗಳಿಂದ ಉನ್ಮಾರ್ಗಗಾಮಿಗಳಾಗುವುದಿಲ್ಲ.

**ಅಷ್ಟೌ ಮಾಸಾನ್ಯಥಾಽಽದಿತ್ಯಸ್ತೋಯಂ ಹರತಿ ರಶ್ಮಿಭಿಃ ।**
**ತಥಾ ಹರೇತ್ಕರಂ ರಾಷ್ಟ್ರಾನ್ನಿತ್ಯಮರ್ಕವ್ರತಂ ಹಿ ತತ್ ॥ ೩೦೫**

ಸೂರ್ಯನು ಆರುತಿಂಗಳು ನೀರಾರಿಸುವಂತೆ ರಾಜನು ಪ್ರಜೆಗಳ ಕರವನ್ನು ಎತ್ತಿ ತನ್ನ ಕೋಶ ತುಂಬಿಕೊಳ್ಳುವುದು ಅರ್ಕವ್ರತ.

ಪ್ರವಿಶ್ಯ ಸರ್ವಭೂತಾನಿ ಯಥಾ ಚರತಿ ಮಾರುತಃ ।
ತಥಾ ಚಾರೈಃ ಪ್ರವೇಷ್ಟವ್ಯಂ ವ್ರತಮೇತದ್ಧಿ ಮಾರುತಂ ॥ ೩೦೬

ವಾಯುವು ಸರ್ವಾಂತರ್ಯಾಮಿಯಾಗಿರುವಂತೆ ಚಾರರು ಸರ್ವಸಂಚಾರಿಗಳಾಗಿ ವಾರ್ತಾ ಸಂಗ್ರಹಮಾಡುವುದು ರಾಜನ ವಾಯುವ್ರತವು.

ಯಥಾ ಯಮಃ ಪ್ರಿಯದ್ವೇಷ್ಯೌ ಪ್ರಾಪ್ತೇ ಕಾಲೇ ನಿಯಚ್ಛತಿ ।
ತಥಾ ರಾಜ್ಞಾ ನಿಯಂತವ್ಯಾಃ ಪ್ರಜಾಸ್ತದ್ಧಿ ಯಮವ್ರತಂ ॥ ೩೦೭

ಯಮನು ಶತ್ರು ಮಿತ್ರರಿಗೆ ಮರಣವನ್ನು ತಪ್ಪಿಸುವುದಿಲ್ಲ. ಅದರಂತೆ ಸಜ್ಜನ ಪರಜನ ವಿಭಾಗವಿಲ್ಲದೆ ಪ್ರಜಾದಂಡನೆಯು ಯಮವ್ರತವು. ಈ ಕಾಲದ ರಾಜಕಾರಣಿಗಳಿಗೆ ಯಮವ್ರತ, ವರುಣವ್ರತಗಳ ಕೊರತೆಯು.

ವರುಣೇನ ಯಥಾ ಪಾಶೈರ್ಬದ್ಧ ಏವಾಭಿದೃಶ್ಯತೇ ।
ತಥಾ ಪಾಪಾನ್ನಿಗೃಹ್ಣೀಯಾತ್ ವ್ರತಮೇತದ್ಧಿ ವಾರುಣಂ ॥ ೩೦೮

ವರುಣನು ಒಬ್ಬನಿಗೆ ಪಾಶಬಂಧನವನ್ನು ಅಪೇಕ್ಷಿಸಿದರೆ ತಪ್ಪದೆ ಬಂಧಿಸುತ್ತಾನೆ. ಅದರಂತೆ ಕೆಟ್ಟವರನ್ನು ದಮನಿಸುವುದು ವರುಣವ್ರತವು. ರಾಗದ್ವೇಷಗಳಿಗೆ ವಶನಾದರೆ ಇದು ಶಕ್ಯವಿಲ್ಲ.

ಪರಿಪೂರ್ಣಂ ಯಥಾ ಚಂದ್ರಂ ದೃಷ್ಟ್ವಾ ಹೃಷ್ಯಂತಿ ಮಾನವಾಃ ।
ತಥಾ ಪ್ರಕೃತಯೋ ಯಸ್ಮಿನ್ಸ ಚಾಂದ್ರವ್ರತಿಕೋ ನೃಪಃ ॥ ೩೦೯

ಪೂರ್ಣ ಚಂದ್ರನನ್ನು ನೋಡಿ ಎಲ್ಲರೂ ಸಂತುಷ್ಟರಾಗುವರು, ಅದರಂತೆ ರಾಜನು ಸಂತೋಷದಾಯಕನಾದರೆ ಚಂದ್ರವ್ರತವು. ಜನರ ಆವಶ್ಯಕತೆಗಳನ್ನು ಉಪಾಯಗಳಿಂದ ಈಡೇರಿಸಿದರೆ ಸಂತೋಷವಾಗದಿರಲಾರದು.

ಪ್ರತಾಪಯುಕ್ತಸ್ತೇಜಸ್ವೀ ನಿತ್ಯಂ ಸ್ಯಾತ್ಪಾಪಕರ್ಮಸು ।
ದುಷ್ಟಸಾಮಂತಹಿಂಸ್ರಶ್ಚ ತದಾಗ್ನೇಯಂ ವ್ರತಂ ಸ್ಮೃತಂ ॥ ೩೧೦

ಬೆಂಕಿಯು ಸುಡುತ್ತದೆ. ವಿರುದ್ಧರಾದ ಮಂತ್ರಿ, ಸಾಮಂತರನ್ನು ಅಪರಾಧಿಗಳನ್ನು ಕೂಡ ಬೆಂಕಿಯಂತೆ ಸುಟ್ಟರೆ ದಂಡಿಸಿದರೆ ಅದು ಆಗ್ನೇಯ ವ್ರತವು.

ಯಥಾ ಸರ್ವಾಣಿ ಭೂತಾನಿ ಧರಾ ಧಾರಯತೇ ಸಮಂ ।
ತಥಾ ಸರ್ವಾಣಿ ಭೂತಾನಿ ಬಿಭ್ರತಃ ಪಾರ್ಥಿವಂ ವ್ರತಂ ॥ ೩೧೧

ಭೂಮಿಯು ಚಂಡಾಲನನ್ನು, ಧರ್ಮಿಷ್ಠನನ್ನು, ಕೀಟವನ್ನು, ಆನೆಯನ್ನು ಎಲ್ಲರನ್ನೂ ಧರಿಸುತ್ತದೆ. ಹಾಗೆ ಸಮಾನ ಬುದ್ಧಿಯಿಂದ ರಕ್ಷಣೆ ಕೊಡುವುದು ಪಾರ್ಥಿವವ್ರತವು.

ಏತೈರುಪಾಯೈರನ್ಯೈಶ್ಚ ಯುಕ್ತೋ ನಿತ್ಯಮತಂದ್ರಿತಃ ।
ಸ್ತೇನಾನ್ರಾಜಾ ನಿಗೃಹ್ಣೀಯಾತ್ಸ್ವರಾಷ್ಟ್ರೇ ಪರ ಏವ ಚ ॥ ೩೧೨

ಸ್ವರಾಷ್ಟ್ರದಲ್ಲಿ ನೆಲಸಿ ಪರರಾಷ್ಟ್ರದಿಂದ ಬಂದು ಕೊಲೆ, ದರೋಡೆ, ಕಳ್ಳತನ ಎಸಗುವ ದುಷ್ಟರನ್ನು ಈಗ ಹೇಳಿದ ಮತ್ತು ಸಮಯೋಚಿತವಾಗಿ ಊಹಿಸಿದ ಉಪಾಯಗಳಿಂದ ನಿವೃತ್ತಿಪಡಿಸಬೇಕು.

ಪರಾಮಪ್ಯಾಪದಂ ಪ್ರಾಪ್ತೋ ಬ್ರಾಹ್ಮಣಾನ್ನ ಪ್ರಕೋಪಯೇತ್ ।
ತೇ ಹ್ಯೇನಂ ಕುಪಿತಾ ಹನ್ಯುಃ ಸದ್ಯಃ ಸಬಲವಾಹನಂ ॥ ೩೧೩

ಎಂತಹ ಕಷ್ಟಕಾಲದಲ್ಲಿಯೂ ಬ್ರಾಹ್ಮಣನನ್ನು ರೇಗಿಸಬಾರದು. ಅವರು ಸಿಟ್ಟುಗೊಂಡರೆ ರಾಜನ ಸಪರಿವಾರ ನಾಶವು.

ಯೈಃ ಕೃತಃ ಸರ್ವಭಕ್ಷ್ಯೋಽಗ್ನಿರಪೇಯಶ್ಚ ಮಹೋದಧಿಃ ।
ಕ್ಷಯೀ ಚಾಪ್ಯಾಯಿತಃ ಸೋಮಃ ಕೋ ನ ನಶ್ಯೇತ್ಪ್ರಕೋಪ್ಯ ತಾನ್ ॥ ೩೧೪

ಬ್ರಾಹ್ಮಣ ಶಾಪದಿಂದ ಬೆಂಕಿಯು ಸರ್ವದಾಹಿಯಾಯಿತು. ಸಮುದ್ರವು ಉಪ್ಪಾಗಿ ಕುಡಿಯದಂತಾಯಿತು.

ಲೋಕಾನನ್ಯಾನ್ ಸೃಜೇಯುರ್ಯೇ ಲೋಕಪಾಲಾಂಶ್ಚ ಕೋಪಿತಾಃ ।
ದೇವಾನ್ ಕುರ್ಯುರದೇವಾಂಶ್ಚ ಕಃ ಕ್ಷಿಣ್ವನ್ ತಾನ್ಸಮೃಧ್ನುಯಾತ್ ॥ ೩೧೫

ಬ್ರಾಹ್ಮಣರ ಸಿಟ್ಟು ಲೋಕಾಂತರವನ್ನು ಸೃಷ್ಟಿಸುವುದು. ಬೇರೆ ಲೋಕಪಾಲರನ್ನು ನಿರ್ಮಿಸುವುದು. ದೇವರು ದೇವತ್ವವನ್ನು ಕಳೆದುಕೊಳ್ಳುವರು. ಬ್ರಾಹ್ಮಣಪೀಡೆಯಿಂದ ವೃದ್ಧಿಯಿಲ್ಲ.

ಯಾನುಪಾಶ್ರಿತ್ಯ ತಿಷ್ಠಂತಿ ಲೋಕಾ ದೇವಾಶ್ಚ ಸರ್ವದಾ ।
ಬ್ರಹ್ಮ ಚೈವ ಧನಂ ಯೇಷಾಂ ಕೋ ಹಿಂಸ್ಯಾತ್ತಾನ್ ಜಿಜೀವಿಷುಃ ॥ ೩೧೬

ಲೋಕದೇವತೆಗಳು ಬ್ರಾಹ್ಮಣರನ್ನು ಆಶ್ರಯಿಸಿವೆ. ಅವರಿಗೆ ಬ್ರಹ್ಮ ಜ್ಞಾನವೇ ಧನವು. ಜೀವದಾಸೆಯಿರುವ ಯಾರೂ ಅವರನ್ನು ಪೀಡಿಸ ಲಾರರು.

ಅವಿದ್ವಾಂಶ್ಚೈವ ವಿದ್ವಾಂಶ್ಚ ಬ್ರಾಹ್ಮಣೋ ದೈವತಂ ಮಹತ್ ।
ಪ್ರಣೀತಶ್ಚಾಪ್ರಣೀತಶ್ಚ ಯಥಾಗ್ನಿರ್ದೈವತಂ ಮಹತ್ ॥ ೩೧೭

ಬ್ರಾಹ್ಮಣನು ಅವಿದ್ಯಾವಂತನಾದರೂ ಪೂಜ್ಯನು. ಅಸಂಸ್ಕೃತವಾದ ಅಗ್ನಿಯೂ ಅನ್ಯರನ್ನು ದಹಿಸದಿರುವುದಿಲ್ಲ.

ಶ್ಮಶಾನೇಷ್ವಪಿ ತೇಜಸ್ವೀ ಪಾವಕೋ ನೈವ ದುಷ್ಯತಿ ।
ಹೂಯಮಾನಶ್ಚ ಯಜ್ಞೇಷು ಭೂಯ ಏವಾಭಿವರ್ಧತೇ ॥ ೩೧೮

ಅಗ್ನಿಯು ಸ್ಮಶಾನದಲ್ಲಿ ಹೆಣವನ್ನು ಸುಡುತ್ತದೆ. ಮಂತ್ರಪೂರ್ವಕ ಆಹುತಿಯನ್ನು ಭಕ್ಷಿಸುತ್ತದೆ. ಕ್ಷಯದೋಷಗಳಿಲ್ಲ.

ಏವಂ ಯದ್ಯಪ್ಯನಿಷ್ಟೇಷು ವರ್ತಂತೇ ಸರ್ವಕರ್ಮಸು ।
ಸರ್ವಥಾ ಬ್ರಾಹ್ಮಣಾಃ ಪೂಜ್ಯಾಃ ಪರಮಂ ದೈವತಂ ಹಿ ತತ್ ॥ ೩೧೯

ಅಗ್ನಿಯು ಶವವನ್ನು ದಹಿಸುವಂತೆ ಬ್ರಾಹ್ಮಣನು ಕುಕರ್ಮ ಮಾಡಿ ದರೂ ಮಂತ್ರದಿಂದ ಅಗ್ನಿಯಂತೆ ಪೂಜ್ಯನಾಗಿ ದೇವನಾಗುವನು.

ಕ್ಷತ್ರಸ್ಯಾತಿಪ್ರವೃದ್ಧಸ್ಯ ಬ್ರಾಹ್ಮಣಾನ್ಪ್ರತಿ ಸರ್ವಶಃ ।
ಬ್ರಹ್ಮೈವ ಸನ್ನಿಯಂತೃ ಸ್ಯಾತ್ಕ್ಷತ್ರಂ ಹಿ ಬ್ರಹ್ಮಸಂಭವಂ ॥ ೩೨೦

ಸೊಕ್ಕಿದ ಕ್ಷತ್ರಿಯನನ್ನು ಬ್ರಾಹ್ಮಣನು ಅಂಕೆಗೆ ತರಬಲ್ಲನು. ಬ್ರಹ್ಮ ನಿಂದ ಕ್ಷತ್ರಿಯನು ಜನಿಸಿದನು. ಬ್ರಹ್ಮನು ಬ್ರಾಹ್ಮಣನು ಸಮ.

ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಂ ।
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥ ೩೨೧

ನೀರಿನಿಂದ ಬೆಂಕಿ, ಬ್ರಹ್ಮನಿಂದ ಕ್ಷತ್ರಿಯ, ಕಲ್ಲಿನಿಂದ ಕಬ್ಬಿಣ ಹುಟ್ಟಿದೆ. ಆದುದರಿಂದ ಮೂಲವಸ್ತುವಿನಲ್ಲಿ ಜನ್ಯವಸ್ತುವು ಕಾರ್ಯಕಾರಿಯಾಗುವುದಿಲ್ಲ.

ನಾಬ್ರಹ್ಮ ಕ್ಷತ್ರಮೃಧ್ನೋತಿ ನಾಕ್ಷತ್ರಂ ಬ್ರಹ್ಮ ವರ್ಧತೇ ।
ಬ್ರಹ್ಮ ಕ್ಷತ್ರಂ ಚ ಸಂಪೃಕ್ತಮಿಹ ಚಾಮುತ್ರ ವರ್ಧತೇ ॥ ೩೨೨

ಬ್ರಾಹ್ಮಣ ಸಹಾಯವಿಲ್ಲದ ಕ್ಷತ್ರಿಯನು ವರ್ಧಿಸುವುದಿಲ್ಲ. ಕ್ಷತ್ರಿಯ ಸಹಾಯವಿಲ್ಲದ ಬ್ರಾಹ್ಮಣನೂ ವೃದ್ಧಿ ಹೊಂದುವುದಿಲ್ಲ ಅನ್ಯೋನ್ಯ ಬ್ರಹ್ಮ ಕ್ಷತ್ರಗಳು ಸಹಕಾರದಿಂದ ಎಲ್ಲ ಕ್ಷೇಮವನ್ನು ಉಂಟುಮಾಡುವುವು.

ದತ್ತ್ವಾ ಧನಂ ತು ವಿಪ್ರೇಭ್ಯಃ ಸರ್ವದಂಡಸಮುತ್ಥಿತಂ ।
ಪುತ್ರೇ ರಾಜ್ಯಂ ಸಮಾಸೃಜ್ಯ ಕುರ್ವೀತ ಪ್ರಾಯಣಂ ರಣೇ ॥ ೩೨೩

ದಂಡನೆಯಿಂದ ಲಭಿಸಿದ ಧನವನ್ನು ಬ್ರಾಹ್ಮಣರಿಗೆ ದಾನಮಾಡಿ ರಾಜ್ಯವನ್ನು ಮಗನಲ್ಲಿ ಒಪ್ಪಿಸಿ ತಾನು ವೀರಮರಣವನ್ನು ಆಶಿಸಬೇಕು.

ಏವಂ ಚರನ್ ಸದಾ ಯುಕ್ತೋ ರಾಜಧರ್ಮೇಷು ಪಾರ್ಥಿವಃ ।
ಹಿತೇಷು ಚೈವ ಲೋಕಸ್ಯ ಸರ್ವಾನ್ ಭೃತ್ಯಾನ್ನಿಯೋಜಯೇತ್ ॥ ೩೨೪

ಈ ಮೂರು ಅಧ್ಯಾಯಗಳಲ್ಲಿ ಹೇಳಿದ ರಾಜಧರ್ಮವನ್ನು ಪಾಲಿಸುತ್ತ ಪ್ರಜಾಹಿತಕ್ಕೆ ಎಲ್ಲರಿಗೆ ಪ್ರೇರಣೆ ಮಾಡಬೇಕು.

ಏಷೋಽಖಿಲಃ ಕರ್ಮವಿಧಿರುಕ್ತೋ ರಾಜ್ಞಃ ಸನಾತನಃ ।
ಇಮಂ ಕರ್ಮವಿಧಿಂ ವಿದ್ಯಾತ್ ಕ್ರಮಶೋ ವೈಶ್ಯಶೂದ್ರಯೋಃ ॥ ೩೨೫

ರಾಜಕಾರ್ಯವನ್ನು ವಿವರಿಸಿದ ಮೇಲೆ ವೈಶ್ಯಶೂದ್ರರ ವಿಷಯವನ್ನು ಹೇಳುತ್ತೇನೆ.

ವೈಶ್ಯಸ್ತು ಕೃತಸಂಸ್ಕಾರಃ ಕೃತ್ವಾ ದಾರಪರಿಗ್ರಹಂ ।
ವಾರ್ತಾಯಾಂ ನಿತ್ಯಯುಕ್ತಃ ಸ್ಯಾತ್ ಪಶೂನಾಂ ಚೈವ ರಕ್ಷಣೇ ॥ ೩೨೬

ವೈಶ್ಯನು ಉಪನಯನ ಮದುವೆ ಎಲ್ಲ ಆದ ಮೇಲೆ ಕೃಷಿ ಪಶುಪಾಲನೆಗಳನ್ನು ತಪ್ಪದೆ ಮಾಡಬೇಕು.

ಪ್ರಜಾಪತಿರ್ಹಿ ವೈಶ್ಯಾಯ ಸೃಷ್ಟ್ವಾ ಪರಿದದೇ ಪಶೂನ್ ।
ಬ್ರಾಹ್ಮಣಾಯ ಚ ರಾಜ್ಞೇ ಚ ಸರ್ವಾಃ ಪರಿದದೇ ಪ್ರಜಾಃ ॥ ೩೨೭

ಬ್ರಹ್ಮನು ಸೃಷ್ಟಿಮಾಡಿ ಪಶುಗಳನ್ನು ವೈಶ್ಯನಿಗೆ ಕೊಟ್ಟನು. ಬ್ರಾಹ್ಮಣ ಕ್ಷತ್ರಿಯರಿಗೆ ಎಲ್ಲ ಪ್ರಜೆಗಳನ್ನು ಕೊಟ್ಟನು.

ನಚ ವೈಶ್ಯಸ್ಯ ಕಾಮಃ ಸ್ಯಾನ್ನ ರಕ್ಷೇಯಂ ಪಶೂನಿತಿ ।
ವೈಶ್ಯೇ ಚೇಚ್ಛತಿ ನಾನ್ಯೇನ ರಕ್ಷಿತವ್ಯಾಃ ಕಥಂಚನ ॥ ೩೨೮

ನಾನು ಪಶುಪಾಲನೆ ಮಾಡುವುದು ಬೇಡವೆಂದು ವೈಶ್ಯನಿಗೆ ಇಚ್ಛೆ ಹುಟ್ಟಬಾರದು. ವೈಶ್ಯನು ಪಶುಪಾಲನೆ ಮಾಡುವಾಗ ಇತರರು ಅದಕ್ಕೆ ಕೈ ಹಾಕಬಾರದು. ಒಬ್ಬನು ಇತರರ ವೃತ್ತಿಯನ್ನು ಅಪೇಕ್ಷಿಸಿ ಫಲವಿಲ್ಲ. ಜನರಿಗೆ ಎಲ್ಲವೂ ಬೇಕು. ಆದರೆ ಒಂದೊಂದನ್ನು ಒಬ್ಬೊಬ್ಬ ಪರಂಪರೆಯಿಂದ ಮಾಡುತ್ತ ಬರುವುದು, ಅನುಭವ ಸಲಕರಣೆ ವ್ಯವಸ್ಥೆಗಳ ದೃಷ್ಟಿಯಿಂದ ಒಳ್ಳೆದು. ಒಬ್ಬನು ತನಗೆ ಅನುಭವ ಇಲ್ಲದ ಇತರ ವೃತ್ತಿಗಳಲ್ಲಿ ಅನೇಕವನ್ನು ಹಚ್ಚಿಕೊಂಡರೆ ಯಾವುದೂ ಲಾಭದಾಯಕವಲ್ಲದೆ ಹೋಗುವುದು. ಬಹುವಿಧವೃತ್ತಿಯನ್ನು ದೊಡ್ಡ ಪ್ರಮಾಣದಲ್ಲಿ ಮಾಡಲಾಗುವುದಿಲ್ಲ. ಅಲ್ಪ ಪ್ರಮಾಣದಲ್ಲಿ ಮಾಡಿದ ಬೆಳೆ ಮುಂತಾದುದಕ್ಕೆ ಹಾನಿನಾಶ ಅಪಾಯ ಹೆಚ್ಚು. ಲಾಭ ಕಡಿಮೆಯೆಂದು ಬಲ್ಲವರಿಗೆ ಹೇಳಬೇಕಾಗಿಲ್ಲ. ತಿಳಿಯದವರಿಗೆ ಎಷ್ಟು ಹೇಳಿದರೂ ತಿಳಿಯುವುದು ಕಷ್ಟ.

ಮಣಿಮುಕ್ತಾಪ್ರವಾಲಾನಾಂ ಲೋಹಾನಾಂ ತಾಂತವಸ್ಯ ಚ ।
ಗಂಧಾನಾಂ ಚ ರಸಾನಾಂ ಚ ವಿದ್ಯಾದರ್ಘಬಲಾಬಲಂ ॥ ೩೨೯

ಮುತ್ತು, ರತ್ನ, ಹವಳ, ಖನಿಜ, ನೂಲು, ಸುಗಂಧ ದ್ರವ್ಯ, ಬೆಲ್ಲ, ಉಪ್ಪು ಮುಂತಾದ ರಸಗಳು, ಈ ಸಾಮಗ್ರಿಗಳ ವೈವಿಧ್ಯ ಬೆಲೆ ದೇಶ ಕಾಲ, ಎಲ್ಲವನ್ನು ತಿಳಿದಿರಬೇಕು. ಒಬ್ಬನೇ ವೈಶ್ಯ ಎಲ್ಲವನ್ನು ಮಾಡುವದಲ್ಲ. ಒಬ್ಬನು ಪಶುಪಾಲನೆ, ಇನ್ನೊಬ್ಬ ವಾಣಿಜ್ಯ ಅದರಲ್ಲೂ ರತ್ನ, ಬಟ್ಟೆ, ಧಾನ್ಯ, ಖನಿಜ ಇತ್ಯಾದಿಯಾಗಿ ಶಾಖೆಯನ್ನು ಅಭಿರುಚಿಯಂತೆ ಆರಿಸಿಕೊಂಡು ವಂಶ ಪಾರಂಪರ್ಯವಾಗಿ ಮಾಡಬಹುದು.

ಬೀಜಾನಾಮುಪ್ತಿವಿಚ್ಚ ಸ್ಯಾತ್ಕ್ಷೇತ್ರದೋಷಗುಣಸ್ಯ ಚ ।
ಮಾನಯೋಗಂ ಚ ಜಾನೀಯಾತ್ ತುಲಾಯೋಗಾಂಶ್ಚ ಸರ್ವಶಃ ॥ ೩೩೦

ಬೀಜಗಳ, ಹೊಲಗಳ, ಗುಣದೋಷ, ಸಾಕಣೆ, ದ್ರವ್ಯಮಾನ, ತುಲಾಮಾನಗಳನ್ನೆ ವೈಶ್ಯನು ಅಧ್ಯಯನ ಮಾಡಬೇಕು.

ಸಾರಾಸಾರಂ ಚ ಭಾಂಡಾನಾಂ ದೇಶಾನಾಂ ಚ ಗುಣಾಗುಣಾನ್ ।
ಲಾಭಾಲಭಂ ಚ ಪಣ್ಯಾನಾಂ ಪಶೂನಾಂ ಪರಿವರ್ಧನಂ ॥ ೩೩೧

ಒಳ್ಳೆದು, ಹಾಳು, ದೇಶಭೇದದಿಂದ ಬೆಲೆ ತೇಮಾನು, ಲಾಗ್ವಾಡು, ಪಶುಗಳ ಬೆಳವಣಿಗೆಗಳನ್ನು ತಿಳಿದಿರಬೇಕು.

ಭೃತ್ಯಾನಾಂ ಚ ಭೃತಿಂ ವಿದ್ಯಾತ್ ಭಾಷಾಶ್ಚ ವಿವಿಧಾ ನೃಣಾಂ ।
ದ್ರವ್ಯಾಣಾಂ ಸ್ಥಾನಯೋಗಾಂಶ್ಚ ಕ್ರಯವಿಕ್ರಯಮೇವ ಚ ॥ ೩೩೨

ಕೂಲಿಯುವರ ಕೂಲಿ, ನಾನಾ ದೇಶಭಾಷೆ ಹಾಳಾಗದಂತೆ ಸಾಮಾನುಗಳನ್ನು ರಕ್ಷಿಸುವ ರೀತಿ, ಎಲ್ಲೆಲ್ಲಿ ಯಾವುದು ಖರ್ಚಾಗುವುದು ಎಂಬುದನ್ನು ತಿಳಿಯಬೇಕು.

ಧರ್ಮೇಣ ಚ ದ್ರವ್ಯವೃದ್ಧಾವಾತಿಷ್ಠೇದ್ಯತ್ನಮುತ್ತಮಂ ।
ದದ್ಯಾಚ್ಚ ಸರ್ವಭೂತಾನಾಮನ್ನಮೇವ ಪ್ರಯತ್ನತಃ ॥ ೩೩೩

ಧರ್ಮವಿರುದ್ಧವಲ್ಲದ ರೀತಿಯಿಂದ ಧನಾಭಿವೃದ್ಧಿಗೆ ಪ್ರಯತ್ನಿಸಬೇಕು. ಸ್ವರ್ಣದಾನಕ್ಕಿಂತ ಅನ್ನದಾನವೇ ಮುಖ್ಯವಾದುದು.

ವಿಪ್ರಾಣಾಂ ವೇದವಿದುಷಾಂ ಗೃಹಸ್ಥಾನಾಂ ಯಶಸ್ವಿನಾಂ ।
ಶುಶ್ರೂಷೈವ ತು ಶೂದ್ರಸ್ಯ ಧರ್ಮೋ ನೈಶ್ರೇಯಸಃ ಪರಃ ॥ ೩೩೪

ವೇದ ವಿದ್ಯಾಸಂಪನ್ನರಾದ ಬ್ರಾಹ್ಮಣರ ಸೇವೆಯು ಶೂದ್ರನಿಗೆ ಸಕಲ ಶ್ರೇಯೋಹೇತುವು. ಅದಕ್ಕಿಂತ ಉತ್ತಮ ಧರ್ಮವು ಬೇರೆ ಇಲ್ಲ.

ಶುಚಿರುತ್ಕೃಷ್ಟಶುಶ್ರೂಷುರ್ಮೃದುವಾಗನಹಂಕೃತಃ ।
ಬ್ರಾಹ್ಮಣಾದ್ಯಾಶ್ರಯೋ ನಿತ್ಯಮುತ್ಕೃಷ್ಟಾಂ ಜಾತಿಮಶ್ನುತೇ ॥ ೩೩೫

ಶುಚಿಯಾದ ದೇಹ-ಮನಸ್ಸುಗಳಿಂದ ಮೃದುವಚನವುಳ್ಳವನಾಗಿ ಉತ್ಕೃಷ್ಟ ಗುಣವಂತರ ಸೇವೆ ಮಾಡುತ್ತಿದ್ದರೆ ಉತ್ತಮ ಜನ್ಮವನ್ನು ಹೊಂದುವನು. ದುರಹಂಕಾರವಿರಬಾರದು.

ಏಷೋಽನಾಪದಿ ವರ್ಣಾನಾಮುಕ್ತಃ ಕರ್ಮವಿಧಿಃ ಶುಭಃ ।
ಆಪದ್ಯಪಿ ಹಿ ಯಸ್ತೇಷಾಂ ಕ್ರಮಶಸ್ತನ್ನಿಬೋಧತ ॥ ೩೩೬

ಈವರೆಗೆ ಹೇಳಿದುದು ಆಪದ್ಧರ್ಮವಲ್ಲ. ಸಮಧರ್ಮವು. ಆಪದ್ಧರ್ಮವನ್ನು ಇನ್ನು ಹೇಳುತ್ತೇನೆ.

# ಅಧ್ಯಾಯ ೧೦.

ಅಧೀಯೀರನ್ ತ್ರಯೋ ವರ್ಣಾಃ ಸ್ವಕರ್ಮಸ್ಥಾ ದ್ವಿಜಾತಯಃ ।
ಪ್ರಬ್ರೂಯಾದ್ಬ್ರಾಹ್ಮಣಸ್ತ್ವೇಷಾಂ ನೇತರಾವಿತಿ ನಿಶ್ಚಯಃ ॥ ೧

ಈ ಮೊದಲು ಹೇಳಿದ ವಿಹಿತ, ಆಯಾ ಸ್ವಕರ್ಮಗಳಲ್ಲಿ ನಿರತರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ವೇದಾಧ್ಯಯನವನ್ನು ಮಾಡಬೇಕು. ಬ್ರಾಹ್ಮಣನು ಉಪದೇಶಕನು. ಕ್ಷತ್ರಿಯ ವೈಶ್ಯರು ಪ್ರವಚನಕಾರರಾಗಕೂಡದು. ಈಗ ವಿದ್ಯಾಸಂಸ್ಥೆಯ ಪದವಿಧಾರಿಗಳೇ ಎಲ್ಲ ಉದ್ಯೋಗದ ಅರ್ಹತೆ ಪಡೆಯುವಂತೆ ವಯಸ್ಸು ಅರ್ಹತೆ ದಕ್ಷತೆಗಳು ನೂರು ಮಡಿಯಿದ್ದರೂ ಪದವಿಯು (ಸರ್ಟಿಫಿಕೇಟ್) ಇಲ್ಲವಾದರೆ ಅಧಿಕಾರದ ಉದ್ಯೋಗದಿಂದ ಹೊರಗಿರಬೇಕೆಂದು ರಾಷ್ಟ್ರಶಾಸನವಿದೆ. ಮಿತಿಮೀರಿದ ವಯಸ್ಸು ಸಾರ್ವಜನಿಕ ಉದ್ಯೋಗಕ್ಕೆ ಅನರ್ಹತೆಯಾಗುವುದು. ಆದರೆ ರಾಜಕಾರಣಿಯು ಹಾಸಿಗೆಯಲ್ಲಿ ಮಲಗಿಕೊಂಡೇ ಅಧಿಕಾರಸೂತ್ರವನ್ನು ಕೈಯಲ್ಲಿ ಹಿಡಿದಿರಬಹುದು. ಎಂತಹ ವಿಪರ್ಯಾಸ. ಇಂತಹ ಪರಿಶುದ್ಧ ವ್ಯವಸ್ಥೆಯು ಮನುಸ್ಮೃತಿಯದು. ಬ್ರಾಹ್ಮಣನು ಅಧ್ಯಾಪಕನು, ಇತರರು ಅಧ್ಯೇತೃಗಳು. ಈ ಪದ್ಧತಿಯು ಎಷ್ಟು ಸ್ವಾರಸ್ಯಕರವಾಗಿದೆಯೆಂದು ಭಾರತ ರಾಮಾಯಣಗಳ ಸಾಮಾಜಿಕ ಜೀವನದ ಪರಿಶೀಲನೆಯಿಂದ ಮನದಟ್ಟಾಗುವುದು. ಯುಧಿಷ್ಠಿರನು ಸರ್ವಾಧಿಕಾರಿಪ್ರಾಜ್ಞನಾದರೂ ಧರ್ಮಶಾಸ್ತ್ರಗಳಿಗೆ ವಿಧೇಯನಾದನು ಅವನಿಗೂ ಶ್ರೀರಾಮನಿಗೂ ಬ್ರಾಹ್ಮಣನನ್ನು ಭಂಗಿಸುವುದು ಅವಶ್ಯವೆನಿಸಲಿಲ್ಲ. ಪರಶುರಾಮನು ಸಕಲಕ್ಷತ್ರಿಯರ ಧನುರ್ವಿದ್ಯಾಚಾರ್ಯನಾದನು. ಬ್ರಾಹ್ಮಣನು ಅಧ್ಯಾಪಕನಾದುದರಿಂದ ಎಲ್ಲ ವಿದ್ಯಾಶಾಖೆಗಳಲ್ಲಿ ಅವನು ಪರಿನಿಷ್ಠಿತನಾಗಿರಬೇಕು. ಅದನ್ನೇ ಮನು ಈ ರೀತಿ ಹೇಳುತ್ತಾನೆ.

ಸರ್ವೇಷಾಂ ಬ್ರಾಹ್ಮಣೋ ವಿದ್ಯಾದ್ ವೃತ್ತ್ಯುಪಾಯಾನ್ ಯಥಾವಿಧಿ ।
ಪ್ರಬ್ರೂಯಾದಿತರೇಭ್ಯಶ್ಚ ಸ್ವಯಂ ಚೈವ ತಥಾ ಭವೇತ್ ॥ ೨

ವಿವಿಧ ಜನತೆಗೆ ಬೇಕಾದ ವಿದ್ಯಾರಾಶಿಯನ್ನು ಅವರವರಿಗೆ ಧಾರೆಯೆರೆಯಲು ಅವನು ಕೆರೆಯಂತೆ ತುಂಬಿರಬೇಕು. ಇತರರಿಗೆ ತಾನು ಕಲಿಸಿದ ಅರ್ಥದಂತೆ ತಾನೂ ನಡೆದುಕೊಳ್ಳುತ್ತಿರಬೇಕು. ಉತ್ತಮ ಜಾತಿ, ಉತ್ಕೃಷ್ಟ ಪ್ರಕೃತಿ, ನಿಯಮ ಸಂಸ್ಕಾರಗಳು ಬ್ರಾಹ್ಮಣನ ಅರ್ಹತೆಗಳು. ಎಳ್ಳು ಎಂದೂ ನಟ್ಟು ಎಳ್ಳು ಬೆಳೆಯುವುದುದರಿಂದ ವಿಕಾಸವಾದವು ಸುಳ್ಳು. ಜಾತಿ ತಾರತಮ್ಯವು ಸತ್ಯ.

ವೈಶೇಷ್ಯಾತ್ಪ್ರಕೃತಿಶ್ರೈಷ್ಠ್ಯಾತ್ ನಿಯಮಸ್ಯ ಚ ಧಾರಣಾತ್ ।
ಸಂಸ್ಕಾರಸ್ಯ ವಿಶೇಷಾಚ್ಚ ವರ್ಣಾನಾಂ ಬ್ರಾಹ್ಮಣಃ ಪ್ರಭುಃ ॥ ೩

ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನು ಪ್ರಭುವು. ಸಿಂಹವು ಮುಗರಾಜ. ಸಂಸ್ಕಾರ, ನಿಯಮ, ಪ್ರಕೃತಿ ವಿಶೇಷಗಳು ಹೆಚ್ಚುಗಾರಿಕೆಗಳು. ಇದರ ತೀರ್ಮಾನವು ಕ್ಷಣಿಕವಲ್ಲ.

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಸ್ತ್ರಯೋ ವರ್ಣಾ ದ್ವಿಜಾತಯಃ ।
ಚತುರ್ಥ ಏಕಜಾತಿಸ್ತು ಶೂದ್ರೋ ನಾಸ್ತಿ ತು ಪಂಚಮಃ ॥ ೪

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂದು ಮೂವರು, ಉಪನಯನ ಉಳ್ಳವರು. ಉಳಿದವರೆಲ್ಲ ಒಂದೇ ಜಾತಿ ಪಂಚಮರಿಲ್ಲ. ಇದು ಶಾಸ್ತ್ರ ಸಂಪ್ರದಾಯವು.

ಸರ್ವವರ್ಣೇಷು ತುಲ್ಯಾಸು ಪತ್ನೀಷ್ವಕ್ಷತಯೋನಿಷು ।
ಆನುಲೋಮ್ಯೇನ ಸಂಭೂತಾ ಜಾತ್ಯಾ ಜ್ಞೇಯಾಸ್ತ ಏವ ತೇ ॥ ೫

ಅಕ್ಷತಯೋನಿಸ್ತ್ರೀ ಮತ್ತು ಅದೇ ವರ್ಣದ ಪುರುಷ ಇವರಿಂದ ಜನಿಸಿದವರು ಅದೇ ವರ್ಗದವರು. ಇದೇ ಜಾತಿ ವ್ಯವಸ್ಥೆ.

ಸ್ತ್ರೀಷ್ವನಂತರಜಾತಾಸು ದ್ವಿಜೈರುತ್ಪಾದಿತಾನ್ ಸುತಾನ್ ।
ಸದೃಶಾನೇವ ತಾನಾಹುರ್ಮಾತೃದೋಷವಿಗರ್ಹಿತಾನ್ ॥ ೬

ನಾಲ್ಕು ಜಾತಿಗಳೊಳಗೆ ಒಂದನೆಯ ಪುರುಷನು ಎರಡನೆ ವರ್ಗದ ಸ್ತ್ರೀ ಸಂಬಂಧದಿಂದ ಜನಿಸಿದ ಪ್ರಜೆಯು ಪಿತೃಸಮಾನವು. ಸ್ತ್ರೀಯು ನಿಕೃಷ್ಟಳಾದುದರಿಂದ ಸ್ವಲ್ಪ ದೋಷ.

ಅನಂತರಾಸು ಜಾತಾನಾಂ ವಿಧಿರೇಷ ಸನಾತನಃ ।
ದ್ವ್ಯೇಕಾಂತರಾಸು ಜಾತಾನಾಂ ಧರ್ಮ್ಯಂ ವಿದ್ಯಾದಿಮಂ ವಿಧಿಂ ॥ ೭

ಹಿಂದೆ ಹೇಳಿದುದು ಒಂದನೆ ಎರಡನೆ ಜಾತಿ ಸಂಬಂಧದ ವಿಷಯ. ಎರಡು ಮೂರು ಬಿಟ್ಟು ಆದ ಮಿಶ್ರಸಂತತಿಯ ಧರ್ಮಗಳನ್ನು ಇನ್ನು ಮೇಲೆ ಹೇಳುತ್ತೇನೆ.

ಬ್ರಾಹ್ಮಣಾದ್ವೈಶ್ಯಕನ್ಯಾಯಾಮಂಬಷ್ಠೋ ನಾಮ ಜಾಯತೇ ।
ನಿಷಾದಃ ಶೂದ್ರಕನ್ಯಾಯಾಂ ಯಃ ಪಾರಶವ ಉಚ್ಯತೇ ॥ ೮

ಬ್ರಾಹ್ಮಣನಿಗೆ ವೈಶ್ಯಕನ್ಯೆಯಲ್ಲಿ ಜನಿಸಿದವನು ಅಂಬಷ್ಠನು ಎಂದು ಕರೆಯಲ್ಪಡುತ್ತಾನೆ. ಬ್ರಾಹ್ಮಣನಿಗೆ ಶೂದ್ರಳಲ್ಲಿ ಹುಟ್ಟಿದವನನ್ನು ಪಾರಶವ ಎಂದು ಹೇಳುತ್ತಾರೆ. ನಿಷಾದ ಎಂದರೂ ಅವನೇ.

ಕ್ಷತ್ರಿಯಾಚ್ಛೂದ್ರಕನ್ಯಾಯಾಂ ಕ್ರೂರಾಚಾರವಿಹಾರವಾನ್ ।
ಕ್ಷತ್ರಶೂದ್ರವಪುರ್ಜಂತುರುಗ್ರೋ ನಾಮ ಪ್ರಜಾಯತೇ ॥ ೯

ಕ್ಷತ್ರಿಯನಿಂದ ಶೂದ್ರಳಲ್ಲಿ ಜನಿಸಿದವನು ಕ್ರೂರನಾದ ಉಗ್ರನು.

ವಿಪ್ರಸ್ಯ ತ್ರಿಷು ವರ್ಣೇಷು ನೃಪತೇರ್ವರ್ಣಯೋರ್ದ್ವಯೋಃ ।
ವೈಶ್ಯಸ್ಯ ವರ್ಣೇ ಚೈಕಸ್ಮಿನ್ ಷಡೇತೇಽಪಸದಾಃ ಸ್ಮೃತಾಃ ॥ ೧೦

ಬ್ರಾಹ್ಮಣನಿಗೆ ಮೂರು, ರಾಜನಿಗೆ ಎರಡು, ವೈಶ್ಯನಿಗೆ ಒಂದು ಜಾತಿಯ ಕನ್ಯೆಯರಲ್ಲಿ ಜನಿಸಿದ ಆರು ಮಂದಿ ಸಂತತಿಯನ್ನು ಅಪಸದರು ಎನ್ನುವರು.

ಕ್ಷತ್ರಿಯಾದ್ವಿಪ್ರಕನ್ಯಾಯಾಂ ಸೂತೋ ಭವತಿ ಜಾತಿತಃ ।
ವೈಶ್ಯಾನ್ಮಾಗಧವೈದೇಹೌ ರಾಜವಿಪ್ರಾಂಗನಾಸುತೌ ॥ ೧೧

ಕ್ಷತ್ರಿಯನಿಗೆ ಬ್ರಾಹ್ಮಣ ಸ್ತ್ರೀಯಲ್ಲಿ ಸಂಜಾತನು ಸೂತನು. ವೈಶ್ಯನಿಗೆ ಕ್ಷತ್ರಿಯಳಲ್ಲಿ ಮಾಗಧನು. ಬ್ರಾಹ್ಮಣಳಲ್ಲಿ ವೈದೇಹನು.

ಶೂದ್ರಾದಾಯೋಗವಃ ಕ್ಷತ್ತಾ ಚಂಡಾಲಶ್ಚಾಧಮೋ ನೃಣಾಂ ।
ವೈಶ್ಯರಾಜನ್ಯವಿಪ್ರಾಸು ಜಾಯಂತೇ ವರ್ಣಸಂಕರಾಃ ॥ ೧೨

ಶೂದ್ರನಿಗೆ ವೈಶ್ಯಳಲ್ಲಿ ಆಯೋಗವ ಕ್ಷತ್ರಿಯಳಲ್ಲಿ ಕ್ಷತ್ತೃ. ಬ್ರಾಹ್ಮಣಳಲ್ಲಿ ಚಂಡಾಲನು ಜನಿಸುವರು.

ಏಕಾಂತರೇ ತ್ವಾನುಲೋಮ್ಯಾದಂಬಷ್ಠೋಗ್ರೌ ಯಥಾ ಸ್ಮೃತೌ ।
ಕ್ಷತ್ತೃವೈದೇಹಕೌ ತದ್ವತ್ ಪ್ರಾತಿಲೋಮ್ಯೇಽಪಿ ಜನ್ಮನಿ ॥ ೧೩

ಅನುಲೋಮ ಏಕಾಂತರ ವಿವಾಹದ ಅಂಬಷ್ಠ ಉಗ್ರರಂತೆ ಪ್ರತಿಲೋಮಜಾತ ಕ್ಷತ್ತೃವೈದೇಹಕರು ಸ್ಪರ್ಶಯೋಗ್ಯರು.

ಪುತ್ರಾ ಯೇಽನಂತರಸ್ತ್ರೀಜಾಃ ಕ್ರಮೇಣೋಕ್ತಾ ದ್ವಿಜನ್ಮನಾಂ ।
ತಾನನಂತರನಾಮ್ನಸ್ತು ಮಾತೃದೋಷಾತ್ಪ್ರಚಕ್ಷತೇ ॥ ೧೪

ತ್ರೈವರ್ಣಿಕರಿಗೆ ಅನಂತರ ಸ್ತ್ರೀಯರಲ್ಲಿ ಜನಿಸಿದ ಪುತ್ರರು ಮಾತೃ ಸ್ತ್ರೀ ಜಾತಿಯಿಂದ ಸಂಸ್ಕಾರ ವ್ಯವಹಾರವುಳ್ಳವರು. ಉಪನಯನ ವೇದಾಧ್ಯಯನ ವಿಲ್ಲದ ಜಾತಿಯ ಸ್ತ್ರೀಯಲ್ಲಿ ಜನಿಸಿದ ಸಂತತಿಯೂ ವೇದಬಾಹ್ಯವೇ.

ಬ್ರಾಹ್ಮಣಾದುಗ್ರಕನ್ಯಾಯಾಮಾಂ ಆವೃತೋ ನಾಮ ಜಾಯತೇ ।
ಆಭೀರೋಽಂಬಷ್ಠಕನ್ಯಾಯಾಮಾಯೋಗವ್ಯಾಂ ತು ಧಿಗ್ವಣಃ ॥ ೧೫

ಬ್ರಾಹ್ಮಣನಿಗೆ ಉಗ್ರಕನ್ಯೆಯಲ್ಲಿ ಜನಿಸಿದವನು ಆವೃತನು. ಅಂಬಷ್ಠಳಲ್ಲಿ ಆಭೀರನು, ಆಯೋಗವಿಯಲ್ಲಿ ಧಿಗ್ವಣನು.

ಆಯೋಗವಶ್ಚ ಕ್ಷತ್ತಾ ಚ ಚಂಡಾಲಶ್ಚಾಧಮೋ ನೃಣಾಂ ।
ಪ್ರಾತಿಲೋಮ್ಯೇನ ಜಾಯಂತೇ ಶೂದ್ರಾದಪಸದಾಸ್ತ್ರಯಃ ॥ ೧೬

ಶೂದ್ರಸಂಜಾತ ಆಯೋಗದ ಕ್ಷತ್ತೃ ಚಂಡಾಲರು ಮನುಷ್ಯರಲ್ಲಿ ಅಧಮರು. ಪುತ್ರಫಲವು ಇವರಿಂದ ದೊರೆಯದು.

ವೈಶ್ಯಾನ್ಮಾಗಧವೈದೇಹೌ ಕ್ಷತ್ರಿಯಾತ್ಸೂತ ಏವ ತು ।
ಪ್ರತೀಪಮೇತೇ ಜಾಯಂತೇ ಪರೇಽಪ್ಯಪಸದಾಸ್ತ್ರಯಃ ॥ ೧೭

ಮಾಗಧ ವೈದೇಹ ಸೂತರು ಮತ್ತೊಂದು ವಿಧದ ಅಪಸದರು.

ಜಾತೋ ನಿಷಾದಾಚ್ಛೂದ್ರಾಯಾಂ ಜಾತ್ಯಾ ಭವತಿ ಪುಕ್ಕಸಃ ।
ಶೂದ್ರಾಜ್ಜಾತೋ ನಿಷಾದ್ಯಾಂ ತು ಸ ವೈ ಕುಕ್ಕುಟಕಃ ಸ್ಮೃತಃ ॥ ೧೮

ನಿಷಾದನಿಂದ ಶೂದ್ರಳಲ್ಲಿ ಜನಿಸಿದವನು ಪುಕ್ಕಸನು. ಶೂದ್ರನಿಂದ ನಿಷಾದ ಸ್ತ್ರೀಜಾತನು ಕುಕ್ಕುಟಕನು.

ಕ್ಷತ್ತುರ್ಜಾತಸ್ತಥೋಗ್ರಾಯಾಂ ಶ್ವಪಾಕ ಇತಿ ಕೀರ್ತ್ಯತೇ ।
ವೈದೇಹಕೇನ ತ್ವಂಬಷ್ಠ್ಯಾಮುತ್ಪನ್ನೋ ವೇಣ ಉಚ್ಯತೇ ॥ ೧೯

ಕ್ಷತೃವಿನಿಂದ ಉಗ್ರಳಲ್ಲಿ ಶ್ವಪಾಕನು. ವೈದೇಹನಿಂದ ಅಂಬಷ್ಠಿಯಲ್ಲಿ ವೇಣನು.

ದ್ವಿಜಾತಯಃ ಸವರ್ಣಾಸು ಜನಯಂತ್ಯವ್ರತಾಂಸ್ತು ಯಾನ್ ।
ತಾನ್ ಸಾವಿತ್ರೀಪರಿಭ್ರಷ್ಟಾನ್ ವ್ರಾತ್ಯಾನಿತಿ ವಿನಿರ್ದಿಶೇತ್ ॥ ೨೦

ಶುದ್ಧ ವರ್ಣದವರೂ ಕಾಲದಲ್ಲಿ ಉಪನಯನ ಸಂಸ್ಕಾರಶೂನ್ಯರಾದರೆ ಅವರು ವ್ರಾತ್ಯರು. ಪುತ್ರಕಾರ್ಯಾಯೋಗ್ಯರು.

ವ್ರಾತ್ಯಾತ್ತು ಜಾಯತೇ ವಿಪ್ರಾತ್ಪಾಪಾತ್ಮಾ ಭೂರ್ಜಕಂಟಕಃ ।
ಆವಂತ್ಯವಾಟಧಾನೌ ಚ ಪುಷ್ಪಧಃ ಶೈಖ ಏವ ಚ ॥ ೨೧

ಬ್ರಾಹ್ಮಣವ್ರಾತ್ಯನ ಸಂತತಿಗೆ ಭೂರ್ಜಕಂಟಕ, ಆವಂತ್ಯ, ವಾಟಧಾನ, ಪುಷ್ಪಧ, ಶೈಖ ಎಂಬ ಹೆಸರುಗಳಿವೆ.

ಝಲ್ಲೋ ಮಲ್ಲಶ್ಚ ರಾಜನ್ಯಾದ್ವ್ರಾತ್ಯಾನ್ನಿಚ್ಛಿವಿರೇವ ಚ ।
ನಟಶ್ಚ ಕರಣಶ್ಚೈವ ಖಸೋ ದ್ರವಿಡ ಏವ ಚ ॥ ೨೨

ವ್ರಾತ್ಯರಾಜನ್ಯನಿಂದ ಜನಿಸಿದವರನ್ನು ಝಲ್ಲ, ಮಲ್ಲ, ನಿಚ್ಛಿವಿ, ನಟ, ಕರಣ, ಖಸ, ದ್ರವಿಡ ಎಂದು ಹೇಳುತ್ತಾರೆ.

ವೈಶ್ಯಾತ್ತು ಜಾಯತೇ ವ್ರಾತ್ಯಾತ್ಸುಧನ್ವಾಚಾರ್ಯ ಏವ ಚ ।
ಕಾರುಷಶ್ಚ ವಿಜನ್ಮಾ ಚ ಮೈತ್ರಃ ಸಾತ್ವತ ಏವ ಚ ॥ ೨೩

ವ್ರಾತ್ಯವೈಶ್ಯನಿಂದ ಸುಧನ್ವಾಚಾರ್ಯ, ಕಾರುಷ, ವಿಜನ್ಮ, ಮೈತ್ರ, ಸಾತ್ವತರು ಜನಿಸುವರು.

ವ್ಯಭಿಚಾರೇಣ ವರ್ಣಾನಾಮವೇದ್ಯಾವೇದನೇನ ಚ ।
ಸ್ವಕರ್ಮಣಾಂ ಚ ತ್ಯಾಗೇನ ಜಾಯಂತೇ ವರ್ಣಸಂಕರಾಃ ॥ ೨೪

ವ್ಯಭಿಚಾರ, ಸಗೋತ್ರವಿವಾಹ, ಕರ್ಮತ್ಯಾಗ ಇವುಗಳಿಂದ ವರ್ಣ ಸಂಕರವಾಗುವುದು.

ಸಂಕೀರ್ಣಯೋನಯೋ ಯೇ ತು ಪ್ರತಿಲೋಮಾನುಲೋಮಜಾಃ ।
ಅನ್ಯೋನ್ಯವ್ಯತಿಷಕ್ತಾಶ್ಚ ತಾನ್ ಪ್ರವಕ್ಷ್ಯಾಮ್ಯಶೇಷತಃ ॥ ೨೫

ಪ್ರತಿಲೋಮಾನುಲೋಮ ಸಂತತಿಯವರಿಂದ ಆದ ಸಂಕೀರ್ಣಸಂತತಿಯನ್ನು ಇನ್ನು ವಿವರಿಸುತ್ತೇನೆ.

ಸೂತೋ ವೈದೇಹಕಶ್ಚೈವ ಚಂಡಾಲಶ್ಚ ನರಾಧಮಃ ।
ಮಾಗಧಃ ಕ್ಷತ್ತೃಜಾತಿಶ್ಚ ತಥಾಽಯೋಗವ ಏವ ಚ ॥ ೨೬
ಏತೇ ಷಟ್ ಸದೃಶಾನ್ ವರ್ಣಾನ್ ಜನಯಂತಿ ಸ್ವಯೋನಿಷು ।
ಮಾತೃಜಾತ್ಯಾಂ ಪ್ರಸೂಯಂತೇ ಪ್ರವರಾಸು ಚ ಯೋನಿಷು ॥ ೨೭

ಸೂತ, ವೈದೇಹ, ಚಂಡಾಲ, ಮಾಗದ, ಕ್ಷತ್ತೃ, ಆಯೋಗವ ಎಂಬ ಆರುಮಂದಿ ಪರಸ್ಪರ ಸಂಬಂಧದಿಂದ ತಂದೆಗೆ ಸಮಾನ ಸಂತತಿಯನ್ನು ಹೆರುವರು. ನೀಚ ಸ್ತ್ರೀಸಂತತಿಯು ನೀಚವೇ.

ಯಥಾ ತ್ರಯಾಣಾಂ ವರ್ಣಾನಾಂ ದ್ವಯೋರಾತ್ಮಾಸ್ಯ ಜಾಯತೇ ।
ಆನಂತರ್ಯಾತ್ಸ್ವಯೋನ್ಯಾಂ ತು ತಥಾ ಬಾಹ್ಯೇಷ್ವಪಿ ಕ್ರಮಾತ್ ॥ ೨೮

ಅನುಲೋಮ ಸಂತತಿಯು ಮಾನ್ಯವಾದಂತೆ ಪ್ರತಿಲೋಮ ಸಂತತಿಯು ನಿಕೃಷ್ಟವು.

ತೇ ಚಾಪಿ ಬಾಹ್ಯಾನ್ ಸುಬಹೂನ್ ತತೋಽಪ್ಯಧಿಕ ದೂಷಿತಾನ್ ।
ಪರಸ್ಪರಸ್ಯ ದಾರೇಷು ಜನಯಂತಿ ವಿಗರ್ಹಿತಾನ್ ॥ ೨೯

ನೀಚಸಂತತಿಯವರು ಪುನಃ ಯೋನಿಸಂಬಂಧದಿಂದ ಅತಿ ನೀಚ ಪ್ರಜಾ ಜನಕರಾಗುವರು.

ಯಥೈವ ಶೂದ್ರೋ ಬ್ರಾಹ್ಮಣ್ಯಾಂ ಬಾಹ್ಯಂ ಜಂತುಂ ಪ್ರಸೂಯತೇ ।
ತಥಾ ಬಾಹ್ಯತರಂ ಬಾಹ್ಯಶ್ಚಾತುರ್ವರ್ಣ್ಯೇ ಪ್ರಸೂಯತೇ ॥ ೩೦

ಶೂದ್ರನ ನೀಚ ಸಂತತಿಯು ಉತ್ತರೋತ್ತರ ನಿಕೃಷ್ಟವಾಗುವುದು.

ಪ್ರತಿಕೂಲಂ ವರ್ತಮಾನಾ ಬಾಹ್ಯಾ ಬಾಹ್ಯತರಾನ್ ಪುನಃ ।
ಹೀನಾ ಹೀನಾನ್ ಪ್ರಸೂಯಂತೇ ವರ್ಣಾನ್ ಪಂಚದಶೈವ ತು ॥ ೩೧

ಹದಿನೈದು ಮಿಶ್ರಸಂತತಿಯಾಗುವುದು.

ಪ್ರಸಾಧನೋಪಚಾರಜ್ಞಮದಾಸಂ ದಾಸಜೀವನಂ ।
ಸೈರಿಂಧ್ರಂ ವಾಗುರಾವೃತ್ತಿಂ ಸೂತೇ ದಸ್ಯುರಯೋಗವೇ ॥ ೩೨

ತಲೆ ಬಾಚುವುದು, ಮೈತಿಕ್ಕುವುದು, ಬಲೆ ಬೀಸಿ ಮೃಗಪಕ್ಷಿಗಳನ್ನು ಹಿಡಿಯುವುದು ಈ ವೃತ್ತಿಯು ಸೈರಂಧ್ರ. ದಸ್ಯುವಿಗೆ ಆಯೋಗವಳಲ್ಲಿ ಹುಟ್ಟಿದ ಸಂತತಿಗೆ ಈ ವೃತ್ತಿಯು ಧರ್ಮವಾದುದರಿಂದ ಈ ಪ್ರಜೆಯು ಸೈರಂಧ್ರ.

ಮೈತ್ರೇಯಕಂ ತು ವೈದೇಹೋ ಮಾಧೂಕಂ ಸಂಪ್ರಸೂಯತೇ ।
ನೄನ್ ಪ್ರಶಂಸತ್ಯಜಸ್ರಂ ಯೋ ಘಂಟಾತಾಡೋಽರುಣೋದಯೇ ॥ ೩೩

ವೈದೇಹನಿಗೆ ಆಯೋಗವಳಲ್ಲಿ ಜನಿಸಿದ ಮೈತ್ರೇಯಕನು ಮಧುರ ಭಾಷಿಯಾಗಿ ರಾಜಮಂದಿರ, ದೇವಮಂದಿರಗಳಲ್ಲಿ ಬೆಳಗ್ಗೆ ಗಂಟೆ ಬಾರಿಸು ವನು.

ನಿಷಾದೋ ಮಾರ್ಗವಂ ಸೂತೇ ದಾಸಂ ನೌಕರ್ಮಜೀವನಂ ।
ಕೈವರ್ತಮಿತಿ ಯಂ ಪ್ರಾಹುರಾರ್ಯಾವರ್ತನಿವಾಸಿನಃ ॥ ೩೪

ನಿಷಾದನಿಗೆ ಆಯೋಗವಳಲ್ಲಿ ಜನಿಸಿದ ಮಾರ್ಗವನಿಗೆ ಕೈವರ್ತನೆಂದು ಹೆಸರು. ದೋಣಿ ನಡೆಸುವ ವೃತ್ತಿಯು.

ಮೃತವಸ್ತ್ರಭೃತ್ಸು ನಾರೀಷು ಗರ್ಹಿತಾನ್ನಾಶನಾಸು ಚ ।
ಭವಂತ್ಯಾಯೋಗವೀಷ್ವೇತೇ ಜಾತಿಹೀನಾಃ ಪೃಥಕ್ ತ್ರಯಃ ॥ ೩೫

ತಂದೆಯ ಜಾತಿಯಿಂದ ಬೇರೆ ಬೇರೆಯಾದ ಆ ಸೈರಿಂಧ್ರ ಮೈತ್ರೇಯ ಮಾರ್ಗವರು ಹೆಣದ ಬಟ್ಟೆ ಉಡುವರು ಎಂಜಲು ತಿನ್ನುವರು.

ಕಾರಾವರೋ ನಿಷಾದಾತ್ತು ಚರ್ಮಕಾರಃ ಪ್ರಸೂಯತೇ ।
ವೈದೇಹಿಕಾದಂಧ್ರಮೇದೌ ಬಹಿರ್ಗ್ರಾಮಪ್ರತಿಶ್ರಯೌ ॥ ೩೬

ನಿಷಾದನಿಗೆ ವೈದೇಹಿಯಲ್ಲಿ ಜನಿಸಿದ ಕಾರಾವರನಿಗೆ ಚರ್ಮಹೊಲಿಯುವುದು ಕೆಲಸ. ಅಂಧ್ರಮೇದರು ಊರಹೊರಗೆ ಬದುಕುವರು.

ಚಂಡಾಲಾತ್ಪಾಂಡುಸೋಪಾಕಸ್ತ್ವಕ್ಸಾರವ್ಯವಹಾರವಾನ್ ।
ಆಹಿಂಡಿಕೋ ನಿಷಾದೇನ ವೈದೇಹ್ಯಾಮೇವ ಜಾಯತೇ ॥ ೩೭

ಚಂಡಾಲನಿಗೆ ವೈದೇಹಿಯಲ್ಲಿ ಜನಿಸಿದವನನ್ನು ಪಾಂಡುಸೋಪಾಕ ಎನ್ನುತ್ತಾರೆ. ಅವನಿಗೆ ಬೆತ್ತ, ಬಿದಿರು ಹೆಣೆಯುವುದು ಕೆಲಸ. ನಿಷಾದನಿಗೆ ವೈದೇಹಿಯಲ್ಲಿ ಜನಿಸಿದ ಆಹಿಂಡಕನು ಜೈಲಿನ ಕೆಲಸದವನು.

ಚಂಡಾಲೇನ ತು ಸೋಪಾಕೋ ಮೂಲವ್ಯಸನವೃತ್ತಿಮಾನ್ ।
ಪುಕ್ಕಸ್ಯಾಂ ಜಾಯತೇ ಪಾಪಃ ಸದಾ ಸಜ್ಜನಗರ್ಹಿತಃ ॥ ೩೮

ಪುಕ್ಕಸಿಗೆ ಚಂಡಾಲನಿಂದಾದ ಸೋಪಾಕನು ಮರಣದಂಡನೆಯನ್ನು ನ್ಯಾಯಾಧಿಪತಿಯ ಆದೇಶದಂತೆ ನಿರ್ವಹಿಸಿ ಬದುಕುವ ವೃತ್ತಿಯವನು.

ನಿಷಾದಸ್ತ್ರೀ ತು ಚಂಡಾಲಾತ್ಪುತ್ರಮಂತ್ಯಾವಸಾಯಿನಮ್ ।
ಶ್ಮಶಾನಗೋಚರಂ ಸೂತೇ ಬಾಹ್ಯಾನಾಮಪಿ ಗರ್ಹಿತಮ್ ॥ ೩೯

ನಿಷಾದೀಚಂಡಾಲ ಜಾತನು ರುದ್ರಭೂಮಿಯಲ್ಲಿ ಜೀವಿಸುವನು. ಅಂತ್ಯಾವಸಾಯಿಯೆಂದು ಅವನ ಹೆಸರು.

ಸಂಕರೇ ಜಾತಯಸ್ತ್ವೇತಾಃ ಪಿತೃಮಾತೃಪ್ರದರ್ಶಿತಾಃ ।
ಪ್ರಚ್ಛನ್ನಾ ವಾ ಪ್ರಕಾಶಾ ವಾ ವೇದಿತವ್ಯಾಃ ಸ್ವಕರ್ಮಭಿಃ ॥ ೪೦

ಸಂಕರ ಜಾತಿಯಲ್ಲಿ ಜನನೀಜನಕರನ್ನು ತಿಳಿಸಿ ಆಯಿತು. ಇದರಿಂದ ವೃತ್ತಿಯನ್ನು ನೋಡಿಕೊಳ್ಳಬೇಕು.

ಸಜಾತಿಜಾನಂತರಜಾಃ ಷಟ್ ಸುತಾ ದ್ವಿಜಧರ್ಮಿಣಃ ।
ಶೂದ್ರಾಣಾಂ ತು ಸಧರ್ಮಾಣಃ ಸರ್ವೇಽಪಧ್ವಂಸಜಾಃ ಸ್ಮೃತಾಃ ॥ ೪೧

ಅನುಲೋಮ ವಿವಾಹ ಸಂಜಾತರಾದ ಆರು ಸಂತತಿಯು ಉಪನಯನ ವೇದಾಧ್ಯಯನ ಸಹಿತರು. ಪ್ರತಿಲೋಮಪುತ್ರರು ಉಪನಯನ ಹೀನರು.

ತಪೋಬೀಜಪ್ರಭಾವೈಸ್ತು ತೇ ಗಚ್ಛಂತಿ ಯುಗೇ ಯುಗೇ ।
ಉತ್ಕರ್ಷಂ ಚಾಪಕರ್ಷಂ ಚ ಮನುಷ್ಯೇಷ್ವಿಹ ಜನ್ಮತಃ ॥ ೪೨

ತಪೋಬಲದಿಂದ ವಿಶ್ವಾಮಿತ್ರನಂತೆ, ಬೀಜಬಲದಿಂದ ಋಷ್ಯಶೃಂಗನಂತೆ ಜಾತ್ಯುತ್ಕರ್ಷವಾಗುವುದು.

ಶನಕೈಸ್ತು ಕ್ರಿಯಾಲೋಪಾದಿಮಾಃ ಕ್ಷತ್ರಿಯಜಾತಯಃ ।
ವೃಷಲತ್ವಂ ಗತಾ ಲೋಕೇ ಬ್ರಾಹ್ಮಣಾದರ್ಶನೇನ ಚ ॥ ೪೩

ಕ್ಷತ್ರಿಯರು ಸಂಸ್ಕಾರಲೋಪದಿಂದಲೂ ಬ್ರಾಹ್ಮಣ ಸಹವಾಸವಿಲ್ಲದೆಯೂ ಶೂದ್ರರಾದರು.

ಪೌಂಡ್ರಕಾಶ್ಚೌಡ್ರದ್ರವಿಡಾಃ ಕಾಂಬೋಜಾ ಯವನಾಃ ಶಕಾಃ ।
ಪಾರದಾಪಹ್ಲವಾಶ್ಚೀನಾಃ ಕಿರಾತಾ ದರದಾಃ ಖಶಾಃ ॥ ೪೪

ಪೌಂಡ್ರಕ, ಓಡ್ರ, ದ್ರವಿಡರು, ಕಂಬೋಜ, ಯವನ, ಶಕ, ಪಾರದ, ಅಪಹ್ಲವ, ಚೀನ, ಕಿರಾತ, ದರದ, ಖಶ ಇವರೆಲ್ಲ ಶೂದ್ರರಾದ ಕ್ಷತ್ರಿಯರು.

ಮುಖಬಾಹೂರುಪಜ್ಜಾನಾಂ ಯಾ ಲೋಕೇ ಜಾತಯೋ ಬಹಿಃ ।
ಮ್ಲೇಚ್ಛವಾಚಶ್ಚಾರ್ಯವಾಚಃ ಸರ್ವೇ ತೇ ದಸ್ಯವಃ ಸ್ಮೃತಾಃ ॥ ೪೫

ಚತುರ್ವರ್ಣದಿಂದ ಬಾಹ್ಯರಾದ ಸಂಸ್ಕೃತಾಸಂಸ್ಕೃತ ಭಾಷೆಯನ್ನಾಡುವ ಜನರು ಕ್ರಿಯಾಹೀನರಾಗಿ ದಸ್ಯುಗಳಾಗಿದ್ದಾರೆ.

ಯೇ ದ್ವಿಜಾನಾಮಪಸದಾ ಯೇ ಚಾಪಧ್ವಂಸಜಾಃ ಸ್ಮೃತಾಃ ।
ತೇ ನಿಂದಿತೈರ್ವರ್ತಯೇಯುರ್ದ್ವಿಜಾನಾಮೇವ ಕರ್ಮಭಿಃ ॥ ೪೬

ಅಪಸದರು ಅಪಧ್ವಂಸಜರು ದ್ವಿಜಸೇವೆಯಿಂದ ಬದುಕಬೇಕು.

ಸೂತಾನಾಮಶ್ವಸಾರಥ್ಯಮಂಬಷ್ಠಾನಾಂ ಚಿಕಿತ್ಸನಂ ।
ವೈದೇಹಕಾನಾಂ ಸ್ತ್ರೀಕಾರ್ಯಂ ಮಾಗಧಾನಾಂ ವಣಿಕ್ಪಥಃ ॥ ೪೭

ಸೂತರಿಗೆ ಕುದುರೆಗಳ, ಅಂಬಷ್ಠರಿಗೆ ಚಿಕಿತ್ಸೆ, ವೈದೇಹಕರಿಗೆ ಅಂತಃಪುರದ ಮಾಗಧರಿಗೆ ವಾಣಿಜ್ಯದ ವೃತ್ತಿಯು.

ಮತ್ಸ್ಯಘಾತೋ ನಿಷಾದಾನಾಂ ತ್ವಷ್ಟಿಸ್ತ್ವಾಯೋಗವಸ್ಯ ಚ ।
ಮೇದಾಂಧ್ರಚುಂಚುಮದ್ಗೂನಾಮಾರಣ್ಯಪಶುಹಿಂಸನಮ್ ॥ ೪೮

ನಿಷಾದರಿಗೆ ಮೀನು, ಆಯೋಗವರಿಗೆ ಕೆತ್ತನೆ, ಮೇದ ಅಂಧ್ರ ಚುಂಚು ಮದ್ಗು ಇವರಿಗೆ ಕಾಡುಪ್ರಾಣಿಗಳ ಬೇಟೆ ವೃತ್ತಿಯು.

ಕ್ಷತ್ತ್ರುಗ್ರಪುಕ್ಕಸಾನಾಂ ತು ಬಿಲೌಕೋವಧಬಂಧನಂ ।
ಧಿಗ್ವಣಾನಾಂ ಚರ್ಮಕಾರ್ಯಂ ವೇಣಾನಾಂ ಭಾಂಡವಾದನಂ ॥ ೪೯

ಕ್ಷತ್ತೃ, ಉಗ್ರ, ಪುಕ್ಕಸ ಇವರಿಗೆ ಬಿಲದಲ್ಲಿರುವ ಉಡು ಮೊದಲಾದ ಪ್ರಾಣಿಗಳನ್ನು ಹಿಡಿದು ತಿಂದು ಬದುಕುವುದು. ಧಿಗ್ವಣರಿಗೆ ಚರ್ಮದ ಕೆಲಸ. ವೇಣರಿಗೆ ವಾದ್ಯಬಾರಿಸುವುದು.

ಚೈತ್ಯದ್ರುಮಶ್ಮಶಾನೇಷು ಶೈಲೇಷೂಪವನೇಷು ಚ ।
ವಸೇಯುರೇತೇ ವಿಜ್ಞಾತಾ ವರ್ತಯಂತಃ ಸ್ವಕರ್ಮಭಿಃ ॥ ೫೦

ಮರ, ಗುಡ್ಡ, ಕಾಡುಗಳಲ್ಲಿ ಜೀವಿಸುವರು.

ಚಂಡಾಲಶ್ವಪಚಾನಾಂ ತು ಬಹಿರ್ಗ್ರಾಮಾತ್ಪ್ರತಿಶ್ರಯಃ ।
ಅಪಪಾತ್ರಾಶ್ಚ ಕರ್ತವ್ಯಾ ಧನಮೇಷಾಂ ಶ್ವಗರ್ದಭಮ್ ॥ ೫೧
ವಾಸಾಂಸಿ ಮೃತಚೇಲಾನಿ ಭಿನ್ನಭಾಂಡೇಷು ಭೋಜನಮ್ ।
ಕಾರ್ಷ್ಣಾಯಸಮಲಂಕಾರಃ ಪರಿವ್ರಜ್ಯಾ ಚ ನಿತ್ಯಶಃ ॥ ೫೨

ಊರಹೊರಗೆ ಚಂಡಾಲಾದಿಗಳ ವಾಸಸ್ಥಾನ. ಒಳ್ಳೆ ಪಾತ್ರಗಳನ್ನು ಅವರು ಉಪಯೋಗಿಸಬಾರದು. ನಾಯಿ, ಕತ್ತೆ ಅವರ ಸೊತ್ತು. ಹೆಣದ ಬಟ್ಟೆ ಅವರ ಉಡಿಗೆ, ಒಡೆದ ಓಡಿನಲ್ಲಿ ಊಟ, ಕಬ್ಬಿಣದ ಬಳೆ ಉಂಗುರ ತೊಡುಗೆ. ಸದಾ ಸಂಚಾರ.

ನ ತೈಃ ಸಮಯಮನ್ವಿಚ್ಛೇತ್ ಪುರುಷೋ ಧರ್ಮಮಾಚರನ್ ।
ವ್ಯವಹಾರೋ ಮಿಥಸ್ತೇಷಾಂ ವಿವಾಹಃ ಸದೃಶೈಃ ಸಹ ॥ ೫೩

ಧರ್ಮಕಾರ್ಯವ್ಯಾಪೃತನಾಗಿರುವಾಗ ಅವರ ವ್ಯವಹಾರವು ಬೇಡ. ಅವರಿಗೆ ಅಂತವರೊಡನೆ ವಿವಾಹಾದಿ ಸಂಬಂಧವು.

ಅನ್ನಮೇಷಾಂ ಪರಾಧೀನಂ ದೇಯಂ ಸ್ಯಾದ್ಭಿನ್ನಭಾಜನೇ ।
ರಾತ್ರೌ ನ ವಿಚರೇಯುಸ್ತೇ ಗ್ರಾಮೇಷು ನಗರೇಷು ಚ ॥ ೫೪

ಕೂಲಿಯವರ ಮೂಲಕ ಅವರಿಗ ಒಡೆದು ಬೇಡವಾದ ಪಾತ್ರೆಯಲ್ಲಿ ಆಹಾರ ಕೊಡಬಹುದು. ರಾತ್ರಿ ಅವರು ಗ್ರಾಮ, ನಗರಗಳಲ್ಲಿ ಸಂಚರಿಸಬಾರದು.

ದಿವಾ ಚರೇಯುಃ ಕಾರ್ಯಾರ್ಥಂ ಚಿಹ್ನಿತಾ ರಾಜಶಾಸನೈಃ ।
ಅಬಾಂಧವಂ ಶವಂ ಚೈವ ನಿರ್ಹರೇಯುರಿತಿ ಸ್ಥಿತಿಃ ॥ ೫೫

ರಾಜಾಜ್ಞೆಯಂತೆ ಅವರಿಗೆ ಗುರುತು ಮಾಡಿದರೆ ಅವರು ಹಗಲು ತಿರುಗಾಡಬಹುದು. ನಿರ್ಗತಿಕ ಶವವನ್ನು ಸಂಸ್ಕರಿಸಬಹುದು.

ವಧ್ಯಾಂಶ್ಚ ಹನ್ಯುಃ ಸತತಂ ಯಥಾಶಾಸ್ತ್ರಂ ನೃಪಾಜ್ಞಯಾ ।
ವಧ್ಯವಾಸಾಂಸಿ ಗೃಹ್ಣೀಯುಃ ಶಯ್ಯಾಶ್ಚಾಭರಣಾನಿ ಚ ॥ ೫೬

ಗಲ್ಲಿಹಾಕುವುದು, ಅವರ ಚಾಪೆ, ಬಟ್ಟೆ-ಬರೆ ಉಪಯೋಗಿಸುವುದು ಇವರ ಜೀವನ.

ವರ್ಣಾಪೇತಮವಿಜ್ಞಾತಂ ನರಂ ಕಲುಷಯೋನಿಜಂ ।
ಆರ್ಯರೂಪಮಿವಾನಾರ್ಯಂ ಕರ್ಮಭಿಃ ಸ್ವೈರ್ವಿಭಾವಯೇತ್ ॥ ೫೭

ನೀಚರು, ಪೂಜ್ಯರು ಯಾರೆಂದು ಕೆಳಗೆ ಕೊಡುವ ಲಕ್ಷಣಗಳಿಂದ ನಿಶ್ಚೈಸಬಹುದು.

ಅನಾರ್ಯತಾ ನಿಷ್ಠುರತಾ ಕ್ರೂರತಾ ನಿಷ್ಕ್ರಿಯಾತ್ಮತಾ ।
ಪುರುಷಂ ವ್ಯಂಜಯಂತೀಹ ಲೋಕೇ ಕಲುಷಯೋನಿಜಂ ॥ ೫೮

ಕ್ರೂರತ್ವ ಪರುಷವಚನ ಅಸಂಸ್ಕಾರ ಇವುಗಳು ನೀಚಜನ್ಮದ ಲಕ್ಷಣಗಳು.

ಪಿತ್ರ್ಯಂ ವಾ ಭಜತೇ ಶೀಲಂ ಮಾತುರ್ವೋಭಯಮೇವ ವಾ ।
ನ ಕಥಂಚನ ದುರ್ಯೋನಿಃ ಪ್ರಕೃತಿಂ ಸ್ವಾಂ ನಿಯಚ್ಛತಿ ॥ ೫೯

ಮನುಷ್ಯನು ತಂದೆಯ ಅಥವಾ ತಾಯ ಗುಣಗಳನ್ನು ತೋರಿಸುತ್ತಾನೆ. ಅದನ್ನು ಅಡಗಿಸಲು ಸಾಧ್ಯವಿಲ್ಲ.

ಕುಲೇ ಮುಖ್ಯೇಽಪಿ ಜಾತಸ್ಯ ಯಸ್ಯ ಸ್ಯಾದ್ಯೋನಿಸಂಕರಃ ।
ಸಂಶ್ರಯತ್ಯೇವ ತಚ್ಛೀಲಂ ನರೋಽಲ್ಪಮಪಿ ವಾ ಬಹು ॥ ೬೦

ಈ ಮಹಾಕುಲದಲ್ಲಿರುವವನು ಸಂಕರಜಾತನಾಗಿದ್ದರೆ ದುರ್ಲಕ್ಷಣಗಳನ್ನು ತೋರಿಸುವನು.

ಯತ್ರ ತ್ವೇತೇ ಪರಿಧ್ವಂಸಾಜ್ಜಾಯಂತೇ ವರ್ಣದೂಷಕಾಃ ।
ರಾಷ್ಟ್ರಿಕೈಃ ಸಹ ತದ್ರಾಷ್ಟ್ರಂ ಕ್ಷಿಪ್ರಮೇವ ವಿನಶ್ಯತಿ ॥ ೬೧

ಕುಸಂತತಿಯು ಇತರರೊಡನೆ ದೇಶವನ್ನೇ ಕೆಡಿಸುತ್ತದೆ.

ಬ್ರಾಹ್ಮಣಾರ್ಥೇ ಗವಾರ್ಥೇ ವಾ ದೇಹತ್ಯಾಗೋಽನುಪಸ್ಕೃತಃ ।
ಸ್ತ್ರೀಬಾಲಾಭ್ಯುಪಪತ್ತೌ ಚ ಬಾಹ್ಯಾನಾಂ ಸಿದ್ಧಿಕಾರಣಂ ॥ ೬೨

ಸ್ತ್ರೀ, ಬಾಲ, ಗೋ, ಬ್ರಾಹ್ಮಣ ಇವರ ರಕ್ಷಣೆಗೆ ಕುಸಂತತಿಯು ಆತ್ಮತ್ಯಾಗ ಮಾಡಿದೆ. ಅವನಿಗೆ ಸದ್ಗತಿಯು.

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ ॥ ೬೩

ಅಹಿಂಸೆ, ಸತ್ಯ, ಶುಚಿ, ಇಂದ್ರಿಯಜಯ, ಅಚೌರ್ಯ ಇವು ಸಕಲರಿಗೆ ಮುಖ್ಯ ಧರ್ಮಗಳು.

ಶೂದ್ರಾಯಾಂ ಬ್ರಾಹ್ಮಣಾಜ್ಜಾತಃ ಶ್ರೇಯಸಾ ಚೇತ್ಪ್ರಜಾಯತೇ ।
ಅಶ್ರೇಯಾನ್ ಶ್ರೇಯಸೀಂ ಜಾತಿಂ ಗಚ್ಛತ್ಯಾಸಪ್ತಮಾದ್ಯುಗಾತ್ ॥ ೬೪

ಪಾರಶವಸ್ತ್ರೀಯು ಉತ್ತಮ ಸಂಬಂಧದಿಂದ ಕ್ರಮವಾಗಿ ಏಳು ಸಂತತಿಯನ್ನು ಪಡೆದರೆ ಉಚ್ಚ ಜಾತಿಯುಂಟಾಗುವುದು.

ಶೂದ್ರೋ ಬ್ರಾಹ್ಮಣತಾಮೇತಿ ಬ್ರಾಹ್ಮಣಶ್ಚೈತಿ ಶೂದ್ರತಾಂ ।
ಕ್ಷತ್ರಿಯಾಜ್ಜಾತಮೇವಂ ತು ವಿದ್ಯಾದ್ವೈಶ್ಯಾತ್ತಥೈವ ಚ ॥ ೬೫

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಮೇಲೆ ಹೇಳಿದಂತೆ ಅನುಕ್ರಮವಾಗಿ ಏಳು ಸಂತತಿಯಲ್ಲಿ ಉಚ್ಚ–ನೀಚ ಜಾತಿ ಪರಿವರ್ತನೆಯನ್ನು ಹೊಂದುವರು.

ಅನಾರ್ಯಾಯಾಂ ಸಮುತ್ಪನ್ನೋ ಬ್ರಾಹ್ಮಣಾತ್ತು ಯದೃಚ್ಛಯಾ ।
ಬ್ರಾಹ್ಮಣ್ಯಾಮಪ್ಯನಾರ್ಯಾತ್ತು ಶ್ರೇಯಸ್ತ್ವಂ ಕ್ವೇತಿ ಚೇದ್ಭವೇತ್ ॥ ೬೬

ನೀಚಸ್ತ್ರೀ ಉಚ್ಚಪುರುಷ ಸಂತತಿ ಮತ್ತು ಉಚ್ಚಸ್ತ್ರೀ ನೀಚಪುರುಷ ಪ್ರಜೆ ಇವರಲ್ಲಿ ಶ್ರೇಷ್ಠತೆ ಯಾರಿಗೆ ?

ಜಾತೋ ನಾರ್ಯಾಮನಾರ್ಯಾಯಾಮಾರ್ಯಾದಾರ್ಯೋ ಭವೇದ್ಗುಣೈಃ ।
ಜಾತೋಽಪ್ಯನಾರ್ಯಾದಾರ್ಯಾಯಾಮನಾರ್ಯ ಇತಿ ನಿಶ್ಚಯಃ ॥ ೬೭

ಬೀಜ ಪ್ರಾಧಾನ್ಯದಿಂದ ನೀಚಸ್ತ್ರೀ ಪ್ರಜೆಯೇ ಪೂಜ್ಯವು.

ತಾವುಭಾವಪ್ಯಸಂಸ್ಕಾರ್ಯಾವಿತಿ ಧರ್ಮೋ ವ್ಯವಸ್ಥಿತಃ ।
ವೈಗುಣ್ಯಾಜ್ಜನ್ಮನಃ ಪೂರ್ವ ಉತ್ತರಃ ಪ್ರತಿಲೋಮತಃ ॥ ೬೮

ಶೂದ್ರ ಸಂಬಂಧ ಇರುವ ಸಂತತಿಗೆ ಉಪನಯನವಿಲ್ಲ.

ಸುಬೀಜಂ ಚೈವ ಸುಕ್ಷೇತ್ರೇ ಜಾತಂ ಸಂಪದ್ಯತೇ ಯಥಾ ।
ತಥಾರ್ಯಾಜ್ಜಾತ ಆರ್ಯಾಯಾಂ ಸರ್ವಂ ಸಂಸ್ಕಾರಮರ್ಹತಿ ॥ ೬೯

ಒಳ್ಳೆ ಬೀಜ ಒಳ್ಳೆ ನೆಲದಲ್ಲಿ ಹುಲುಸಾಗಿ ಬೆಳೆಯುವಂತೆ ಉತ್ತಮ ಸ್ತ್ರೀ–ಪುರುಷ ಸಂತತಿಯು ಸಂಸ್ಕಾರಾರ್ಹವಾಗುವುದು.

ಬೀಜಮೇಕೇ ಪ್ರಶಂಸಂತಿ ಕ್ಷೇತ್ರಮನ್ಯೇ ಮನೀಷಿಣಃ ।
ಬೀಜಕ್ಷೇತ್ರೇ ತಥೈವಾನ್ಯೇ ತತ್ರೇಯಂ ತು ವ್ಯವಸ್ಥಿತಿಃ ॥ ೭೦

ಬೀಜಕ್ಷೇತ್ರಗಳ ಪ್ರಾಧಾನ್ಯ ವ್ಯವಸ್ಥೆಯನ್ನು ಹೇಳುತ್ತೇನೆ.

ಅಕ್ಷೇತ್ರೇ ಬೀಜಮುತ್ಸೃಷ್ಟಮಂತರೈವ ವಿನಶ್ಯತಿ ।
ಅಬೀಜಕಮಪಿ ಕ್ಷೇತ್ರಂ ಕೇವಲಂ ಸ್ಥಂಡಿಲಂ ಭವೇತ್ ॥ ೭೧

ಹಾಳು ನೆಲದಲ್ಲಿ ಬಿತ್ತಿದ ಬೀಜವು ಮೊಳೆಯುವುದಿಲ್ಲ. ಒಳ್ಳೆ ನೆಲವಾದರೂ ಬೀಜವಿಲ್ಲದೆ ಬೆಳೆಯದು.

ಯಸ್ಮಾದ್ ಬೀಜಪ್ರಭಾವೇಣ ತಿರ್ಯಗ್ಜಾ ಋಷಯೋಽಭವನ್।
ಪೂಜಿತಾಶ್ಚ ಪ್ರಶಸ್ತಾಶ್ಚ ತಸ್ಮಾದ್ಬೀಜಂ ಪ್ರಶಸ್ಯತೇ ॥ ೭೨

ಋಷ್ಯಶೃಂಗಾದಿಗಳು ಪಶುಜಾತರಾದರೂ ಬೀಜಬಲದಿಂದ ಋಷಿಗಳಾದರು. ಆದುದರಿಂದ ಬೀಜವು ಪ್ರಬಲ.

ಅನಾರ್ಯಮಾರ್ಯಕರ್ಮಾಣಮಾರ್ಯಂ ಚಾನಾರ್ಯಕರ್ಮಿಣಂ ।
ಸಂಪ್ರಧಾರ್ಯಾಬ್ರವೀದ್ಧಾತಾ ನ ಸಮೌ ನಾಸಮಾವಿತಿ ॥ ೭೩

ಕೆಟ್ಟವನು ಒಳ್ಳೆ ಕೆಲಸ ಮಾಡಿಯೂ, ಒಳ್ಳೆಯವನು ಕೆಟ್ಟ ಕೆಲಸ ಮಾಡಿಯೂ ಸಮಾನರಾಗುವುದಿಲ್ಲ. ಆದುದರಿಂದ ಸ್ವಕಾರ್ಯ ನಿರತರಾಗಬೇಕು.

ಬ್ರಾಹ್ಮಣಾ ಬ್ರಹ್ಮಯೋನಿಸ್ಥಾ ಯೇ ಸ್ವಕರ್ಮಣ್ಯವಸ್ಥಿತಾಃ ।
ತೇ ಸಮ್ಯಗುಪಜೀವೇಯುಃ ಷಟ್ಕರ್ಮಾಣಿ ಯಥಾಕ್ರಮಮ್ ॥ ೭೪

ಬ್ರಹ್ಮಧ್ಯಾನನಿಷ್ಠರಾದ ಬ್ರಾಹ್ಮಣರು ಮುಂದೆ ಹೇಳುವ ಆರು ಕರ್ಮಗಳನ್ನು ಆಚರಿಸುತ್ತಿರಬೇಕು.

ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ ।
ದಾನಂ ಪ್ರತಿಗ್ರಹಶ್ಚೈವ ಷಟ್ಕರ್ಮಾಣ್ಯಗ್ರಜನ್ಮನಃ ॥ ೭೫

ಬ್ರಾಹ್ಮಣನಿಗೆ ಕಲಿಸುವುದು, ಕಲಿಯುವುದು, ಹೋಮಮಾಡುವುದು, ಮಾಡಿಸುವುದು, ಕೊಡುವುದು, ತಕ್ಕೊಳ್ಳುವುದು ಆರು ಕರ್ತವ್ಯ.

ಷಣ್ಣಾಂ ತು ಕರ್ಮಣಾಮಸ್ಯ ತ್ರೀಣಿ ಕರ್ಮಾಣಿ ಜೀವಿಕಾ |
ಯಾಜನಾಧ್ಯಾಪನೇ ಚೈವ ವಿಶುದ್ಧಾಚ್ಚ ಪ್ರತಿಗ್ರಹಃ || ೭೬

ಆರರಲ್ಲಿ ಮೂರು ಜೀವನೋಪಾಯ. ಕೆಟ್ಟವರಿಂದ ಸ್ವೀಕರಿಸ ಬಾರದು.

ತ್ರಯೋ ಧರ್ಮಾ ನಿವರ್ತಂತೇ ಬ್ರಾಹ್ಮಣಾತ್ಕ್ಷತ್ರಿಯಂ ಪ್ರತಿ |
ಅಧ್ಯಾಪನಂ ಯಾಜನಂ ಚ ತೃತೀಯಶ್ಚ ಪ್ರತಿಗ್ರಹಃ || ೭೭

ಕ್ಷತ್ರಿಯನಿಗೆ ಯಜನ ಅಧ್ಯಯನ ದಾನಗಳು ಮಾತ್ರ.

ವೈಶ್ಯಂ ಪ್ರತಿ ತಥೈವೇತೇ ನಿವರ್ತೇರನ್ನಿತಿ ಸ್ಥಿತಿಃ |
ನ ತೌ ಪ್ರತಿ ಹಿ ತಾನ್ ಧರ್ಮಾನ್ ಮನುರಾಹ ಪ್ರಜಾಪತಿಃ || ೭೮

ಮನುವು ವೈಶ್ಯರಿಗೆ ಕ್ಷತ್ರಿಯನಂತೆ ಕರ್ತವ್ಯವನ್ನು ನಿರ್ದೇಶಿಸುತ್ತಾನೆ.

ಶಸ್ತ್ರಾಸ್ತ್ರಭೃತ್ತ್ವಂ ಕ್ಷತ್ರಸ್ಯ ವಣಿಕ್ ಪಶುಕೃಷಿರ್ವಿಶಃ |
ಆಜೀವನಾರ್ಥಂ ಧರ್ಮಸ್ತು ದಾನಮಧ್ಯಯನಂ ಯಜಿಃ || ೭೯

ಕ್ಷತ್ರಿಯನಿಗೆ ಶಸ್ತ್ರಾಸ್ತ್ರ ವೈಶ್ಯನಿಗೆ ವಾಣಿಜ್ಯ ಪಶುಪಾಲನೆ ಕೃಷಿ ಇವು ಜೀವನಗಳು.

ವೇದಾಭ್ಯಾಸೋ ಬ್ರಾಹ್ಮಣಸ್ಯ ಕ್ಷತ್ರಿಯಸ್ಯ ಚ ರಕ್ಷಣಂ |
ವಾರ್ತಾ ಕರ್ಮೈವ ವೈಶ್ಯಸ್ಯ ವಿಶಿಷ್ಟಾನಿ ಸ್ವಕರ್ಮಸು || ೮೦

ಬ್ರಾಹ್ಮಣನಿಗೆ ವೇದಾಭ್ಯಾಸ, ಕ್ಷತ್ರಿಯನಿಗೆ ದೇಶರಕ್ಷಣೆ, ವೈಶ್ಯನಿಗೆ ಕೃಷಿ ವಿಶೇಷ ಕರ್ಮಗಳು.

ಅಜೀವಂಸ್ತು ಯಥೋಕ್ತೇನ ಬ್ರಾಹ್ಮಣಃ ಸ್ವೇನ ಕರ್ಮಣಾ ।
ಜೀವೇತ್ಕ್ಷತ್ರಿಯಧರ್ಮೇಣ ಸ ಹ್ಯಸ್ಯ ಪ್ರತ್ಯನಂತರಃ ॥ ೮೧

ಬ್ರಾಹ್ಮಣನಿಗೆ ವಿಹಿತಸ್ವಕರ್ಮದಿಂದ ಜೀವನನಿರ್ವಾಹವಾಗುವುದಿಲ್ಲವಾದರೆ ಹತ್ತಿರದ ಧರ್ಮವಾದ ಕ್ಷತ್ರವೃತ್ತಿಯನ್ನಾಶ್ರಯಿಸಬಹುದು.

ಉಭಾಭ್ಯಾಮಪ್ಯಜೀವಂಸ್ತು ಕಥಂ ಸ್ಯಾದಿತಿ ಚೇದ್ಭವೇತ್ ।
ಕೃಷಿಗೋರಕ್ಷಮಾಸ್ಥಾಯ ಜೀವೇದ್ವೈಶ್ಯಸ್ಯ ಜೀವಿಕಾಂ ॥ ೮೨

ಬ್ರಾಹ್ಮಣನಿಗೆ ಬ್ರಾಹ್ಮಣಕ್ಷತ್ರಧರ್ಮದಿಂದ ಜೀವನವಾಗುವುದಿಲ್ಲವಾದರೆ ವೈಶ್ಯವೃತ್ತಿಯೂ ಧರ್ಮವೇ.

ವೈಶ್ಯವೃತ್ತ್ಯಾಪಿ ಜೀವಂಸ್ತು ಬ್ರಾಹ್ಮಣಃ ಕ್ಷತ್ರಿಯೋಽಪಿ ವಾ ।
ಹಿಂಸಾಪ್ರಾಯಾಂ ಪರಾಧೀನಾಂ ಕೃಷಿಂ ಯತ್ನೇನ ವರ್ಜಯೇತ್ ॥ ೮೩

ಬ್ರಾಹ್ಮಣನು ಮತ್ತು ಕ್ಷತ್ರಿಯನು ವೈಶ್ಯವೃತ್ತಿಯಿಂದ ಜೀವಿಸಬೇಕಾಗಿ ಬಂದಾಗ ಹಿಂಸಾಮಯ ಪರಾಧೀನ ಕೃಷಿಯನ್ನು ಬಿಡಬೇಕು.

ಕೃಷಿಂ ಸಾಧ್ವಿತಿ ಮನ್ಯಂತೇ ಸಾ ವೃತ್ತಿಃ ಸದ್ವಿಗರ್ಹಿತಾ ।
ಭೂಮಿಂ ಭೂಮಿಶಯಾಂಶ್ಚೈವ ಹಂತಿ ಕಾಷ್ಠಮಯೋಮುಖಂ ॥ ೮೪

ನೇಗಿಲು ಗುದ್ದಲಿಗಳಿಂದ ಭೂಮಿಯನ್ನು ಅಗೆಯುವಾಗ ಭೂಮಿಗೂ ಜಂತುಗಳಿಗೂ ಪೀಡೆಯಾಗುವುದು. ಆ ದೃಷ್ಟಿಯಿಂದ ಕೃಷಿಯು ಹಿಂಸಾಮಯ. ಸಾತ್ವಿಕರು ಪ್ರೀತಿಸುವುದಿಲ್ಲ.

ಇದಂ ತು ವೃತ್ತಿವೈಕಲ್ಯಾತ್ತ್ಯಜತೋ ಧರ್ಮನೈಪುಣಂ ।
ವಿಟ್ಪಣ್ಯಮುದ್ಧೃತೋದ್ಧಾರಂ ವಿಕ್ರೇಯಂ ವಿತ್ತವರ್ಧನಂ ॥ ೮೫

ಆಪದ್ಧರ್ಮವಾಗಿ ಬ್ರಾಹ್ಮಣ–ಕ್ಷತ್ರಿಯರು ವೈಶ್ಯವೃತ್ತಿಯಾದ ವಾಣಿಜ್ಯವನ್ನು ಆಚರಿಸುವುದಾದರೆ ಮೇಲೆ ಹೇಳುವ ವಸ್ತುಗಳನ್ನು ಬಿಡಬೇಕು. ಅವು ಯಾವುವೆಂದರೆ—

ಸರ್ವಾನ್ ರಸಾನಪೋಹೇತ ಕೃತಾನ್ನಂ ಚ ತಿಲೈಃ ಸಹ ।
ಅಶ್ಮನೋ ಲವಣಂ ಚೈವ ಪಶವೋ ಯೇ ಚ ಮಾನುಷಾಃ ॥ ೮೬

ರಸ, ಸಿದ್ಧಾನ್ನ, ಎಳ್ಳು, ಕಲ್ಲು, ಉಪ್ಪು, ಪ್ರಾಣಿ, ಮನುಷ್ಯ ಈ ದ್ರವ್ಯಗಳು ವಾಣಿಜ್ಯಯೋಗ್ಯಗಳಲ್ಲ.

ಸರ್ವಂ ಚ ತಾಂತವಂ ರಕ್ತಂ ಶಾಣಕ್ಷೌಮಾವಿಕಾನಿ ಚ ।
ಅಪಿ ಚೇತ್ಸ್ಯುರರಕ್ತಾನಿ ಫಲಮೂಲೇ ತಥೌಷಧೀಃ ॥ ೮೭

ಬಣ್ಣದ ಬಟ್ಟೆ, ಸಣಬು, ಅಗಸೆ ನಾರು, ಉಣ್ಣೆ ಇವುಗಳ ಬಟ್ಟೆ, ಹಣ್ಣು, ಬೇರು, ಔಷಧಿ ಇವು.

ಅಪಃ ಶಸ್ತ್ರಂ ವಿಷಂ ಮಾಂಸಂ ಸೋಮಂ ಗಂಧಾಂಶ್ಚ ಸರ್ವಶಃ ।
ಕ್ಷೀರಂ ಕ್ಷೌದ್ರಂ ದಧಿ ಘೃತಂ ತೈಲಂ ಮಧು ಗುಡಂ ಕುಶಾನ್ ॥ ೮೮

ನೀರು, ಕತ್ತಿ, ವಿಷ, ಮಾಂಸ, ಸೋಮರಸ, ಹಾಲು, ಜೇನು, ಮೊಸರು, ತುಪ್ಪ, ಎಣ್ಣೆ, ಜೇನುಮೇಣ, ಬೆಲ್ಲ, ಪರಿಮಳ ದ್ರವ್ಯ ಇವು.

ಆರಣ್ಯಾಂಶ್ಚ ಪಶೂನ್ ಸರ್ವಾನ್ ದಂಷ್ಟ್ರಿಣಶ್ಚ ವಯಾಂಸಿ ಚ ।
ಮದ್ಯಂ ನೀಲಿಂ ಚ ಲಾಕ್ಷಾಂ ಚ ಸರ್ವಾಂಶ್ಚೈಕಶಫಾಂಸ್ತಥಾ ॥ ೮೯

ಕಾಡುಪ್ರಾಣಿಗಳು, ಹಕ್ಕಿ, ಜಲಜಂತು, ಮದ್ಯ, ನೀಲಿ, ಅರಗು ಒಂದು ಗೊರಸಿನ ಪ್ರಾಣಿ ಇವು.

ಕಾಮಮುತ್ಪಾದ್ಯ ಕೃಷ್ಯಾಂ ತು ಸ್ವಯಮೇವ ಕೃಷೀವಲಃ ।
ವಿಕ್ರೀಣೀತ ತಿಲಾನ್ ಶುದ್ಧಾನ್ ಧರ್ಮಾರ್ಥಮಚಿರಸ್ಥಿತಾನ್ ॥ ೯೦

ತಾನು ನೆಟ್ಟು ಬೆಳೆಸಿದ ಎಳ್ಳನ್ನು ಬೆಳೆದ ಕೂಡಲೆ ಕಾಲಧಾರಣೆಗೆ ಮಾರಬಹುದು. ಅದು ಹೋಮದ್ರವ್ಯವು. ಲಾಭಕ್ಕಾಗಿ ಏರುಬೆಲೆಯನ್ನು ಸಾಧಿಸಬಾರದು.

ಭೋಜನಾಭ್ಯಂಜನಾದ್ದಾನಾದ್ಯದನ್ಯತ್ಕುರುತೇ ತಿಲೈಃ ।
ಕೃಮಿಭೂತಃ ಶ್ವವಿಷ್ಠಾಯಾಂ ಪಿತೃಭಿಃ ಸಹ ಮಜ್ಜತಿ ॥ ೯೧

ಊಟ, ಮೈ, ದಾನ ಇವುಗಳಿಗೆ ಎಳ್ಳಿನ ಉಪಯೋಗವು ಧರ್ಮ. ಅಲ್ಲದೆ ಲಾಭದ ಮಾರಾಟಕ್ಕೆ ಇಳಿದರೆ ತಾನೂ ಪಿತೃಗಳೂ ಕ್ರಿಮಿ ಅಥವಾ ನಾಯಿಯ ಮಲದಲ್ಲಿ ಬೀಳುವರು.

ಸದ್ಯಃ ಪತತಿ ಮಾಂಸೇನ ಲಾಕ್ಷಯಾ ಲವಣೇನ ಚ ।
ತ್ರ್ಯಹೇಣ ಶೂದ್ರೀ ಭವತಿ ಬ್ರಾಹ್ಮಣಃ ಕ್ಷೀರವಿಕ್ರಯಾತ್ ॥ ೯೨

ಮಾಂಸ, ಅರಗು, ಉಪ್ಪು, ಹಾಲು ಇವುಗಳ ವಾಣಿಜ್ಯದಿಂದ ತುಂಬ ಪಾಪವಿದೆ.

ಇತರೇಷಾಂ ತು ಪಣ್ಯಾನಾಂ ವಿಕ್ರಯಾದಿಹ ಕಾಮತಃ ।
ಬ್ರಾಹ್ಮಣಃ ಸಪ್ತರಾತ್ರೇಣ ವೈಶ್ಯಭಾವಂ ನಿಯಚ್ಛತಿ ॥ ೯೩

ನಿಷಿದ್ಧ ದ್ರವ್ಯಗಳ ವಾಣಿಜ್ಯವನ್ನು ಏಳು ದಿನ ಮಾಡಿದರೂ ಬ್ರಾಹ್ಮಣನು ವೈಶ್ಯನಂತಾಗುವನು.

ರಸಾ ರಸೈರ್ನಿಮಾತವ್ಯಾ ನ ತ್ವೇವ ಲವಣಂ ರಸೈಃ ।
ಕೃತಾನ್ನಂ ಚಾಕೃತಾನ್ನೇನ ತಿಲಾ ಧಾನ್ಯೇನ ತತ್ಸಮಾಃ ॥ ೯೪

ರಸ, ರಸ–ಸಿದ್ಧಾನ್ನ, ಧಾನ್ಯ, ಎಳ್ಳು, ಧಾನ್ಯ ಹೀಗೆ ಅನ್ಯೋನ್ಯ ಬದಲಾವಣೆಯು ನಿಷಿದ್ಧವಲ್ಲ. ಉಪ್ಪು ಹೇಗೂ ಆಗದು.

ಜೀವೇದೇತೇನ ರಾಜನ್ಯಃ ಸರ್ವೇಣಾಪ್ಯನಯಂ ಗತಃ ।
ನ ತ್ವೇವ ಜ್ಯಾಯಸೀಂ ವೃತ್ತಿಮಭಿಮನ್ಯೇತ ಕರ್ಹಿಚಿತ್ ॥ ೯೫

ಕ್ಷತ್ರಿಯನಿಗೆ ವಾಣಿಜ್ಯದಲ್ಲಿ ದ್ರವ್ಯನಿಷೇಧವಿಲ್ಲ. ಬ್ರಾಹ್ಮಣನ ವೃತ್ತಿಯಲ್ಲಿ ಯಾರೂ ಪ್ರೀತಿಪಡಬಾರದು.

ಯೋ ಲೋಭಾದಧಮೋ ಜಾತ್ಯಾ ಜೀವೇದುತ್ಕೃಷ್ಟಕರ್ಮಭಿಃ ।
ತಂ ರಾಜಾ ನಿರ್ಧನಂ ಕೃತ್ವಾ ಕ್ಷಿಪ್ರಮೇವ ಪ್ರವಾಸಯೇತ್ ॥ ೯೬

ಒಂದು ದರ್ಜೆಯವನು ಇನ್ನೊಂದು ವರ್ಗದವರ ವೃತ್ತಿಯನ್ನು ಸ್ವೀಕರಿಸಬಾರದು. ಹಾಗೆ ಮಾಡುವವರನ್ನು ರಾಜನು ನಿರ್ದಯವಾಗಿ ದಂಡಿಸಬೇಕು. ಹೊರಗೆ ದಬ್ಬಬೇಕು.

ವರಂ ಸ್ವಧರ್ಮೋ ವಿಗುಣೋ ನ ಪಾರಕ್ಯಃ ಸ್ವನುಷ್ಠಿತಃ ।
ಪರಧರ್ಮೇಣ ಜೀವನ್ ಹಿ ಸದ್ಯಃ ಪತತಿ ಜಾತಿತಃ ॥ ೯೭

ಹೊಸದಾಗಿ ಒಂದು ವೃತ್ತಿಯನ್ನು ತೊಡಗಬಾರದು. ಅದು ಆ ವೃತ್ತಿಯವರ ದ್ವೇಷಕ್ಕೆ ಕಾರಣವಾಗುವುದು. ಆದುದರಿಂದ ತನ್ನ ಹಿಂದಿನ ವೃತ್ತಿಯನ್ನೆ ಮುಂದುವರಿಸಬೇಕು. ಜನ್ಮವೇ ನಿಶ್ಚೈಸಿದ ಆ ವೃತ್ತಿಯನ್ನು ಬಿಡಲು ಕಾರಣವಿಲ್ಲ. ಸ್ವೇಚ್ಛೆಯಿಂದ ವರ್ತಿಸಿದರೆ ಇತರರ ಅಸಮಾಧಾನ ಕಾದಿದೆ. ಆಸೆ (ದುರಾಸೆ) ಯಿಂದಲೇ ಇತರರ ವೃತ್ತಿಯನ್ನು ಇತರರು ಪ್ರೀತಿಸುವರು. ಇದೇ ರಾಗದ್ವೇಷಾಧೀನ ವರ್ತನೆಯು. ತಾರತಮ್ಯ ಕಲ್ಪನೆಯಿಂದ ಈ ಕಾಲದಲ್ಲಿ ತಂತಮ್ಮ ಕೆಲಸಗಳನ್ನು ಜನರು ಬಿಟ್ಟು ಎಂತಹ ವಿಪತ್ತು ಬಂದಿದೆ ಯೆಂಬುದು ವೇದ್ಯವಿದೆ. ಆಹಾರಾಭಾವ, ನಿರ್ವಂಚನೆಯ ಸೇವೆ ಇಲ್ಲದೆ ಸರಕಾರದ ಎಲ್ಲ ಶಾಖೆಯು ದಿವಾಳಿಯ ಅಂಚಿನಲ್ಲಿದೆ. ಕರ್ಮಶೂರರಾದ ದ್ವೀಪಾಂತರ ವಾಸಿಗಳ ತೊತ್ತಾಗುವ ದುರವಸ್ಥೆಯು ಭಾರತಕ್ಕೆ ಬಂದಿದೆ. ಆವಶ್ಯಕತೆಯನ್ನು ದೇಶವು ಹೇಗೆ ತುಂಬಲಿ. ಇಂತಹ ಗಂಡಾಂತರದ ದೂರ ದೃಷ್ಟಿಯಿಂದ ಧರ್ಮಜ್ಞರು ರಾಜನು ನಿರ್ದಯವಾಗಿ ಪರವೃತ್ತಿಪರರನ್ನು ಸೂರೆಗೈದು ನಿರ್ವಾಸನ ಮಾಡಬೇಕೆಂದು ವಿಧಿಸಿದ್ದಾರೆ. ತನಗೆ ತನ್ನದು ಒಳ್ಳೆದು. ಹೆರವರದು ಲಾಭ ಬಡಕತನ ಇದೇ ಜಾತಿಭ್ರಂಶವು.

ವೈಶ್ಯೋಽಜೀವನ್ ಸ್ವಧರ್ಮೇಣ ಶೂದ್ರವೃತ್ತ್ಯಾಪಿ ವರ್ತಯೇತ್ ।
ಅನಾಚರನ್ನಕಾರ್ಯಾಣಿ ನಿವರ್ತೇತ ಚ ಶಕ್ತಿಮಾನ್ ॥ ೯೮

ವೈಶ್ಯನಿಗೆ ಶೂದ್ರ ಧರ್ಮವು ಆಪದ್ಧರ್ಮ. ಅದನ್ನು ಗೌರವವಾಗಿ ನಡೆಸಿ ಸಾಧ್ಯವಾದರೆ ಬಿಡಬೇಕು.

ಅಶಕ್ನುವಂಸ್ತು ಶುಶ್ರೂಷಾಂ ಶೂದ್ರಃ ಕರ್ತುಂ ದ್ವಿಜನ್ಮನಾಂ ।
ಪುತ್ರದಾರಾತ್ಯಯಂ ಪ್ರಾಪ್ತೋ ಜೀವೇತ್ಕಾರುಕಕರ್ಮಭಿಃ ॥ ೯೯

ಶೂದ್ರನಿಗೆ ಸ್ವಕರ್ಮವು ಅಸಾಧ್ಯವಾದರೆ ಹಸಿವು ಅಡಗಲು ಅಡಿಗೆ ಕೆಲಸವೂ ಆಗಬಹುದು.

ಯೈಃ ಕರ್ಮಭಿಃ ಪ್ರಚರಿತೈಃ ಶುಶ್ರೂಷ್ಯಂತೇ ದ್ವಿಜಾತಯಃ ।
ತಾನಿ ಕಾರುಕಕರ್ಮಾಣಿ ಶಿಲ್ಪಾನಿ ವಿವಿಧಾನಿ ಚ ॥ ೧೦೦

ಯಾವ ಕೆಲಸಗಳಿಂದ ದ್ವಿಜಾತಿಗಳಿಗೆ ಉಪಕಾರವಾಗುವುದೋ ಅಂತಹ ಬಡಗಿ, ಶಿಲ್ಪ, ಚಿತ್ರಲೇಖಾದಿಗಳನ್ನು ಮಾಡಬಹುದು.

ವೈಶ್ಯವೃತ್ತಿಮನಾತಿಷ್ಠನ್ ಬ್ರಾಹ್ಮಣಃ ಸ್ವೇ ಪಥಿ ಸ್ಥಿತಃ ।
ಅವೃತ್ತಿಕರ್ಷಿತಃ ಸೀದನ್ ಇಮಂಧರ್ಮಂ ಸಮಾಚರೇತ್ ॥ ೧೦೧

ಬ್ರಾಹ್ಮಣನಿಗೆ ಪರವೃತ್ತಿಯಲ್ಲಿ ಪ್ರೀತಿಯಿಲ್ಲದೆ ಜೀವನವು ಇಲ್ಲದೆ ಇರುವುದಾದರೆ ಮುಂದೆ ಹೇಳುವಂತೆ ಬದುಕಬಹುದು.

ಸರ್ವತಃ ಪ್ರತಿಗೃಹ್ಣೀಯಾದ್ಬ್ರಾಹ್ಮಣಸ್ತ್ವನಯಂ ಗತಃ ।
ಪವಿತ್ರಂ ದುಷ್ಯತೀತ್ಯೇತದ್ಧರ್ಮತೋ ನೋಪಪದ್ಯತೇ ॥ ೧೦೨

ಅಸತ್ಪ್ರತಿಗ್ರಹದಿಂದಲೂ ಜೀವನ ನಿರ್ವಹಿಸಬಹುದು. ಒಳ್ಳೆಯದು ಹಾಳಾಗುವುದೆಂಬುದು ಸುಳ್ಳು.

ನಾಧ್ಯಾಪನಾದ್ಯಾಜನಾದ್ವಾ ಗರ್ಹಿತಾದ್ವಾ ಪ್ರತಿಗ್ರಹಾತ್ ।
ದೋಷೋ ಭವತಿ ವಿಪ್ರಾಣಾಂ ಜ್ವಲನಾಂಬುಸಮಾ ಹಿತೇ ॥ ೧೦೩

ನೀರು, ಬೆಂಕಿ ಕೆಡುವುದೆಂದಿಲ್ಲ. ಅದರಂತೆ ಅಯೋಗ್ಯರಿಗೆ ಅಧ್ಯಾಪನ ಯಾಜನಗಳನ್ನು ಅಸತ್ಪ್ರತಿಗ್ರಹವನ್ನು ಮಾಡಬಹುದು.

ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ ।
ಆಕಾಶಮಿವ ಪಂಕೇನ ನ ಸ ಪಾಪೇನ ಲಿಪ್ಯತೇ ॥ ೧೦೪

ಮರಣಾಂತ ಸಂದರ್ಭದಲ್ಲಿ ಸಿಕ್ಕಿದಲ್ಲಿ ಉಣ್ಣಬಹುದು. ಕೆಸರು ಚೆಲ್ಲಿ ಆಕಾಶ ಕೊಳೆಯಾಗುವುದಿಲ್ಲ.

ಅಜೀಗರ್ತಃ ಸುತಂ ಹಂತುಮುಪಾಸರ್ಪದ್ಬುಭುಕ್ಷಿತಃ ।
ನ ಚಾಲಿಪ್ಯತ ಪಾಪೇನ ಕ್ಷುತ್ಪ್ರತೀಕಾರಮಾಚರನ್ ॥ ೧೦೫

ಹಸಿವಿಗಾಗಿ ಅಜೀಗರ್ತನು ಮಗನನ್ನು ಬಲಿಗೆ ಮಾರಲು ಮುಂದಾದನು. ಅವನಿಗೆ ಪಾಪಬರಲಿಲ್ಲ.

ಶ್ವಮಾಂಸಮಿಚ್ಛನ್ನಾರ್ತೋಽತ್ತುಂ ಧರ್ಮಾಧರ್ಮವಿಚಕ್ಷಣಃ ।
ಪ್ರಾಣಾನಾಂ ಪರಿರಕ್ಷಾರ್ಥಂ ವಾಮದೇವೋ ನ ಲಿಪ್ತವಾನ್ ॥ ೧೦೬

ಧರ್ಮಾಧರ್ಮಜ್ಞಾನಿ ವಾಮದೇವನು ಹಸಿವಿನಿಂದ ಜೀವ ಉಳಿಸಲು ನಾಯಿ ಮಾಂಸ ತಿಂದೂ ಪಾಪಿಷ್ಠನಾಗಲಿಲ್ಲ.

ಭರದ್ವಾಜಃ ಕ್ಷುಧಾರ್ತಸ್ತು ಸಪುತ್ರೋ ವಿಜನೇ ವನೇ ।
ಬಹ್ವೀರ್ಗಾಃ ಪ್ರತಿಜಗ್ರಾಹ ವೃಧೋಸ್ತಕ್ಷ್ಣೋ ಮಹಾತಪಾಃ ॥ ೧೦೭

ಭರದ್ವಾಜನು ಕಾಡಿನಲ್ಲಿ ಮಕ್ಕಳೊಡನೆ ಹಸಿವಿಗಾಗಿ ವೃಧುವಿನಿಂದ ದನಗಳನ್ನು ತಕ್ಕೊಂಡನು. ಅವನು ಮಹಾತಪಸ್ವಿಯು.

ಕ್ಷುಧಾರ್ತಶ್ಚಾತ್ತುಮಭ್ಯಾಗಾದ್ವಿಶ್ವಾಮಿತ್ರಃ ಶ್ವಜಾಘನೀಂ ।
ಚಂಡಾಲಹಸ್ತಾದಾದಾಯ ಧರ್ಮಾಧರ್ಮವಿಚಕ್ಷಣಃ ॥ ೧೦೮

ಧರ್ಮಾಧರ್ಮ ನಿಪುಣನಾದ ವಿಶ್ವಾಮಿತ್ರನು ಹಸಿವಿಗೆ ನಾಯಕುಂಡೆ ಮಾಂಸವನ್ನು ಹೊಲೆಯನಿಂದ ತಕ್ಕೊಂಡನು.

ಪ್ರತಿಗ್ರಹಾದ್ಯಾಜನಾದ್ವಾ ತಥೈವಾಧ್ಯಾಪನಾದಪಿ ।
ಪ್ರತಿಗ್ರಹಃ ಪ್ರತ್ಯವರಃ ಪ್ರೇತ್ಯ ವಿಪ್ರಸ್ಯ ಗರ್ಹಿತಃ ॥ ೧೦೯

ಅಸತ್ ಯಾಜನಾಧ್ಯಾಪನಗಳಿಗಿಂತ ಅಸತ್‌ಸ್ವೀಕಾರವು ತುಂಬ ಕೆಟ್ಟದು.

ಯಾಜನಾಧ್ಯಾಪನೇ ನಿತ್ಯಂ ಕ್ರಿಯೇತೇ ಸಂಸ್ಕೃತಾತ್ಮನಾಂ ।
ಪ್ರತಿಗ್ರಹಸ್ತು ಕ್ರಿಯತೇ ಶೂದ್ರಾದಪ್ಯಂತ್ಯಜನ್ಮನಃ ॥ ೧೧೦

ಎಂತಹ ಕೃಪಣನೂ ಧನಿಕನಾಗಿ ದಾನ ಮಾಡಬಹುದು. ಆದುದರಿಂದ ಅಸತ್ಪ್ರತಿಗ್ರಹವು ತುಂಬ ಅಪರಾಧ.

ಜಪಹೋಮೈರಪೈತ್ಯೇನೋ ಯಾಜನಾಧ್ಯಾಪನೈಃ ಕೃತಮ್ ।
ಪ್ರತಿಗ್ರಹನಿಮಿತ್ತಂ ತು ತ್ಯಾಗೇನ ತಪಸೈವ ಚ ॥ ೧೧೧

ಪಾಪಿಷ್ಠರಿಗೆ ಯಾಜನಾಧ್ಯಾಪನ ಮಾಡಿಸಿ ಬಂದ ಪಾಪವನ್ನು ಜಪ ಹೋಮಗಳಿಂದ ತೊಲಗಿಸಬಹುದು. ಅಸಜ್ಜನರ ದಾನ ತಕ್ಕೊಂಡ ಪಾಪವನ್ನು ತ್ಯಾಗತಪಸ್ಸುಗಳಿಂದ ನಿವೃತ್ತಿಪಡಿಸಬೇಕು.

ಶಿಲೋಂಛಮಪ್ಯಾದದೀತ ವಿಪ್ರೋಽಜೀವನ್ ಯತಸ್ತತಃ ।
ಪ್ರತಿಗ್ರಹಾಚ್ಛಿಲಃ ಶ್ರೇಯಾನ್ ತತೋಽಪ್ಯುಂಛಃ ಪ್ರಶಸ್ಯತೇ ॥ ೧೧೨

ಜೀವನಕ್ಕೆ ಶಿಲೋಂಛವೃತ್ತಿಗಳನ್ನು ಅಂಗೀಕರಿಸಬಹುದು. ಉಂಛವು ಅತಿ ಉತ್ತಮ. ತೆನೆ ಹೆಕ್ಕಿ ಉಣ್ಣುವುದು ಶೀಲ. ಕಾಳು ಹೆಕ್ಕುವುದು ಉಂಛ.

ಸೀದದ್ಭಿಃ ಕುಪ್ಯಮಿಚ್ಛದ್ಭಿರ್ಧನೇ ವಾ ಪೃಥಿವೀಪತಿಃ ।
ಯಾಚ್ಯಃ ಸ್ಯಾತ್ ಸ್ನಾತಕೈರ್ವಿಪ್ರೈರದಿತ್ಸಂಸ್ತ್ಯಾಗಮರ್ಹತಿ ॥ ೧೧೩

ಸ್ನಾತಕರಿಗೆ ಜೀವನವಾಗುವುದಿಲ್ಲವಾದರೆ ಅವರು ರಾಜನಲ್ಲಿ ಬೇಡಬಹುದು. ಕೊಡದಿದ್ದರೆ ಬೇಡಬಾರದು.

ಅಕೃತಂ ಚ ಕೃತಾತ್ ಕ್ಷೇತ್ರಾತ್ ಗೌರಜಾವಿಕಮೇವ ಚ ।
ಹಿರಣ್ಯಂ ಧಾನ್ಯಮನ್ನಂ ಚ ಪೂರ್ವಂ ಪೂರ್ವಮದೋಷವತ್ ॥ ೧೧೪

ಬಿತ್ತದ ಹೊಲ, ಬಿತ್ತಿದ ಹೊಲ, ಹಸು, ಆಡು, ಕುರಿ, ಚಿನ್ನ, ಧಾನ್ಯ, ಅನ್ನ ಇವುಗಳಲ್ಲಿ ಮೊದಲು ಮೊದಲಿನದನ್ನು ಬೇಡುವುದು ಒಳ್ಳೆಯದು.

ಸಪ್ತ ವಿತ್ತಾಗಮಾ ಧರ್ಮ್ಯಾ ದಾಯೋ ಲಾಭಃ ಕ್ರಯೋ ಜಯಃ ।
ಪ್ರಯೋಗಃ ಕರ್ಮಯೋಗಶ್ಚ ಸತ್ಪ್ರತಿಗ್ರಹ ಏವ ಚ ॥ ೧೧೫

ಪಿತ್ರಾರ್ಜಿತ, ಮಿತ್ರಧನ, ಮಾರಾಟ, ಜಯ, ಬಡ್ಡಿ, ಕೃಷಿವಾಣಿಜ್ಯ ದಾನಹಿಡಿಯುವುದು ಇವೇಳು ನ್ಯಾಯವಾದ ಧನಲಾಭಪ್ರಕಾರಗಳು.

ವಿದ್ಯಾ ಶಿಲ್ಪಂ ಭೃತಿಃ ಸೇವಾ ಗೋರಕ್ಷ್ಯಂ ವಿಪಣಿಃ ಕೃಷಿಃ ।
ಧೃತಿರ್ಭೈಕ್ಷ್ಯಂ ಕುಸೀದಂ ಚ ದಶ ಜೀವನಹೇತವಃ ॥ ೧೧೬

ವಿದ್ಯೆ, ಶಿಲ್ಪ, ಸಂಬಳ, ಕೂಲಿ, ಪಶುಪಾಲನೆ, ಅಂಗಡಿ, ಕೃಷಿ, ಸಂತೋಷ, ಭಿಕ್ಷೆ, ಬಡ್ಡಿ ಈ ಹತ್ತು ಉಪಾಯಗಳಿಂದ ಬದುಕಬಹುದು.

ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೃದ್ಧಿಂ ನೈವ ಪ್ರಯೋಜಯೇತ ।
ಕಾಮಂ ತು ಖಲು ಧರ್ಮಾರ್ಥಂ ದದ್ಯಾತ್ಪಾಪೀಯಸೇಽಲ್ಪಿಕಾಂ ॥ ೧೧೭

ಬ್ರಾಹ್ಮಣ, ಕ್ಷತ್ರಿಯರು ಬಡ್ಡಿಯಿಂದ ಬದುಕಬಾರದು. ಹಾಗಾದರೂ ಕಡಿಮೆ ಬಡ್ಡಿ ಇಡಬೇಕು.

ಚತುರ್ಥಮಾದದಾನೋಽಪಿ ಕ್ಷತ್ರಿಯೋ ಭಾಗಮಾಪದಿ ।
ಪ್ರಜಾ ರಕ್ಷನ್ ಪರಂ ಶಕ್ತ್ಯಾ ಕಿಲ್ಬಿಷಾತ್ಪ್ರತಿಮುಚ್ಯತೇ ॥ ೧೧೮

ರಾಜನು ಆಪತ್ಕಾಲದಲ್ಲಿ ನಾಲ್ಕನೆ ಒಂದು ಭಾಗ ಕರವನ್ನು ಎತ್ತಿ ಒಳ್ಳೆ ಆಡಳಿತ ಮಾಡುತ್ತಿದ್ದರೆ ಪಾಪವಿಲ್ಲ.

ಸ್ವಧರ್ಮೋ ವಿಜಯಸ್ತಸ್ಯ ನಾಹವೇ ಸ್ಯಾತ್ಪರಾಙ್ಮುಖಃ ।
ಶಸ್ತ್ರೇಣ ವೈಶ್ಯಾನ್ ರಕ್ಷಿತ್ವಾ ಧರ್ಮ್ಯಮಾಹಾರಯೇದ್ಬಲಿಂ ॥ ೧೧೯

ಯುದ್ಧದಲ್ಲಿ ಹಿಂದೆ ಬಾರದೆ ಮುನ್ನುಗ್ಗಿ ಜಯಿಸುವುದು ಕ್ಷತ್ರಿಯನ ಧರ್ಮ. ವೈಶ್ಯರಿಗೆ ವಾಣಿಜ್ಯಕ್ಕೆ ರಕ್ಷಣೆ ಕೊಟ್ಟರೆ ಅದರಿಂದಲೂ ಕರ ಎತ್ತಬಹುದು.

ಧಾನ್ಯೇಽಷ್ಟಮಂ ವಿಶಾಂ ಶುಲ್ಕಂ ವಿಂಶಂ ಕಾರ್ಷಾಪಣಾವರಂ ।
ಕರ್ಮೋಪಕರಣಾಃ ಶೂದ್ರಾಃ ಕಾರವಃ ಶಿಲ್ಪಿನಸ್ತಥಾ ॥ ೧೨೦

ವೈಶ್ಯರಿಗೆ ಧಾನ್ಯಗಳ ಎಂಟನೆ ಒಂದು ಅಂಶಕರ. ಲೋಹಗಳಿಗೆ ಇಪ್ಪತ್ತ ಒಂದಂಶ. ಅಡಿಗೆ, ಶಿಲ್ಪ ಮುಂತಾದ ಕಸುಬುದಾರರಿಗೆ ಕೆಲಸವೇ ಕರ.

ಶೂದ್ರಸ್ತು ವೃತ್ತಿಮಾಕಾಂಕ್ಷನ್ ಕ್ಷತ್ರಮಾರಾಧಯೇದ್ಯದಿ ।
ಧನಿನಂ ವಾಪ್ಯುಪಾರಾಧ್ಯ ವೈಶ್ಯಂ ಶೂದ್ರೋ ಜಿಜೀವಿಷೇತ್ ॥ ೧೨೧

ಶೂದ್ರನು ಜೀವನಕ್ಕಾಗಿ ಕ್ಷತ್ರಿಯನನ್ನು ವೈಶ್ಯನನ್ನು, ಹೊಂದಬಹುದು.

ಸ್ವರ್ಗಾರ್ಥಮುಭಯಾರ್ಥಂ ವಾ ವಿಪ್ರಾನಾರಾಧಯೇತ್ತು ಸಃ ।
ಜಾತಬ್ರಾಹ್ಮಣಶಬ್ದಸ್ಯ ಸಾ ಹ್ಯಸ್ಯ ಕೃತಕೃತ್ಯತಾ ॥ ೧೨೨

ಈ ಲೋಕದಲ್ಲೂ ಪರಲೋಕದಲ್ಲೂ ಶೂದ್ರನಿಗೆ ಬ್ರಾಹ್ಮಣ ಸೇವೆಯಿಂದ ಮುಕ್ತಿ ಲಭಿಸುವುದು.

ವಿಪ್ರಸೇವೈವ ಶೂದ್ರಸ್ಯ ವಿಶಿಷ್ಟಂ ಕರ್ಮ ಕೀರ್ತ್ಯತೇ ।
ಯದತೋಽನ್ಯದ್ಧಿ ಕುರುತೇ ತದ್ಭವತ್ಯಸ್ಯ ನಿಷ್ಫಲಂ ॥ ೧೨೩

ಶೂದ್ರನಿಗೆ ವಿಪ್ರಸೇವೆಯು ಸುಖದಾಯಕವು; ಬೇರೇನೂ ಬೇಡ.

ಪ್ರಕಲ್ಪ್ಯಾ ತಸ್ಯ ತೈರ್ವೃತ್ತಿಃ ಸ್ವಕುಟುಂಬಾದ್ಯಥಾರ್ಹತಃ ।
ಶಕ್ತಿಂ ಚಾವೇಕ್ಷ್ಯ ದಾಕ್ಷ್ಯಂ ಚ ಭೃತ್ಯಾನಾಂ ಚ ಪರಿಗ್ರಹ ॥ ೧೨೪

ಬ್ರಾಹ್ಮಣನು ಶೂದ್ರಸೇವಕನ ಜೀವನಕ್ಕೆ ಸಾಕಷ್ಟು ಕೊಡಬೇಕು.

ಉಚ್ಛಿಷ್ಟಮನ್ನಂ ದಾತವ್ಯಂ ಜೀರ್ಣಾನಿ ವಸನಾನಿ ಚ ।
ಪುಲಾಕಾಶ್ಚೈವ ಧಾನ್ಯಾನಾಂ ಜೀರ್ಣಾಶ್ಚೈವ ಪರಿಚ್ಛದಾಃ ॥ ೧೨೫

ಉಂಡುಳಿದ ಅನ್ನ, ಹಳೆ ಬಟ್ಟೆ, ಕೂಡಿ ಧಾನ್ಯ, ಹಳೆ ಹಾಸುಗೆ ಎಲ್ಲ ಕೊಡಬೇಕು.

ನ ಶೂದ್ರೇ ಪಾತಕಂ ಕಿಂಚಿತ್ ನ ಚ ಸಂಸ್ಕಾರಮರ್ಹತಿ ।
ನಾಸ್ಯಾಧಿಕಾರೋ ಧರ್ಮೇಽಸ್ತಿ ನ ಧರ್ಮಾತ್ಪ್ರತಿಷೇಧನಂ ॥ ೧೨೬

ಶೂದ್ರನಿಗೆ ಅಭಕ್ಷ್ಯವಿಲ್ಲ. ಧರ್ಮಸಂಸ್ಕಾರಗಳಿಲ್ಲ. ಪಾಕಯಜ್ಞ ನಿಷೇಧವಿಲ್ಲ.

ಧರ್ಮೇಪ್ಸವಸ್ತು ಧರ್ಮಜ್ಞಾಃ ಸತಾಂ ವೃತ್ತಮನುಷ್ಠಿತಾಃ ।
ಮಂತ್ರವರ್ಜ್ಯಂ ನ ದುಷ್ಯಂತಿ ಪ್ರಶಂಸಾಂ ಪ್ರಾಪ್ನುವಂತಿ ಚ ॥ ೧೨೭

ಶೂದ್ರನು ಧರ್ಮಾಭಿಮಾನಿಯಾದರೆ ಮಂತ್ರವಿಲ್ಲದ ಧರ್ಮಕಾರ್ಯವನ್ನು ಆಚರಿಸಬಹುದು.

ಯಥಾಯಥಾ ಹಿ ಸದ್ವೃತ್ತಮಾತಿಷ್ಠತ್ಯನಸೂಯಕಃ ।
ತಥಾತಥೇಮಂ ಚಾಮುಂ ಚ ಲೋಕಂ ಪ್ರಾಪ್ನೋತ್ಯನಿಂದಿತಃ ॥ ೧೨೮

ಅಸೂಯೆಯಿಲ್ಲದೆ ಸದಾಚಾರಪರನಾದರೆ ಎರಡು ಲೋಕಗಳನ್ನೂ ಗೆಲ್ಲುವನು.

ಶಕ್ತೇನಾಪಿ ಹಿ ಶೂದ್ರೇಣ ನ ಕಾರ್ಯೋ ಧನಸಂಚಯಃ ।
ಶೂದ್ರೋ ಹಿ ಧನಮಾಸಾದ್ಯ ಬ್ರಾಹ್ಮಣಾನೇವ ಬಾಧತೇ ॥ ೧೨೯

ಧನಾರ್ಜನ ಸಾಮರ್ಥ್ಯವಿದ್ದರೂ ಶೂದ್ರನು ಹಣ ಸಂಗ್ರಹಿಸಬಾರದು. ಅದು ಅವನಿಗೆ ಬ್ರಾಹ್ಮಣ ಪೀಡೆಗೆ ಪ್ರೇರಣೆಯಾಗುವುದು.

ಏತೇ ಚತುರ್ಣಾಂ ವರ್ಣಾನಾಮಾಪದ್ಧರ್ಮಾಃ ಪ್ರಕೀರ್ತಿತಾಃ ।
ಯಾನ್ ಸಮ್ಯಗನುತಿಷ್ಠಂತೋ ವ್ರಜಂತಿ ಪರಮಾಂ ಗತಿಂ ॥ ೧೩೦

ಈಗ ಹೇಳಿದುದು ನಾಲ್ಕು ವರ್ಣದವರ ಆಪದ್ಧರ್ಮವು. ಆದರಿಂದ ಅವರಿಗೆ ಶ್ರೇಯಸ್ಸಿದೆ.

ಏಷ ಧರ್ಮವಿಧಿಃ ಕೃತ್ಸ್ನಶ್ಚಾತುರ್ವರ್ಣ್ಯಸ್ಯ ಕೀರ್ತಿತಃ ।
ಅತಃ ಪರಂ ಪ್ರವಕ್ಷ್ಯಾಮಿ ಪ್ರಾಯಶ್ಚಿತ್ತವಿಧಿಂ ಶುಭಂ ॥ ೧೩೧

ಚತುರ್ವರ್ಣ ಧರ್ಮವನ್ನು ಹೇಳಿ ಪ್ರಾಯಶ್ಚಿತ್ತವನ್ನು ಹೇಳಲು ಉಪಕ್ರಮಿಸುತ್ತೇನೆ.

# ಅಧ್ಯಾಯ ೧೧.

ಸಾಂತಾನಿಕಂ ಯಕ್ಷ್ಯಮಾಣಂ ಅಧ್ವಗಂ ಸರ್ವವೇದಸಂ ।
ಗುರ್ವರ್ಥಂ ಪಿತೃಮಾತ್ರರ್ಥಂ ಸ್ವಾಧ್ಯಾಯಾರ್ಥ್ಯುಪತಾಪಿನಃ ॥ ೧

ನವೈತಾನ್ ಸ್ನಾತಕಾನ್ ವಿದ್ಯಾತ್ ಬ್ರಾಹ್ಮಣಾನ್ ಧರ್ಮಭಿಕ್ಷುಕಾನ್ ।
ನಿಃಸ್ವೇಭ್ಯೋ ದೇಯಮೇತೇಭ್ಯೋ ದಾನಂ ವಿದ್ಯಾವಿಶೇಷತಃ ॥ ೨

ವಿವಾಹಾರ್ಥಿ, ಯಾಗಾರ್ಥಿ, ಪಾಂಥ, ವಿಶ್ವಜದ್ಯಾಜಿ, ಗುರುದಕ್ಷಿಣಾ ಕಾಂಕ್ಷಿಮಾತಾ ಪಿತೃ ಜೀವನಾರ್ಥಿ, ವೇದಾರ್ಥಿ, ರೋಗಿ ಈ ಒಂಬತ್ತು ಮಂದಿ ಸ್ನಾತಕರು. ಇವರ ವಿದ್ಯಾಯೋಗ್ಯತಾನುರವಾಗಿ ದಾನ ಮಾಡಬೇಕು.

ಏತೇಭ್ಯೋ ಹಿ ದ್ವಿಜಾಗ್ರ್ಯೇಭ್ಯೋ ದೇಯಮನ್ನಂ ಸದಕ್ಷಿಣಂ ।
ಇತರೇಭ್ಯೋ ಬಹಿರ್ವೇದಿ ಕೃತಾನ್ನಂ ದೇಯಮುಚ್ಯತೇ ॥ ೩

ಈ ಬ್ರಾಹ್ಮಣರಿಗೆ ದಕ್ಷಿಣಾಸಹಿತ ಅನ್ನವನ್ನು ಅಂತರ್ವೇದಿಯಾಗಿ ಕೊಡಬೇಕು. ಇತರರಿಗೆ ಬಹಿರ್ವೇದಿದಾನ.

ಸರ್ವರತ್ನಾನಿ ರಾಜಾ ತು ಯಥಾರ್ಹಂ ಪ್ರತಿಪಾದಯೇತ್ ।
ಬ್ರಾಹ್ಮಣಾನ್ ವೇದವಿದುಷೋ ಯಜ್ಞಾರ್ಥಂ ಚೈವ ದಕ್ಷಿಣಾಂ ॥ ೪

ಯಜ್ಞಯೋಗ್ಯವಾದ ಎಲ್ಲ ಸಾಮಗ್ರಿಗಳನ್ನು ಬ್ರಾಹ್ಮಣರಿಗೆ ವಿದ್ಯಾನುಸಾರ ಕೊಡಬೇಕು.

ಕೃತದಾರೋಽಪರಾನ್ ದಾರಾನ್ ಭಿಕ್ಷಿತ್ವಾ ಯೋಽಧಿಗಚ್ಛತಿ ।
ರತಿಮಾತ್ರಂ ಫಲಂ ತಸ್ಯ ದ್ರವ್ಯದಾತುಸ್ತು ಸಂತತಿಃ ॥ ೫

ಹೆಂಡತಿಯಿದ್ದವನು ಪುನಃ ಹಣ ಕೇಳಿ ಮದುವೆಯಾಗುವುದಾದರೆ ಆ ಸಂತತಿಯು ಧನಪತಿಯದಾಗುವುದು. ಈ ರೀತಿ ಮದುವೆ ಒಳ್ಳೆಯದಲ್ಲ.

ಧನಾನಿ ತು ಯಥಾಶಕ್ತಿ ವಿಪ್ರೇಷು ಪ್ರತಿಪಾದಯೇತ್ ।
ವೇದವಿತ್ಸು ವಿವಿಕ್ತೇಷು ಪ್ರೇತ್ಯ ಸ್ವರ್ಗಂ ಸಮಶ್ನುತೇ ॥ ೬

ವೇದಜ್ಞರಾದ ಕುಟುಂಬವಂತ ಬ್ರಾಹ್ಮಣರಿಗೆ ದಾನಮಾಡಿದರೆ ಪುಣ್ಯವಿದೆ. ಕ್ಷೇಮವಿದೆ.

ಯಸ್ಯ ತ್ರೈವಾರ್ಷಿಕಂ ಭಕ್ತಂ ಪರ್ಯಾಪ್ತಂ ಭೃತ್ಯವೃತ್ತಯೇ ।
ಅಧಿಕಂ ವಾಪಿ ವಿದ್ಯೇತ ಸ ಸೋಮಂ ಪಾತುಮರ್ಹತಿ ॥ ೭

ಕುಟುಂಬ ಪರಿವಾರ ಪೋಷಣೆಯನ್ನು ಮೂರು ವರ್ಷಕ್ಕೂ ಹೆಚ್ಚು ಸಮಯ ಮಾಡಲು ಸಾಕಾದ ಐಶ್ವರ್ಯವು ಯಾರಿಗೆ ಇದೆಯೋ ಅವನು ಸೋಮಯಾಗಾಧಿಕಾರಿಯು.

ಅತಃ ಸ್ವಲ್ಪೀಯಸಿ ದ್ರವ್ಯೇ ಯಃ ಸೋಮಂ ಪಿಬತಿ ದ್ವಿಜಃ ।
ಸ ಪೀತಸೋಮಪೂರ್ವೋಽಪಿ ನ ತಸ್ಯಾಪ್ನೋತಿ ತತ್ಫಲಂ ॥ ೮

ಅದಕ್ಕಿಂತ ಕಡಿಮೆ ಧನವಿರುವವನು ಸೋಮಯಾಗ ಮಾಡಿದರೂ ಫಲವಿಲ್ಲ.

ಶಕ್ತಃ ಪರಜನೇ ದಾತಾ ಸ್ವಜನೇ ದುಃಖಜೀವಿನಿ ।
ಮಧ್ವಾಪಾತೋ ವಿಷಾಸ್ವಾದಃ ಸಧರ್ಮಪ್ರತಿರೂಪಕಃ ॥ ೯

ತನ್ನ ಕುಟುಂಬವು ಹಸಿದಿರುವಾಗ ಕೀರ್ತಿಗಾಗಿ ಇತರರಿಗೆ ದಾನ ಮಾಡಿದರೆ ಅದು ಧರ್ಮವಲ್ಲ. ವಿಷಸೇವನೆಯೇ.

ಭೃತ್ಯಾನಾಮುಪರೋಧೇನ ಯತ್ಕರೋತ್ಯೌರ್ಧ್ವದೇಹಿಕಮ್ ।
ತದ್ಭವತ್ಯಸುಖೋದರ್ಕಂ ಜೀವತಶ್ಚ ಮೃತಸ್ಯ ಚ ॥ ೧೦

ಸಾಕಬೇಕಾದವರನ್ನು ಸಾಕುವುದು ಬಿಟ್ಟು ದಾನ ಮಾಡಿದರೆ ಪರಲೋಕವೂ ಇಲ್ಲ. ಹೆಂಡತಿ, ಮಕ್ಕಳು, ತಂದೆ, ತಾಯಿ, ಸೇವಕರು.

ಯಜ್ಞಶ್ಚೇತ್ಪ್ರತಿರುದ್ಧಃ ಸ್ಯಾದೇಕೇನಾಂಗೇನ ಯಜ್ವನಃ ।
ಬ್ರಾಹ್ಮಣಸ್ಯ ವಿಶೇಷೇಣ ಧಾರ್ಮಿಕೇ ಸತಿ ರಾಜನಿ ॥ ೧೧

ಯೋ ವೈಶ್ಯಃ ಸ್ಯಾದ್ಬಹುಪಶುರ್ಹೀನಕ್ರತುರಸೋಮಪಃ ।
ಕುಟುಂಬಾತ್ತಸ್ಯ ತದ್ದ್ರವ್ಯಮಾಹರೇದ್ಯಜ್ಞಸಿದ್ಧಯೇ ॥ ೧೨

ಯಜ್ಞದ ಸಕಲಾಂಗವನ್ನು ಸಂಭಾರದಿಂದ ಪೂರ್ತಿಗೊಳಿಸಿ ದಕ್ಷಿಣಾ ಧನವೊಂದರಿಂದ ಯಜ್ಞನಿರ್ವಾಹಕ್ಕೆ ಭಂಗವೊದಗಿದಾಗ ಧನಲಾಭಕ್ಕೆ ಒಂದು ಉಪಾಯವಿದೆ. ರಾಜನು ಧಾರ್ಮಿಕನಾಗಿರಬೇಕು. ವೈಶ್ಯನು ಧನಿಕನಾಗಿ ಯಜ್ಞಹೀನನಾಗಿದ್ದರೆ ಅವನ ಧನವನ್ನು ಬಲಾತ್ಕರಿಸಿ ತಂದರೂ ತಪ್ಪಿಲ್ಲ.

ಆಹರೇತ್ತ್ರೀಣಿ ವಾ ದ್ವೇ ವಾ ಕಾಮಂ ಶೂದ್ರಸ್ಯ ವೇಶ್ಮನಃ ।
ನ ಹಿ ಶೂದ್ರಸ್ಯ ಯಜ್ಞೇಷು ಕಶ್ಚಿದಸ್ತಿ ಪರಿಗ್ರಹಃ ॥ ೧೩

ಶೂದ್ರನು ಯಜ್ಞ ಮಾಡುವುದಿಲ್ಲ. ಅವನ ಅನುಮತಿಯಿಲ್ಲದೆ ಯಜ್ಞಕ್ಕೆ ತಕ್ಕಷ್ಟು ಹಣ ತರಬಹುದು. ಅರ್ಥಸಮೀಕರಣವನ್ನು ಯಾಗ ಮೂಲಕ ಸಾಧಿಸುವುದು ಉದ್ದೇಶ. ಹಣ ಒಂದು ಕಡೆ ರಾಶಿಯಾಗಬಾರದು. ವಿದ್ಯಾವಂತರಲ್ಲಿ ಹಂಚಿದರೆ ಮದಮತ್ತರು ಧನಿಕರಾದಂತಲ್ಲ.

ಯೋಽನಾಹಿತಾಗ್ನಿಃ ಶತಗುರಯಜ್ವಾ ಚ ಸಹಸ್ರಗುಃ ।
ತಯೋರಪಿ ಕುಟುಂಬಾಭ್ಯಾಮಾಹರೇದವಿಚಾರಯನ್ ॥ ೧೪

ನೂರು ಗೋಸಂಪತ್ತುಳ್ಳ ಬ್ರಾಹ್ಮಣನು ಆಹಿತಾಗ್ನಿಯಲ್ಲದಿರಬಹುದು. ಸಾವಿರ ಗೋಧನಿಕನು ಸೋಮಯಾಜಿಯಲ್ಲದಿರಬಹುದು. ಯಜ್ಞಕ್ಕೆ ಅವರ ಹಣವನ್ನು ಒಯ್ದು ತರುವುದಕ್ಕೆ ಚಿಂತೆ ಬೇಡ. ಅದು ಧರ್ಮವೇ.

ಆದಾನನಿತ್ಯಾಚ್ಚಾದಾತುರಾಹರೇದಪ್ರಯಚ್ಛತಃ ।
ತಥಾ ಯಶೋಽಸ್ಯ ಪ್ರಥತೇ ಧರ್ಮಶ್ಚೈವ ಪ್ರವರ್ಧತೇ ॥ ೧೫

ಒಬ್ಬ ಧನಿಕಬ್ರಾಹ್ಮಣನು ಕೇಳಿಯೂ ಕೊಡದಿರಬಹುದು. ದಾನ ಹೀನನಾದ ಆ ಬ್ರಾಹ್ಮಣನ ಹಣವನ್ನು ಯಾಗಕ್ಕೆ ಬಲಾತ್ಕರಿಸಿದರೆ ಕೀರ್ತಿ ಯಿದೆ, ಪುಣ್ಯವಿದೆ.

ತಥೈವ ಸಪ್ತಮೇ ಭಕ್ತೇ ಭಕ್ತಾನಿ ಷಡನಶ್ನತಾ ।
ಅಶ್ವಸ್ತನವಿಧಾನೇನ ಹರ್ತವ್ಯಂ ಹೀನಕರ್ಮಣಃ ॥ ೧೬

ಮನುಷ್ಯನಿಗೆ ಎರಡು ಆಹಾರವು ದಿನವೊಂದಕ್ಕೆ ನ್ಯಾಯವಾದುದು. ಮೂರು ದಿನ ಉಣ್ಣಲು ಇಲ್ಲದೆ ಉಪವಾಸವಿದ್ದು ನಾಲ್ಕನೆ ದಿನಕ್ಕೂ ಉಪಾಯವಿಲ್ಲದಿದ್ದರೆ ದಾನ-ಧರ್ಮಶೂನ್ಯ ಧನಿಕನ ಧನವನ್ನು ಒಂದು ದಿನದ ಜೀವನಕ್ಕೆ ಬೇಕಾದಷ್ಟು ಕದ್ದರೂ ತಪ್ಪಿಲ್ಲ.

ಖಲಾತ್ಕ್ಷೇತ್ರಾದಗಾರಾದ್ವಾ ಯತೋ ವಾಪ್ಯುಪಲಭ್ಯತೇ ।
ಆಖ್ಯಾತವ್ಯಂ ತು ತತ್ತಸ್ಮೈ ಪೃಚ್ಛತೇ ಯದಿ ಪೃಚ್ಛತಿ ॥ ೧೭

ಆಗ ಅಂಗಳದಿಂದ, ಹೊಲದಿಂದ, ಮನೆಯಿಂದ, ಸಿಕ್ಕಿದಲ್ಲಿಂದ ಸಿಕ್ಕಿದ್ದನ್ನು ತರಬಹುದು. ಅವನು ಕೇಳಿದರೆ ಅವನಿಗೆ ತಾನು ತಂದುದರ ಕಾರಣವನ್ನು ತಿಳಿಸಬೇಕು.

ಬ್ರಾಹ್ಮಣಸ್ವಂ ನ ಹರ್ತವ್ಯಂ ಕ್ಷತ್ರಿಯೇಣ ಕದಾಚನ ।
ದಸ್ಯುನಿಷ್ಕ್ರಿಯಯೋಸ್ತು ಸ್ವಮಜೀವನ್ ಹರ್ತುಮರ್ಹತಿ ॥ ೧೮

ಕ್ಷತ್ರಿಯನು ಬ್ರಾಹ್ಮಣನ ದ್ರವ್ಯವನ್ನು ತಕ್ಕೊಳ್ಳಬಾರದು. ನಿಷಿದ್ಧ ಕರ್ಮಕಾರಿ ಬ್ರಾಹ್ಮಣ, ವಿಹಿತಪರಿತ್ಯಾಗಿ ಕ್ಷತ್ರಿಯ ಇವರ ಧನವನ್ನು ಆಪತ್ತಿನಲ್ಲಿ ಕ್ಷತ್ರಿಯನು ತಕ್ಕೊಳ್ಳಬಹುದು.

ಯೋಽಸಾಧುಭ್ಯೋಽರ್ಥಮಾದಾಯ ಸಾಧುಭ್ಯಃ ಸಂಪ್ರಯಚ್ಛತಿ ।
ಸ ಕೃತ್ವಾ ಪ್ಲವಮಾತ್ಮಾನಂ ಸಂತಾರಯತಿ ತಾವುಭೌ ॥ ೧೯

ಮೇಲೆ ಹೇಳಿದ ರೀತಿಯಲ್ಲಿ ಅಸಾಧುಜನರ ದ್ರವ್ಯವನ್ನು ಸಾಧುಗಳಿಗೆ ಕೊಡುವ ಈ ವಿಧಾನದಿಂದ ಅವರ ಪಾಪ ನಿವಾರಣೆಯ ಮೂಲಕ ಪುಣ್ಯ ಕಾರಣನಾಗುವನು.

ಯದ್ಧನಂ ಯಜ್ಞಶೀಲಾನಾಂ ದೇವಸ್ವಂ ತದ್ವಿದುರ್ಬುಧಾಃ ।
ಅಯಜ್ವನಾಂ ತು ಯದ್ವಿತ್ತಂ ಆಸುರಸ್ವಂ ತದುಚ್ಯತೇ ॥ ೨೦

ಯಾಗಶೀಲರ ಸೊತ್ತು ದೇವಸ್ವವು. ಯಾಗಹೀನರ ಸೊತ್ತು ಅಸುರಸ್ವವು. ಅಸುರಸ್ವವನ್ನು ದೇವಸ್ವ ಮಾಡುವುದು ಸತ್ಕಾರ್ಯ.

ನ ತಸ್ಮಿನ್ ಧಾರಯೇದ್ದಂಡಂ ಧಾರ್ಮಿಕಃ ಪೃಥಿವೀಪತಿಃ ।
ಕ್ಷತ್ರಿಯಸ್ಯ ಹಿ ಬಾಲಿಶ್ಯಾತ್ ಬ್ರಾಹ್ಮಣಃ ಸೀದತಿ ಕ್ಷುಧಾ ॥ ೨೧

ಬ್ರಾಹ್ಮಣನು ಹಸಿದಿರುವುದು ಕ್ಷತ್ರಿಯನ ಅಪಕ್ವಬುದ್ಧಿಯ ಬಾಲಭಾವದಿಂದ. ಆದುದರಿಂದ ಸಜ್ಜನನಿಗೆ ಪರಿಮಿತಧರ್ಮಸಮ್ಮತ ಜೀವನವನ್ನು ಒದಗಿಸಬೇಕು.

ತಸ್ಯ ಭೃತ್ಯಜನಂ ಜ್ಞಾತ್ವಾ ಸ್ವಕುಟುಂಬಾನ್ಮಹೀಪತಿಃ ।
ಶ್ರುತಶೀಲೇ ಚ ವಿಜ್ಞಾಯ ವೃತ್ತಿಂ ಧರ್ಮ್ಯಾಂ ಪ್ರಕಲ್ಪಯೇತ್ ॥ ೨೨

ಬ್ರಾಹ್ಮಣನ ವಿದ್ಯೆ, ಶೀಲ, ಸೇವಕರು ಇವರನ್ನು ನೋಡಿ ರಾಜನು ತನ್ನ ಭಂಡಾರದಿಂದ ಸಾಕಷ್ಟು ವೃತ್ತಿಯನ್ನು ಅವನಿಗೆ ಕೊಡಬೇಕು.

ಕಲ್ಪಯಿತ್ವಾಸ್ಯ ವೃತ್ತಿಂ ಚ ರಕ್ಷೇದೇನಂ ಸಮಂತತಃ ।
ರಾಜಾ ಹಿ ಧರ್ಮಷಡ್ಭಾಗಂ ತಸ್ಮಾತ್ಪ್ರಾಪ್ನೋತಿ ರಕ್ಷಿತಾತ್ ॥ ೨೩

ಬ್ರಾಹ್ಮಣನ ರಕ್ಷಣೆಯಿಂದ ಅವನು ಮಾಡುವ ತಪಸ್ಸಿನ ಆರನೆ ಒಂದು ಭಾಗವು ರಾಜದಾಯವಾಗುವುದು.

ನ ಯಜ್ಞಾರ್ಥಂ ಧನಂ ಶೂದ್ರಾದ್ವಿಪ್ರೋ ಭಿಕ್ಷೇತ ಕರ್ಹಿಚಿತ್ ।
ಯಜಮಾನೋ ಹಿ ಭಿಕ್ಷಿತ್ವಾ ಚಂಡಾಲಃ ಪ್ರೇತ್ಯ ಜಾಯತೇ ॥ ೨೪

ಯಾಗಕ್ಕಾಗಿ ಬ್ರಾಹ್ಮಣನು ಶೂದ್ರನಿಂದ ಬೇಡಬಾರದು. ಅದರಿಂದ ಜನ್ಮಾಂತರದಲ್ಲಿ ಅಂತ್ಯಜನಾಗುವನು.

ಯಜ್ಞಾರ್ಥಮರ್ಥಂ ಭಿಕ್ಷಿತ್ವಾ ಯೋ ನ ಸರ್ವಂ ಪ್ರಯಚ್ಛತಿ ।
ಸ ಯಾತಿ ಭಾಸತಾಂ ವಿಪ್ರಃ ಕಾಕತಾಂ ವಾ ಶತಂ ಸಮಾಃ ॥ ೨೫

ಯಜ್ಞಕ್ಕೆ ಯಾಚನ ಮಾಡಿದ ಧನವನ್ನು ಸಂಪೂರ್ಣ ವಿನಿಯೋಗಿಸದೆ ಉಳಿಸಿ ತಾನು ಉಪಯೋಗಿಸಿದರೆ ಭಾಸ–ಕಾಕಪಕ್ಷಿಗಳಾಗಿ ನೂರಾರು ವರ್ಷ ತೊಳಲುವನು.

ದೇವಸ್ವಂ ಬ್ರಾಹ್ಮಣಸ್ವಂ ವಾ ಲೋಭೇನೋಪಹಿನಸ್ತಿ ಯಃ ।
ಸ ಪಾಪಾತ್ಮಾ ಪರೇ ಲೋಕೇ ಗೃಧ್ರೋಚ್ಛಿಷ್ಟೇನ ಜೀವತಿ ॥ ೨೬

ದೇವಸ್ವಬ್ರಾಹ್ಮಣಸ್ವಗಳನ್ನು ತಿನ್ನುವವರು ಜನ್ಮಾಂತರದಲ್ಲಿ ಹದ್ದಿನ ಎಂಜಲು ತಿಂದು ಬದುಕುವಂತಾಗುವುದು.

ಇಷ್ಟಿಂ ವೈಶ್ವಾನರೀಂ ನಿತ್ಯಂ ನಿರ್ವಪೇದಬ್ದಪರ್ಯಯೇ ।
ಕ್ಲುಪ್ತಾನಾಂ ಪಶುಸೋಮಾನಾಂ ನಿಷ್ಕೃತ್ಯರ್ಥಮಸಂಭವೇ ॥ ೨೭

ಪಶುಸೋಮಯಾಗಗಳನ್ನು ಮಾಡಲು ಸಾಧ್ಯವಿಲ್ಲವಾದರೆ ವರ್ಷಾರಂಭದಲ್ಲಿ ವೈಶ್ವಾನರೀಇಷ್ಟಿಯನ್ನು ಮಾಡಬೇಕು.

ಆಪತ್ಕಲ್ಪೇನ ಯೋ ಧರ್ಮಂ ಕುರುತೇಽನಾಪದಿ ದ್ವಿಜಃ ।
ಸ ನಾಪ್ನೋತಿ ಫಲಂ ತಸ್ಯ ಪರತ್ರೇತಿ ವಿಚಾರಿತಂ ॥ ೨೮

ಆಪತ್ಕಲ್ಪದ ಆಪದ್ಧರ್ಮವನ್ನು ಕ್ಷೇಮದಲ್ಲಿರುವಾಗ ಆಚರಿಸದರೆ ಅದರ ಫಲವಿಲ್ಲ.

ವಿಶ್ವೈಶ್ಚ ದೇವೈಃ ಸಾಧ್ಯೈಶ್ಚ ಬ್ರಾಹ್ಮಣೈಶ್ಚ ಮಹರ್ಷಿಭಿಃ ।
ಆಪತ್ಸು ಮರಣಾದ್ಭೀತೈರ್ವಿಧೇಃ ಪ್ರತಿನಿಧಿಃ ಕೃತಃ ॥ ೨೯

ವಿಶ್ವೇದೇವರು ಸಾಧ್ಯರು, ಬ್ರಾಹ್ಮಣರು, ಮಹರ್ಷಿಗಳು ಆಲೋಚಿಸಿ ವೈಶ್ವಾನರೀಇಷ್ಟಿಯನ್ನು ಸೋಮಯಾಗಕ್ಕೆ ಪ್ರತಿನಿಧಿಯನ್ನಾಗಿ ಹೇಳಿದ್ದಾರೆ.

ಪ್ರಭುಃ ಪ್ರಥಮಕಲ್ಪಸ್ಯ ಯೋಽನುಕಲ್ಪೇನ ವರ್ತತೇ ।
ನ ಸಾಂಪರಾಯಿಕಂ ತಸ್ಯ ದುರ್ಮತೇರ್ವಿದ್ಯತೇ ಫಲಂ ॥ ೩೦

ಮುಖ್ಯವಿಧಿಗೆ ಅಧಿಕಾರಿಯಾದವನು ಅನುಕಲ್ಪವನ್ನು ಆಚರಿಸಿದರೆ ಫಲವಿಲ್ಲ.

ನ ಬ್ರಾಹ್ಮಣೋಽವೇದಯೇತ ಕಿಂಚಿದ್ರಾಜನಿ ಧರ್ಮವಿತ್ ।
ಸ್ವವೀರ್ಯೇಣೈವ ತಾನ್ ಶಿಷ್ಯಾನ್ಮಾನವಾನಪಕಾರಿಣಃ ॥ ೩೧

ಯಾರಾದರೂ ಉಪದ್ರವ ಮಾಡಿದರೆ ಬ್ರಾಹ್ಮಣನು ರಾಜನಿಗೆ ತಿಳಿಸದೆಯೂ ಇರಬಹುದು.

ಸ್ವವೀರ್ಯಾದ್ರಾಜವೀರ್ಯಾಚ್ಚ ಸ್ವವೀರ್ಯಂ ಬಲವತ್ತರಂ ।
ತಸ್ಮಾತ್ಸ್ವೇನೈವ ವೀರ್ಯೇಣ ನಿಗೃಹ್ಣೀಯಾದರೀನ್ ದ್ವಿಜಃ ॥ ೩೨

ಕ್ಷತ್ರಬಲಕ್ಕಿಂತ ಬ್ರಹ್ಮಬಲವೇ ಪ್ರಬಲ. ಅದರಿಂದಲೇ ಶತ್ರುನಿಗ್ರಹ ವನ್ನು ಮಾಡಬಹುದು ಸಹಿಸಿ ( ಉಪದ್ರವನ್ನು ) ಶಾಂತನಾಗಿದ್ದರೆ ಅಪ ಕಾರಿಯು ತನ್ನ ಅಪರಾಧವನ್ನು ತಿಳಿವಾಸು ಮನಸ್ಸು ಅಶಾಂತವಾದರೆ ಅವನ ವಿವೇಕಕ್ಕಾಗಿ ಅಭಿಚಾರದ ಕಡೆ ಮನಸ್ಸು ಹರಿಸಿ ಬೇರೆ ಪ್ರತಿಕ್ರಿಯೆ ಮಾಡದಿರಬೇಕು. ಹೋಮಕ್ಕೆ ಮನಸ್ಸು ಹೋದರೆ ದೇವತಾಸ್ಮರಣದಿಂದ ಕಾಲಯಾಪನೆಯಾಗಿ ಕೋಪವೇಗವು ಉಪಾಯದಿಂದ ತಣಿಯುವುದು. ಪರಾ ಧೀನವಾದುದು ಕಷ್ಟಮಯ.

ಶ್ರುತೀರಥರ್ವಾಂಗಿರಸೀಃ ಕುರ್ಯಾದಿತ್ಯವಿಚಾರಯನ್ ।
ವಾಕ್ ಶಸ್ತ್ರಂ ವೈ ಬ್ರಾಹ್ಮಣಸ್ಯ ತೇನ ಹನ್ಯಾದರೀನ್ ದ್ವಿಜಃ॥ ೩೩

ರಾಜನಲ್ಲಿ ಅಪರಾಧವನ್ನು ಪ್ರತಿಪಾದಿಸುವುದು ಸುಲಭವಲ್ಲ. ಶಸ್ತ್ರದ ಕೆಲಸವನ್ನು ಮಾರ್ಮಿಕವಾಗಿ ಅಧರ್ವವೇದದ ಮಂತ್ರಗಳು ಮಾಡುತ್ತವೆ. ಮಂತ್ರ, ಜಪ, ಹೋಮಗಳು ಅಭಿಚಾರರೂಪದಿಂದ ಅಪರಾಧಿ ಶತ್ರುವಿಗೆ ವಿವೇಕ, ಯೋಗ್ಯವಾದ ಪೀಡೆ, ಪ್ರತಿಕ್ರಿಯೆಯನ್ನು ಉಚಿತ ರೀತಿಯಿಂದ ಮಾಡುವುವು. ತಾನು ಶಸ್ತ್ರ ಎತ್ತುವುದು ನ್ಯಾಯವಲ್ಲ. ಸಾಕ್ಷಾತ್ ಹಿಂಸೆ ಯಿಲ್ಲದೆ ಕಾರ್ಯಸಾಧನೆಗೆ ಮಾರ್ಗವಿರುವಾಗ ಅದನ್ನು ಯಾಕೆ ಬಿಡಬೇಕು. ಹಿಂಸಾಬುದ್ಧಿಯು ಉದಿಸಬಾರದು. ಸರಿ. ನಿಷ್ಕಾರಣವಾಗಿ ಅಥವಾ ಸ್ವಲಾಭಕ್ಕೆ ಪೀಡಾನಿವೃತ್ತಿಗೆ ತಕ್ಕ ಪ್ರತಿಕ್ರಿಯೆಯು ರಾಗದ್ವೇಷ— ಇಂದ್ರಿಯ ಅಪಜಯ ಎಂಬ ಮಟ್ಟಕ್ಕೆ ಬರುವುದಿಲ್ಲ ಚುಚ್ಚಿದ ಮುಳ್ಳನ್ನು ಮುಳ್ಳಿನಿಂದ ಚುಚ್ಚಿಯೇ ತೆಗೆಯುವುದು. ಸುಮ್ಮಗೆ ಮೈಗೆ ಮುಳ್ಳನ್ನು ಚುಚ್ಚಿಕೊಳ್ಳುವು ದಲ್ಲ. ಅನ್ಯಾಯವಾದ ಅಭಿಚಾರವೂ ಫಲಿಸಲಾರದು. ಆಗ ಮನಸ್ಸು ದಣಿದು ತನಗೂ ವಿವೇಕವು ಬರುವುದು. ಆದುದರಿಂದ ಖಡ್ಗಾಘಾತಕ್ಕಿಂತ ಅಭಿಚಾರವು ಇಬ್ಬರಿಗೂ ತುಂಬಾ ಲಾಭಕರ. ಧರ್ಮಸಮ್ಮತವಾಗಿ ಅಭಿಚಾರ ಪ್ರಯೋಗ ಮಾಡಿದರೆ ಅದು ಅಬಾಧ್ಯವಾದ ಬಾಧನೆಯು. ತಪೋವೀರ್ಯ ಬಲವುಳ್ಳದ್ದು.

ಕ್ಷತ್ರಿಯೋ ಬಾಹುವೀರ್ಯೇಣ ತರೇದಾಪದಮಾತ್ಮನಃ ।
ಧನೇನ ವೈಶ್ಯಶೂದ್ರೌ ತು ಜಪಹೋಮೈರ್ದ್ವಿಜೋತ್ತಮಃ ॥ ೩೪

ಮೇಲೆ ಹೇಳಿದಂತೆ ಬ್ರಾಹ್ಮಣನು ಶತ್ರುನಿವಾರಣೆಯನ್ನು ಮಾಡಿಕೊಳ್ಳ ಬೇಕು. ಕ್ಷತ್ರಿಯನು ಕ್ರೂರವಾಗಿ ಬಾಹುಬಲದಿಂದ ವೈಶ್ಯ, ಶೂದ್ರರಿಗೆ ಹಣ ಕೊಟ್ಟು ಸಂತೋಷಪಡಿಸಿ ಕಾರ್ಯವನ್ನು ಸಾಧಿಸಬೇಕು

ವಿಧಾತಾ ಶಾಸಿತಾ ವಕ್ತಾ ಮೈತ್ರೋ ಬ್ರಾಹ್ಮಣ ಉಚ್ಯತೇ ।
ತಸ್ಮೈ ನಾಕುಶಲಂ ಬ್ರೂಯಾನ್ನ ಶುಷ್ಕಾಂ ಗಿರಮೀರಯೇತ್ ॥ ೩೫

ಬ್ರಾಹ್ಮಣನು ಎಲ್ಲರಿಗೂ ಮಿತ್ರನು. ಅವನ ಕಾರ್ಯ ಮನಸ್ಸು ಸ್ವಯಂ ಮೈತ್ರೀರೂಪವಾದುದು. ಇತರರಿಗೂ ಅದು ಸಹಜ. ಅವನ ಕೆಲಸ ಅವನಿಗೆ ವೇದಶಾಸ್ತ್ರ, ಪ್ರವಚನ, ಹಿತನೀತಿಬೋಧನ. ಧರ್ಮಾಧರ್ಮ ಪ್ರಾಯಶ್ಚಿತ್ತ ಸಂವೇದನ ಅವನ ಮೆಚ್ಚು. ಆದುದರಿಂದ ಅವನೊಡನೆ ಯಾರೂ ಅಕುಶಲವಾಗಿ ವರ್ತಿಸಬಾರದು.

ನ ವೈ ಕನ್ಯಾ ನ ಯುವತಿರ್ನಾಲ್ಪವಿದ್ಯೋ ನ ಬಾಲಿಶಃ ।
ಹೋತಾ ಸ್ಯಾದಗ್ನಿಹೋತ್ರಸ್ಯ ನಾರ್ತೋ ನಾಸಂಸ್ಕೃತಸ್ತಥಾ ॥ ೩೬

ಅಗ್ನಿಹೋತ್ರವನ್ನು ಆಪತ್ಕಾಲದಲ್ಲಿ ಇತರರು ಮಾಡಬಹುದಾದರೂ ಹೆರಿಗೆ ಆಗದ ಹೆಂಗಸು, ಅಲ್ಪವಿದ್ಯ, ರೋಗಿ, ಅನುಪನೀತ, ಮಕ್ಕಳು ಇವರು ಮಾಡಬಾರದು ಶ್ರೌತಕರ್ಮನಿಪುಣ ವೇದಾಧ್ಯಾಯಿಯು ಮಾಡಬೇಕು. ಅದನ್ನೇ ಹೇಳುತ್ತಾರೆ —

ನರಕೇ ಹಿ ಪತಂತ್ಯೇತೇ ಜುಹ್ವಂತಃ ಸ ಚ ಯಸ್ಯ ತತ್ ।
ತಸ್ಮಾದ್ವೈತಾನಕುಶಲೋ ಹೋತಾ ಸ್ಯಾದ್ವೇದಪಾರಗಃ ॥ ೩೭

ಅನಧಿಕಾರಿಗಳು ಹೋಮಮಾಡಿದರೆ ಎಲ್ಲರಿಗೂ ಪಾಪವಿದೆ.

ಪ್ರಾಜಾಪತ್ಯಮದತ್ತ್ವಾಶ್ವಮಗ್ನ್ಯಾಧೇಯಸ್ಯ ದಕ್ಷಿಣಾಂ ।
ಅನಾಹಿತಾಗ್ನಿರ್ಭವತಿ ಬ್ರಾಹ್ಮಣೋ ವಿಭವೇ ಸತಿ ॥ ೩೮

ಧನಿಕನು ಅಗ್ನ್ಯಾಧಾನದಲ್ಲಿ ಅಶ್ವದಕ್ಷಿಣೆಯನ್ನು ಕೊಡದಿದ್ದರೆ ಫಲ ವಿಲ್ಲ.

ಪುಣ್ಯಾನ್ಯನ್ಯಾನಿ ಕುರ್ವೀತ ಶ್ರದ್ಧಧಾನೋ ಜಿತೇಂದ್ರಿಯಃ ।
ನ ತ್ವಲ್ಪದಕ್ಷಿಣೈರ್ಯಜ್ಞೈರ್ಯಜೇತೇಹ ಕಥಂಚನ ॥ ೩೯

ದರಿದ್ರನಾದರೆ ಅಲ್ಪದಕ್ಷಿಣೆಯ ಯಾಗದ ಗೋಜಿಗೆ ಹೋಗದೆ ಶ್ರದ್ಧೆಯಿಂದ ತೀರ್ಥಯಾತ್ರಾದಿ ಪುಣ್ಯಕಾರ್ಯಗಳನ್ನು ಮಾಡಬೇಕು.

ಇಂದ್ರಿಯಾಣಿ ಯಶಃ ಸ್ವರ್ಗಮಾಯುಃ ಕೀರ್ತಿಂ ಪ್ರಜಾಃ ಪಶೂನ್ ।
ಹಂತ್ಯಲ್ಪದಕ್ಷಿಣೋ ಯಜ್ಞಸ್ತಸ್ಮಾನ್ನಾಲ್ಪಧನೋ ಭವೇತ್ ॥ ೪೦

ದಕ್ಷಿಣಾದರಿದ್ರಯಾಗದಿಂದ ಇಂದ್ರಿಯ, ಯಶಸ್ಸು, ಸ್ವರ್ಗ, ಆಯುಸ್ಸು, ಕೀರ್ತಿ, ಪ್ರಜಾ, ಪಶು ಇವುಗಳ ವೃದ್ಧಿಯಿಲ್ಲ

ಅಗ್ನಿಹೋತ್ರ್ಯಪವಿಧ್ಯಾಗ್ನೀನ್ ಬ್ರಾಹ್ಮಣಃ ಕಾಮಕಾರತಃ ।
ಚಾಂದ್ರಾಯಣಂ ಚರೇನ್ಮಾಸಂ ವೀರಹತ್ಯಾಸಮಂ ಹಿ ತತ್ ॥ ೪೧

ಅಗ್ನಿಹೋತ್ರವನ್ನು ಆರಂಭಿಸಿದ ಮೇಲೆ ಉಪೇಕ್ಷೆಯಿಂದ ಅದನ್ನು ಲೋಪಪಡಿಸಿದುದಕ್ಕೆ ಚಾಂದ್ರಾಯಣವನ್ನು ಪ್ರಾಯಶ್ಚಿತ್ತವೆನ್ನುವರು.

ಯೇ ಶೂದ್ರಾದಧಿಗಮ್ಯಾರ್ಥಮಗ್ನಿಹೋತ್ರಮುಪಾಸತೇ ।
ಋತ್ವಿಜಸ್ತೇ ಹಿ ಶೂದ್ರಾಣಾಂ ಬ್ರಹ್ಮವಾದಿಷು ಗರ್ಹಿತಾಃ ॥ ೪೨

ಶೂದ್ರನಿಂದ ಧನಯಾಚನ ಮಾಡಿ ಅಗ್ನಿಹೋತ್ರ ಮಾಡಿದರೂ ಫಲವಿಲ್ಲ. ಅದರಿಂದ ಧನಸ್ವಾಮಿಗೆ ಫಲಲಾಭವಾಗುವುದು.

ತೇಷಾಂ ಸತತಮಜ್ಞಾನಾಂ ವೃಷಲಾಗ್ನ್ಯುಪಸೇವಿನಾಂ ।
ಪದಾ ಮಸ್ತಕಮಾಕ್ರಮ್ಯ ದಾತಾ ದುರ್ಗಾಣಿ ಸಂತರೇತ್ ॥ ೪೩

ಅಂತಹ ಬುದ್ಧಿಹೀನರ ಯಜ್ಞವು ವೃಷಲನನ್ನು ಉದ್ಧರಿಸುವುದು.

ಅಕುರ್ವನ್ ವಿಹಿತಂ ಕರ್ಮ ನಿಂದಿತಂ ಚ ಸಮಾಚರನ್ ।
ಪ್ರಸಕ್ತಶ್ಚೇಂದ್ರಿಯಾರ್ಥೇಷು ಪ್ರಾಯಶ್ಚಿತ್ತೀಯತೇ ನರಃ ॥ ೪೪

ವಿಹಿತಕರ್ಮ ಪರಿತ್ಯಾಗ, ನಿಂದಿತಾಚಾರ, ಇಂದ್ರಿಯ ಪಾರವಶ್ಯ ಇವುಗಳಿಂದ ಮನುಷ್ಯನು ಪ್ರಾಯಶ್ಚಿತ್ತ ಶೋಧ್ಯನಾಗುವನು.

ಅಕಾಮತಃ ಕೃತೇ ಪಾಪೇ ಪ್ರಾಯಶ್ಚಿತ್ತಂ ವಿದುರ್ಬುಧಾಃ |
ಕಾಮಕಾರಕೃತೇಽಪ್ಯಾಹುರೇಕೇ ಶ್ರುತಿನಿದರ್ಶನಾತ್ || ೪೫

ತಿಳಿಯದೆ ಮಾಡಿದ ಅಪರಾಧಕ್ಕೆ ಮಾತ್ರ ಪ್ರಾಯಶ್ಚಿತ್ತವೆಂದು ಕೆಲವರ ಮತ. ವೇದನಿದರ್ಶನದಿಂದ ಉದ್ದೇಶಪೂರ್ವಕ ಅಪರಾಧಕ್ಕೂ ಪರಿಹಾರ ವಿದೆಯೆಂದು ತಿಳಿಯಬೇಕು.

ಅಕಾಮತಃ ಕೃತಂ ಪಾಪಂ ವೇದಾಭ್ಯಾಸೇನ ಶುಧ್ಯತಿ |
ಕಾಮತಸ್ತು ಕೃತಂ ಮೋಹಾತ್ ಪ್ರಾಯಶ್ಚಿತ್ತೈಃ ಪೃಥಗ್ವಿಧೈಃ || ೪೬

ತಿಳಿಯದೆ ಸಂಭವಿಸಿದ ಪಾಪಕಾರ್ಯಕ್ಕೆ ವೇದಾಭ್ಯಾಸದಿಂದ ಶುದ್ಧಿಯು. ಕಾಮಕೃತಕ್ಕೆ ಉಕ್ತ ವಿವಿಧ ಪ್ರಾಯಶ್ಚಿತ್ತಗಳೇ ಪರಿಹಾರಗಳು.

ಪ್ರಾಯಶ್ಚಿತ್ತೀಯತಾಂ ಪ್ರಾಪ್ಯ ದೈವಾತ್ಪೂರ್ವಕೃತೇನ ವಾ |
ನ ಸಂಸರ್ಗಂ ವ್ರಜೇತ್ಸದ್ಭಿಃ ಪ್ರಾಯಶ್ಚಿತ್ತೇಽಕೃತೇ ದ್ವಿಜಃ || ೪೭

ಪ್ರಾಯಶ್ಚಿತ್ತಾರ್ಹನು ಅನ್ಯಸಂಪರ್ಕವನ್ನು ಮಾಡಬಾರದು.

ಇಹ ದುಶ್ಚರಿತೈಃ ಕೇಚಿತ್ಕೇಚಿತ್ಪೂರ್ವಕೃತೈಸ್ತಥಾ |
ಪ್ರಾಪ್ನುವಂತಿ ದುರಾತ್ಮಾನೋ ನರಾ ರೂಪವಿಪರ್ಯಯಂ || ೪೮

ರೂಪನಾಶಾದಿ ವಿಕಾರವು ಈ ಜನ್ಮದ ಮತ್ತು ಪರಜನ್ಮದ ಪಾಪಗಳಿಂದ ಸಂಭವಿಸುವುದು.

ಸುವರ್ಣ ಚೌರಃ ಕೌನಖ್ಯಂ ಸುರಾಪಃ ಶ್ಯಾವದಂತತಾಂ |
ಬ್ರಹ್ಮಹಾ ಕ್ಷಯರೋಗಿತ್ವಂ ದೌಶ್ಚರ್ಮ್ಯಂ ಗುರುತಲ್ಪಗಃ || ೪೯

ಚಿನ್ನಕದ್ದರೆ ಉಗುರಿನ ರೋಗ, ಮದ್ಯಪಾನದಿಂದ ಮಸುಕು ಹಲ್ಲು. ಬ್ರಹ್ಮಹತ್ಯೆಯಿಂದ ಕ್ಷಯರೋಗ. ಹಿರಿಯ ಪೂಜ್ಯಸ್ತ್ರೀಸಂಗದಿಂದ ಕೊಳಕು ಚರ್ಮ ಉಂಟಾಗುವುದು.

ಪಿಶುನಃ ಪೌತಿನಾಸಿಕ್ಯಂ ಸೂಚಕಃ ಪೂತಿವಕ್ತ್ರತಾಂ |
ಧಾನ್ಯಚೌರೋಽಂಗಹೀನತ್ವಮಾತಿರೇಕ್ಯಂ ತು ಮಿಶ್ರಕಃ || ೫೦

ತರಳೆಕೋರನಿಗೆ ಕೊಳೆಕು ಮೂಗು, ದೋಷಾರೋಪದಿಂದ ಕೊಳೆಕು ಬಾಯಿ, ಕಾಳು ಕದ್ದರೆ ಅಂಗಹೀನತೆ, ವಾಣಿಜ್ಯ ದ್ರವ್ಯಗಳ ಕಲಬೆರಕೆ ಮಾಡಿದರೆ ಅಧಿಕಾಂಗ ಉಂಟಾಗುವುದು.

ಅನ್ನಹರ್ತಾಮಯಾವಿತ್ವಂ ಮೌಕ್ಯಂ ವಾಗಪಹಾರಕಃ ।
ವಸ್ತ್ರಾಪಹಾರಕಃ ಶ್ವೈತ್ರ್ಯಂ ಪಂಗುತಾಮಶ್ವಹಾರಕಃ ॥ ೫೧

ಸಿದ್ಧಾನ್ನ ಚೋರನು ರೋಗಿಯು, ಅಕ್ರಮವಿದ್ಯಾ ಸ್ವೀಕಾರದಿಂದ ಮೂಕನು, ಬಟ್ಟೆ ಕಳ್ಳನು ಶ್ವಿತ್ರಿಯು, ಕುದುರೆ ಕಳ್ಳನು ಕುಂಟನು.

ಏವಂ ಕರ್ಮವಿಶೇಷೇಣ ಜಾಯಂತೇ ಸದ್ವಿಗರ್ಹಿತಾಃ ।
ಜಡಮೂಕಾಂಧಬಧಿರಾ ವಿಕೃತಾಕೃತಯಸ್ತಥಾ ॥ ೫೨

ಇಂತಹ ರೀತಿಯಲ್ಲಿ ಕರ್ಮದೋಷವು ಬಾಧಿಸಿ ಜಡ ಮೂಕ ಅಂಧ ಬಧಿರ ವಿಕೃತಿಗಳನ್ನು ಮಾಡುವುದು.

ಚರಿತವ್ಯಮತೋ ನಿತ್ಯಂ ಪ್ರಾಯಶ್ಚಿತ್ತಂ ವಿಶುದ್ಧಯೇ ।
ನಿಂದ್ಯೈರ್ಹಿ ಲಕ್ಷಣೈರ್ಯುಕ್ತಾ ಜಾಯಂತೇಽನಿಷ್ಕೃತೈನಸಃ ॥ ೫೩

ಪ್ರಾಯಶ್ಚಿತ್ತದಿಂದ ಪಾಪಪರಿಹಾರವನ್ನು ಮಾಡಿಕೊಳ್ಳದೇ ಹೋದರೆ ಹಿಂದೆ ಹೇಳಿದ ದುರವಸ್ಥೆಯು ಉಂಟಾಗುವುದು. ಪ್ರಾಯಶ್ಚಿತ್ತ ಮಾಡಿದರೆ ದೋಷವಿಲ್ಲ.

ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಮಹಾಂತಿ ಪಾತಕಾನ್ಯಾಹುಃ ಸಂಸರ್ಗಶ್ಚಾಪಿ ತೈಃ ಸಹ ॥ ೫೪

ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುತಲ್ಪಗಮನ ಈ ಪಾಪಿಗಳ ಸಂಸರ್ಗವು ಕೂಡ ಮಹಾಪಾಪವು.

ಅನೃತಂ ಚ ಸಮುತ್ಕರ್ಷೇ ರಾಜಗಾಮಿ ಚ ಪೈಶುನಂ ।
ಗುರೋಶ್ಚಾಲೀಕನಿರ್ಬಂಧಃ ಸಮಾನಿ ಬ್ರಹ್ಮಹತ್ಯಯಾ ॥ ೫೫

ಉತ್ಕರ್ಷಕ್ಕಾಗಿ ಜಾತಿಯನ್ನು ಸುಳ್ಳಾಡುವುದು, ವೃಥಾಪವಾದವಾಗಿ

ನ್ಯಾಯಪತಿಯಲ್ಲಿ ವಾದಿಸಿ ಪರರಿಗೆ ಮರಣದಂಡನೆಯಾಗುವಂತೆ ಮಾಡುವುದು ಗುರುವಿನ ಮಿಥ್ಯಾಪವಾದ ಇವು ಬ್ರಹ್ಮಹತ್ಯಾಸಮಾನಗಳು.

ಬ್ರಹ್ಮೋಜ್ಝತಾ ವೇದನಿಂದಾ ಕೌಟಸಾಕ್ಷ್ಯಂ ಸುಹೃದ್ವಧಃ ।
ಗರ್ಹಿತಾನಾದ್ಯಯೋರ್ಜಗ್ಧಿಃ ಸುರಾಪಾನಸಮಾನಿ ಷಟ್ ॥ ೫೬

ವೇದವಿಸ್ಮರಣೆ, ವೇದನಿಂದೆ, ಸುಳ್ಳುಸಾಕ್ಷಿ, ಮಿತ್ರವಧ, ಅಭಕ್ಷ್ಯ ಭಕ್ಷಣಗಳು ಸುರಾಪಾನ ಸಮಗಳು.

ನಿಕ್ಷೇಪಸ್ಯಾಪಹರಣಂ ನರಾಶ್ವರಜತಸ್ಯ ಚ ।
ಭೂಮಿವಜ್ರಮಣೀನಾಂ ಚ ರುಕ್ಮಸ್ತೇಯಸಮಂ ಸ್ಮೃತಂ ॥ ೫೭

ನಿಕ್ಷೇಪಾಪಹಾರ, ಮನುಷ್ಯ, ವಜ್ರ, ಕುದುರೆ, ಬೆಳ್ಳಿ, ಭೂಮಿ, ಮಣಿ ಇವುಗಳ ಅಪಹಾರವು ಸುವರ್ಣಸ್ತೇಯ ಸಮವು.

ರೇತಃಸೇಕಃ ಸ್ವಯೋನೀಷು ಕುಮಾರೀಷ್ವಂತ್ಯಜಾಸು ಚ ।
ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಗುರುತಲ್ಪಸಮಂ ವಿದುಃ ॥ ೫೮

ಸೋದರಿ, ಇತರ ಕುಮಾರಿ, ಅಂತ್ಯಜಸ್ತ್ರೀ, ಮಿತ್ರಸ್ತ್ರೀ, ಪುತ್ರಸ್ತ್ರೀ ಇವರ ಅಂಗಸಂಗವು ಗುರುತಲ್ಪಗಮನ ಸಮಾನವು. ಮಂತ್ರಿಯು ರಾಜ ಸಮಾನನು ಎಂದರೆ ಮಂತ್ರಿಯು ರಾಜನಾಗುವುದಿಲ್ಲ. ಅದರಂತೆ ನ್ಯೂನ ಪಾಪವು ಸಮವೆನ್ನಲ್ಪಟ್ಟಿದೆ ಪ್ರಾಯಶ್ಚಿತ್ತವು ಸ್ವಲ್ಪ ಲಘು. ಇನ್ನು ಉಪಪಾತಕಗಳನ್ನು ಹೇಳುತ್ತಾರೆ—

ಗೋವಧೋಽಯಾಜ್ಯಸಂಯಾಜ್ಯಪಾರದಾರ್ಯಾತ್ಮವಿಕ್ರಯಾಃ ।
ಗುರುಮಾತೃಪಿತೃತ್ಯಾಗಃ ಸ್ವಾಧ್ಯಾಯಾಗ್ನ್ಯೋಃ ಸುತಸ್ಯ ಚ ॥ ೫೯

ಗೋವಧ, ಅನಧಿಕಾರಿಯಾಜನ, ಪರಸ್ತ್ರೀಗಮನ, ಆತ್ಮವಿಕ್ರಯ, ಗುರು ಮಾತೃಪಿತೃಪರಿತ್ಯಾಗ, ಬ್ರಹ್ಮಯಜ್ಞಾಕರಣ, ಸ್ಮಾರ್ತಾಗ್ನಿತ್ಯಾಗ, ಮಕ್ಕಳ ಸಂಸ್ಕಾರ ಪೋಷಣ ಪರಿತ್ಯಾಗ ಇವುಗಳು.

ಪರಿವಿತ್ತಿತಾನುಜೇಽನೂಢೇ ಪರಿವೇದನಮೇವ ಚ ।
ತಯೋರ್ದಾನಂ ಚ ಕನ್ಯಾಯಾಸ್ತಯೋರೇವ ಚ ಯಾಜನಮ್ ॥ ೬೦

ಅಣ್ಣನಿಗೆ ಮದುವೆಯಾಗದೆ ತಮ್ಮ ಮದುವೆಯಾಗುವುದು, ಆಗ ಅಣ್ಣನ ಪರಿವಿತ್ತಿತ್ವ ತಮ್ಮನ ಪರಿವೇದನ, ಅವರಿಗೆ ಕನ್ಯಾದಾನ, ಅವರ ಯಾಜನ ಇವುಗಳು.

ಕನ್ಯಾಯಾ ದೂಷಣಂ ಚೈವ ವಾರ್ಧುಷ್ಯಂ ವ್ರತಲೋಪನಂ ।
ತಡಾಗಾರಾಮದಾರಾಣಾಮಪತ್ಯಸ್ಯ ಚ ವಿಕ್ರಯಃ ॥ ೬೧

ಕನ್ಯಾಸ್ಪರ್ಶದೂಷಣ, ಬಡ್ಡಿ ಹಣದಿಂದ ಜೀವಿಸುವುದು, ವ್ರತಲೋಪ ಕೆರೆ, ತೋಟ, ಹೆಂಡತಿ, ಮಕ್ಕಳು ಇವರ ಮಾರಾಟ ಇವು.

ವ್ರಾತ್ಯತಾ ಬಾಂಧವತ್ಯಾಗೋ ಭೃತ್ಯಾಧ್ಯಾಪನಮೇವ ಚ ।
ಭೃತ್ಯಾ ಚಾಧ್ಯಯನಾದಾನಮಪಣ್ಯಾನಾಂ ಚ ವಿಕ್ರಯಃ ॥ ೬೨

ಅಕಾಲೋಪನಯನ, ಬಂಧುಗಳಿಗೆ ಅಚಿತಕರಣ, ಲೆಖ್ಖದ ಸಂಬಳಕ್ಕೆ ಕಲಿಸುವುದು, ಮತ್ತು ಕಲಿಯುವುದು, ಅವಿಕ್ರೇಯ ವಿಕ್ರಯ ಇವು.

ಸರ್ವಾಕರೇಷ್ವಧೀಕಾರೋ ಮಹಾಯಂತ್ರಪ್ರವರ್ತನಂ ।
ಹಿಂಸೌಷಧೀನಾಂ ಸ್ತ್ರ್ಯಾಜೀವೋಽಭಿಚಾರೋ ಮೂಲಕರ್ಮ ಚ ॥ ೬೩

ಖನಿಯ ಅಧಿಕಾರ, ದೊಡ್ಡ ಯಂತ್ರರಚನ, ವನಸ್ಪತಿನಾಶ, ಹೆಂಡತಿಯ ಅಥವಾ ಇತರರ ಜಾರತನದಿಂದ ಬದುಕುವುದು, ನಿಷ್ಕಾರಣಾಭಿಚಾರ, ವಶೀಕರಣ ಇವು.

ಇಂಧನಾರ್ಥಮಶುಷ್ಕಾಣಾಂ ದ್ರುಮಾಣಾಮವಪಾತನಂ ।
ಆತ್ಮಾರ್ಥಂ ಚ ಕ್ರಿಯಾರಂಭೋ ನಿಂದಿತಾನ್ನಾದನಂ ತಥಾ ॥ ೬೪

ಜೀವ ಇದ್ದ ಮರವನ್ನು ಯಜ್ಞೇತರೋಪಯೋಗಕ್ಕೆ ಕಡಿಯುವುದು ಹಸಿವಿಗಾಗಿ ಅಡಿಗೆ, ದುಷ್ಟಾನ್ನ ಭೋಜನ ಇವು.

ಅನಾಹಿತಾಗ್ನಿತಾ ಸ್ತೇಯಮೃಣಾನಾಮನಪಕ್ರಿಯಾ ।
ಅಸಚ್ಛಾಸ್ತ್ರಾಧಿಗಮನಂ ಕೌಶೀಲವ್ಯಸ್ಯ ಚ ಕ್ರಿಯಾ ॥ ೬೫

ಅಗ್ನ್ಯಾಧಾನವರ್ಜನ, ಕಳ್ಳತನ, ಋಣಾದಾನ, ಲಲಿತಕಲಾಭ್ಯಾಸ.

ಧಾನ್ಯಕುಪ್ಯಪಶುಸ್ತೇಯಂ ಮದ್ಯಪಸ್ತ್ರೀನಿಷೇವಣಂ ।
ಸ್ತ್ರೀಶೂದ್ರವಿಟ್‌ಕ್ಷತ್ರವಧೋ ನಾಸ್ತಿಕ್ಯಂ ಚೋಪಪಾತಕಂ ॥ ೬೬

ಮದ್ಯಪಾನ ಮಾಡಿದ ಸ್ತ್ರೀಸಂಗ, ಮನುಷ್ಯವಧ, ನಾಸ್ತಿಕ್ಯ, ಇವುಗಳು ಉಪಪಾತಕಗಳು.

ಬ್ರಾಹ್ಮಣಸ್ಯ ರುಜಃಕೃತ್ಯಾ ಘ್ರಾತಿರಘ್ರೇಯಮದ್ಯಯೋಃ ।
ಜೈಹ್ಮ್ಯಂ ಚ ಮೈಥುನಂ ಪುಂಸಿ ಜಾತಿಭ್ರಂಶಕರಂ ಸ್ಮೃತಂ ॥ ೬೭

ಬ್ರಾಹ್ಮಣನನ್ನು ನೋಯಿಸುವುದು, ದುರ್ಗಂಧಾಘ್ರಾಣ, ಕಪಟಶೀಲತೆ, ಸಲಿಂಗರತಿ ಇವುಗಳು ಜಾತಿಭ್ರಂಶಕರಗಳು.

ಖರಾಶ್ವೋಷ್ಟ್ರಮೃಗೇಭಾನಾಮಜಾವಿಕವಧಸ್ತಥಾ ।
ಸಂಕರೀಕರಣಂ ಜ್ಞೇಯಂ ಮೀನಾಹಿಮಹಿಷಸ್ಯ ಚ ॥ ೬೮

ಕತ್ತೆ, ಒಂಟೆ, ಕುದುರೆ, ಜಿಂಕೆ, ಆನೆ, ಆಡು, ಕುರಿ, ಮೀನು, ಹಾವು ಎಮ್ಮೆ ಇವುಗಳನ್ನು ಕೊಲ್ಲುವುದು ಸಂಕರೀಕರಣವು.

ನಿಂದಿತೇಭ್ಯೋ ಧನಾದಾನಂ ವಾಣಿಜ್ಯಂ ಶೂದ್ರಸೇವನಂ ।
ಅಪಾತ್ರೀಕರಣಂ ಜ್ಞೇಯಂ ಅಸತ್ಯಸ್ಯ ಚ ಭಾಷಣಂ ॥ ೬೯

ನಿಂದಿತಧನಸ್ವೀಕಾರ, ವಾಣಿಜ್ಯ, ಶೂದ್ರಸೇವೆ, ಅನೃತಭಾಷಣ ಇವುಗಳು ಅಪಾತ್ರೀಕರಣಗಳು.

ಕೃಮಿಕೀಟವಯೋಹತ್ಯಾ ಮದ್ಯಾನುಗತಭೋಜನಂ ।
ಫಲೈಧಃಕುಸುಮಸ್ತೇಯಮಧೈರ್ಯಂ ಚ ಮಲಾವಹಂ ॥ ೭೦

ಕೃಮಿಕೀಟ, ಪಕ್ಷಿಹತ್ಯೆ, ಮದ್ಯದೊಡನೆ ಇತರ ಸೇವನೆ, ಹಣ್ಣು ಕಟ್ಟಿಗೆ, ಹೂ ಕದಿಯುವುದು, ಅಧೀರತೆ ಇವು ಮಲಿನೀಕರಣಗಳು.

ಏತಾನ್ಯೇನಾಂಸಿ ಸರ್ವಾಣಿ ಯಥೋಕ್ತಾನಿ ಪೃಥಕ್ಪೃಥಕ್ ।
ಯೈರ್ಯೈರ್ವ್ರತೈರಪೋಹ್ಯಂತೇ ತಾನಿ ಸಮ್ಯಙ್ನಿಬೋಧತ ॥ ೭೧

ಹಿಂದೆ ಹೇಳಿದ ಎಲ್ಲ ಪಾಪಗಳಿಗೆ ಬೇರೆ ಬೇರೆಯಾಗಿ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ.

ಬ್ರಹ್ಮಹಾ ದ್ವಾದಶ ಸಮಾಃ ಕುಟೀಂ ಕೃತ್ವಾ ವನೇ ವಸೇತ್ ।
ಭೈಕ್ಷಾಶ್ಯಾತ್ಮವಿಶುದ್ಧ್ಯರ್ಥಂ ಕೃತ್ವಾ ಶವಶಿರೋಧ್ವಜಂ ॥ ೭೨

ಬ್ರಹ್ಮಹತ್ಯೆ ಮಾಡಿದವನು ಹನ್ನೆರಡು ವರ್ಷ ಕಾಡಿನಲ್ಲಿ ಬಿಡಾರ ಮಾಡಿ ವಾಸವಾಗಿರಬೇಕು ಅವನ ಹಣೆಗೆ ರುಂಡದ ಆಕಾರ ಸುಟ್ಟು ಗುರುತು ಮಾಡಿರಬೇಕು. ಭಿಕ್ಷೆಯೆತ್ತಿ ಬದುಕಬೇಕು. ಅದರಿಂದ ಪಾಪನಿವೃತ್ತಿಯು.

ಲಕ್ಷ್ಯಂ ಶಸ್ತ್ರಭೃತಾಂ ವಾ ಸ್ಯಾದ್ವಿದುಷಾಮಿಚ್ಛಯಾತ್ಮನಃ ।
ಪ್ರಾಸ್ಯೇದಾತ್ಮಾನಮಗ್ನೌ ವಾ ಸಮಿದ್ಧೇ ತ್ರಿರವಾಕ್ ಶಿರಾಃ ॥ ೭೩

ಬ್ರಹ್ಮಹತ್ಯೆಗೆ ಇನ್ನೊಂದು ಪ್ರಾಯಶ್ಚಿತ್ತವು. ಇವೆರಡಲ್ಲಿ ಒಂದನ್ನು ಅಪರಾಧಿಯು ಸ್ವೇಚ್ಛೆಯಿಂದ ಆಚರಿಸಬಹುದು. ಬ್ರಹ್ಮವಧಪಾಪನಿವೃತ್ತಿಗೆ ಶಸ್ತ್ರಲಕ್ಷ್ಯನಾಗಿದ್ದಾನೆಂದು ತಿಳಿದು ಮಾಡುವ ಶಸ್ತ್ರಾಘಾತಕ್ಕೆ ಅಪರಾಧಿಯು ಗುರಿಯಾದರೆ ಶುದ್ಧಿಯು. ಉರಿಯುವ ಬೆಂಕಿಗೆ ತಲೆ ಕೆಳಗಾಗಿ ಮೂರು ಬಾರಿ ಹಾರಿ ಬರಬೇಕು.

ಯಜೇತ ವಾಶ್ವಮೇಧೇನ ಸ್ವರ್ಜಿತಾ ಗೋಸವೇನ ವಾ ।
ಅಭಿಜಿದ್ವಿಶ್ವಜಿದ್ಭ್ಯಾಂ ವಾ ತ್ರಿವೃತಾಗ್ನಿಷ್ಟುತಾಪಿ ವಾ ॥ ೭೪

ಅಶ್ವಮೇಧ, ಸ್ವರ್ಜಿತ್, ಗೋಸವ, ಅಭಿಜಿತ್, ವಿಶ್ವಜಿತ್, ತ್ರಿವೃತ್, ಅಗ್ನಿಷ್ಟುತ್ ಮುಂತಾದ ಯಾಗಾಚರಣೆಯೂ ಪ್ರಶಸ್ತವು.

ಜಪನ್ವಾನ್ಯತಮಂ ವೇದಂ ಯೋಜನಾನಾಂ ಶತಂ ವ್ರಜೇತ್ ।
ಬ್ರಹ್ಮಹತ್ಯಾಪನೋದಾಯ ಮಿತಭುಙ್ನಿಯತೇಂದ್ರಿಯಃ ॥ ೭೫

ನೂರು ಯೋಜನದೂರ ವೇದವನ್ನು ಜಪಿಸುತ್ತಾ ನಡೆಯುವಾಗ ಮಿತಾಹಾರದಲ್ಲಿರಬೇಕು.

ಸರ್ವಸ್ವಂ ವೇದವಿದುಷೇ ಬ್ರಾಹ್ಮಣಾಯೋಪಪಾದಯೇತ್ ।
ಧನಂ ಹಾ ಜೀವನಾಯಾಲಂ ಗೃಹಂ ವಾ ಸಪರಿಚ್ಛದಂ ॥ ೭೬

ತನ್ನ ಸರ್ವಸ್ವವನ್ನು ವೇದವಿದ್ವಾಂಸನಿಗೆ ದಾನ ಮಾಡಬಹುದು. ಅದು ಒಬ್ಬನ ಜೀವನಕ್ಕೆ ಕಡಿಮೆಯಾಗಿರಬಾರದು. ಅಪರಾಧಗಳಲ್ಲಿ ಕರ್ತೃವು ಗುಣವಂತನಾದರೂ ಪೀಡಿತನು ಗುಣಹೀನನಾದರೂ ಲಘುದಂಡನೆಯು. ವಿರುದ್ಧವಾದರೆ ಕ್ರೂರದಂಡನೆಯು.

ಹವಿಷ್ಯಭುಗ್ವಾಽನುಸರೇತ್ಪ್ರತಿಸ್ರೋತಃ ಸರಸ್ವತೀಂ ।
ಜಪೇದ್ವಾ ನಿಯತಾಹಾರಸ್ತ್ರಿರ್ವೈ ವೇದಸ್ಯ ಸಂಹಿತಾಂ ॥ ೭೭

ಮಿತಭೋಜಿಯಾಗಿ ಸರಸ್ವತೀನದಿಯ ತುದಿಯಿಂದ ಮೂಲದ ವರೆಗೆ ನಡೆಯಬೇಕು. ಆಹಾರ ನಿಯಮವಂತನಾಗಿ ವೇದಸಂಹಿತೆಯನ್ನು ಮೂರು ಬಾರಿ ಜಪಿಸಬೇಕು.

ಕೃತವಾಪನೋ ನಿವಸೇದ್ಗ್ರಾಮಾಂತೇ ಗೋವ್ರಜೇಽಪಿ ವಾ ।
ಆಶ್ರಮೇ ವೃಕ್ಷಮೂಲೇ ವಾ ಗೋಬ್ರಾಹ್ಮಣಹಿತೇ ರತಃ ॥ ೭೮

ಕ್ಷೌರ ಮಾಡಿಸಿಕೊಂಡು ಹಟ್ಟಿ, ಆಶ್ರಮ, ಮರದಡಿ ಇವುಗಳಲ್ಲಿ ವಾಸವಾಗಿದ್ದು ಗೋಬ್ರಾಹ್ಮಣ ಹಿತವನ್ನು ಮಾಡುತ್ತಿರಬೇಕು.

ಬ್ರಾಹ್ಮಣಾರ್ಥೇ ಗವಾರ್ಥೇ ವಾ ಸದ್ಯಃ ಪ್ರಾಣಾನ್ ಪರಿತ್ಯಜನ್ ।
ಮುಚ್ಯತೇ ಬ್ರಹ್ಮಹತ್ಯಾಯಾ ಗೋಪ್ತಾ ಗೋರ್ಬ್ರಾಹ್ಮಣಸ್ಯ ಚ ॥ ೭೯

ಬ್ರಾಹ್ಮಣ ಅಥವಾ ಗೋ ಇವರ ಪ್ರಯೋಜನವು ತನ್ನ ಪ್ರಾಣತ್ಯಾಗದಿಂದ ಆಗುವುದಾದರೆ ಅದು ಒಳ್ಳೆದು. ಆದರಿಂದ ಬ್ರಹ್ಮಹತ್ಯಾ ನಿವೃತ್ತಿಯಾಗುವುದು.

ತ್ರಿವಾರಂ ಪ್ರತಿರೋದ್ಧಾ ವಾ ಸರ್ವಸ್ವಮವಜಿತ್ಯ ವಾ ।
ವಿಪ್ರಸ್ಯ ತನ್ನಿಮಿತ್ತೇ ವಾ ಪ್ರಾಣಾಲಾಭೇ ವಿಮುಚ್ಯತೇ ॥ ೮೦

ವಿಪ್ರಧನಾಪಹಾರ ಕಾಲದಲ್ಲಿ ಮೂರು ಬಾರಿ ಹೋರಾಡಿದರೂ ಗೆದ್ದು ತಂದರೂ ಪಾಪನಿವೃತ್ತಿಯು.

ಏವಂ ದೃಢವ್ರತೋ ನಿತ್ಯಂ ಬ್ರಹ್ಮಚಾರೀ ಸಮಾಹಿತಃ ।
ಸಮಾಪ್ತೇ ದ್ವಾದಶೇ ವರ್ಷೇ ಬ್ರಹ್ಮಹತ್ಯಾಂ ವ್ಯಪೋಹತಿ ॥ ೮೧

ಹೀಗೆ ಹನ್ನೆರಡು ವರ್ಷ ನಿಯಮಬದ್ಧ ಜೀವನದಿಂದಲೂ ಪಾಪ ನಿವೃತ್ತಿಯು.

ಶಿಷ್ಟ್ವಾ ವಾ ಭೂಮಿದೇವಾನಾಂ ನರದೇವಸಮಾಗಮೇ ।
ಸ್ವಮೇನೋಽವಭೃಥಸ್ನಾತೋ ಹಯಮೇಧೇ ವಿಮುಚ್ಯತೇ ॥ ೮೨

ಅಶ್ವಮೇಧ ಯಜಮಾನ, ರಾಜ, ಬ್ರಾಹ್ಮಣ, ಋತ್ವಿಜರ ಸಮ್ಮುಖದಲ್ಲಿ ತನ್ನ ಬ್ರಹ್ಮಹತ್ಯಾ ನಿವೇದನ ಮಾಡಿ ಅವಭೃತ ಸ್ನಾನಮಾಡಿದರೆ ಪಾಪ ಮುಕ್ತನು.

ಧರ್ಮಸ್ಯ ಬ್ರಾಹ್ಮಣೋ ಮೂಲಮಗ್ರಂ ರಾಜನ್ಯ ಉಚ್ಯತೇ ।
ತಸ್ಮಾತ್ಸಮಾಗಮೇ ತೇಷಾಮೇನೋ ವಿಖ್ಯಾಪ್ಯ ಶುಧ್ಯತಿ ॥ ೮೩

ಬ್ರಾಹ್ಮಣನು ಧರ್ಮಮೂಲನು. ಕ್ಷತ್ರಿಯನು ಇನ್ನೊಂದು ತುದಿ. ಆದುದರಿಂದ ಅವರ ಸನ್ನಿಧಿಯಲ್ಲಿ ಪಾಪಕರ್ಮ ಪ್ರಕಟಣೆಯಿಂದ ಪಾಪ ನಿವೃತ್ತಿಯು ನ್ಯಾಯವಾಗಿದೆ.

ಬ್ರಾಹ್ಮಣಃ ಸಂಭವೇನೈವ ದೇವಾನಾಮಪಿ ದೈವತಮ್ ।
ಪ್ರಮಾಣಂ ಚೈವ ಲೋಕಸ್ಯ ಬ್ರಹ್ಮಾತ್ರೈವ ಹಿ ಕಾರಣಮ್ ॥ ೮೪

ಬ್ರಾಹ್ಮಣನು ಜನ್ಮದಿಂದಲೇ ದೇವರಿಗೂ ದೇವನು. ಲೋಕಕ್ಕೆ ಪ್ರಮಾಣಭೂತನು. ಅದಕ್ಕೆ ಬ್ರಹ್ಮನೇ ಕಾರಣ.

ತೇಷಾಂ ವೇದವಿದೋ ಬ್ರೂಯುಸ್ತ್ರಯೋಽಪ್ಯೇನಃ ಸುನಿಷ್ಕೃತಿಮ್ ।
ಸಾ ತೇಷಾಂ ಪಾವನಾಯ ಸ್ಯಾತ್ಪವಿತ್ರಾ ವಿದುಷಾಂ ಹಿ ವಾಕ್ ॥ ೮೫

ಮೂರುಮಂದಿ ವೇದವೇತ್ತರ ಅಭಿಮತವಾದ ಪ್ರಾಯಶ್ಚಿತ್ತವು ಪಾಪ ನಿವಾರಕವಾಗುವುದು. ಅವರ ಮಾತು ಪವಿತ್ರವು.

ಅತೋಽನ್ಯತಮಮಾಸ್ಥಾಯ ವಿಧಿಂ ವಿಪ್ರಃ ಸಮಾಹಿತಃ ।
ಬ್ರಹ್ಮಹತ್ಯಾಕೃತಂ ಪಾಪಂ ವ್ಯಪೋಹತ್ಯಾತ್ಮವತ್ತಯಾ ॥ ೮೬

ಹಿಂದೆ ಹೇಳಿದ ಯಾವುದಾದರೂ ಒಂದು ರೀತಿಯಿಂದ ತನ್ನ ಪಾಪ ನಿವೃತ್ತಿಯನ್ನು ಬ್ರಹ್ಮಹತ್ಯಾಕಾರಿಯು ಮಾಡಿಕೊಳ್ಳಬೇಕು.

ಹತ್ವಾ ಗರ್ಭಮವಿಜ್ಞಾತಮೇತದೇವ ವ್ರತಂ ಚರೇತ್ ।
ರಾಜನ್ಯವೈಶ್ಯೌ ಚೇಜಾನಾವಾತ್ರೇಯೀಮೇವ ಚ ಸ್ತ್ರಿಯಂ ॥ ೮೭

ಗರ್ಭಹತ್ಯೆಗೂ ಇದೇ ಪ್ರಾಯಶ್ಚಿತ್ತವು. ಯಾಗೋದ್ಯೋಗಿಗಳಾದ ಕ್ಷತ್ರಿಯ, ವೈಶ್ಯರು, ಋತುಸ್ನಾತಳಾದ ಬ್ರಾಹ್ಮಣಿ ಇವರನ್ನು ಕೊಂದರೂ ಇದೇ ಪರಿಹಾರವು.

ಉಕ್ತ್ವಾ ಚೈವಾನೃತಂ ಸಾಕ್ಷ್ಯೇ ಪ್ರತಿರುಧ್ಯ ಗುರುಂ ತಥಾ ।
ಅಪಹೃತ್ಯ ಚ ನಿಃಕ್ಷೇಪಂ ಕೃತ್ವಾ ಚ ಸ್ತ್ರೀಸುಹೃದ್ವಧಂ ॥ ೮೮

ಸುಳ್ಳು ಸಾಕ್ಷಿ ಹೇಳುವುದು, ಗುರುವಿನ ಮಿಥ್ಯಾಪವಾದ, ನಿಕ್ಷೇಪಾಪ-ಹಾರ, ಸ್ತ್ರೀವಧ, ಮಿತ್ರವಧಗಳಿಗೂ ಪ್ರಾಯಶ್ಚಿತ್ತವು.

ಇಯಂ ವಿಶುದ್ಧಿರುದಿತಾ ಪ್ರಮಾಪ್ಯಾಕಾಮತೋ ದ್ವಿಜಮ್ ।
ಕಾಮತೋ ಬ್ರಾಹ್ಮಣವಧೇ ನಿಷ್ಕೃತಿರ್ನ ವಿಧೀಯತೇ ॥ ೮೯

ಉದ್ದೇಶವಿಲ್ಲದೆ ಮಾಡಿದ ಬ್ರಾಹ್ಮಣವಧಕ್ಕೆ ಹಿಂದೆ ಹೇಳಿದುದು ಪರಿಹಾರ. ಉದ್ದೇಶಪೂರ್ವಕ ಮಾಡಿದರೆ ದಂಡನೆಯು ದ್ವಿಗುಣ.

ಸುರಾಂ ಪೀತ್ವಾ ದ್ವಿಜೋ ಮೋಹಾದಗ್ನಿವರ್ಣಾಂ ಸುರಾಂ ಪಿಬೇತ್ ।
ತಯಾ ಸ ಕಾಯೇ ನಿರ್ದಗ್ಧೇ ಮುಚ್ಯತೇ ಕಿಲ್ಬಿಷಾತ್ತತಃ ॥ ೯೦

ಉದ್ದೇಶಪೂರ್ವಕ ಪುನಃ ಪುನಃ ಸೆರೆ ಕುಡಿದರೆ ಕುದಿಯುವ ಸೆರೆಯನ್ನು ಕುಡಿದು ಪ್ರಾಣತ್ಯಾಗ ಮಾಡಬೇಕು. ಅದರಿಂದ ಶುದ್ಧಿಯು.

ಗೋಮೂತ್ರಮಗ್ನಿವರ್ಣಂ ವಾ ಪಿಬೇದುದಕಮೇವ ವಾ ।
ಪಯೋ ಘೃತಂ ವಾಮರಣಾದ್ಗೋಶಕೃದ್ರಸಮೇವ ವಾ ॥ ೯೧

ಗೋಮೂತ್ರ, ಸಗಣಿ ಕಡಿದ ನೀರು, ನೀರು, ಹಾಲು ತುಪ್ಪ ಇವುಗಳನ್ನು ಕಾಯಿಸಿ ಕುಡಿದು ಸಾಯುವುದೂ ಪ್ರಾಯಶ್ಚಿತ್ತವು.

ಕಣಾನ್ವಾ ಭಕ್ಷಯೇದಬ್ದಂ ಪಿಣ್ಯಾಕಂ ವಾ ಸಕೃನ್ನಿಶಿ ।
ಸುರಾಪಾನಾಪನುತ್ತ್ಯರ್ಥಂ ಬಾಲವಾಸಾ ಜಟೀ ಧ್ವಜೀ ॥ ೯೨

ಒಂದು ವರ್ಷ ದಿನ ನುಚ್ಚಕ್ಕಿ, ಹಿಂಡಿ ಮುಂತಾದುದನ್ನು ತಿಂದು ಸುರಾಧ್ವಜಾಂಕನವನ್ನು ಮಾಡಿಕೊಂಡು ಬದುಕಿದರೆ ಪರಿಹಾರವು.

ಸುರಾಂ ವೈ ಮಲಮನ್ನಾನಾಂ ಪಾಪ್ಮಾ ಚ ಮಲಮುಚ್ಯತೇ ।
ತಸ್ಮಾದ್ಬ್ರಾಹ್ಮಣರಾಜನ್ಯೌ ವೈಶ್ಯಶ್ಚ ನ ಸುರಾಂ ಪಿಬೇತ್ ॥ ೯೩

ಸುರೆಯು ಅನ್ನಮಲ, ಪಾಪವೇ ಮಲವು. ಆದುದರಿಂದ ತ್ರೈವರ್ಣಿಕರು ಸುರಾಪಾನವನ್ನು ಮಾಡಬಾರದು.

ಗೌಡೀ ಪೈಷ್ಟೀ ಚ ಮಾಧ್ವೀ ಚ ವಿಜ್ಞೇಯಾ ತ್ರಿವಿಧಾ ಸುರಾ ।
ಯಥೈವೈಕಾ ತಥಾ ಸರ್ವಾ ನ ಪಾತವ್ಯಾ ದ್ವಿಜೋತ್ತಮೈಃ ॥ ೯೪

ಬೆಲ್ಲ, ಹಿಟ್ಟು, ದ್ರಾಕ್ಷೆ ಈ ಮೂರರಿಂದ ಸುರೆಯಾಗುವುದು. ಅದೆಲ್ಲ ಸಮಾನ ದ್ವಿಜೋತ್ತಮನು ಅದನ್ನು ಸೇವಿಸಬಾರದು.

ಯಕ್ಷರಕ್ಷಃಪಿಶಾಚಾನ್ನಂ ಮದ್ಯಂ ಮಾಂಸಂ ಸುರಾಸವಂ ।
ತದ್ಬ್ರಾಹ್ಮಣೇನ ನಾತ್ತವ್ಯಂ ದೇವಾನಾಮಶ್ನತಾ ಹವಿಃ ॥ ೯೫

ದೇವಾನ್ನಭೋಜಿಯಾದ ಬ್ರಾಹ್ಮಣನು ಯಕ್ಷರಕ್ಷಃ ಪಿಶಾಚಾಹಾರವಾದ ಮದ್ಯ–ಮಾಂಸಗಳನ್ನು ಸೇವಿಸಬಾರದು.

ಅಮೇಧ್ಯೇ ವಾ ಪತೇನ್ಮತ್ತೋ ವೈದಿಕಂ ವಾಪ್ಯುದಾಹರೇತ್ ।
ಅಕಾರ್ಯಮನ್ಯತ್ಕುರ್ಯಾದ್ವಾ ಬ್ರಾಹ್ಮಣೋ ಮದಮೋಹಿತಃ ॥ ೯೬

ಮದಮುಗ್ಧನು ಅಮೇಧ್ಯದಲ್ಲಿ ಬೀಳಬಹುದು. ವೇದವನ್ನು ಜಪಿಸಬಹುದು. ಇನ್ನು ಇಂತಹ ಅನೇಕ ಅಕಾರ್ಯಗಳನ್ನು ಮಾಡಬಹುದು.

ಯಸ್ಯ ಕಾಯಗತಂ ಬ್ರಹ್ಮ ಮದ್ಯೇನಾಪ್ಲಾವ್ಯತೇ ಸಕೃತ್ ।
ತಸ್ಯ ವ್ಯಪೈತಿ ಬ್ರಾಹ್ಮಣ್ಯಂ ಶೂದ್ರತ್ವಂ ಚ ಸ ಗಚ್ಛತಿ ॥ ೯೭

ವೇದವು ಶರೀರದೊಡನೆ ಮದ್ಯಸಿಕ್ತವಾದರೆ ಬ್ರಾಹ್ಮಣ್ಯವು ಹೋಗಿ ಶೂದ್ರವು ಬರುವುದು.

ಏಷಾ ವಿಚಿತ್ರಾಭಿಹಿತಾ ಸುರಾಪಾನಸ್ಯ ನಿಷ್ಕೃತಿಃ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಸುವರ್ಣಸ್ತೇಯನಿಷ್ಕೃತಿಂ ॥ ೯೮

ಸುರಾಪಾನಕ್ಕೆ ನಾನಾವಿಧವಾದ ಪ್ರಾಯಶ್ಚಿತ್ತಗಳನ್ನು ತಿಳಿಸಿಯಾಯಿತು. ಇನ್ನು ಸುವರ್ಣಚೌರ್ಯಕ್ಕೆ ಪರಿಹಾರವನ್ನು ಹೇಳುತ್ತೇನೆ.

ಸುವರ್ಣಸ್ತೇಯಕೃದ್ವಿಪ್ರೋ ರಾಜಾನಮಭಿಗಮ್ಯ ತು ।
ಸ್ವಕರ್ಮ ಖ್ಯಾಪಯನ್ ಬ್ರೂಯಾನ್ಮಾಂ ಭವಾನನುಶಾಸ್ತ್ವಿತಿ ॥ ೯೯

ರಾಜನ ಎದುರಿನಲ್ಲಿ ಚಿನ್ನ ಕದ್ದ ಬ್ರಾಹ್ಮಣನು ತನ್ನ ತಪ್ಪನ್ನು ಹೇಳಿ ದಂಡನೆ ವಿಧಿಸುವಂತೆ ಕೇಳಬೇಕು.

ಗೃಹೀತ್ವಾ ಮುಸಲಂ ರಾಜಾ ಸಕೃದ್ಧನ್ಯಾತ್ತು ತಂ ಸ್ವಯಂ ।
ವಧೇನ ಶುಧ್ಯತಿ ಸ್ತೇನೋ ಬ್ರಾಹ್ಮಣಸ್ತಪಸೈವ ತು ॥ ೧೦೦

ಚಿನ್ನ ಕದ್ದವನಿಗೆ ರಾಜನು ಒಂದು ದೊಣ್ಣೆಯಲ್ಲಿ ಒಂದು ಹೊಡೆಯಬೇಕು. ಸತ್ತರೂ ಸಾಯದಿದ್ದರೂ ಪಾಪವಿಲ್ಲ. ಬ್ರಾಹ್ಮಣನು ಮುಂದೆ ಹೇಳುವ ವ್ರತವನ್ನು ಆಚರಿಸಬೇಕು.

ತಪಸಾಪನುನುತ್ಸುಸ್ತು ಸುವರ್ಣಸ್ತೇಯಜಂ ಮಲಂ ।
ಚೀರವಾಸಾ ದ್ವಿಜೋಽರಣ್ಯೇ ಚರೇದ್ಬ್ರಹ್ಮಹಣೋ ವ್ರತಂ ॥ ೧೦೧

ಬ್ರಾಹ್ಮಣನು ಸುವರ್ಣಚೌರ್ಯಕ್ಕೆ ಬ್ರಹ್ಮಹತ್ಯಾಪ್ರಾಯಶ್ಚಿತ್ತವನ್ನು ಕಾಡಿನಲ್ಲಿ ನಾರುಡೆಯುಟ್ಟುಕೊಂಡು ಪಾಲಿಸಬೇಕು.

ಏತೈರ್ವ್ರತೈರಪೋಹೇತ ಪಾಪಂ ಸ್ತೇಯಕೃತಂ ದ್ವಿಜಃ ।
ಗುರುಸ್ತ್ರೀಗಮನೀಯಂ ತು ವ್ರತೈರೇಭಿರಪಾನುದೇತ್ ॥ ೧೦೨

ವಿಪ್ರನ ಸುವರ್ಣಸ್ತೇಯಪ್ರಾಯಶ್ಚಿತ್ತವನ್ನು ವಿಧಿಸಿ ಗುರುತಲ್ಪಗಮನ ವ್ರತವನ್ನು ಹೇಳುತ್ತೇನೆ.

ಗುರುತಲ್ಪ್ಯಭಿಭಾಷ್ಯೈನಸ್ತಪ್ತೇ ಸ್ವಪ್ಯಾದಯೋಮಯೇ ।
ಸೂರ್ಮೀಂ ಜ್ವಲಂತೀಂ ಸ್ವಾಶ್ಲಿಷ್ಯೇನ್ಮೃತ್ಯುನಾ ಸ ವಿಶುಧ್ಯತಿ ॥ ೧೦೩

ಗುರು ಸ್ತ್ರೀ ಸಂಗ ಮಾಡಿದವನು ತನ್ನ ಪಾಪವನ್ನು ಹೇಳಿಕೊಂಡು ಲೋಹದ ಕಾದ ಸ್ತ್ರೀವಿಗ್ರಹವನ್ನು ತಬ್ಬಿ ಪ್ರಾಣಬಿಡಬೇಕು. ಅಥವಾ ಅಂತಹ ಮಂಚದಲ್ಲಿ ಮಲಗಬೇಕು.

ಸ್ವಯಂ ವಾ ಶಿಶ್ನವೃಷಣಾವುತ್ಕೃತ್ಯಾಧಾಯ ಚಾಂಜಲೌ ।
ನೈರ್‌ಋತೀಂ ದಿಶಮಾತಿಷ್ಠೇದಾನಿಪಾತಾದಜಿಹ್ಮಗಃ ॥ ೧೦೪

ಅಥವಾ ತನ್ನ ಶಿಶ್ನವೃಷಣಗಳನ್ನು ತಾನು ಕೊಯ್ದು ತನ್ನ ಕೈಯಲ್ಲಿ ಹಿಡಿದುಕೊಂಡು ನೈಋತ್ಯ ದಿಕ್ಕಿಗೆ ಬೀಳುವವರೆಗೆ ನಡೆಯಬೇಕು.

ಖಟ್ವಾಂಗೀ ಚೀರವಾಸಾ ವಾ ಶ್ಮಶ್ರುಲೋ ವಿಜನೇ ವನೇ ।
ಪ್ರಾಜಾಪತ್ಯಂ ಚರೇತ್ಕೃಚ್ಛ್ರಮಬ್ದಮೇಕಂ ಸಮಾಹಿತಃ ॥ ೧೦೫

ತಿಳಿಯದೆ ಗುರುತಲ್ಪಗಮನವಾದರೆ ಒಂದು ವರ್ಷ ಜಡೆ ಬೆಳೆಸಿ ಕಾಡಿನಲ್ಲಿ ಪ್ರಾಜಾಪತ್ಯಕೃಚ್ಛ್ರವನ್ನು ಆಚರಿಸಬೇಕು.

ಚಾಂದ್ರಾಯಣಂ ವಾ ತ್ರೀನ್ಮಾಸಾನ್ ಅಭ್ಯಸ್ಯೇನ್ನಿಯತೇಂದ್ರಿಯಃ ।
ಹವಿಷ್ಯೇಣ ಯವಾಗ್ವಾ ವಾ ಗುರುತಲ್ಪಾಪನುತ್ತಯೇ ॥ ೧೦೬

ಗುರುತಲ್ಪಗಮನಕ್ಕೆ ಯವಾಗೂ (ಗಂಜಿ) ಅಥವಾ ಹವಿಸ್ ಆಹಾರ ಮಾಡಿಕೊಂಡು ಮೂರು ತಿಂಗಳು ಚಾಂದ್ರಾಣ ಮಾಡಬೇಕು. ಅದರ ವಿವರವನ್ನು ಮುಂದೆ ಕೊಡಲಾಗುವುದು.

ಏತೈರ್ವ್ರತೈರಪೋಹೇಯುರ್ಮಹಾಪಾತಕಿನೋ ಮಲಂ ।
ಉಪಪಾತಕಿನಸ್ತ್ವೇವಮೇಭಿರ್ನಾನಾವಿಧೈರ್ವ್ರತೈಃ ॥ ೧೦೭

ಮಹಾಪಾತಕಗಳನ್ನು ಮಾಡಿದವರು ಈ ರೀತಿಯಲ್ಲಿ ಪ್ರಾಯಶ್ಚಿತ್ತ

ಗಳನ್ನು ಮಾಡಿಕೊಳ್ಳಬೇಕು. ಉಪಪಾತಕಕ್ಕೆ ಪ್ರಾಯಶ್ಚಿತ್ತಗಳನ್ನು ಈಗ ಹೇಳುತ್ತೇನೆ.

ಉಪಪಾತಕಸಂಯುಕ್ತೋ ಗೋಘ್ನೋ ಮಾಸಂ ಯವಾನ್ ಪಿಬೇತ್ ।
ಕೃತವಾಪೋ ವಸೇದ್ಗೋಷ್ಠೇ ಚರ್ಮಣಾ ತೇನ ಸಂವೃತಃ ॥ ೧೦೮

ಗೋಹತ್ಯೆಗೆ ಒಂದು ತಿಂಗಳು ಯವದ ಗಂಜಿ ಕುಡಿಯಬೇಕು. ಗೋ ಚರ್ಮವನ್ನು ಹೊದೆದುಕೊಂಡು ಗೋಗಳೊಡನೆ ವಾಸವಾಗಿರಬೇಕು. ಕ್ಷೌರ ವನ್ನು ಆರಂಭದಲ್ಲಿ ಮಾಡಿಸಿರಬೇಕು.

ಚತುರ್ಥಕಾಲಮಶ್ನೀಯಾದಕ್ಷಾರಲವಣಂ ಮಿತಂ ।
ಗೋಮೂತ್ರೇಣಾಚರೇತ್ಸ್ನಾನಂ ದ್ವೌ ಮಾಸೌ ನಿಯತೇಂದ್ರಿಯಃ ॥ ೧೦೯

ಎರಡು ತಿಂಗಳು ಗೋಮೂತ್ರ ಸ್ನಾನ, ಬ್ರಹ್ಮಚರ್ಯ, ದಿನದ ಎರಡು ಆಹಾರಗಳ ಪೈಕಿ ಅನುಕ್ರಮವಾಗಿ ನಡುವೆ ಎರಡು ಹೊತ್ತು ಬಿಟ್ಟು ನಾಲ್ಕನೆ ಬಾರಿಯಲ್ಲಿ ಮಾತ್ರ ಆಹಾರವನ್ನು ಸೇವಿಸುತ್ತಿರಬೇಕು. ಕ್ಷಾರಲವಣಗಳನ್ನು ವರ್ಜಿಸಬೇಕು.

ದಿವಾನುಗಚ್ಛೇದ್ಗಾಸ್ತಾಸ್ತು ತಿಷ್ಠನ್ನೂರ್ಧ್ವಂ ರಜಃ ಪಿಬೇತ್ ।
ಶುಶ್ರೂಷಿತ್ವಾ ನಮಸ್ಕೃತ್ಯ ರಾತ್ರೌ ವೀರಾಸನಂ ವಸೇತ್ ॥ ೧೧೦

ಹಗಲು ದನಗಳೊಡನೆ ನಡೆಯಬೇಕು. ಅವು ನಿಂತಾಗ ಎದ್ದ ಧೂಳಿಗೆ ಬಾಯೊಡ್ಡಬೇಕು. ಅವು ನಿಂತರೆ ನಿಂತು, ಮಲಗಿದರೆ ಮಲಗಿ ಆಪತ್ತನ್ನು ನಿವಾರಿಸುತ್ತಿರಬೇಕು. ರಾತ್ರಿಯಿಡೀ ಕುಳಿತು ಕೊಳ್ಳಬೇಕು. ತುರಿಸುತ್ತ ನೊಣ ಓಡಿಸಿ ಹಿತವನ್ನು ಮಾಡಬೇಕು.

ತಿಷ್ಠಂತೀಷ್ವನುತಿಷ್ಠೇತ್ತು ವ್ರಜಂತೀಷ್ವಪ್ಯನುವ್ರಜೇತ್ ।
ಆಸೀನಾಸು ತಥಾಸೀನೋ ನಿಯತೋ ವೀತಮತ್ಸರಃ ॥ ೧೧೧

ಅವುಗಳನ್ನು ಹಿಂಬಾಲಿಸುತ್ತ ಸಿಟ್ಟು ಬಿಡಬೇಕು.

ಆತುರಾಮಭಿಶಸ್ತಾಂ ವಾ ಚೌರವ್ಯಾಘ್ರಾದಿಭಿರ್ಭಯೈಃ ।
ಪತಿತಾಂ ಪಂಕಲಗ್ನಾಂ ವಾ ಸರ್ವೋಪಾಯೈರ್ವಿಮೋಚಯೇತ್ ॥ ೧೧೨

ರೋಗ, ಕಳ್ಳ, ಹುಲಿ, ಬೀಳುವುದು, ಕೆಸರು ಇವುಗಳಿಂದ ರಕ್ಷಿಸಬೇಕು.

ಉಷ್ಣೇ ವರ್ಷತಿ ಶೀತೇ ವಾ ಮಾರುತೇ ವಾತಿ ವಾ ಭೃಶಂ ।
ನ ಕುರ್ವೀತಾತ್ಮನಸ್ತ್ರಾಣಂ ಗೋರಕೃತ್ವಾ ತು ಶಕ್ತಿತಃ ॥ ೧೧೩

ಬಿಸಿಲು, ಮಳೆ, ಚಳಿ, ಗಾಳಿ, ಇವುಗಳಿಂದ ಗೋರಕ್ಷಣೆಯನ್ನು ತಾನು ಮಾಡದೆ ತಾನು ಸುಖಪಡಬಾರದು.

ಆತ್ಮನೋ ಯದಿ ವಾನ್ಯೇಷಾಂ ಗೃಹೇ ಕ್ಷೇತ್ರೇಽಥವಾ ಖಲೇ ।
ಭಕ್ಷಯಂತೀಂ ನ ಕಥಯೇತ್ಪಿಬಂತಂ ಚೈವ ವತ್ಸಕಂ ॥ ೧೧೪

ಮನೆ, ಹೊಲ, ಅಂಗಳ ಎಲ್ಲಿಯಾದರೂ ದನ ಮೇಯುತ್ತಿದ್ದರೆ ಕರು ಮೊಲೆ ಕುಡಿಯುತ್ತಿದ್ದರೆ ಹೇಳಬಾರದು.

ಅನೇನ ವಿಧಿನಾ ಯಸ್ತು ಗೋಘ್ನೋ ಗಾಮನುಗಚ್ಛತಿ ।
ಸ ಗೋಹತ್ಯಾಕೃತಂ ಪಾಪಂ ತ್ರಿಭಿರ್ಮಾಸೈರ್ವ್ಯಪೋಹತಿ ॥ ೧೧೫

ಹೀಗೆ ಮೂರು ತಿಂಗಳು ಗೋಸೇವೆಯನ್ನು ಗೋಹತ್ಯಾಪಾತಕಿಯು ಮಾಡಿದರೆ ಪಾಪವಿಮೋಚನೆಯಾಗುವುದು.

ವೃಷಭೈಕಾದಶಾ ಗಾಶ್ಚ ದದ್ಯಾತ್ಸುಚರಿತವ್ರತಃ ।
ಅವಿದ್ಯಮಾನೇ ಸರ್ವಸ್ವಂ ವೇದವಿದ್ಭ್ಯೋ ನಿವೇದಯೇತ್ ॥ ೧೧೬

ವ್ರತಾಂತದಲ್ಲಿ ಹತ್ತು ಧೇನು ಒಂದು ಎತ್ತು ದಾನಮಾಡಬೇಕು. ಇಲ್ಲವಾದರೆ ವೇದಜ್ಞರಿಗೆ ಇದ್ದ ಎಲ್ಲವನ್ನು ಕೊಡಬೇಕು.

ಏತದೇವ ವ್ರತಂ ಕುರ್ಯುರುಪಪಾತಕಿನೋ ದ್ವಿಜಾಃ ।
ಅವಕೀರ್ಣಿವರ್ಜ್ಯಂ ಶುಧ್ಯರ್ಥಂ ಚಾಂದ್ರಾಯಣಮಥಾಪಿ ವಾ ॥ ೧೧೭

ಉಪಪಾತಕಕ್ಕೂ ಇದೇ ಪ್ರಾಯಶ್ಚಿತ್ತವು. ಚಾಂದ್ರಾಯಣವೂ ಆಗಬಹುದು.

ಅವಕೀರ್ಣೀ ತು ಕಾಣೇನ ಗರ್ದಭೇನ ಚತುಷ್ಪಥೇ ।
ಪಾಕಯಜ್ಞವಿಧಾನೇನ ಯಜೇತ ನಿರ್ಋತಿಂ ನಿಶಿ ॥ ೧೧೮

ವ್ರತಲೋಪಿಯು ನಿರ್‌ಋತಿದೇವತೆಗೆ ಪಾಕಯಜ್ಞ ವಿಧಾನದಿಂದ ಕುರುಡು ಕತ್ತೆಯ ಯಾಗವನ್ನು ಮಾಡಬೇಕು.

ಹುತ್ವಾಗ್ನೌ ವಿಧಿವದ್ಧೋಮಾನಂತತಶ್ಚ ಸಮೇತ್ಯೃಚಾ ।
ವಾತೇಂದ್ರಗುರುವಹ್ನೀನಾಂ ಜುಹುಯಾತ್ಸರ್ಪಿಷಾಹುತೀಃ ॥ ೧೧೯

ಬ್ರಹ್ಮಚಾರಿಯು ಸ್ತ್ರೀಸಂಗವನ್ನು ಮಾಡಿದರೆ ಕ್ಷತವ್ರತನೆಂದು ತಿಳಿಯಬೇಕು. ಅದಕ್ಕೆ ಗರ್ದಭ ಹೋಮಾಂತದಲ್ಲಿ ವಾಯು, ಇಂದ್ರ, ಗುರು, ವಹ್ನಿ ಇವರಿಗೆ ಘೃತದಿಂದ ಸಂಮಾ ಮಂತ್ರದ ಆಹುತಿಯನ್ನು ಕೊಡಬೇಕು.

ಕಾಮತೋ ರೇತಸಃ ಸೇಕಂ ವ್ರತಸ್ಥಸ್ಯ ದ್ವಿಜನ್ಮನಃ ।
ಅತಿಕ್ರಮಂ ವ್ರತಸ್ಯಾಹುರ್ಧರ್ಮಜ್ಞಾ ಬ್ರಹ್ಮವಾದಿನಃ ॥ ೧೨೦

ವ್ರತದಲ್ಲಿ ವೀರ್ಯನಾಶವೇ ಲೋಪವು.

ಮಾರುತಂ ಪುರುಹೂತಂ ಚ ಗುರುಂ ಪಾವಕಮೇವ ಚ ।
ಚತುರೋ ವ್ರತಿನೋಽಭ್ಯೇತಿ ಬ್ರಾಹ್ಮಂ ತೇಜೋಽವಕೀರ್ಣಿನಃ ॥ ೧೨೧

ವ್ರತಭಂಗವಾದರೆ ವಾಯು, ಇಂದ್ರ, ಗುರು, ಅಗ್ನಿ ಈ ನಾಲ್ವರನ್ನು ಬ್ರಹ್ಮತೇಜಸ್ಸು ಸೇರಿಹೋಗುವುದು.

ಏತಸ್ಮಿನ್ನೇನಸಿ ಪ್ರಾಪ್ತೇ ವಸಿತ್ವಾ ಗರ್ದಭಾಜಿನಂ ।
ಸಪ್ತಾಗಾರಾಂಶ್ಚರೇದ್ಭೈಕ್ಷಂ ಸ್ವಕರ್ಮ ಪರಿಕೀರ್ತಯನ್ ॥ ೧೨೨

ಈ ಪಾಪಕ್ಕೆ ಕತ್ತೆ ಚರ್ಮವನ್ನು ಹೊದೆದು ಏಳುಮನೆಗಳಲ್ಲಿ ತನ್ನ ವೃತ್ತಾಂತವನ್ನು ಹೇಳುತ್ತಾ ತಿರುಪೆಯೆತ್ತಬೇಕು.

ತೇಭ್ಯೋ ಲಬ್ಧೇನ ಭೈಕ್ಷೇಣ ವರ್ತಯನ್ನೇಕಕಾಲಿಕಂ ।
ಉಪಸ್ಪೃಶಂಸ್ತ್ರಿಷವಣಂ ತ್ವಬ್ದೇನ ಸ ವಿಶುಧ್ಯತಿ ॥ ೧೨೩

ಒಂದು ವರ್ಷ ಮೂರು ಹೊತ್ತು ಮಿಂಯುತ್ತಾ ಹಾಗೆ ಭಿಕ್ಷೆ ಬೇಡಿ ಒಪ್ಪೊತ್ತು ಉಂಡು ಕಳೆದರೆ ಶುದ್ಧಿಯು.

ಜಾತಿಭ್ರಂಶಕರಂ ಕರ್ಮ ಕೃತ್ವಾನ್ಯತಮಮಿಚ್ಛಯಾ।
ಚರೇತ್ಸಾಂತಪನಂ ಕೃಚ್ಛ್ರಂ ಪ್ರಾಜಾಪತ್ಯಮನಿಚ್ಛಯಾ ॥ ೧೨೪

ಜಾತಿಭ್ರಂಶ ಮಾಡುವ ಪಾಪಕರ್ಮವು ಸಾಂತಪನ ಕೃಚ್ಛ್ರವನ್ನು ತಿಳಿಯದೆ ಪಾಪವಾದರೆ ಪ್ರಾಜಾಪತ್ಯವನ್ನು ಆಚರಿಸಬೇಕು. ೬೭ನೇ ಶ್ಲೋಕದಂತೆ.

ಸಂಕರಾಪಾತ್ರಕೃತ್ಯಾಸು ಮಾಸಂ ಶೋಧನಮೈಂದವಂ ।
ಮಲಿನೀಕರಣೀಯೇಷು ತಪ್ತಃ ಸ್ಯಾದ್ಯಾವಕೈಸ್ತ್ರ್ಯಹಂ ॥ ೧೨೫

೬೮ನೆಯ ಶ್ಲೋಕದಲ್ಲಿ ಹೇಳಿದ ಸಂಕರೀಕರಣಕ್ಕೆ ಒಂದು ತಿಂಗಳು ಚಾಂದ್ರಾಯಣ. ಮಲಿನೀಕರಣ (೭೦ ಶ್ಲೋಕದಲ್ಲಿ)ಕ್ಕೆ ಮೂರು ದಿನ ಬಿಸಿಗಂಜಿ ಕುಡಿಯಬೇಕು.

ತುರೀಯೋ ಬ್ರಹ್ಮಹತ್ಯಾಯಾಃ ಕ್ಷತ್ರಿಯಸ್ಯ ವಧೇ ಸ್ಮೃತಃ ।
ವೈಶ್ಯೇಽಷ್ಟಮಾಂಶೋ ವೃತ್ತಸ್ಥೇ ಶೂದ್ರೇ ಜ್ಞೇಯಸ್ತು ಷೋಡಶಃ ॥ ೧೨೬

ಬ್ರಹ್ಮಹತ್ಯಾಪ್ರಾಯಶ್ಚಿತ್ತದ ನಾಲ್ಕನೆ ಒಂದು ಭಾಗ ಕ್ಷತ್ರಿಯ ವಧಕ್ಕೆ, ವೈಶ್ಯವಧಕ್ಕೆ ಎಂಟನೆ ಒಂದಂಶ, ಶೂದ್ರ ವಧಕ್ಕೆ ಹದಿನಾರನೆ ಒಂದಂಶ ಪರಿಹಾರಗಳು, ತಿಳಿದು ಮಾಡಿದ ಮರಣಕ್ಕೆ.

ಅಕಾಮತಸ್ತು ರಾಜನ್ಯಂ ವಿನಿಪಾತ್ಯ ದ್ವಿಜೋತ್ತಮಃ ।
ವೃಷಭೈಕಸಹಸ್ರಾ ಗಾ ದದ್ಯಾತ್ಸುಚರಿತವ್ರತಃ ॥ ೧೨೭

ತಿಳಿಯದೆ ಬ್ರಾಹ್ಮಣನು ಕ್ಷತ್ರಿಯನನ್ನು ಕೊಂದರೆ ಒಂದು ಸಾವಿರ ಹಸು ಒಂದೆತ್ತು ದಾನಮಾಡಬೇಕು.

ತ್ರ್ಯಬ್ದಂ ಚರೇದ್ವಾ ನಿಯತೋ ಜಟೀ ಬ್ರಹ್ಮಹಣೋ ವ್ರತಂ ।
ವಸನ್ದೂರತರೇ ಗ್ರಾಮಾತ್ ವೃಕ್ಷಮೂಲನಿಕೇತನಃ ॥ ೧೨೮

ದಾನಾಶಕ್ತನು ಊರಹೊರಗೆ ಮರದಡಿಯಲ್ಲಿ ನಿಯಮವಂತನೂ ಜಟಾಧಾರಿಯೂ ಆಗಿ ಮೂರು ವರ್ಷ ಜೀವಿಸಬೇಕು. ಬಿಕ್ಷೆ ಮಾಡುವುದು ಬೇಡ.

ಏತದೇವ ಚರೇದಬ್ದಂ ಪ್ರಾಯಶ್ಚಿತ್ತಂ ದ್ವಿಜೋತ್ತಮಃ ।
ಪ್ರಮಾಪ್ಯ ವೈಶ್ಯಂ ವೃತ್ತಸ್ಥಂ ದದ್ಯಾಚ್ಚೈಕಶತಂ ಗವಾಂ ॥ ೧೨೯

ಬ್ರಾಹ್ಮಣನು ಗುಣವಂತ ವೈಶ್ಯನನ್ನು ಕೊಂದರೆ ಒಂದು ವರ್ಷ ಮೇಲಿನಂತೆ ವ್ರತಸ್ಥನಾಗಬೇಕು. ಮತ್ತು ಒಂದು ನೂರು ಗೋದಾನವನ್ನು ಮಾಡಬೇಕು.

ಏತದೇವ ವ್ರತಂ ಕೃತ್ಸ್ನಂ ಷಣ್ಮಾಸಾನ್ ಶೂದ್ರಹಾ ಚರೇತ್ ।
ವೃಷಭೈಕಾದಶಾ ವಾಪಿ ದದ್ಯಾದ್ವಿಪ್ರಾಯ ಗಾಃ ಸಿತಾಃ ॥ ೧೩೦

ಶೂದ್ರ ಹತ್ಯೆಗೆ ಆರುತಿಂಗಳು ವ್ರತವೂ ಬಿಳಿದನ ಹತ್ತು. ಒಂದೆತ್ತು ದಾನವೂ ಪ್ರಾಯಶ್ಚಿತವು.

ಮಾರ್ಜಾರನಕುಲೌ ಹತ್ವಾ ಚಾಷಂ ಮಂಡೂಕಮೇವ ಚ ।
ಶ್ವಗೋಧೋಲೂಕಕಾಕಾಂಶ್ಚ ಶೂದ್ರಹತ್ಯಾವ್ರತಂ ಚರೇತ್ ॥ ೧೩೧

ಬೆಕ್ಕು, ಮುಂಗುಸಿ, ಚಾಷ, ಕಪ್ಪೆ, ನಾಯಿ, ಉಡು, ಗೂಬೆ, ಕಾಗೆ ಇವುಗಳನ್ನು ಕೊಂದರೆ ಒಂಬತ್ತು ತಿಂಗಳು ಚಾಂದ್ರಾಯಣವು.

ಪಯಃ ಪಿಬೇತ್ತ್ರಿರಾತ್ರಂ ವಾ ಯೋಜನಂ ವಾಧ್ವನೋ ವ್ರಜೇತ್ ।
ಉಪಸ್ಪೃಶೇತ್ಸ್ರವಂತ್ಯಾಂ ವಾ ಸೂಕ್ತಂ ವಾಬ್ದೈವತಂ ಜಪೇತ್ ॥ ೧೩೨

ತಿಳಿಯದೆ ಹಿಂದೆ ಹೇಳಿದ ಪ್ರಾಣಿಹಿಂಸೆಯು ಸಂಭವಿಸಿದರೆ ಮೂರು ದಿನ ಹಾಲು ಮಾತ್ರ ಕುಡಿಯುವುದು. ಅಥವಾ ಒಂದು ಯೋಜನ ದಾರಿ ನಡೆಯುವುದು ಮೂರು ದಿನ. ಅಥವಾ ಮೂರು ದಿನ ಮಹಾನದೀ ಸ್ನಾನ. ಅಥವಾ ಅಪ್ಸೂಕ್ತ ಜಪ.

ಅಭ್ರಿಂ ಕಾರ್ಷ್ಣಾಯಸೀಂ ದದ್ಯಾತ್ಸರ್ಪಂ ಹತ್ವಾ ದ್ವಿಜೋತ್ತಮಃ ।
ಪಲಾಲಭಾರಕಂ ಷಂಢೇ ಸೈಸಕಂ ಚೈಕಮಾಷಕಂ ॥ ೧೩೩

ಸರ್ಪವನ್ನು ಕೊಂದರೆ ಅಭ್ರಿದಾನ ಮಾಡಬೇಕು. ನಪುಂಸಕನನ್ನು ಕೊಂಡರೆ ಹುಲ್ಲಿನ ಹೊರೆ ದಾನ ಮತ್ತು ಒಂದು ಮಾಷ ಸೀಸದಾನ.

ಘೃತಕುಂಭಂ ವರಾಹೇ ತು ತಿಲದ್ರೋಣಂ ತು ತಿತ್ತಿರೌ ।
ಶುಕೇ ದ್ವಿಹಾಯನಂ ವತ್ಸಂ ಕ್ರೌಂಚಂ ಹತ್ವಾ ತ್ರಿಹಾಯನಂ ॥ ೧೩೪

ಹಂದಿಯನ್ನು ಕೊಂದರೆ ತುಪ್ಪದ ಕೊಡ, ತಿತ್ತಿರಿಗೆ ಒಂದು ದ್ರೋಣ ಎಳ್ಳು, ಗಿಳಿಗೆ ಎರಡು ವರ್ಷದ ಕರು, ಕ್ರೌಂಚಕ್ಕೆ ಮೂರು ವರ್ಷದ ಕರು ಕೊಡುವುದು.

ಹತ್ವಾ ಹಂಸಂ ಬಲಾಕಾಂ ಚ ಬಕಂ ಬರ್ಹಿಣಮೇವ ಚ ।
ವಾನರಂ ಶ್ಯೇನಭಾಸೌ ಚ ಸ್ಪರ್ಶಯೇದ್ಬ್ರಾಹ್ಮಣಾಯ ಗಾಂ ॥ ೧೩೫

ಹಂಸ, ಕೊಕ್ಕರೆ, ನವಿಲು, ಮಂಗ, ಹದ್ದು, ಭಾಸ ಇವುಗಳನ್ನು ಕೊಂದರೆ ಗೋದಾನ.

ವಾಸೋ ದದ್ಯಾದ್ಧಯಂ ಹತ್ವಾ ಪಂಚ ನೀಲಾನ್ ವೃಷಾನ್‌ಗಜಂ ।
ಅಜಮೇಷಾವನಡ್ವಾಹಂ ಖರಂ ಹತ್ವೈಕಹಾಯನಂ ॥ ೧೩೬

ಕುದುರೆಗೆ ಬಟ್ಟೆ, ಆನೆಗೆ ಐದು ನೀಲವೃಷಭ, ಆಡು-ಕುರಿಗಳಿಗೆ ಒಂದೆತ್ತು, ಕತ್ತೆಗೆ ಒಂದು ವರ್ಷದ ಕರು ಕೊಡುವುದು.

ಕ್ರವ್ಯಾದಾಂಸ್ತು ಮೃಗಾನ್ ಹತ್ವಾ ಧೇನುಂ ದದ್ಯಾತ್ಪಯಸ್ವಿನೀಂ ।
ಅಕ್ರವ್ಯಾದಾನ್ವತ್ಸತರೀಮುಷ್ಟ್ರಂ ಹತ್ವಾ ತು ಕೃಷ್ಣಲಂ ॥ ೧೩೭

ಮಾಂಸಾಹಾರಿ ಮೃಗಕ್ಕೆ ಗೋದಾನ, ಇತರ ಮೃಗಕ್ಕೆ ಗೋದಾನ, ಒಂಟೆಗೆ ರಕ್ತಿಕಾಸ್ವರ್ಣದಾನ.

ಜೀನಕಾರ್ಮುಕಬಸ್ತಾವೀನ್ ಪೃಥಗ್ದದ್ಯಾದ್ವಿಶುದ್ಧಯೇ ।
ಚತುರ್ಣಾಮಪಿ ವರ್ಣಾನಾಂ ನಾರೀರ್ಹತ್ವಾಽನವಸ್ಥಿತಾಃ ॥ ೧೩೮

ಜಾರೆಯರಾದ ನಾಲ್ಕು ಜಾತಿಯ ಸ್ತ್ರೀಯರನ್ನು ಕೊಂದರೆ ಕ್ರಮವಾಗಿ ಚರ್ಮ ಧನುಸ್ಸು ಆಡು ಕುರಿಗಳ ದಾನವು.

ದಾನೇನ ವಧನಿರ್ಣೇಕಂ ಸರ್ಪಾದೀನಾಮಶಕ್ನುವನ್ ।
ಏಕೈಕಶಶ್ಚರೇತ್ಕೃಚ್ಛ್ರಂ ದ್ವಿಜಃ ಪಾಪಾಪನುತ್ತಯೇ ॥ ೧೩೯

ಸರ್ಪಾದಿ ಹತ್ಯಾಪಾಪಕ್ಕೆ ಅರ್ಧಪ್ರಾಜಾಪತ್ಯಕೃಚ್ಛ್ರವೂ ಪ್ರಾಯಶ್ಚಿತ್ತವು.

ಅಸ್ಥಿಮತಾಂ ತು ಸತ್ತ್ವಾನಾಂ ಸಹಸ್ರಸ್ಯ ಪ್ರಮಾಪಣೇ ।
ಪೂರ್ಣೇ ಚಾನಸ್ಯನಸ್ಥ್ನಾಂ ತು ಶೂದ್ರಹತ್ಯಾವ್ರತಂ ಚರೇತ್ ॥ ೧೪೦

ಸಹಸ್ರ ಕೀಟ ವಧಕ್ಕೆ ಶೂದ್ರ ಹತ್ಯಾ ಪ್ರಾಯಶ್ಚಿತ್ತವು.

ಕಿಂಚಿದೇವ ತು ವಿಪ್ರಾಯ ದದ್ಯಾದಸ್ಥಿಮತಾಂ ವಧೇ ।
ಅನಸ್ಥ್ನಾಂ ಚೈವ ಹಿಂಸಾಯಾಂ ಪ್ರಾಣಾಯಾಮೇನ ಶುಧ್ಯತಿ ॥ ೧೪೧

ಕೆಲವು ಕೀಟವನ್ನು ಕೊಂದರೆ ಸ್ವಲ್ಪ ಹಣ ಕೊಡುವುದು. ಪ್ರಾಣಾಯಾಮ ಮಾಡುವುದು.

ಫಲದಾನಾಂ ತು ವೃಕ್ಷಾಣಾಂ ಛೇದನೇ ಜಪ್ಯಮೃಕ್‌ಶತಂ ।
ಗುಲ್ಮವಲ್ಲೀಲತಾನಾಂ ಚ ಪುಷ್ಪಿತಾನಾಂ ಚ ವೀರುಧಾಂ ॥ ೧೪೨

ಹಣ್ಣು ಬಿಡುವ ಮರಕಡಿದರೆ ನೂರು ಋಙ್ಮಂತ್ರ ಜಪ. ಇತರ ಹೂ-ಬಳ್ಳಿ ಕಡಿದರೂ ಹಾಗೆಯೇ.

ಅನ್ನಾದ್ಯಜಾನಾಂ ಸತ್ತ್ವಾನಾಂ ರಸಜಾನಾಂ ಚ ಸರ್ವಶಃ ।
ಫಲಪುಷ್ಪೋದ್ಭವಾನಾಂ ಚ ಘೃತಪ್ರಾಶೋ ವಿಶೋಧನಂ ॥ ೧೪೩

ಅನ್ನದಲ್ಲಿ, ಬೆಲ್ಲದಲ್ಲಿ, ಹೂ-ಹಣ್ಣುಗಳಲ್ಲಿ ಇರುವ ಕೀಟಗಳನ್ನು ಕೊಂದರೆ ತುಪ್ಪ ಕುಡಿಯುವುದು.

ಕೃಷ್ಟಜಾನಾಮೋಷಧೀನಾಂ ಜಾತಾನಾಂ ಚ ಸ್ವಯಂ ವನೇ ।
ವೃಥಾಲಂಭೇಽನುಗಚ್ಛೇದ್ಗಾಂ ದಿನಮೇಕಂ ಪಯೋವ್ರತಃ ॥ ೧೪೪

ಎಲ್ಲ ವಿಧವಾದ ಸಾಮಾನ್ಯ ವನಸ್ಪತಿಗಳನ್ನು ಸುಮ್ಮನೆ ಕೊಂದರೆ ದಿನವೊಂದು ಹಾಲು ಮಾತ್ರ ಕುಡಿದು ಗೋವಿನ ಹಿಂದೆ ನಡೆಯಬೇಕು.

ಏತೈರ್ವ್ರತೈರಪೋಹ್ಯಂ ಸ್ಯಾದೇನೋ ಹಿಂಸಾಸಮುದ್ಭವಂ ।
ಜ್ಞಾನಾಜ್ಞಾನಕೃತಂ ಕೃತ್ಸ್ನಂ ಶೃಣುತಾನಾದ್ಯಭಕ್ಷಣೇ ॥ ೧೪೫

ಹಿಂಸಾಪ್ರಾಯಶ್ಚಿತ್ತವನ್ನು ಈ ರೀತಿ ಹೇಳಿ ಇನ್ನು ಅಭಕ್ಷ್ಯಭಕ್ಷಣ ಪರಿಹಾರವನ್ನು ಹೇಳುತ್ತೇನೆ.

ಅಜ್ಞಾನಾದ್ವಾರುಣೀಂ ಪೀತ್ವಾ ಸಂಸ್ಕಾರೇಣೈವ ಶುಧ್ಯತಿ ।
ಮತಿಪೂರ್ವಮನಿರ್ದೇಶ್ಯಂ ಪ್ರಾಣಾಂತಿಕಮಿತಿ ಸ್ಥಿತಿಃ ॥ ೧೪೬

ತಿಳಿಯದೆ ವಾರುಣೀ ಮದ್ಯ ಸೇವಿಸಿದರೆ ಪುನರುಪನಯನ. ತಿಳಿದು ಮಾಡಿದರೆ ಮರಣದಂಡನೆ.

ಅಪಃ ಸುರಾಭಾಜನಸ್ಥಾ ಮದ್ಯಭಾಂಡಸ್ಥಿತಾಸ್ತಥಾ ।
ಪಂಚರಾತ್ರಂ ಪಿಬೇತ್ಪೀತ್ವಾ ಶಂಖಪುಷ್ಪೀಶ್ರಿತಂ ಪಯಃ ॥ ೧೪೭

ಸುರಾಮದ್ಯಗಳ ಪಾತ್ರದಲ್ಲಿ ಹಾಕಿದ ನೀರು ಕುಡಿದರೆ ಐದು ದಿನ ಶಂಖ ಪುಷ್ಪಮಾಲಿಕೆಯ ಹಾಲು ಕಷಾಯ ಕುಡಿಯಬೇಕು.

ಸ್ಪೃಷ್ಟ್ವಾ ದತ್ವಾ ಚ ಮದಿರಾಂ ವಿಧಿವತ್ಪ್ರತಿಗೃಹ್ಯ ಚ ।
ಶೂದ್ರೋಚ್ಛಿಷ್ಟಾಶ್ಚ ಪೀತ್ವಾಪಃ ಕುಶವಾರಿ ಪಿಬೇತ್ತ್ರ್ಯಹಂ ॥ ೧೪೮

ಮದಿರೆಯನ್ನು ಮುಟ್ಟಿದರೆ ಕುಡಿದರೆ ತಕ್ಕೊಂಡರೆ ಮತ್ತು ಶೂದ್ರನ ಎಂಜಲು ನೀರು ಕುಡಿದರೆ ದರ್ಭಕಷಾಯದಲ್ಲಿ ಮೂರು ದಿನ ಜೀವಿಸಬೇಕು.

ಬ್ರಾಹ್ಮಣಸ್ತು ಸುರಾಪಸ್ಯ ಗಂಧಮಾಘ್ರಾಯ ಸೋಮಪಃ ।
ಪ್ರಾಣಾನಪ್ಸು ತ್ರಿರಾಯಮ್ಯ ಘೃತಂ ಪ್ರಾಶ್ಯ ವಿಶುಧ್ಯತಿ ॥ ೧೪೯

ಸೋಮಯಾಜಿಯು ಮದ್ಯಪಾಯಿಯ ಗಂಧವನ್ನು ಮೂಸಿದರೂ ನೀರಿನಲ್ಲಿ ಮೂರು ಪ್ರಾಣಾಯಾಮ ಮಾಡಿ ತುಪ್ಪ ಕುಡಿಯಬೇಕು.

ಅಜ್ಞಾನಾತ್ಪ್ರಾಶ್ಯ ವಿಣ್ಮೂತ್ರಂ ಸುರಾಸಂಸ್ಪೃಷ್ಟಮೇವ ಚ ।
ಪುನಃಸಂಸ್ಕಾರಮರ್ಹಂತಿ ತ್ರಯೋ ವರ್ಣಾ ದ್ವಿಜಾತಯಃ ॥ ೧೫೦

ಅಜ್ಞಾನದಿಂದ ಮಲಮೂತ್ರ, ಸುರಾಮಿಶ್ರದವ್ಯ ಇವುಗಳನ್ನು ಸೇವಿಸಿದರೆ ಪುನರುಪನಯನವು.

ವಪನಂ ಮೇಖಲಾ ದಂಡೋ ಭೈಕ್ಷಚರ್ಯಾ ವ್ರತಾನಿ ಚ ।
ನಿವರ್ತಂತೇ ದ್ವಿಜಾತೀನಾಂ ಪುನಃ ಸಂಸ್ಕಾರಕರ್ಮಣಿ ॥ ೧೫೧

ಪುನರುಪನಯನಕ್ಕೆ ವಪನ, ಮೇಖಲೆ, ದಂಡ, ಭಿಕ್ಷಾಟನ ವ್ರತ ಇವುಗಳು ಬೇಡ.

ಅಭೋಜ್ಯಾನಾಂ ತು ಭುಕ್ತ್ವಾನ್ನಂ ಸ್ತ್ರೀಶೂದ್ರೋಚ್ಛಿಷ್ಟಮೇವ ಚ ।
ಜಗ್ಧ್ವಾ ಮಾಂಸಮಭಕ್ಷ್ಯಂ ಚ ಸಪ್ತರಾತ್ರಂ ಯವಾನ್‌ಪಿಬೇತ್ ॥ ೧೫೨

ತಿನ್ನಬಾರದ ಅನ್ನ ಉಣ್ಣುವುದು, ಸ್ತ್ರೀ-ಶೂದ್ರರ ಎಂಜಲು, ತಿನ್ನಬಾರದ ಮಾಂಸ ಇವುಗಳ ಸೇವನೆ ಮಾಡಿದರೆ ಏಳು ಬಾರ್ಲಿ ಗಂಜಿ ಕುಡಿದು ಬದುಕಬೇಕು.

ಶುಕ್ತಾನಿ ಚ ಕಷಾಯಾಂಶ್ಚ ಪೀತ್ವಾ ಮೇಧ್ಯಾನ್ಯಪಿ ದ್ವಿಜಃ ।
ತಾವದ್ಭವತ್ಯಪ್ರಯತೋ ಯಾವತ್ತನ್ನ ವ್ರಜತ್ಯಧಃ ॥ ೧೫೩

ಹುಳಿಯಾಗುವ ದ್ರವ್ಯ, ಕಷಾಯ ಇವನ್ನು ಕುಡಿದರೆ ಅದು ಹೊಟ್ಟೆಯಲ್ಲಿರುವಷ್ಟು ಸಮಯ ಅಶುಚಿಯು.

ವಿಡ್ವರಾಹಖರೋಷ್ಟ್ರಾಣಾಂ ಗೋಮಾಯೋಃ ಕಪಿಕಾಕಯೋಃ ।
ಪ್ರಾಶ್ಯ ಮೂತ್ರಪುರೀಷಾಣಿ ದ್ವಿಜಶ್ಚಾಂದ್ರಾಯಣಂ ಚರೇತ್ ॥ ೧೫೪

ಹಳ್ಳಿಹಂದಿ, ಕತ್ತೆ, ಒಂಟೆ, ನರಿ, ಮಂಗ, ಕಾಗೆ ಇವುಗಳ ಮಲಮೂತ್ರಗಳನ್ನು ಸೇವಿಸಿದರೆ ಚಾಂದ್ರಾಯಣ ವ್ರತ.

ಶುಷ್ಕಾಣಿ ಭುಕ್ತ್ವಾ ಮಾಂಸಾನಿ ಭೌಮಾನಿ ಕವಕಾನಿ ಚ ।
ಅಜ್ಞಾತಂ ಚೈವ ಸೂನಾಸ್ಥಮೇತದೇವ ವ್ರತಂ ಚರೇತ್ ॥ ೧೫೫

ಒಣಗಿದ ಮಾಂಸ, ಅಂಗಡಿ ಮಾಂಸ, ಕವಕ ಇವನ್ನು ತಿಂದರೂ ಹಾಗೆಯೇ.

ಕ್ರವ್ಯಾದಸೂಕರೋಷ್ಟ್ರಾಣಾಂ ಕುಕ್ಕುಟಾನಾಂ ಚ ಭಕ್ಷಣೇ ।
ನರಕಾಕಖರಾಣಾಂ ಚ ತಪ್ತಕೃಚ್ಛ್ರಂ ವಿಶೋಧನಂ ॥ ೧೫೬

ಮಾಂಸಾಹಾರಿ ಮಾಂಸ, ಒಂಟೆ, ಕೋಳಿ, ಹಂದಿ, ಮನುಷ್ಯ, ಕಾಗೆ, ಕತ್ತೆ ಇವುಗಳ ಮಾಂಸ ತಿಂದರೆ ತಪ್ತಕೃಚ್ಛ್ರವು.

ಮಾಸಿಕಾನ್ನಂ ತು ಯೋಽಶ್ನೀಯಾತ್ ಅಸಮಾವರ್ತಕೋ ದ್ವಿಜಃ ।
ಸ ತ್ರೀಣ್ಯಹಾನ್ಯುಪವಸೇದೇಕಾಹಂ ಚೋದಕೇ ವಸೇತ್ ॥ ೧೫೭

ಬ್ರಹ್ಮಚಾರಿಯು ಮಾಸಿಕಶ್ರಾದ್ಧದ ಅನ್ನಭೋಜನ ಮಾಡಿದರೆ ಮೂರು ದಿನ ಉಪವಾಸ ಒಂದು ದಿನ ಜಲವಾಸ.

ಬ್ರಹ್ಮಚಾರೀ ತು ಯೋಽಶ್ನೀಯಾನ್ಮಧು ಮಾಂಸಂ ಕಥಂಚನ ।
ಸ ಕೃತ್ವಾ ಪ್ರಾಕೃತಂ ಕೃಚ್ಛ್ರಂ ವ್ರತಶೇಷಂ ಸಮಾಪಯೇತ್ ॥ ೧೫೮

ಬ್ರಹ್ಮಚಾರಿಯು ಮಧುಮಾಂಸ ಸೇವಿಸಿದರೆ ಪ್ರಾಜಾಪತ್ಯಕೃಚ್ಛ್ರವು.

ಬಿಡಾಲಕಾಕಾಖೂಚ್ಛಿಷ್ಟಂ ಜಗ್ಧ್ವಾ ಶ್ವನಕುಲಸ್ಯ ಚ ।
ಕೇಶಕೀಟಾವಪನ್ನಂ ಚ ಪಿಬೇದ್ಬ್ರಹ್ಮಸುವರ್ಚಲಾಂ ॥ ೧೫೯

ಬೆಕ್ಕು, ಕಾಗೆ, ಇಲಿ, ನಾಯಿ, ಮುಂಗುಸಿ, ತಿಂದುಳಿದ ಕೂದಲು ಕೀಟ ಬೆರೆದನ್ನ ಉಂಡರೆ ಬ್ರಹ್ಮಸುವರ್ಚಲಾಕಷಾಯ ಕುಡಿಯುವುದು.

ಅಭೋಜ್ಯಮನ್ನಂ ನಾತ್ತವ್ಯಮಾತ್ಮನಃ ಶುದ್ಧಿಮಿಚ್ಛತಾ ।
ಅಜ್ಞಾನಭುಕ್ತಂ ತೂತ್ತಾರ್ಯಂ ಶೋಧ್ಯಂ ವಾಪ್ಯಾಶು ಶೋಧನೈಃ ॥ ೧೬೦

ತಿಳಿಯದೆ ಅಭಕ್ಷ್ಯಭಕ್ಷಣ ಮಾಡಿದರೆ ವಮನ. ತಿಳಿದು ಮಾಡಿದರೆ ಹಿಂದೆ ಹೇಳಿದ ಪ್ರಾಯಶ್ಚಿತ್ತ.

ಏಷೋಽನಾದ್ಯಾದನಸ್ಯೋಕ್ತೋ ವ್ರತಾನಾಂ ವಿವಿಧೋ ವಿಧಿಃ ।
ಸ್ತೇಯದೋಷಾಪಹರ್ತೄಣಾಂ ವ್ರತಾನಾಂ ಶ್ರೂಯತಾಂ ವಿಧಿಃ ॥ ೧೬೧

ಇನ್ನು ಕಳ್ಳತನ ಪರಿಹಾರವನ್ನು ತಿಳಿಯಿರಿ.

ಧಾನ್ಯಾನ್ನಧನಚೌರ್ಯಾಣಿ ಕೃತ್ವಾ ಕಾಮಾದ್ದ್ವಿಜೋತ್ತಮಃ ।
ಸ್ವಜಾತೀಯಗೃಹಾದೇವ ಕೃಚ್ಛ್ರಾಬ್ದೇನ ವಿಶುಧ್ಯತಿ ॥ ೧೬೨

ತನ್ನವರ ಮನೆಯಿಂದ ಕಾಳು, ಅನ್ನ, ಹಣ, ಇವುಗಳನ್ನು ಬ್ರಾಹ್ಮಣನು ಕದ್ದರೆ ಒಂದು ವರ್ಷ ಪ್ರಾಜಾಪತ್ಯ ಕೃಚ್ಛ್ರವು.

ಮನುಷ್ಯಾಣಾಂ ತು ಹರಣೇ ಸ್ತ್ರೀಣಾಂ ಕ್ಷೇತ್ರಗೃಹಸ್ಯ ಚ ।
ಕೂಪವಾಪೀಜಲಾನಾಂ ಚ ಶುದ್ಧಿಶ್ಚಾಂದ್ರಾಯಣಂ ಸ್ಮೃತಂ ॥ ೧೬೪

ಮನುಷ್ಯ, ಹೆಂಗಸು, ಹೊಲ, ಮನೆ, ಕೆರೆ, ಬಾವಿ ಇವುಗಳನ್ನು ಕದ್ದರೆ ಚಾಂದ್ರಾಯಣ

ದ್ರವ್ಯಾಣಾಮಲ್ಪಸಾರಾಣಾಂ ಸ್ತೇಯಂ ಕೃತ್ವಾನ್ಯವೇಶ್ಮತಃ ।
ಚರೇತ್ಸಾಂತಪನಂ ಕೃಚ್ಛ್ರಂ ತನ್ನಿರ್ಯಾತ್ಯಾತ್ಮಶುದ್ಧಯೇ ॥ ೧೬೫

ಕಡಿಮೆ ಬೆಲೆಯ ಸೊತ್ತು ಕದ್ದರೆ ಅದನ್ನು ಕೊಟ್ಟು ಸಾಂತಪನ ಕೃಚ್ಛ್ರವು.

ಭಕ್ಷ್ಯಭೋಜ್ಯಾಪಹರಣೇ ಯಾನಶಯ್ಯಾಸನಸ್ಯ ಚ ।
ಪುಷ್ಪಮೂಲಫಲಾನಾಂ ಚ ಪಂಚಗವ್ಯಂ ವಿಶೋಧನಂ ॥ ೧೬೬

ತಿಂಡಿತಿನಸು, ವಾಹನ, ಹಾಸಿಗೆ, ಆಸನ, ಹಣ್ಣು–ಹಂಪಲು, ಕದ್ದರೆ ಪಂಚಗವ್ಯ.

ತೃಣಕಾಷ್ಠದ್ರುಮಾಣಾಂ ಚ ಶುಷ್ಕಾನ್ನಸ್ಯ ಗುಡಸ್ಯ ಚ ।
ಚೇಲಚರ್ಮಾಮಿಷಾಣಾಂ ಚ ತ್ರಿರಾತ್ರಂ ಸ್ಯಾದಭೋಜನಂ ॥ ೧೬೭

ಹುಲ್ಲು, ಕಟ್ಟಿಗೆ, ಮರ, ಬೆಲ್ಲ, ಬಟ್ಟೆ, ಚರ್ಮ, ಮಾಂಸ ಇವುಗಳನ್ನು ಕದ್ದರೆ ಮೂರು ದಿನ ಉಪವಾಸ.

ಮಣಿಮುಕ್ತಾಪ್ರವಾಲಾನಾಂ ತಾಮ್ರಸ್ಯ ರಜತಸ್ಯ ಚ ।
ಅಯಃಕಾಂಸ್ಯೋಪಲಾನಾಂ ಚ ದ್ವಾದಶಾಹಂ ಕಣಾನ್ನತಾ ॥ ೧೬೮

ಮಣಿ ಮುತ್ತು, ಹವಳ, ತಾಮ್ರ, ಬೆಳ್ಳಿ, ಕಬ್ಬಿಣ, ಕಂಚು, ಅರೆಯುವ ಕಲ್ಲು ಇವುಗಳನ್ನು ಕದ್ದರೆ ಹನ್ನೆರಡು ದಿನ ನುಚ್ಚಕ್ಕಿ ಗಂಜಿ.

ಕಾರ್ಪಾಸಕೀಟಜೋರ್ಣಾನಾಂ ದ್ವಿಶಫೈಕಶಫಸ್ಯ ಚ ।
ಪಕ್ಷಿಗಂಧೌಷಧೀನಾಂ ಚ ರಜ್ಜ್ವಾಶ್ಚೈವ ತ್ರ್ಯಹಂ ಪಯಃ ॥ ೧೬೮

ಹತ್ತಿ, ಮೊಟ್ಟೆ, ಉಣ್ಣೆಗಳ ಬಟ್ಟೆ, ಪ್ರಾಣಿ, ಪಕ್ಷಿ, ಸುಗಂಧ ದ್ರವ್ಯ, ಮದ್ದು, ಬಳ್ಳಿ ಇವುಗಳನ್ನು ಕದ್ದರೆ ಮೂರು ದಿನ ಹಾಲು.

ಏತೈರ್ವ್ರತೈರಪೋಹೇತ ಪಾಪಂ ಸ್ತೇಯಕೃತಂ ದ್ವಿಜಃ ।
ಅಗಮ್ಯಾಗಮನೀಯಂ ತು ವ್ರತೈರೇಭಿರಪಾನುದೇತ್ ॥ ೧೬೯

ಈ ರೀತಿ ಚೌರ್ಯ ಪ್ರಾಯಶ್ಚಿತ್ತ. ಬರುವುದು ವ್ಯಭಿಚಾರ ಪರಿಹಾರ.

ಗುರುತಲ್ಪವ್ರತಂ ಕುರ್ಯಾದ್ರೇತಃ ಸಿಕ್ತ್ವಾ ಸ್ವಯೋನಿಷು ।
ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಕುಮಾರೀಷ್ವಂತ್ಯಜಾಸು ಚ ॥ ೧೭೦

ಅಕ್ಕ–ತಂಗಿ, ಮಗನ ಮತ್ತು ಮಿತ್ರನ ಹೆಂಡತಿ, ಹುಡುಗಿ, ಚಂಡಾಲೀ ಇವರ ವ್ಯಭಿಚಾರದಿಂದ ಗುರುತಲ್ಪಗಮನ ಪ್ರಾಯಶ್ಚಿತ್ತ.

ಪೈತೃಷ್ವಸೇಯೀಂ ಭಗಿನೀಂ ಸ್ವಸ್ರೀಯಾಂ ಮಾತುರೇವ ಚ ।
ಮಾತುಶ್ಚ ಭ್ರಾತುಸ್ತನಯಾಂ ಗತ್ವಾ ಚಾಂದ್ರಾಯಣಂ ಚರೇತ್ ॥ ೧೭೧

ತಂದೆಯ ಸೋದರಿಯರ ಮತ್ತು ತಾಯ ಸೋದರಿಯರ ಮತ್ತು ತಂದೆಯ ಸೋದರರ ಮಗಳನ್ನು ವ್ಯಭಿಚರಿಸಿದರೆ ಚಾಂದ್ರಾಯಣ.

ಏತಾಸ್ತಿಸ್ರಸ್ತು ಭಾರ್ಯಾರ್ಥೇ ನೋಪಯಚ್ಛೇತ್ತು ಬುದ್ಧಿಮಾನ್ ।
ಜ್ಞಾತಿತ್ವೇನಾನುಪೇಯಾಸ್ತಾಃ ಪತತಿ ಹ್ಯುಪಯನ್ನಧಃ ॥ ೧೭೨

ಆ ಮೂರು ಮಂದಿ ಹುಡುಗಿಯರು ವಿವಾಹಯೋಗ್ಯರಲ್ಲ.

ಅಮಾನುಷೀಷು ಪುರುಷ ಉದಕ್ಯಾಯಾಮಯೋನಿಷು ।
ರೇತಃ ಸಿಕ್ತ್ವಾ ಜಲೇ ಚೈವ ಕೃಚ್ಛ್ರಂ ಸಾಂತಪನಂ ಚರೇತ್ ॥ ೧೭೩

ಪ್ರಾಣಿ, ರಜಸ್ವಲೆ, ನೀರು ಇತರ ಕಡೆಗಳಲ್ಲಿ ವೀರ್ಯಪಾತ ಮಾಡಿದರೆ ಸಾಂತಪನಕೃಚ್ಛ್ರವು.

ಮೈಥುನಂ ತು ಸಮಾಸೇವ್ಯ ಪುಂಸಿ ಯೋಷಿತಿ ವಾ ದ್ವಿಜಃ ।
ಗೋಯಾನೇಽಪ್ಸು ದಿವಾ ಚೈವ ಸವಾಸಾಃ ಸ್ನಾನಮಾಚರೇತ್ ॥ ೧೭೪

ಹಗಲು, ವಾಹಾನ, ನೀರು, ಗೋಯಾನ ಇವುಗಳಲ್ಲಿ ಸ್ತ್ರೀಸಂಗ ಮಾಡಿದರೆ ಉಟ್ಟಬಟ್ಟೆ ಸಹಿತ ಮಿಂಯಬೇಕು.

ಚಂಡಾಲಾಂತ್ಯಸ್ತ್ರಿಯೋ ಗತ್ವಾ ಭುಕ್ತ್ವಾ ಚ ಪ್ರತಿಗೃಹ್ಯ ಚ ।
ಪತತ್ಯಜ್ಞಾನತೋ ವಿಪ್ರೋ ಜ್ಞಾನಾತ್ಸಾಮ್ಯಂ ತು ಗಚ್ಛತಿ ॥ ೧೭೫

ಅಂತ್ಯಜ ಸ್ತ್ರೀಸಂಗ, ವಿವಾಹ ಭೋಜನಗಳನ್ನು ಮಾಡಿದರೆ ಪ್ರಾಯಶ್ಚಿತ್ತ. ತಿಳಿದು ಮಾಡಿದರೆ ಜಾತಿಭ್ರಂಶ.

ವಿಪ್ರದುಷ್ಟಾಂ ಸ್ತ್ರಿಯಂ ಭರ್ತಾ ನಿರುಂಧ್ಯಾದೇಕವೇಶ್ಮನಿ ।
ಯತ್ಪುಂಸಃ ಪರದಾರೇಷು ತಚ್ಚೈನಾಂ ಚಾರಯೇದ್ವ್ರತಂ ॥ ೧೭೬

ಪರಪುರುಷ ದುಷ್ಟಸ್ತ್ರೀಯರನ್ನು ಮನೆಯೊಳಗೆ ಇಡಬೇಕು. ಪರದಾರ ಗಮನ ಪ್ರಾಯಶ್ಚಿತ್ತವನ್ನು ಮಾಡಿಸಬೇಕು.

ಸಾ ಚೇತ್ಪುನಃ ಪ್ರದುಷ್ಯೇತ್ತು ಸದೃಶೇನೋಪಯಂತ್ರಿತಾ ।
ಕೃಚ್ಛ್ರಂ ಚಾಂದ್ರಾಯಣಂ ಚೈವ ತದಸ್ಯಾಃ ಪಾವನಂ ಸ್ಮೃತಂ ॥ ೧೭೭

ಅಂತಹವಳು ಪುನರ್ವ್ಯಭಿಚಾರ ಮಾಡಿದರೆ ಪ್ರಾಜಾಪತ್ಯ ಚಾಂದ್ರಾಯಣ ಕೃಚ್ಛ್ರ ದ್ವಯವು.

ಯತ್ಕರೋತ್ಯೇಕರಾತ್ರೇಣ ವೃಷಲೀಸೇವನಾದ್ದ್ವಿಜಃ ।
ತದ್ಭೈಕ್ಷಭುಗ್ಜಪನ್ನಿತ್ಯಂ ತ್ರಿಭಿರ್ವರ್ಷೈರ್ವ್ಯಪೋಹತಿ ॥ ೧೭೮

ಚಂಡಾಲ ಸ್ತ್ರೀಸಂಗ ಮಾಡಿದರೆ ಮೂರು ವರ್ಷ ಭಿಕ್ಷಾಜೀವನದಿಂದ ಮಂತ್ರ–ಜಪಗಳನ್ನು ಮಾಡಬೇಕು.

ಏಷಾ ಪಾಪಕೃತಾಮುಕ್ತಾ ಚತುರ್ಣಾಮಪಿ ನಿಷ್ಕೃತಿಃ ।
ಪತಿತೈಃಸಂಪ್ರಯುಕ್ತಾನಾಮಿಮಾಃ ಶೃಣುತ ನಿಷ್ಕೃತೀಃ ॥ ೧೭೯

ಇನ್ನು ಪತಿತಸಂಸರ್ಗ ಪ್ರಾಯಶ್ಚಿತ್ತವನ್ನು ಹೇಳಲಾಗುವುದು.

ಸಂವತ್ಸರೇಣ ಪತತಿ ಪತಿತೇನ ಸಹಾಚರನ್ ।
ಯಾಜನಾಧ್ಯಾಪನಾದ್ಯೌನಾನ್ನ ತು ಯಾನಾಸನಾಶನಾತ್ ॥ ೧೮೦

ಕಲಿಸುವುದು, ಯಾಗ ಮಾಡಿಸುವುದು, ವಿವಾಹ, ಊಟ, ಸಂಚಾರ ಇವುಗಳಿಂದ ಪತಿತರ ಪಾಪವು ಇತರರಿಗೂ ಬಂಧಿಸುವುದು.

ಯೋ ಯೇನ ಪತಿತೇನೈಷಾಂ ಸಂಸರ್ಗಂ ಯಾತಿ ಮಾನವಃ ।
ಸ ತಸ್ಯೈವ ವ್ರತಂ ಕುರ್ಯಾತ್ತತ್ಸಂಸರ್ಗವಿಶುದ್ಧಯೇ ॥ ೧೮೧

ಯಾವ ಪಾಪಿಯ ಸಂಸರ್ಗವೋ ಅದಕ್ಕೆ ಅದೇ ಪಾಪಿಯ ಪ್ರಾಯಶ್ಚಿತ್ತಕ್ಕೆ ತಕ್ಕವನು.

ಪತಿತಸ್ಯೋದಕಂ ಕಾರ್ಯಂ ಸಪಿಂಡೈರ್ಬಾಂಧವೈರ್ಬಹಿಃ ।
ನಿಂದಿತೇಽಹನಿ ಸಾಯಾಹ್ನೇ ಜ್ಞಾತ್ಯೃತ್ವಿಗ್ಗುರುಸನ್ನಿಧೌ ॥ ೧೮೨

ಪತಿತನು ಮೃತನಾದರೆ ಊರಹೊರಗೆ ಸಾಯಂಕಾಲ ಋತ್ವಿಗ್ಗುರು ಸನ್ನಿಧಿಯಲ್ಲಿ ಸಪಿಂಡರು ಬಾಂಧವರು ಉದಕದಾನ ಮಾಡಬೇಕು.

ದಾಸೀ ಘಟಮಪಾಂ ಪೂರ್ಣಂ ಪರ್ಯಸ್ಯೇತ್ಪ್ರೇತವತ್ಪದಾ ।
ಅಹೋರಾತ್ರಮುಪಾಸೀರನ್ ಅಶೌಚಂ ಬಾಂಧವೈಃ ಸಹ ॥ ೧೮೩

ಮರಣೋತ್ತರ ಕ್ರಿಯೆಯಲ್ಲಿ ಮಾಡಿದಂತೆ ಜಲಕುಂಭವನ್ನು ದಾಸಿಯು ಕಾಲಿಂದ ತುಳಿದು ನೀರು ಸುರಿಯುವಂತೆ ಮಾಡಬೇಕು. ಒಂದು ಹಗಲು ರಾತ್ರಿ ಅಶೌಚವು.

ನಿವರ್ತೇರಂಶ್ಚ ತಸ್ಮಾತ್ತು ಸಂಭಾಷಣಸಹಾಸನೇ ।
ದಾಯಾದ್ಯಸ್ಯ ಪ್ರದಾನಂ ಚ ಯಾತ್ರಾ ಚೈವ ಹಿ ಲೌಕಿಕೀ ॥ ೧೮೪

ಅಂತಹವರೊಡನೆ ಸಂಭಾಷಣೆ, ಸಹಾಸನ, ದಾಯಭಾಗ ಮುಂತಾದುವನ್ನು ಮಾಡಬಾರದು.

ಜ್ಯೇಷ್ಠತಾ ಚ ನಿವರ್ತೇತ ಜ್ಯೇಷ್ಠಾವಾಪ್ಯಂ ಚ ಯದ್ಧನಂ ।
ಜ್ಯೇಷ್ಠಾಂಶಂ ಪ್ರಾಪ್ನುಯಾಚ್ಚಾಸ್ಯ ಯವೀಯಾನ್ ಗುಣತೋಽಧಿಕಃ ॥ ೧೮೫

ಪತಿತನ ಜ್ಯೇಷ್ಠಾಂಶವು ಇಲ್ಲ. ಉದ್ಧಾರವು ಗುಣವಂತ ಕಿರಿಯವನನ್ನು ಸೇರುವುದು.

ಪ್ರಾಯಶ್ಚಿತ್ತೇ ತು ಚರಿತೇ ಪೂರ್ಣಕುಂಭಮಪಾಂ ನವಂ ।
ತೇನೈವ ಸಾರ್ಧಂ ಪ್ರಾಸ್ಯೇಯುಃ ಸ್ನಾತ್ವಾ ಪುಣ್ಯೇ ಜಲಾಶಯೇ ॥ ೧೮೬

ಪತಿತನು ಪ್ರಾಯಶ್ಚಿತ್ತ ಮಾಡಿದರೆ, ಸ್ನಾನಮಾಡಿ ಸಪಿಂಡರು ಘಟ ಪ್ರಕ್ಷೇಪವನ್ನು ಮಾಡಬೇಕು.

ಸ ತ್ವಪ್ಸು ತಂ ಘಟಂ ಪ್ರಾಸ್ಯ ಪ್ರವಿಶ್ಯ ಭವನಂ ಸ್ವಕಂ ।
ಸರ್ವಾಣಿ ಜ್ಞಾತಿಕಾರ್ಯಾಣಿ ಯಥಾಪೂರ್ವಂ ಸಮಾಚರೇತ್ ॥ ೧೮೭

ಮನೆಗೆ ಬಂದು ಯಥಾವಿಧಿ ಉತ್ತರಕ್ರಿಯೆಗಳನ್ನು ಮಾಡಬೇಕು.

ಏತದೇವ ವಿಧಿಂ ಕುರ್ಯಾದ್ಯೋಷಿತ್ಸು ಪತಿತಾಸ್ವಪಿ ।
ವಸ್ತ್ರಾನ್ನಪಾನಂ ದೇಯಂ ತು ವಸೇಯುಶ್ಚ ಗೃಹಾಂತಿಕೇ ॥ ೧೮೮

ಪತಿತ ಸ್ತ್ರೀಯರು ಮೃತರಾದರೆ ವಸ್ತ್ರ, ಅನ್ನದಾನ ಪೂರ್ವಕ ಉದಕ್ರಿಯೆ.

ಏನಸ್ವಿಭಿರನಿರ್ಣಿಕ್ತೈರ್ನಾರ್ಥಂ ಕಿಂಚಿತ್ಸಹಾಚರೇತ್ ।
ಕೃತನಿರ್ಣೇಜನಾಂಶ್ಚೈವ ನ ಜುಗುಪ್ಸೇತ ಕರ್ಹಿಚಿತ್ ॥ ೧೮೯

ಪತಿತರೊಡನೆ ಯಾವ ಕಾರ್ಯವೂ ಇಲ್ಲ. ಪ್ರಾಯಶ್ಚಿತ್ತ ಮಾಡಿದ ಮೇಲೆ ಅವರನ್ನು ನೋಡಿ ನಗಬಾರದು. ಹೇಸಿಗೆ ಪಡಬಾರದು.

ಬಾಲಘ್ನಾಂಶ್ಚ ಕೃತಘ್ನಾಂಶ್ಚ ವಿಶುದ್ಧಾನಪಿ ಧರ್ಮತಃ ।
ಶರಣಾಗತಹಂತೄಂಶ್ಚ ಸ್ತ್ರೀಹಂತೄಂಶ್ಚ ನ ಸಂವಸೇತ್ ॥ ೧೯೦

ಬಾಲಹತ್ಯೆ, ಕೃತಘ್ನತೆ, ಶರಣಾಗತ ಹತ್ಯೆ, ಸ್ತ್ರೀ ಹತ್ಯೆ ಇವುಗಳನ್ನು ಮಾಡಿದವರು ಪ್ರಾಯಶ್ಚಿತ್ತ ಮಾಡಿಕೊಂಡರೂ ಸಹವಾಸ ಮಾಡಬಾರದು.

ಯೇಷಾಂ ದ್ವಿಜಾನಾಂ ಸಾವಿತ್ರೀ ನಾನೂಚ್ಯೇತ ಯಥಾವಿಧಿ ।
ತಾಂಶ್ಚಾರಯಿತ್ವಾ ತ್ರೀನ್ ಕೃಚ್ಛ್ರಾನ್ಯಥಾವಿಧ್ಯುಪನಾಯಯೇತ್ ॥ ೧೯೧

ವಿಹಿತಕಾಲದಲ್ಲಿ ಉಪನಯನವಾಗದ ತ್ರೈವರ್ಣಿಕರಿಗೆ ಮೂರು ಪ್ರಾಜಾಪತ್ಯ ಕೃಚ್ಛ್ರವನ್ನು ಮಾಡಿಸಿ ಉಪನಯನ ಮಾಡಬಹುದು.

ಪ್ರಾಯಶ್ಚಿತ್ತಂ ಚಿಕೀರ್ಷಂತಿ ವಿಕರ್ಮಸ್ಥಾಸ್ತು ಯೇ ದ್ವಿಜಾಃ ।
ಬ್ರಹ್ಮಣಾ ಚ ಪರಿತ್ಯಕ್ತಾಸ್ತೇಷಾಮಪ್ಯೇತದಾದಿಶೇತ್ ॥ ೧೯೨

ಉಪನೀತರು ಕುಕರ್ಮಿಗಳಾಗಿ ವೇದಹೀನರಾದರೆ ಅವರಿಗೂ ಪುನರುಪನಯನವು.

ಯದ್ಗರ್ಹಿತೇನಾರ್ಜಯಂತಿ ಕರ್ಮಣಾ ಬ್ರಾಹ್ಮಣಾ ಧನಂ ।
ತಸ್ಯೋತ್ಸರ್ಗೇಣ ಶುಧ್ಯಂತಿ ಜಪ್ಯೇನ ತಪಸೈವ ಚ ॥ ೧೯೩

ಬ್ರಾಹ್ಮಣನು ನಿಂದಿತಕರ್ಮದಿಂದ ಧನಾರ್ಜನೆ ಮಾಡಿದರೆ ಆ ಧನವನ್ನು ಬಿಟ್ಟು ಜಪತಪಗಳಿಂದ ಶುದ್ಧಿಯು.

ಜಪಿತ್ವಾ ತ್ರೀಣಿ ಸಾವಿತ್ರ್ಯಾಃ ಸಹಸ್ರಾಣಿ ಸಮಾಹಿತಃ ।
ಮಾಸಂ ಗೋಷ್ಠೇ ಪಯಃ ಪೀತ್ವಾ ಮುಚ್ಯತೇಽಸತ್ಪ್ರತಿಗ್ರಹಾತ್ ॥ ೧೯೪

ದುಷ್ಟದಾನ ಹಿಡಿದರೆ ಮೂರುಸಾವಿರ ಗಾಯತ್ರೀ ಜಪ ಮಾಡಿ ಒಂದು ತಿಂಗಳು ಹಟ್ಟಿಯಲ್ಲಿ ವಾಸವಾಗಿದ್ದು ಹಾಲುಕುಡಿದು ಬದುಕಬೇಕು.

ಉಪವಾಸಕೃಶಂ ತಂ ತು ಗೋವ್ರಜಾತ್ಪುನರಾಗತಂ ।
ಪ್ರಣತಂ ಪ್ರತಿ ಪೃಚ್ಛೇಯುಃ ಸಾಮ್ಯಂ ಸೌಮ್ಯೇಚ್ಛಸೀತಿ ಕಿಂ ॥ ೧೯೫

ಉಪವಾಸದಿಂದ ಕುಂದಿದ ಅವನು ಬಂದು ನಮಸ್ಕರಿಸುವಾಗ ನಮ್ಮ ಸಾಮ್ಯವನ್ನು ಇಚ್ಛಿಸುತ್ತೀಯೋ ಎಂದು ಕೇಳಬೇಕು.

ಸತ್ಯಮುಕ್ತ್ವಾ ತು ವಿಪ್ರೇಷು ವಿಕಿರೇದ್ಯವಸಂ ಗವಾಂ ।
ಗೋಭಿಃ ಪ್ರವರ್ತಿತೇ ತೀರ್ಥೇ ಕುರ್ಯುಸ್ತಸ್ಯ ಪರಿಗ್ರಹಂ ॥ ೧೯೬

ಸತ್ಯವಾಗಿ ಅಸತ್ಪ್ರತಿಗ್ರಹವನ್ನು ಮಾಡುವುದಿಲ್ಲ ಎಂದು ಹೇಳಿದಮೇಲೆ ಅವನು ಗೋವುಗಳಿಗೆ ಹುಲ್ಲು ಕೊಡಬೇಕು. ಮತ್ತೆ ಅವನನ್ನು ಸ್ವೀಕರಿಸಬಹುದು.

ವ್ರಾತ್ಯಾನಾಂ ಯಾಜನಂ ಕೃತ್ವಾ ಪರೇಷಾಮಂತ್ಯಕರ್ಮ ಚ ।
ಅಭಿಚಾರಮಹೀನಂ ಚ ತ್ರಿಭಿಃ ಕೃಚ್ಛ್ರೈರ್ವ್ಯಪೋಹತಿ ॥ ೧೯೭

ವ್ರಾತ್ಯಸ್ತೋಮ, ಪರಕೀಯರ ಉತ್ತರಕ್ರಿಯೆ, ನಿರಪರಾಧಿ ಅಭಿಚಾರ ಇವುಗಳನ್ನು ಮಾಡಿದರೆ ಮೂರು ಕೃಚ್ಛ್ರವು ಪ್ರಾಯಶ್ಚಿತ್ತವು.

ಶರಣಾಗತಂ ಪರಿತ್ಯಜ್ಯ ವೇದಂ ವಿಪ್ಲಾವ್ಯ ಚ ದ್ವಿಜಃ ।
ಸಂವತ್ಸರಂ ಯವಾಹಾರಸ್ತತ್ಪಾಪಮಪಸೇಧತಿ ॥ ೧೯೮

ಶರಣಾಗತ ಪರಿತ್ರಾಣದಲ್ಲಿ ಅನಾದರ, ಅನಧಿಕಾರಿಗೆ ವೇದೋಪದೇಶ ಇದಕ್ಕೆ ಒಂದು ವರ್ಷ ಯವಾಹಾರ ಮಾಡಬೇಕು.

ಶ್ವಸೃಗಾಲಖರೈರ್ದಷ್ಟೋ ಗ್ರಾಮ್ಯೈಃ ಕ್ರವ್ಯಾದ್ಭಿರೇವ ಚ ।
ನರಾಶ್ವೋಷ್ಟ್ರವರಾಹೈಶ್ಚ ಪ್ರಾಣಾಯಾಮೇನ ಶುಧ್ಯತಿ ॥ ೧೯೯

ನಾಯಿ, ಕುದುರೆ, ಕತ್ತೆ, ಊರಿನ ಮಾಂಸಾಹಾರಿ ಪ್ರಾಣಿ, ಮನುಷ್ಯ, ಕುದುರೆ, ಒಂಟೆ, ಹಂದಿ ಇವುಗಳು ಕಚ್ಚಿದರೆ ಪ್ರಾಣಾಯಾಮ ಮಾಡಬೇಕು.

ಷಷ್ಠಾನ್ನಕಾಲತಾ ಮಾಸಂ ಸಂಹಿತಾಜಪ ಏವ ವಾ ।
ಹೋಮಾಶ್ಚ ಸಕಲಾ ನಿತ್ಯಮಪಾಂಕ್ತ್ಯಾನಾಂ ವಿಶೋಧನಂ ॥ ೨೦೦

ಪಂಕ್ತಿದೂಷಣ ಪ್ರಾಯಶ್ಚಿತ್ತವು ಏನೆಂದರೆ ಮೂರು ದಿನ ಉಪವಾಸ ವಿದ್ದು ಮೂರನೆ ದಿನ ಸಾಯಂ ಭೋಜನ (ಆರನೆ ಊಟ) ಹೀಗೆ ಒಂದು ತಿಂಗಳು ಸಂಹಿತಾ ಜಪ-ಹೋಮಗಳು ಪ್ರತ್ಯೇಕ.

ಉಷ್ಟ್ರಯಾನಂ ಸಮಾರುಹ್ಯ ಖರಯಾನಂ ತು ಕಾಮತಃ ।
ಸ್ನಾತ್ವಾ ತು ವಿಪ್ರೋ ದಿಗ್ವಾಸಾಃ ಪ್ರಾಣಾಯಾಮೇನ ಶುಧ್ಯತಿ ॥ ೨೦೧

ಒಂಟೆ, ಕತ್ತೆ ಇವುಗಳ ಗಾಡಿ ಏರಿದರೆ ಸ್ನಾನಮಾಡಿ ಪ್ರಾಣಾಯಾಮ ಮಾಡಬೇಕು.

ವಿನಾದ್ಭಿರಪ್ಸು ವಾಪ್ಯಾರ್ತಃ ಶಾರೀರಂ ಸನ್ನಿವೇಶ್ಯ ಚ ।
ಸಚೈಲೋ ಬಹಿರಾಪ್ಲುತ್ಯ ಗಾಮಾಲಭ್ಯ ವಿಶುಧ್ಯತಿ ॥ ೨೦೨

ಮಲ–ಮೂತ್ರಗಳನ್ನು ನೀರಿನಲ್ಲಿ ಅಥವಾ ನೀರಿಲ್ಲದಿರುವಾಗ ಬಿಡಬೇಕಾಗಿ ಬಂದರೆ ಉಟ್ಟಬಟ್ಟೆ ಸಹಿತಮಿಂದು ಗೋವನ್ನು ಮುಟ್ಟಿದರೆ ಶುದ್ಧಿಯು.

ವೇದೋದಿತಾನಾಂ ನಿತ್ಯಾನಾಂ ಕರ್ಮಣಾಂ ಸಮತಿಕ್ರಮೇ ।
ಸ್ನಾತಕವ್ರತಲೋಪೇ ಚ ಪ್ರಾಯಶ್ಚಿತ್ತಮಭೋಜನಂ ॥ ೨೦೩

ಪ್ರಾಯಶ್ಚಿತ್ತವನ್ನು ಹೆಸರೆತ್ತಿ ಹೇಳದ ವೈದಿಕಕರ್ಮ ತ್ಯಾಗಕ್ಕೆ ಮತ್ತು ಸ್ನಾತಕ ವ್ರತಲೋಪಕ್ಕೆ ಒಂದು ಹಗಲು ಉಪವಾಸವನ್ನು ಮಾಡಬೇಕು.

ಹುಂಕಾರಂ ಬ್ರಾಹ್ಮಣಸ್ಯೋಕ್ತ್ವಾ ತ್ವಂಕಾರಂ ಚ ಗರೀಯಸಃ ।
ಸ್ನಾತ್ವಾನಶ್ನನ್ನಹಃಶೇಷಮಭಿವಾದ್ಯ ಪ್ರಸಾದಯೇತ್ ॥ ೨೦೪

ಹುಂ ಎಂದು ಬ್ರಾಹ್ಮಣನನ್ನು ಗದರಿಸಿದರೆ, ನೀನು ಎಂದು ಮಹಾತ್ಮನನ್ನು ಹೇಳಿದರೆ ಆ ಹಗಲು ಉಪವಾಸವಿದ್ದು ಮಿಂದು ಅವನನ್ನು ನಮಸ್ಕರಿಸಿ ಸಂತೋಷಗೊಳಿಸಬೇಕು.

ತಾಡಯಿತ್ವಾ ತೃಣೇನಾಪಿ ಕಂಠೇ ವಾಬಧ್ಯ ವಾಸಸಾ ।
ವಿವಾದೇ ವಾ ವಿನಿರ್ಜಿತ್ಯ ಪ್ರಣಿಪತ್ಯ ಪ್ರಸಾದಯೇತ್ ॥ ೨೦೫

ಬ್ರಾಹ್ಮಣನಿಗೆ ಹುಲ್ಲಿನಿಂದ ಹೊಡೆದರೆ, ಕುತ್ತಿಗೆಗೆ ಬಟ್ಟೆ ಬಿಗಿದರೆ ಜಗಳ ಮಾಡಿ ಗೆದ್ದರೆ ನಮಸ್ಕರಿಸಿ ಸಂತೋಷಪಡಿಸಬೇಕು.

ಅವಗೂರ್ಯ ತ್ವಬ್ದಶತಂ ಸಹಸ್ರಮಭಿಹತ್ಯ ಚ ।
ಜಿಘಾಂಸಯಾ ಬ್ರಾಹ್ಮಣಸ್ಯ ನರಕಂ ಪ್ರತಿಪದ್ಯತೇ ॥ ೨೦೬

ಬ್ರಾಹ್ಮಣನನ್ನು ಹೊಡೆಯಲು ದೊಣ್ಣೆಯೆತ್ತಿದರೆ ನೂರು ವರ್ಷ ನರಕ, ಹೊಡೆದರೆ ಸಾವಿರ ವರ್ಷ ನರಕ, ಹೊಡೆದು ರಕ್ತಸೋರಿದರೆ ಆ ರಕ್ತ ಒದ್ದೆ ಮಾಡಿದ ಸಂಖ್ಯೆಯಷ್ಟು ಸಾವಿರ ವರ್ಷ ನರಕವಿದೆ ಎಂದು ಹೇಳುವ ಶ್ಲೋಕ—

ಶೋಣಿತಂ ಯಾವತಃ ಪಾಂಸೂನ್ ಸಂಗೃಹ್ಣಾತಿ ಮಹೀತಲೇ ।
ತಾವಂತ್ಯಬ್ದಸಹಸ್ರಾಣಿ ತತ್ಕರ್ತಾ ನರಕೇ ವಸೇತ್ ॥ ೨೦೭

ಇದರ ಪ್ರಾಯಶ್ಚಿತ್ತವನ್ನು ಇನ್ನು ಹೇಳುತ್ತಾರೆ—

ಅವಗೂರ್ಯ ಚರೇತ್ಕೃಚ್ಛ್ರಮತಿಕೃಚ್ಛ್ರಂ ನಿಪಾತನೇ ।
ಕೃಚ್ಛ್ರಾತಿಕೃಚ್ಛ್ರೌ ಕುರ್ವೀತ ವಿಪ್ರಸ್ಯೋತ್ಪಾದ್ಯ ಶೋಣಿತಂ ॥ ೨೦೮

ದೊಣ್ಣೆ ಎತ್ತಿದರೆ ಬ್ರಾಹ್ಮಣನಿಗೆ ಹೊಡೆಯಲು ಕೃಚ್ಛ್ರವು. ಹೊಡೆದರೆ ಅತಿಕೃಚ್ಛ್ರವು ನೆತ್ತರು ಬಿದ್ದರೆ ಎರಡೂ ಪ್ರಾಯಶ್ಚಿತ್ತವು.

ಅನುಕ್ತನಿಷ್ಕೃತೀನಾಂ ತು ಪಾಪಾನಾಮಪನುತ್ತಯೇ ।
ಶಕ್ತಿಂ ಚಾವೇಕ್ಷ್ಯ ಪಾಪಂ ಚ ಪ್ರಾಯಶ್ಚಿತ್ತಂ ಪ್ರಕಲ್ಪಯೇತ್ ॥ ೨೦೯

ಹೇಳದ ಅಪರಾಧಕ್ಕೆ ಅಪರಾಧಿಯ ಶಕ್ತಿ ಮಾಡಿದ ಪಾಪಗಳ ಸಂತುಲನೆಯಿಂದ ಪ್ರಾಯಶ್ಚಿತ್ತವನ್ನು ಊಹಿಸಬೇಕು.

ಯೈರಭ್ಯುಪಾಯೈರೇನಾಂಸಿ ಮಾನವೋ ವ್ಯಪಕರ್ಷತಿ ।
ತಾನ್ವೋಽಭ್ಯುಪಾಯಾನ್ ವಕ್ಷ್ಯಾಮಿ ದೇವರ್ಷಿಪಿತೃಸೇವಿತಾನ್ ॥ ೨೧೦

ದೇವ, ಋಷಿ, ಪಿತೃಗಳು ಆಚರಿಸಿದ ಪಾಪನಾಶಕ ಉಪಾಯವು ಮನುಷ್ಯರಿಗೂ ಪವಿತ್ರವಾಗಿದೆ. ಅದನ್ನು ಹೇಳುತ್ತೇನೆ—

ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಂ ।
ತ್ರ್ಯಹಂ ಪರಂ ಚ ನಾಶ್ನೀಯಾತ್ಪ್ರಾಜಾಪತ್ಯಂ ಚರನ್ ದ್ವಿಜಃ ॥ ೨೧೧

ಮೂರು ಹಗಲು ಬೆಳಿಗ್ಗೆ ಮೂರು ಹಗಲು ಸಾಯಂ ಮತ್ತೆ ಮೂರು ದಿನ ಬೇಡದೆ, ಸಿಕ್ಕಿದರೆ ಉಣ್ಣುವುದು, ಮೂರು ದಿನ ಉಪವಾಸ ಇದು ಪ್ರಾಜಾಪತ್ಯಕೃಚ್ಛ್ರವು.

ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।
ಏಕರಾತ್ರೋಪವಾಸಶ್ಚ ಕೃಚ್ಛ್ರಂ ಸಾಂತಪನಂ ಸ್ಮೃತಂ ॥ ೨೧೨

ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ, ಕುಶೋದಕ

ಇವುಗಳು ಒಂದೊಂದು ದಿನ ಆಹಾರ. ಮತ್ತೆ ಒಂದು ಪೂರ್ಣ ಉಪವಾಸ ಇದು ಸಾಂತಪನ ಕೃಚ್ಛ್ರವು.

ಏಕೈಕಂ ಗ್ರಾಸಮಶ್ನೀಯಾತ್ತ್ರ್ಯಹಾಣಿ ತ್ರೀಣಿ ಪೂರ್ವವತ್ ।
ತ್ರ್ಯಹಂ ಚೋಪವಸೇದಂತ್ಯಮತಿಕೃಚ್ಛ್ರಂ ಚರನ್ದ್ವಿಜಃ ॥ ೨೧೩

ಮೂರು ದಿನ ಒಂದೊಂದು ತುತ್ತು, ಮತ್ತೆ ಮೂರು ದಿನ ಉಪವಾಸ ಮಾಡಿದರೆ ಅದು ಅತಿಕೃಚ್ಛ್ರವು.

ತಪ್ತಕೃಚ್ಛ್ರಂ ಚರನ್ವಿಪ್ರೋ ಜಲಕ್ಷೀರಘೃತಾನಿಲಾನ್ ।
ಪ್ರತಿತ್ರ್ಯಹಂ ಪಿಬೇದುಷ್ಣಾನ್ ಸಕೃತ್ಸ್ನಾಯೀ ಸಮಾಹಿತಃ ॥ ೨೧೪

ಬಿಸಿಯಾದ ಹಾಲು, ನೀರು, ತುಪ್ಪ, ವಾಯು ಇವುಗಳನ್ನು ಒಂದೊಂದು ದಿನ ಸೇವಿಸುತ್ತ ಒಮ್ಮೆ ಮಿಂಯುತ್ತಿದ್ದರೆ ತಪ್ತಕೃಚ್ಛ್ರ.

ಯತಾತ್ಮನೋಽಪ್ರಮತ್ತಸ್ಯ ದ್ವಾದಶಾಹಮಭೋಜನಂ ।
ಪರಾಕೋ ನಾಮ ಕೃಚ್ಛ್ರೋಽಯಂ ಸರ್ವಪಾಪಾಪನೋದನಃ ॥ ೨೧೫

ಇಂದ್ರಿಯನಿಗ್ರಹವುಳ್ಳವನಾಗಿ ಹನ್ನೆರಡು ದಿನ ನಿರಂತರ ಉಪವಾಸವನ್ನು ಮಾಡಿದರೆ ಅದು ಪರಾಕವು.

ಏಕೈಕಂ ಹ್ರಾಸಯೇತ್ಪಿಂಡಂ ಕೃಷ್ಣೇ ಶುಕ್ಲೇ ಚ ವರ್ಧಯೇತ್ ।
ಉಪಸ್ಪೃಶಂಸ್ತ್ರಿಷವಣಂ ಏತಚ್ಚಾಂದ್ರಾಯಣಂ ಸ್ಮೃತಂ ॥ ೨೧೬

ಮೂರು ಹೊತ್ತು ಮಿಂಯುತ್ತ ದಿನಕ್ಕೆ ಒಂದೊಂದು ಮುದ್ದೆ ಅನ್ನ ಚಂದ್ರನ ಕಲೆ ಏರಿದಂತೆ ಏರಿಸಿ ಕ್ರಮೇಣ ಇಳಿಸಿ ತಿನ್ನುತ್ತ ಒಂದು ತಿಂಗಳು ವ್ರತ ಮಾಡಿದರೆ ಅದು ಚಾಂದ್ರಾಯಣವು. ಇದು ಹುಣ್ಣಿಮೆಯಿಂದ ಹುಣ್ಣಿಮೆಗೆ. ಪಿಪೀಲಿಕಾಮಧ್ಯ ಚಾಂದ್ರಾಯಣ.

ಏತಮೇವ ವಿಧಿಂ ಕೃತ್ಸ್ನಮಾಚರೇದ್ಯವಮಧ್ಯಮೇ ।
ಶುಕ್ಲಪಕ್ಷಾದಿನಿಯತಶ್ಚರಂಶ್ಚಾಂದ್ರಾಯಣಂ ವ್ರತಂ ॥ ೨೧೭

ಯವಮಧ್ಯ ಚಾಂದ್ರಾಯಣವು ಹೇಗೆಂದರೆ ಅಮಾವಾಸ್ಯೆಯ ಮರುದಿನದಿಂದ ಪುನರಮಾವಾಸೆವರೆಗೆ ಏರಿಸುತ್ತಾ ಇಳಿಸುತ್ತ ( ಅನ್ನದ ತುತ್ತು ) ಒಪ್ಪತ್ತು ಉಣಬೇಕು.

ಅಷ್ಟಾವಷ್ಟೌ ಸಮಶ್ನೀಯಾತ್ಪಿಂಡಾನ್ಮಧ್ಯಂದಿನೇ ಸ್ಥಿತೇ ।
ನಿಯತಾತ್ಮಾ ಹವಿಷ್ಯಾಶೀ ಯತಿಚಾಂದ್ರಾಯಣಂ ಚರನ್ ॥ ೨೧೮

ಒಂದು ತಿಂಗಳು ಒಂದು ಹೊತ್ತು ಎಂಟೆಂಟು ತುತ್ತು ಮಾತ್ರ ಉಂಡರೆ ಅದು ಯತಿಚಾಂದ್ರಾಯಣವು.

ಚತುರಃ ಪ್ರಾತರಶ್ನೀಯಾತ್ಪಿಂಡಾನ್ವಿಪ್ರಃ ಸಮಾಹಿತಃ ।
ಚತುರೋಽಸ್ತಮಿತೇ ಸೂರ್ಯೇ ಶಿಶುಚಾಂದ್ರಾಯಣಂ ಸ್ಮೃತಂ ॥ ೨೧೯

ಎರಡು ಹೊತ್ತು ನಾಲ್ಕು ನಾಲ್ಕು ತಿನ್ನುತ್ತ ಒಂದು ತಿಂಗಳಿದ್ದರೆ ಅದು ಶಿಶು ಚಾಂದ್ರಾಯಣವು.

ಯಥಾಕಥಂಚಿತ್ಪಿಂಡಾನಾಂ ತಿಸ್ರೋಽಶೀತೀಃ ಸಮಾಹಿತಃ ।
ಮಾಸೇನಾಶ್ನನ್ ಹವಿಷ್ಯಸ್ಯ ಚಂದ್ರಸ್ಯೈತಿ ಸಲೋಕತಾಂ ॥ ೨೨೦

ಇನ್ನೂರ ನಲುವತ್ತು ತುತ್ತು ಮಾತ್ರ ಒಂದು ತಿಂಗಳು ತಿಂದು ಬದುಕಿದರೆ ಅದು ಚಂದ್ರಪ್ರಾಪ್ತಿದಾಯಕವು.

ಏತದ್ರುದ್ರಾಸ್ತಥಾದಿತ್ಯಾ ವಸವಶ್ಚಾಚರನ್ ವ್ರತಂ ।
ಸರ್ವಾಕುಶಲಮೋಕ್ಷಾಯ ಮರುತಶ್ಚ ಮಹರ್ಷಿಭಿಃ ॥ ೨೨೧

ರುದ್ರರು, ಆದಿತ್ಯರು, ವಸುಗಳು, ಮರುತ್‌ಗಳು, ಸರ್ವಾಮಂಗಲ ನಿವಾರಣೆಗೆ ಮಹರ್ಷಿಗಳು ಕೂಡ ಈ ವ್ರತವನ್ನು ಆಚರಿಸಿದರು.

ಮಹಾವ್ಯಾಹೃತಿಭಿರ್ಹೋಮಃ ಕರ್ತವ್ಯಃ ಸ್ವಯಮನ್ವಹಂ ।
ಅಹಿಂಸಾಸತ್ಯಮಕ್ರೋಧಮಾರ್ಜವಂ ಚ ಸಮಾಚರೇತ್ ॥ ೨೨೨

ವ್ರತಕಾಲದಲ್ಲಿ ಮಹಾವ್ಯಾಹೃತಿಗಳಿಂದ ಹೋಮವನ್ನು ದಿನಾ ಮಾಡಬೇಕು. ಅಹಿಂಸಾ, ಸತ್ಯ, ಅಕ್ರೋಧ, ಆರ್ಜವ ಈ ಗುಣಗಳೂ ಆಚರಣೀಯಗಳು.

ತ್ರಿರಹಸ್ತ್ರಿರ್ನಿಶಾಯಾಂ ಚ ಸವಾಸಾ ಜಲಮಾವಿಶೇತ್ ।
ಸ್ತ್ರೀಶೂದ್ರಪತಿತಾಂಶ್ಚೈವ ನಾಭಿಭಾಷೇತ ಕರ್ಹಿಚಿತ್ ॥ ೨೨೩

ಹಗಲು ಮೂರು ಬಾರಿ, ರಾತ್ರಿ ಮೂರು ಬಾರಿ ಸ್ನಾನ, ಸ್ತ್ರೀ ಶೂದ್ರರೊಡನೆ ಮೌನವು ವ್ರತಕಾಲದ ನಿಯಮಗಳು.

ಸ್ಥಾನಾಸನಾಭ್ಯಾಂ ವಿಹರೇದಶಕ್ತೋಽಧಃ ಶಯೀತ ವಾ ।
ಬ್ರಹ್ಮಚಾರೀ ವ್ರತೀ ಚ ಸ್ಯಾದ್ಗುರುದೇವದ್ವಿಜಾರ್ಚಕಃ ॥ ೨೨೪

ಮತ್ತು ಹಗಲು ನಿಂತು, ಕುಳಿತು ಹೊತ್ತು ಕಳೆಯಬೇಕು. ಅಸಾಧ್ಯವಾದರೆ ಮಲಗಬಹುದು. ಬ್ರಹ್ಮಚರ್ಯ ದಂಡಾಜಿನಮೌಂಜೀಧಾರಣೆ ಗುರುದೇವ ಬ್ರಾಹ್ಮಣ ಭಕ್ತಿ ಉಳ್ಳವನಾಗಬೇಕು.

ಸಾವಿತ್ರೀಂ ಚ ಜಪೇನ್ನಿತ್ಯಂ ಪವಿತ್ರಾಣಿ ಚ ಶಕ್ತಿತಃ ।
ಸರ್ವೇಷ್ವೇವ ವ್ರತೇಷ್ವೇವಂ ಪ್ರಾಯಶ್ಚಿತ್ತಾರ್ಥಮಾದೃತಃ ॥ ೨೨೫

ಗಾಯತ್ರೀ ಜಪ ಮಾಡುತ್ತಿರಬೇಕು. ಪವಿತ್ರ ಮಂತ್ರಗಳೂ ಆಗಬಹುದು. ಎಲ್ಲ ಪ್ರಾಯಶ್ಚಿತ್ತ ವ್ರತಗಳಲ್ಲಿ ಇದೇ ನಿಯಮವು.

ಏತೈರ್ದ್ವಿಜಾತಯಃ ಶೋಧ್ಯಾ ವ್ರತೈರಾವಿಷ್ಕೃತೈನಸಃ ।
ಅನಾವಿಷ್ಕೃತಪಾಪಾಂಸ್ತು ಮಂತ್ರೈರ್ಹೋಮೈಶ್ಚ ಶೋಧಯೇತ್ ॥ ೨೨೬

ಪ್ರಸಿದ್ಧ ಪಾಪಗಳಿಗೆ ಈ ವಿಧಿಯು ರಹಸ್ಯಪಾಪಕ್ಕೆ ಮಂತ್ರ–ಜಪ–ಹೋಮಗಳು ರಹಸ್ಯ ಪ್ರಾಯಶ್ಚಿತ್ತಗಳು.

ಖ್ಯಾಪನೇನಾನುತಾಪೇನ ತಪಸಾಧ್ಯಯನೇನ ಚ ।
ಪಾಪಕೃನ್ಮುಚ್ಯತೇ ಪಾಪಾತ್ತಥಾ ದಾನೇನ ಚಾಪದಿ ॥ ೨೨೭

ನಿವೇದನೆ, ಪಶ್ಚಾತ್ತಾಪ, ತಪಸ್ಸು, ಅಧ್ಯಯನ, ದಾನ ಇವುಗಳಿಂದಲೂ ಪಾಪ ಪರಿಹಾರವು.

ಯಥಾ ಯಥಾ ನರೋಽಧರ್ಮಂ ಸ್ವಯಂ ಕೃತ್ವಾನುಭಾಷತೇ ।
ತಥಾ ತಥಾ ತ್ವಚೇವಾಹಿಸ್ತೇನಾಧರ್ಮೇಣ ಮುಚ್ಯತೇ ॥ ೨೨೮

ಸ್ವಯಂಕೃತಪಾಪದ ನಿವೇದನೆಯಿಂದ ಹಾವು ಪರೆ ಬಿಡುವಂತೆ ಪಾಪದ ವಿಮೋಚನೆಯಾಗುವುದು.

ಯಥಾ ಯಥಾ ಮನಸ್ತಸ್ಯ ದುಷ್ಕೃತಂ ಕರ್ಮ ಗರ್ಹತಿ ।
ತಥಾ ತಥಾ ಶರೀರಂ ತತ್ತೇನಾಧರ್ಮೇಣ ಮುಚ್ಯತೇ ॥ ೨೨೯

ಪಾಪದ ನಿಂದೆಯಿಂದಲೂ ಪಾಪ ನಾಶವಾಗುವುದು.

ಕೃತ್ವಾ ಪಾಪಂ ಹಿ ಸಂತಪ್ಯ ತಸ್ಮಾತ್ಪಾಪಾತ್ಪ್ರಮುಚ್ಯತೇ ।
ನೈವಂ ಕುರ್ಯಾಂ ಪುನರಿತಿ ನಿವೃತ್ಯಾ ಪೂಯತೇ ತು ಸಃ ॥ ೨೩೦

ತಪ್ಪು ಮಾಡಿ ಇನ್ನು ಇಂತಹ ಪಾಪವನ್ನು ಮಾಡಲಾರೆನೆಂದು ತೋರಿದರೆ ಆಗಲೂ ಶುದ್ಧಿಯು.

ಏವಂ ಸಂಚಿಂತ್ಯ ಮನಸಾ ಪ್ರೇತ್ಯ ಕರ್ಮಫಲೋದಯಂ ।
ಮನೋವಾಙ್ಮೂರ್ತಿಭಿರ್ನಿತ್ಯಂ ಶುಭಂ ಕರ್ಮ ಸಮಾಚರೇತ್ ॥ ೨೩೧

ಕರ್ಮಗಳ ಪರಿಣಾಮದ ಚಿಂತನೆಯಿಂದ ಮನೋವಾಕ್ಕಾಯಗಳಿಂದ ಸತ್ಕಾರ್ಯವನ್ನೇ ಮಾಡಬೇಕು.

ಅಜ್ಞಾನಾದ್ಯದಿ ವಾ ಜ್ಞಾನಾತ್ಕೃತ್ವಾ ಕರ್ಮ ವಿಗರ್ಹಿತಂ ।
ತಸ್ಮಾದ್ವಿಮುಕ್ತಿಮನ್ವಿಚ್ಛನ್ ದ್ವಿತೀಯಂ ನ ಸಮಾಚರೇತ್ ॥ ೨೩೨

ತಿಳಿದೋ ತಿಳಿಯದೆಯೋ ಪಾಪ ಮಾಡಿದ ಮೇಲೆ ಪುನಃ ಮಾಡಬಾರದು.

ಯಸ್ಮಿನ್ಕರ್ಮಣ್ಯಸ್ಯ ಕೃತೇ ಮನಸಃ ಸ್ಯಾದಲಾಘವಂ ।
ತಸ್ಮಿಂಸ್ತಾವತ್ತಪಃ ಕುರ್ಯಾದ್ಯಾವತ್ತುಷ್ಟಿಕರಂ ಭವೇತ್ ॥ ೨೩೩

ಮನಃ ಸಂತೋಷವಾಗುವವರೆಗೆ ತಪಸ್ಸನ್ನು ಮಾಡುತ್ತಿರಬೇಕು.

ತಪೋಮೂಲಮಿದಂ ಸರ್ವಂ ದೈವಮಾನುಷಕಂ ಸುಖಂ ।
ತಪೋಮಧ್ಯಂ ಬುಧೈಃ ಪ್ರೋಕ್ತಂ ತಪೋಽನ್ತಂ ವೇದದರ್ಶಿಭಿಃ ॥ ೨೩೪

ದೇವತೆಗಳ ಮತ್ತು ಮನುಷ್ಯರ ಸುಖದ ಮೂಲವು ತಪಸ್ಸು. ಸುಖ ಉಳಿಯುವುದು ಅದರಿಂದ. ಅದರ ವಿಧಿಯು ವೇದಬೋಧ್ಯವಾಗಿದೆ.

ಬ್ರಾಹ್ಮಣಸ್ಯ ತಪೋ ಜ್ಞಾನಂ ತಪಃ ಕ್ಷತ್ರಸ್ಯ ರಕ್ಷಣಂ ।
ವೈಶ್ಯಸ್ಯ ತು ತಪೋ ವಾರ್ತಾ ತಪಃ ಶೂದ್ರಸ್ಯ ಸೇವನಂ ॥ ೨೩೫

ಬ್ರಾಹ್ಮಣನಿಗೆ ಆತ್ಮಜ್ಞಾನವು, ಕ್ಷತ್ರಿಯನಿಗೆ ರಕ್ಷಣೆಯು, ವೈಶ್ಯನಿಗೆ ಕೃಷಿಯು, ಶೂದ್ರನಿಗೆ ಸೇವೆಯು. ತಪಸ್ಸು ಬೇರೆಯಿಲ್ಲ.

ಋಷಯಃ ಸಂಯತಾತ್ಮಾನಃ ಫಲಮೂಲಾನಿಲಾಶನಾಃ ।
ತಪಸೈವ ಪ್ರಪಶ್ಯಂತಿ ತ್ರೈಲೋಕ್ಯಂ ಸಚರಾಚರಂ ॥ ೨೩೬

ಋಷಿಗಳಿಗೆ ಹಣ್ಣು, ಗಡ್ಡೆ-ಗೆಣಸು, ವಾಯು, ಆಹಾರವು. ಇಚ್ಛಾನುಸಾರ ಹೀಗೆ ಜೀವಿಸಿ ಇಂದ್ರಿಯ ನಿಗ್ರಹ ಮಾಡಿದ ಅವರು ಮೂರು ಲೋಕವನ್ನು ನೋಡಬಲ್ಲರು.

ಔಷಧಾನ್ಯಗದೋ ವಿದ್ಯಾ ದೈವೀ ಚ ವಿವಿಧಾ ಸ್ಥಿತಿಃ ।
ತಪಸೈವ ಪ್ರಸಿಧ್ಯಂತಿ ತಪಸ್ತೇಷಾಂ ಹಿ ಸಾಧನಂ ॥ ೨೩೭

ರಾಕೆಟ್, ಅಂತರಿಕ್ಷನೌಕೆ, ಕ್ಷಿಪಣಿ ಎಂಬ ಸಾವಿರಾರು ಮೈಲು ವಿಸ್ತಾರದ ಪ್ರಯೋಗಶಾಲೆಯಲ್ಲಿ ಲಕ್ಷೋಪಲಕ್ಷ ಭೂತವಿಜ್ಞಾನಿಗಳ ಪಂಕ್ತಿಯು ಅಹರ್ನಿಶಿ ಅಧ್ಯಯನ, ಪರೀಕ್ಷಣ ನಡೆಸಿ ಕೋಟಿ ಕೋಟಿ ಹಣ ವ್ಯಯಿಸಿ ವರ್ಷ ವರ್ಷ ಕಾಲದಲ್ಲಿ ಸಾಧಿಸಲಾಗದ ಚಂದ್ರಲೋಕದ ಸಂಶೀಲನೆಯು ಈ ತಪೋದೃಷ್ಟಿಗೆ ತೃಣಪ್ರಾಯವಾದುದು. ನಾಲ್ಕಾರು ಅಡಿ ಉದ್ದದ ಈ ದೇಹದ ಸಹಾಯದಿಂದ ಭೂಮಿಯ ಒಂದು ಮೂಲೆಯಲ್ಲಿ ಕುಳಿತು ಈ ಸೂರ್ಯಜಗತ್ತಿಗಿಂತ ಎಷ್ಟೋ ದೊಡ್ಡ ಅಧಿಕ ಚಮತ್ಕಾರದ ಮೂರು ಲೋಕದ ಮಾರ್ಮಿಕ ಪ್ರಕರ್ಷದ ವಿಶಿಷ್ಟ ದರ್ಶನವು ಸಾಮಾನ್ಯ ಶಕ್ತಿಯದಲ್ಲ. ಇದು ದೈವೀಶಕ್ತಿಯೇ! ಮುಪ್ಪು ಹೋಗಿ ಯೌವನವು ಬರುವ ಸಕಲಶರೀರೇಂದ್ರಿಯಗಳಿಗೆ ಬಲಾದಾಯಕ ಸ್ಥಿರಗುಣದ ರಸಾಯನ, ಕಣ್ಣು, ಹೃದಯ, ಗರ್ಭಾಶಯ ಪ್ರಾಂತದ ಸೂಕ್ಷ್ಮಾತಿಸೂಕ್ಷ್ಮ ಶಸ್ತ್ರ ವಿಶಸನವೈಶದ್ಯ (ಸುಶ್ರುತ) ಕರ್ಮ ಬ್ರಹ್ಮವಿದ್ಯೆ, ನಾನಾ ಲೋಕಾವಸ್ಥಿತಿ ಇವುಗಳೆಲ್ಲ "ತಪಸ್ಸು" ಎಂಬ ಸಾಧನದಿಂದ ಪ್ರಸಿದ್ಧ ಪ್ರತ್ಯಕ್ಷ ಉನ್ಮೇಷಗಳು.

ಯದ್ದುಸ್ತರಂ ಯದ್ದುರಾಪಂ ಯದ್ದುರ್ಗಂ ಯಚ್ಚ ದುಷ್ಕರಂ ।
ಸರ್ವಂ ತು ತಪಸಾ ಸಾಧ್ಯಂ ತಪೋ ಹಿ ದುರತಿಕ್ರಮಂ ॥ ೨೩೮

ಕಷ್ಟಸಾಧ್ಯವಾದ ಆಪನ್ನಿವೃತ್ತಿ, ಅಮೃತತ್ವ, ಲೋಕಾಂತರಗತಿ ಇಂತಹವುಗಳೆಲ್ಲ ತಪಸ್ಸಿನಿಂದ ಸುಲಭಸಾಧ್ಯಗಳಾಗುವುವು ಆದುದರಿಂದ ತಪಃಶಕ್ತಿಯು ದುರತಿಕ್ರಮವು. ಅಣುವಿಕಿರಣ ಹೈಡ್ರೋಜನ್ ಬಾಂಬು ಇವುಗಳು ತಪಸ್ಸಿನ ಕಿರಣಾಣುವಾಗಬಲ್ಲವು.

ಮಹಾಪಾತಕಿನಶ್ಚೈವ ಶೇಷಾಶ್ಚಾಕಾರ್ಯಕಾರಿಣಃ ।
ತಪಸ್ಯೈವ ಸುತಪ್ತೇನ ಮುಚ್ಯಂತೇ ಕಿಲ್ಬಿಷಾತ್ತತಃ ॥ ೨೩೯

ಮಹಾಪಾತಕಗಳ ದೋಷವು ತಪಸ್ಸಿನಿಂದ ನಶಿಸುವುದು.

ಕೀಟಾಶ್ಚಾಹಿಪತಂಗಾಶ್ಚ ಪಶವಶ್ಚ ವಯಾಂಸಿ ಚ ।
ಸ್ಥಾವರಾಣಿ ಚ ಭೂತಾನಿ ದಿವಂ ಯಾಂತಿ ತಪೋಬಲಾತ್ ॥ ೨೪೦

ಕೀಟ, ಹಾವು, ಪತಂಗ, ಪಶು, ಪಕ್ಷಿ, ವೃಕ್ಷಾದಿಸ್ಥಾವರ ಇವುಗಳು ಮೂಕವೇದನಾ ತಪಸ್ಸಿನಿಂದ ಕಲ್ಮಷವು ತೊಲಗಿ ನಿರ್ಮಲವಾಗಿ ಪುನಃ ಉತ್ಕೃಷ್ಟ ಜನ್ಮವನ್ನು ಪಡೆಯುವುವು.

ಯತ್ಕಿಂಚಿದೇನಃ ಕುರ್ವಂತಿ ಮನೋವಾಙ್ಮೂರ್ತಿಭಿರ್ಜನಾಃ ।
ತತ್ಸರ್ವಂ ನಿರ್ದಹಂತ್ಯಾಶು ತಪಸ್ಯೈವ ತಪೋಧನಾ ॥ ೨೪೧

ಮನೋವಾಗ್ದೇಹಗಳಿಂದ ಸಂಭವಿಸಿದ ಪಾಪವು ತಪಸ್ಸಿನಿಂದ ದಗ್ಧವಾಗಿ ತಪೋಧನರಾಗುವರು.

ತಪಸ್ಯೈವ ವಿಶುದ್ಧಸ್ಯ ಬ್ರಾಹ್ಮಣಸ್ಯ ದಿವೌಕಸಃ ।
ಇಜ್ಯಾಶ್ಚ ಪ್ರತಿಗೃಹ್ಣಂತಿ ಕಾಮಾನ್ ಸಂವರ್ಧಯಂತಿ ॥ ೨೪೨

ತಪಸ್ಸಿನಿಂದ ಪರಿಶುದ್ಧನಾದ ಬ್ರಾಹ್ಮಣನು ಮಾಡಿದ ಪೂಜೆಯನ್ನು ದೇವತೆಗಳು ಸ್ವೀಕರಿಸಿ ಅವನಿಷ್ಟವನ್ನು ತುಂಬುತ್ತಾರೆ.

ಪ್ರಜಾಪತಿರಿದಂ ಶಾಸ್ತ್ರಂ ತಪಸ್ಯೈವಾಸೃಜತ್ಪ್ರಭುಃ ।
ತಥೈವ ವೇದಾನೃಷಯಸ್ತಪಸಾ ಪ್ರತಿಪೇದಿರೇ ॥ ೨೪೩

ಈ ಧರ್ಮಶಾಸ್ತ್ರದ ಸೃಷ್ಟಿಯು ಒಂದು ತಪಸ್ಸಿನಿಂದಲೇ ಆಗಿದೆ,

ಋಷಿಗಳಿಗೆ ವೇದಪ್ರತಿಪತ್ತಿಯೂ ತಪೋಮಹಿಮೆಯಿಂದಲೇ ಬ್ರಹ್ಮವು ಸಮೂಲವೆಂದು ಅಂಗೀಕರಿಸುವುದರಿಂದ ಮನುಭೃಗುಗಳ ಪರಿಜ್ಞಾನಗಂಗೆಯೂ ಬ್ರಹ್ಮನಿಂದಲೇ ಹರಿದು ಬಂದುದು. ಆದುದರಿಂದ ಈ ಶಾಸ್ತ್ರದ ಅರ್ಥ ಕರ್ತೃವೂ ಬ್ರಹ್ಮನೇ ಆಗುವನು. ಶಬ್ದಗುಂಫನವು ಭೃಗುವಿನದಾದರೂ ಅದಕ್ಕೆ ಮಹತ್ವವನ್ನು ಕೊಡುವ ಕಾರಣವಿಲ್ಲ. ಅರ್ಥವು ಮಾತ್ರ ಪ್ರಯಾಸ ಸಾಧ್ಯ. ಈ ಕಾಲದಲ್ಲಿ ಪದಪುಂಜವನ್ನು ಕಾವ್ಯವೆಂದು ಭ್ರಮಿಸುವುದರಿಂದ ಕರ್ತೃವಿನ ವಿವಾದವೇಳುವುದು. ಅರ್ಥ ಚೌರ್ಯವನ್ನು ದೌರ್ಬಲ್ಯದಿಂದ ಕ್ಷಮಿಸುವರು.

ಇತ್ಯೇತತ್ತಪಸೋ ದೇವಾ ಮಹಾಭಾಗ್ಯಂ ಪ್ರಚಕ್ಷತೇ ।
ಸರ್ವಸ್ಯಾಸ್ಯ ಪ್ರಪಶ್ಯಂತಸ್ತಪಸಃ ಪುಣ್ಯಮುತ್ತಮಂ ॥ ೨೪೪

ಆದುದರಿಂದ ತಪಸ್ಸು ಒಂದು ಮಹಾಭಾಗ್ಯವೆಂದು ತಿಳಿಯಬೇಕು. ತಪಸ್ಸು ಪುಣ್ಯಮಯವಾಗಿದೆ. ತಪಸ್ಸು ಪಿಶಾಚಿಯಂತೆ ಅದೃಶ್ಯವಲ್ಲ. ಚಾಂದ್ರಾಯಣ ಪ್ರಾಜಾಪತ್ಯಾದಿ ಪೂರ್ವೋಕ್ತ ವ್ರತಗಳೇ ತಪಸ್ಸಿನ ಕರ್ಮ ರೂಪವು.

ವೇದಾಭ್ಯಾಸೋಽನ್ವಹಂ ಶಕ್ತ್ಯಾ ಮಹಾಯಜ್ಞಕ್ರಿಯಾ ಕ್ಷಮಾ ।
ನಾಶಯಂತ್ಯಾಶು ಪಾಪಾನಿ ಮಹಾಪಾತಕಜಾನ್ಯಪಿ ॥ ೨೪೫

ಮನಃಶಾಂತಿ, ವೇದಾಭ್ಯಾಸಗಳು ದೈನಂದಿನ ಕರ್ಮಸಂತತಿಯಾದರೆ ಸರ್ವಪ್ರಾಯಶ್ಚಿತ್ತ ತಪಸ್ಸಾಗುವುದು.

ಯಥೈಧಸ್ತೇಜಸಾ ವಹ್ನಿಃ ಪ್ರಾಪ್ತಂ ನಿರ್ದಹತಿ ಕ್ಷಣಾತ್ ।
ತಥಾ ಜ್ಞಾನಾಗ್ನಿನಾ ಪಾಪಂ ಸರ್ವಂ ದಹತಿ ವೇದವಿತ್ ॥ ೨೪೬

ಬೆಂಕಿಯು ಸಿಕ್ಕಿದ ಕಟ್ಟಿಗೆಯನ್ನು ಸುಟ್ಟು ಬೂದಿ ಮಾಡುತ್ತದೆ. ಅದರಂತೆ ತಪಸ್ಸು ಪಾಪವನ್ನು ದಹಿಸುವುದು. ಅದು ವೇದಾಧೀನವಾಗಿದೆ.

ಇತ್ಯೇತದೇನಸಾ ಮುಕ್ತಂ ಪ್ರಾಯಶ್ಚಿತ್ತಂ ಯಥಾವಿಧಿ ।
ಅತ ಊರ್ಧ್ವಂ ರಹಸ್ಯಾನಾಂ ಪ್ರಾಯಶ್ಚಿತ್ತಂ ನಿಬೋಧತ ॥ ೨೪೭

ಮಹಾಪಾತಕಾದಿ ಪ್ರಾಯಶ್ಚಿತ್ತವನ್ನು ಹೇಳಿ ಮುಗಿಸಿ ರಹಸ್ಯ ಪ್ರಾಯಶ್ಚಿತ್ತದ ಸರದಿಯು ಈಗ ಬಂದಿದೆ.

ಸವ್ಯಾಹೃತಿಪ್ರಣವಕಾಃ ಪ್ರಾಣಾಯಾಮಾಸ್ತು ಷೋಡಶ ।
ಅಪಿ ಭ್ರೂಣಹಣಂ ಮಾಸಾತ್ಪುನಂತ್ಯಹರಹಃ ಕೃತಾಃ ॥ ೨೪೮

ಪ್ರಣವ, ವ್ಯಾಹೃತಿ ಇವುಗಳಿಂದ ಸಹಿತವಾಗಿ ಹದಿನಾರು ಪ್ರಾಣಾಯಾಮಗಳನ್ನು ಒಂದು ತಿಂಗಳು ಮಾಡುತ್ತಿದ್ದರೆ ಭ್ರೂಣಹತ್ಯಾಪಾಪವು ತೊಲಗುವುದು.

ಕೌತ್ಸಂ ಜಪ್ತ್ವಾಪ ಇತ್ಯೇತದ್ವಾಸಿಷ್ಠಂ ಚ ಪ್ರತೀತ್ಯೃಚಂ ।
ಮಾಹಿತ್ರಂ ಶುದ್ಧವತ್ಯಶ್ಚ ಸುರಾಪೋಽಪಿ ವಿಶುಧ್ಯತಿ ॥ ೨೪೯

ಕುತ್ಸ ಮಂತ್ರ, ವಸಿಷ್ಠ ಮಂತ್ರ, ಮಾಹಿತ್ರ ಮಂತ್ರ, ಶುದ್ಧವತೀ ಸೂಕ್ತ ಈ ಜಪದಿಂದ ಸುರಾಪಾನಕ್ಕೆ ರಹಸ್ಯ ಪ್ರಾಯಶ್ಚಿತ್ತವು.

ಸಕೃಜ್ಜಪ್ತ್ವಾಸ್ಯವಾಮೀಯಂ ಶಿವಸಂಕಲ್ಪಮೇವ ಚ ।
ಅಪಹೃತ್ಯ ಸುವರ್ಣಂ ತು ಕ್ಷಣಾದ್ಭವತಿ ನಿರ್ಮಲಃ ॥ ೨೫೦

ಸುವರ್ಣಸ್ತೇಯಕ್ಕೆ ಆಸವಾಮೀಯಮಂತ್ರ ಶಿವಸಂಕಲ್ಪ ಮಂತ್ರಗಳನ್ನು ಪ್ರತಿದಿನ ಒಂದೊಂದು ಬಾರಿ ಒಂದು ತಿಂಗಳು ಜಪಿಸಿದರೆ ಪ್ರಾಯಶ್ಚಿತ್ತವು.

ಹವಿಷ್ಪಾಂತೀಯಮಭ್ಯಸ್ಯ ನತಮಂಹ ಇತೀತಿ ಚ ।
ಜಪಿತ್ವಾ ಪೌರುಷಂ ಸೂಕ್ತಂ ಮುಚ್ಯತೇ ಗುರುತಲ್ಪಗಃ ॥ ೨೫೧

ಹವಿಷ್ಪಾಂತಿ, ನತಮಂಹ, ಇತೀತಿ, ಸಹಸ್ರಶೀರ್ಷಾ ಇತ್ಯಾದಿ ಸೂಕ್ತ ಜಪದಿಂದ ಗುರುತಲ್ಪದೋಷ ನಿವೃತ್ತಿಯು.

ಏನಸಾಂ ಸ್ಥೂಲಸೂಕ್ಷ್ಮಾಣಾಂ ಚಿಕೀರ್ಷನ್ನಪನೋದನಂ ।
ಅವೇತ್ಯೃಚಂ ಜಪೇದಬ್ದಂ ಯತ್ಕಿಂಚೇದಮಿತೀತಿ ವಾ ॥ ೨೫೨

ಸ್ಥೂಲ ಸೂಕ್ಷ್ಮಪಾಪಗಳಿಗೆ ನಿವೃತ್ತಿಯನ್ನು ಅವತೇ, ಯತ್ಕಿಂಚ, ಇತಿವಾ ಇತ್ಯಾದಿ ಮಂತ್ರಗಳ ಜಪದಿಂದ ಹೇಳುವರು.

ಪ್ರತಿಗೃಹ್ಯಾಪ್ರತಿಗ್ರಾಹ್ಯಂ ಭುಕ್ತ್ವಾ ಚಾನ್ನಂ ವಿಗರ್ಹಿತಂ ।
ಜಪಂಸ್ತರತ್ಸಮಂದೀಯಂ ಪೂಯತೇ ಮಾನವಸ್ತ್ರ್ಯಹಾತ್ ॥ ೨೫೩

ನಿಷಿದ್ಧ ಭೋಜನ, ನಿಷಿದ್ಧ ದಾನಸ್ವೀಕಾರ ಇವುಗಳಿಗೆ ತರತ್ಸಮಂದೀ ಮಂತ್ರವನ್ನು ಮೂರು ದಿನ ಜಪಿಸಿದರೆ ಪರಿಹಾರವು.

ಸೋಮಾರೌದ್ರಂ ತು ಬಹ್ವೇನಾ ಮಾಸಮಭ್ಯಸ್ಯ ಶುಧ್ಯತಿ ।
ಸ್ರವಂತ್ಯಾಮಾಚರನ್ ಸ್ನಾನಮರ್ಯಮ್ಣಾಮಿತಿ ಚ ತೃಚಂ ॥ ೨೫೪

ಬಹುಪಾಪಕಾರಿಯು ಒಂದು ತಿಂಗಳು ಸೋಮಾರುದ್ರಾ, ಅರ್ಯಮಣಂಮಂತ್ರಗಳನ್ನು ನದಿಯಲ್ಲಿ ಮಿಂದು ಜಪಿಸಿದರೆ ಪರಿಶುದ್ಧನು.

ಅಬ್ದಾರ್ಧಮಿಂದ್ರಮಿತ್ಯೇತದೇನಸ್ವೀ ಸಪ್ತಕಂ ಜಪೇತ್ ।
ಅಪ್ರಶಸ್ತಂ ತು ಕೃತ್ವಾಪ್ಸು ಮಾಸಮಾಸೀತ ಭೈಕ್ಷಭುಕ್ ॥ ೨೫೫

ನೀರಿನಲ್ಲಿ ಮಲಮೂತ್ರ ಮಾಡಿದರೆ ಆರು ತಿಂಗಳು ಇಂದ್ರಂಮಿತ್ರಂ ಇತ್ಯಾದಿ ಏಳು ಮಂತ್ರಜಪವನ್ನು ಜಪಿಸಬೇಕು. ಮತ್ತು ಒಂದು ತಿಂಗಳು ಬೇಡಿ ಉಣ್ಣಬೇಕು.

ಮಂತ್ರೈಃ ಶಾಕಲಹೋಮೀಯೈರಬ್ದಂ ಹುತ್ವಾ ಘೃತಂ ದ್ವಿಜಃ ।
ಸುಗುರ್ವಪ್ಯಪಹಂತ್ಯೇನೋ ಜಪ್ತ್ವಾ ವಾ ನಮ ಇತ್ಯೃಚಂ ॥ ೨೫೬

ದೇವಕೃತಸ್ಯ ಈ ಮಂತ್ರದಿಂದ ಒಂದು ವರ್ಷ ಆಜ್ಯಹೋಮ ಮಾಡಿದರೂ ನಮ ಇಂದ್ರಶ್ಚ ಮಂತ್ರವನ್ನು ಜಪಿಸಿದರೂ ದೊಡ್ಡ ಪಾಪವೂ ನಿವೃತ್ತವಾಗುವುದು.

ಮಹಾಪಾತಕಸಂಯುಕ್ತೋಽನುಗಚ್ಛೇದ್ಗಾಃ ಸಮಾಹಿತಃ ।
ಅಭ್ಯಸ್ಯಾಬ್ದಂ ಪಾವಮಾನೀರ್ಭೈಕ್ಷಾಹಾರೋ ವಿಶುಧ್ಯತಿ ॥ ೨೫೭

ಮಹಾಪಾತಕಿಯು ಒಂದು ವರ್ಷ ಭಿಕ್ಷೆಯೆತ್ತಿ ಉಂಡು ಪಾವಮಾನಿಯನ್ನು ಜಪಿಸುತ್ತಾ ಮೇಯುವ ಗೋವನ್ನು ಹಿಂಬಾಲಿಸಬೇಕು.

ಆರಣ್ಯೇ ವಾ ತ್ರಿರಭ್ಯಸ್ಯ ಪ್ರಯತೋ ವೇದಸಂಹಿತಾಂ ।
ಮುಚ್ಯತೇ ಪಾತಕೈಃ ಸರ್ವೈಃ ಪರಾಕೈಃ ಶೋಧಿತಸ್ತ್ರಿಭಿಃ ॥ ೨೫೮

ಮೂರು ಪರಾಕವ್ರತವನ್ನು ಮಾಡಿ (೨೧೫ ಶ್ಲೋಕ) ಮೂರು ಬಾರಿ ವೇದಪಾರಾಯಣ ಮಾಡಿದರೆ ಸರ್ವಪಾಪ ನಿವೃತ್ತಿಯು.

ತ್ರ್ಯಹಂ ತೂಪವಸೇದ್ಯುಕ್ತಸ್ತ್ರಿರಹ್ನೋಽಭ್ಯುಪಯನ್ನಪಃ ।
ಮುಚ್ಯತೇ ಪಾತಕೈಃ ಸರ್ವೈಸ್ತ್ರಿರ್ಜಪಿತ್ವಾಘಮರ್ಷಣಂ ॥ ೨೫೯

ಮೂರು ದಿನ ನಿರಾಹಾರ, ಪ್ರತಿದಿನ ಮೂರು ಸ್ನಾನ, ಪ್ರತಿ ಸ್ನಾನದಲ್ಲಿ ಮೂರು ಬಾರಿ ಅಘಮರ್ಷಣ ಸೂಕ್ತ ಜಪ ಮಾಡಿದರೆ ಸರ್ವ ಪಾಪ ಪ್ರಾಯಶ್ಚಿತ್ತವು.

ಯಥಾಶ್ವಮೇಧಃ ಕ್ರತುರಾಟ್ ಸರ್ವಪಾಪಾಪನೋದನಃ ।
ತಥಾಘಮರ್ಷಣಂ ಸೂಕ್ತಂ ಸರ್ವಪಾಪಾಪನೋದನಂ ॥ ೨೬೦

ಅಶ್ವಮೇಧದಂತೆ ಅಘಮರ್ಷಣ ಸೂಕ್ತವು ಸರ್ವಪಾಪಹರವು.

ಹತ್ವಾ ಲೋಕಾನಪೀಮಾಂಸ್ತ್ರೀನಶ್ನನ್ನಪಿ ಯತಸ್ತತಃ ।
ಋಗ್ವೇದಂ ಧಾರಯನ್ವಿಪ್ರೋ ನೈನಃ ಪ್ರಾಪ್ನೋತಿ ಕಿಂಚನ ॥ ೨೬೧

ಸರ್ವಹಿಂಸೆ, ಸರ್ವಭೋಜನ ಮಾಡಿದವನೂ ಋಗ್ವೇದವನ್ನು ಅವಧರಿಸಿದರೆ ಪಾಪಸ್ಪರ್ಶರಹಿತನಾಗುವನು.

ಋಕ್ಸಂಹಿತಾಂ ತ್ರಿರಭ್ಯಸ್ಯ ಯಜುಷಾಂ ವಾ ಸಮಾಹಿತಃ ।
ಸಾಮ್ನಾಂ ವಾ ಸರಹಸ್ಯಾನಾಂ ಸರ್ವಪಾಪೈಃ ಪ್ರಮುಚ್ಯತೇ ॥ ೨೬೨

ಮೂರು ವೇದವನ್ನು ರಹಸ್ಯ ಸಹಿತವಾಗಿ ಜಪಿಸಿದರೆ ಸರ್ವಪಾಪಹರ.

ಯಥಾ ಮಹಾಹ್ರದಂ ಪ್ರಾಪ್ಯ ಕ್ಷಿಪ್ತಂ ಲೋಷ್ಟಂ ವಿನಶ್ಯತಿ ।
ತಥಾ ದುಶ್ಚರಿತಂ ಸರ್ವಂ ವೇದೇ ತ್ರಿವೃತಿ ಮಜ್ಜತಿ ॥ ೨೬೩

ಒಂದು ಮಣ್ಣು ಹೆಂಟೆಯು ದೊಡ್ಡ ಜಲಾಶಯದಲ್ಲಿ ಮಾಯವಾಗುವಂತೆ ವೇದಸಮುದ್ರದಲ್ಲಿ ದುಶ್ಚರಿತವು ಉಳಿಯದು.

ಋಚೋ ಯಜೂಂಷಿ ಚಾನ್ಯಾನಿ ಸಾಮಾನಿ ವಿವಿಧಾನಿ ಚ ।
ಏಷ ಜ್ಞೇಯಸ್ತ್ರಿವೃದ್ವೇದೋ ಯೋ ವೇದೈನಂ ಸ ವೇದವಿತ್ ॥ ೨೬೪

ಋಗ್, ಯಜುಷ್, ಸಾಮನ್ ಎಂಬ ಮೂರು ವೇದವನ್ನು ಬಲ್ಲವನು ವೇದವಿತ್ ಎಂದು ತಿಳಿಯಬೇಕು.

ಆದ್ಯಂ ಯತ್ತ್ರ್ಯಕ್ಷರಂ ಬ್ರಹ್ಮ ತ್ರಯೀ ಯಸ್ಮಿನ್ ಪ್ರತಿಷ್ಠಿತಾ ।
ಸ ಗುಹ್ಯೋಽನ್ಯಸ್ತ್ರಿವೃದ್ವೇದೋ ಯಸ್ತಂ ವೇದ ಸ ವೇದವಿತ್ ॥ ೨೬೫

ಪ್ರಣವವು ವೇದಪ್ರತಿಷ್ಠೆಯು. ಅದು ವೇದತ್ರಯ ಸಮಾನವು. ಅದರ ಉಪಾಸಕನು ವೇದವೇತ್ತನಾಗುವನು.

# ಅಧ್ಯಾಯ ೧೨.

ಚಾತುರ್ವರ್ಣ್ಯಸ್ಯ ಕೃತ್ಸ್ನೋಽಯಮುಕ್ತೋ ಧರ್ಮಸ್ತ್ವಯಾನಘ ।
ಕರ್ಮಣಾಂ ಫಲನಿರ್ವೃತ್ತಿಂ ಶಂಸ ನಸ್ತತ್ತ್ವತಃ ಪರಾಂ ॥ ೧

ಹಿಂದಿನ ಹನ್ನೊಂದು ಅಧ್ಯಾಯಗಳಲ್ಲಿ ನಾಲ್ಕು ವರ್ಣಗಳ ಧರ್ಮವನ್ನು ನಿರೂಪಿಸಿದ್ದನ್ನು ತಿಳಿದಾಯಿತು. ಇನ್ನು ಕರ್ಮವಿಪಾಕವನ್ನು ಹೇಳು. ಎಂದರೆ ಈ ಜನ್ಮದಲ್ಲಿ ಮಾಡಿದ ಯಾವ ಕರ್ಮದಿಂದ ಜನ್ಮಾಂತರದಲ್ಲಿ ಬರುವ ಫಲ ಯಾವುದು. ಎನ್ನುವುದನ್ನು ವಿವರಿಸು. ಅದಕ್ಕೆ ಭೃಗುವು ಹೇಳುತ್ತಾನೆ—

ಸ ತಾನುವಾಚ ಧರ್ಮಾತ್ಮಾ ಮಹರ್ಷೀನ್ ಮಾನವೋ ಭೃಗುಃ ।
ಅಸ್ಯ ಸರ್ವಸ್ಯ ಶೃಣುತ ಕರ್ಮಯೋಗಸ್ಯ ನಿರ್ಣಯಂ ॥ ೨

ಭೃಗುವು ಧರ್ಮದ ಅವತಾರವೆಂದರೂ ಸಲ್ಲುವುದು. ಅವನು ಕರ್ಮವಿಪಾಕವನ್ನು ಹೇಳಲು ಬೇಕಾದ ಸತ್ಯವಾದ ಯೋಗ್ಯತೆಯುಳ್ಳವನು.

ಶುಭಾಶುಭಫಲಂ ಕರ್ಮ ಮನೋವಾಗ್ದೇಹಸಂಭವಂ ।
ಕರ್ಮಜಾ ಗತಯೋ ನೃಣಾಮುತ್ತಮಾಧಮಮಧ್ಯಮಾಃ ॥ ೩

ಮನಸ್ಸು, ಮಾತು, ದೇಹಗಳಿಂದ ಹುಟ್ಟುವ ಕರ್ಮಗಳಿಗೆ ಫಲವು ಎರಡು ತರ. ಒಂದು ಶುಭ, ಇನ್ನೊಂದು ಅಶುಭ. ಅಂತಹ ಕರ್ಮದಿಂದ ಮೂರು ವಿಧವಾದ ಗತಿಯು. ಅದು ಉತ್ತಮ, ಮಧ್ಯಮ, ಅಧಮ ಎಂದು ಹೆಸರುಗೊಂಡಿದೆ.

ತಸ್ಯೇಹ ತ್ರಿವಿಧಸ್ಯಾಪಿ ತ್ರ್ಯಧಿಷ್ಠಾನಸ್ಯ ದೇಹಿನಃ ।
ದಶಲಕ್ಷಣಯುಕ್ತಸ್ಯ ಮನೋ ವಿದ್ಯಾತ್ಪ್ರವರ್ತಕಂ ॥ ೪

ಈ ಆತ್ಮನ ಸರ್ವವ್ಯಾಪಾರಗಳಿಗೂ ಪ್ರವರ್ತಕ (ಸಾಧನ) ವಾದುದು ಮನಸ್ಸು. ಹತ್ತು ವಿಧವಾದ ಕರ್ಮಗಳನ್ನು ದೇಹ-ವಾಕ್-ಮನಸ್ಸುಗಳ ಆಶ್ರಯದಲ್ಲಿ ಉತ್ತಮ ಮಧ್ಯಮ ಅಧಮವರ್ಗವಾಗಿ ಮನಸ್ಸೇ ಉಂಟು ಮಾಡುವುದು. ಭಾರತೀಯರಿಗೆ ಮನಃಶಾಸ್ತ್ರ ತಿಳಿಯದು, ಯುರೋಪಿನವರ ವಿಜ್ಞಾನವೆಂಬುದು ಇದರಿಂದ ಸುಳ್ಳು. ಹತ್ತು ರೀತಿಯ ಕರ್ಮಗಳು ಯಾವು ವೆಂದರೆ—

ಪರದ್ರವ್ಯೇಷ್ವಭಿಧ್ಯಾನಂ ಮನಸಾऽನಿಷ್ಟಚಿಂತನಂ ।
ವಿತಥಾಭಿನಿವೇಶಶ್ಚ ತ್ರಿವಿಧಂ ಕರ್ಮ ಮಾನಸಂ ॥ ೫

ಪರರ ಸೊತ್ತಿನಲ್ಲಿ ಆಸೆ, ಕೇಡು ಬಗೆಯುವುದು, ವಿರುದ್ಧ ನಿಶ್ಚಯ ಎಂದು ಮೂರು ಅಶುಭಫಲದಾಯಕವಾದ ಮಾನಸಕರ್ಮವು.

ಪಾರುಷ್ಯಮನೃತಂ ಚೈವ ಪೈಶುನ್ಯಂ ಚಾಪಿ ಸರ್ವಶಃ ।
ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಂ ॥ ೬

ಪರುಷವಚನ, ಸುಳ್ಳು, ತರಳೆ, ಅಸಂಬದ್ಧ ಮಾತು ಎಂದು ಕೆಟ್ಟ ನಾಲ್ಕುತರದ ವಚನಕರ್ಮವು.

ಅದತ್ತಾನಾಮುಪಾದಾನಂ ಹಿಂಸಾ ಚೈವಾವಿಧಾನತಃ ।
ಪರದಾರೋಪಸೇವಾ ಚ ಶಾರೀರಂ ತ್ರಿವಿಧಂ ಸ್ಮೃತಂ ॥ ೭

ಶರೀರಜನ್ಯ ಕುಕರ್ಮಗಳೆಂದರೆ, ಕೊಡದೆ ತೆಕ್ಕೊಳ್ಳುವುದು, ಹಿಂಸೆ, ಪರ ಸ್ತ್ರೀಸಹವಾಸ ಇವು ಮೂರು. ಮನಸ್ಸು ಪ್ರೇರಕವಾದುದರಿಂದ ಮೂಲವು ಮನಸ್ಸೆ ಆದರೂ ಕರ್ಮವು ಶರೀರಪರಿಣಾಮವುಳ್ಳದ್ದೆಂದು ಈ ವಿಭಾಗವನ್ನು ಹೊಂದಿದೆ.

ಮಾನಸಂ ಮನಸೈವಾಯಮುಪಭುಂಕ್ತೇ ಶುಭಾಶುಭಂ ।
ವಾಚಾ ವಾಚಾ ಕೃತಂ ಕರ್ಮ ಕಾಯೇನೈವ ಚ ಕಾಯಿಕಂ ॥ ೮

ಮಾನಸಕರ್ಮದಿಂದ ಮನಸ್ಸಿಗೆ, ವಚನದಿಂದ ಮಾತಿಗೆ ದೈಹಿಕಕರ್ಮ ದಿಂದ ದೇಹಕ್ಕೆ ಪ್ರತಿಫಲವು ಉಂಟಾಗುವುದು.

ಶರೀರಜೈಃ ಕರ್ಮದೋಷೈರ್ಯಾತಿ ಸ್ಥಾವರತಾಂ ನರಃ ।
ವಾಚಿಕೈಃ ಪಕ್ಷಿಮೃಗತಾಂ ಮಾನಸೈರಂತ್ಯಜಾತಿತಾಂ ॥ ೯

ಶಾರೀರಿಕ ಅಪರಾಧದಿಂದ ಕಲ್ಲುಮರ ಎಂಬ ಸ್ಥಾವರರೂಪ. ವಾಚಿಕ ಅಪರಾಧದಿಂದ ಮೃಗಪಕ್ಷಿಗಳ ಜನ್ಮ. ಮಾನಸಕುಕರ್ಮದಿಂದ ಅಂತ್ಯಜ ಜನ್ಮವು ಬರುವುದು.

ವಾಗ್ದಂಡೋಽಥ ಮನೋದಂಡಃ ಕಾಯದಂಡಸ್ತಥೈವ ಚ ।
ಯಸ್ಯೈತೇ ನಿಹಿತಾ ಬುದ್ಧೌ ತ್ರಿದಂಡೀತಿ ಸ ಉಚ್ಯತೇ ॥ ೧೦

ಮನೋವಾಕ್ಕಾಯಗಳು ದಂಡಿಸಲ್ಪಟ್ಟು ಸ್ವಾಧೀನಗಳಾಗಿ ಸನ್ಮಾರ್ಗದ ಪ್ರವೃತ್ತಿ ಉಳ್ಳವುಗಳಾದರೆ ಅವನು ತ್ರಿದಂಡಿ ಎನ್ನಲ್ಪಡುತ್ತಾನೆ.

ತ್ರಿದಂಡಮೇತನ್ನಿಕ್ಷಿಪ್ಯ ಸರ್ವಭೂತೇಷು ಮಾನವಃ ।
ಕಾಮಕ್ರೋಧೌ ತು ಸಂಯಮ್ಯ ತತಃ ಸಿದ್ಧಿಂ ನಿಯಚ್ಛತಿ ॥ ೧೧

ಮನೋವಾಕ್ಕಾಯಗಳ ದಮನವು ಕಾಮ-ಕ್ರೋಧಗಳ ಪರಿಮಾರ್ಜನದಿಂದ ಉಂಟಾಗುವ ಕಾರಣ ಅದನ್ನು ಸಾಧಿಸಿದರೆ ಮೋಕ್ಷವೂ ಲಭಿಸುವುದು.

ಯೋಽಸ್ಯಾತ್ಮನಃ ಕಾರಯಿತಾ ತಂ ಕ್ಷೇತ್ರಜ್ಞಂ ಪ್ರಚಕ್ಷತೇ ।
ಯಃ ಕರೋತಿ ತು ಕರ್ಮಾಣಿ ಸ ಭೂತಾತ್ಮೋಚ್ಯತೇ ಬುಧೈಃ ॥ ೧೨

ಸರ್ವಪ್ರಸಿದ್ಧವಾದ ದೇಹದಲ್ಲಿ ಪ್ರವೃತ್ತಿಯನ್ನು ಉಂಟುಮಾಡುವ ಮೂಲಕ ಪ್ರೇರಿಸುವವನು ಕ್ಷೇತ್ರಜ್ಞನು. ಬಾಹ್ಯಕರ್ಮಪ್ರಯುಕ್ತವಾದ ಈ ದೇಹವು ಭೂತಾತ್ಮ ಎಂದು ಪಂಡಿತರು ಹೇಳುತ್ತಾರೆ.

ಜೀವಸಂಜ್ಞೋಽಂತರಾತ್ಮಾನ್ಯಃ ಸಹಜಃ ಸರ್ವದೇಹಿನಾಂ ।
ಯೇನ ವೇದಯತೇ ಸರ್ವಂ ಸುಖಂ ದುಃಖಂ ಚ ಜನ್ಮಸು ॥ ೧೩

ಸುಖ-ದುಃಖಗಳ ಅನುಭವಕ್ಕೆ ಕಾರಣವಾದ ಮನಸ್ಸು ಪ್ರತಿ ಜನ್ಮದಲ್ಲಿ ದೇಹವನ್ನು ಅನುಸರಿಸುವುದು.

ತಾವುಭೌ ಭೂತಸಂಪೃಕ್ತೌ ಮಹಾನ್ ಕ್ಷೇತ್ರಜ್ಞ ಏವ ಚ ।
ಉಚ್ಚಾವಚೇಷು ಭೂತೇಷು ಸ್ಥಿತಂ ತಂ ವ್ಯಾಪ್ಯ ತಿಷ್ಠತಃ ॥ ೧೪

ಆತ್ಮಮನಸ್ಸುಗಳು ಪಂಚಭೂತ ಸಮುದಾಯವನ್ನು ಅವಲಂಬಿಸಿಯೇ ಇರುತ್ತವೆ. ಪರಮಾತ್ಮನನ್ನು ಪಂಚಭೂತಾಶ್ರಿತಗಳಾದ ಆತ್ಮಮನಸ್ಸುಗಳು ವ್ಯಾಪಿಸುವುವು.

ಅಸಂಖ್ಯಾ ಮೂರ್ತಯಸ್ತಸ್ಯ ನಿಷ್ಪತಂತಿ ಶರೀರತಃ ।
ಉಚ್ಚಾವಚಾನಿ ಭೂತಾನಿ ಸತತಂ ಚೇಷ್ಟಯಂತಿ ಯಾಃ ॥ ೧೫

ಭೂತವಸ್ತುಗಳಲ್ಲಿ ಪರಮಾತ್ಮನ ಅಭಿವ್ಯಕ್ತಿಯು ಆತ್ಮಮನೋರೂಪದಿಂದ ಆಗುವುದು.

ಪಂಚಭ್ಯ ಏವ ಮಾತ್ರಾಭ್ಯಃ ಪ್ರೇತ್ಯ ದುಷ್ಕೃತಿನಾಂ ನೃಣಾಂ ।
ಶರೀರಂ ಯಾತನಾರ್ಥೀಯಮನ್ಯದುತ್ಪದ್ಯತೇ ಧ್ರುವಂ ॥ ೧೬

(ಪಂಚತನ್ಮಾತ್ರಗಳಿಂದ) ಪಂಚಭೂತಗಳ ಸೂಕ್ಷ್ಮಾಂಶದಿಂದ ದುಃಖಾನುಭವಕ್ಕೆ ತಕ್ಕುದಾದ ಶರೀರವು ಲೋಕಾಂತರದಲ್ಲಿ ದೊರಕುವುದು.

ತೇನಾನುಭೂಯ ತಾ ಯಾಮೀಃ ಶರೀರೇಣೇಹ ಯಾತನಾಃ ।
ತಾಸ್ವೇವ ಭೂತಮಾತ್ರಾಸು ಪ್ರಲೀಯಂತೇ ವಿಭಾಗಶಃ ॥ ೧೭

ದುರಾತ್ಮರಿಗೆ ಸ್ಥೂಲಶರೀರವು ನಾಶವಾದೊಡನೆ ದುಃಖಾನುಭವವು ಉಂಟಾಗಲು ಸೂಕ್ಷ್ಮಶರೀರದಲ್ಲಿ ಆತ್ಮನು ಅಂತರ್ಗತನಾಗುವನು.

ಸೋಽನುಭೂಯಾಸುಖೋದರ್ಕಾನ್ ದೋಷಾನ್ ವಿಷಯಸಂಗಜಾನ್ ।
ವ್ಯಪೇತಕಲ್ಮಷೋಽಭ್ಯೇತಿ ತಾವೇವೋಭೌ ಮಹೌಜಸೌ ॥ ೧೮

ದುಃಖಾನುಭವವು ಮುಗಿದೊಡನೆ ಪರಿಶುದ್ಧನಾಗಿ ಪುನಃ ಜನಿಸುವನು.

ತೌ ಧರ್ಮಂ ಪಶ್ಯತಸ್ತಸ್ಯ ಪಾಪಂ ಚಾತಂದ್ರಿತೌ ಸಹ ।
ಯಾಭ್ಯಾಂ ಪ್ರಾಪ್ನೋತಿ ಸಂಪೃಕ್ತಃ ಪ್ರೇತ್ಯೇಹ ಚ ಸುಖಾಸುಖಂ ॥ ೧೯

ಪರಮಾತ್ಮನು ಎಚ್ಚರದಿಂದ ಜೀವನ ಪಾಪ–ಪುಣ್ಯಗಳನ್ನು ಪರೀಕ್ಷಿಸುತ್ತಾನೆ.

ಯದ್ಯಾಚರತಿ ಧರ್ಮಂ ಸ ಪ್ರಾಯಶೋಽಧರ್ಮಮಲ್ಪಶಃ ।
ತೈರೇವ ಚಾವೃತೋ ಭೂತೈಃ ಸ್ವರ್ಗೇ ಸುಖಮುಪಾಶ್ನುತೇ ॥ ೨೦

ಅಧರ್ಮ ಕಡಿಮೆ ಧರ್ಮ ಹೆಚ್ಚುಗಳಿಸಿದ್ದರೆ ದಿವ್ಯದೇಹಧಾರಿಯಾಗಿ ಸ್ವರ್ಗಸುಖವನ್ನು ಅನುಭವಿಸುತ್ತಾನೆ.

ಯದಿ ತು ಪ್ರಾಯಶೋಽಧರ್ಮಂ ಸೇವತೇ ಧರ್ಮಮಲ್ಪಶಃ ।
ತೈರ್ಭೂತೈಃ ಪರಿತ್ಯಕ್ತೋ ಯಾಮೀಃ ಪ್ರಾಪ್ನೋತಿ ಯಾತನಾಃ ॥ ೨೧

ಗಳಿಸಿದ ಅಧರ್ಮವು ಹೆಚ್ಚು, ಧರ್ಮವು ಕಡಿಮೆ ಆಗಿದ್ದರೆ ಯಮ ಯಾತನೆಗಳಿಗೆ ಗುರಿಯಾಗುವನು.

ಯಾಮೀಸ್ತಾ ಯಾತನಾಃ ಪ್ರಾಪ್ಯ ಸ ಜೀವೋ ವೀತಕಲ್ಮಷಃ ।
ತಾನ್ಯೇವ ಪಂಚ ಭೂತಾನಿ ಪುನರಪ್ಯೇತಿ ಭಾಗಶಃ ॥ ೨೨

೧೮ ನೆ ಶ್ಲೋಕದಲ್ಲಿ ಹೇಳಿದಂತೆ ದುಃಖ ಅನುಭವಿಸಿ ಜನ್ಮ ಎತ್ತುವನು.

ಏತಾ ಧೃಷ್ಟ್ವಾಸ್ಯ ಜೀವಸ್ಯ ಗತೀಃ ಸ್ವೇನೈವ ಚೇತಸಾ ।
ಧರ್ಮತೋಽಧರ್ಮತಶ್ಚೈವ ಧರ್ಮೇ ದಧ್ಯಾತ್ಸದಾ ಮನಃ ॥ ೨೩

ಧರ್ಮ ಅಧರ್ಮಗಳ ದ್ವಿವಿಧ ಗತಿಯನ್ನು ಚಿಂತಿಸಿ ಧರ್ಮದಲ್ಲಿ ಮನಸ್ಸನ್ನು ಹರಿಯಬಿಡಬೇಕು.

ಸತ್ತ್ವಂ ರಜಸ್ತಮಶ್ಚೈವ ತ್ರೀನ್ ವಿದ್ಯಾದಾತ್ಮನೋ ಗುಣಾನ್ ।
ಯೈರ್ವ್ಯಾಪ್ಯೇಮಾನ್ ಸ್ಥಿತೋ ಭಾವಾನ್ ಮಹಾನ್ ಸರ್ವಾನಶೇಷತಃ ॥ ೨೪

ಸತ್ತ್ವ, ರಜಸ್, ತಮಸ್ ಎಂದು ಮೂರು ಮನಸ್ಸಿನ ಗುಣಗಳು. ತ್ರಿಗುಣವುಳ್ಳ ಮನಸ್ಸು ಸರ್ವತ್ರ ಗತಿಶೀಲವಾಗಿದೆ. ಗುಣತ್ರಯವು ಜಗತ್ತನ್ನು ವ್ಯಾಪಿಸಿದೆ.

ಯೋ ಯದೈಷಾಂ ಗುಣೋ ದೇಹೇ ಸಾಕಲ್ಯೇನಾತಿರಿಚ್ಯತೇ ।
ಸ ತದಾ ತದ್ಗುಣಪ್ರಾಯಂ ತಂ ಕರೋತಿ ಶರೀರಿಣಂ ॥ ೨೫

ದೇಹದಲ್ಲಿ ಯಾವ ಗುಣವು ಅಧಿಕವಾಗಿದೆಯೋ ಆ ದೇಹವನ್ನು ಆ ಗುಣವುಳ್ಳದ್ದೆಂದು ಹೇಳುವರು.

ಸತ್ತ್ವಂ ಜ್ಞಾನಂ ತಮೋಽಜ್ಞಾನಂ ರಾಗದ್ವೇಷೌ ರಜಃ ಸ್ಮೃತಂ |
ಏತದ್ವ್ಯಾಪ್ತಿಮದೇತೇಷಾಂ ಸರ್ವಭೂತಾಶ್ರಿತಂ ವಪುಃ || ೨೬

ಜ್ಞಾನವು ಸತ್ತ್ವಗುಣದ ಫಲ. ಅಜ್ಞಾನವು ತಮಸ್ಸಿನ ಫಲ. ರಾಗ ದ್ವೇಷಗಳು ರಜೋಗುಣದಿಂದ ಜನಿಸುವುವು. ಈ ಗುಣತ್ರಯವು ಎಲ್ಲ ದೇಹಗಳಲ್ಲಿಯೂ ಇದೆ. ಇತರತ್ರವೂ ಇದೆ.

ತತ್ರ ಯತ್ಪ್ರೀತಿಸಂಯುಕ್ತಂ ಕಿಂಚಿದಾತ್ಮನಿ ಲಕ್ಷಯೇತ್ |
ಪ್ರಶಾಂತಮಿವ ಶುದ್ಧಾಭಂ ಸತ್ತ್ವಂ ತದುಪಧಾರಯೇತ್ || ೨೭

ಶುದ್ಧ, ಪ್ರಶಾಂತ, ಪ್ರೀತಿರೂಪ, ಸಂವೇದನೆಯು ಸತ್ತ್ವಗುಣಲಕ್ಷಣ.

ಯತ್ತು ದುಃಖಸಮಾಯುಕ್ತಮಪ್ರೀತಿಕರಮಾತ್ಮನಃ |
ತದ್ರಜೋ ಪ್ರತಿಪಂ ವಿದ್ಯಾತ್ಸತತಂ ಹಾರಿ ದೇಹಿನಾಂ || ೨೮

ದುಃಖ, ಅಪ್ರೀತಿ ವಿಷಯಗಳಲ್ಲಿ ಮನಃಸ್ಸಂಚಾರ ಉಂಟುಮಾಡುವ ಗುಣವು ರಜಸ್ಸು.

ಯತ್ತು ಸ್ಯಾನ್ಮೋಹಸಂಯುಕ್ತಮವ್ಯಕ್ತಂ ವಿಷಯಾತ್ಮಕಂ |
ಅಪ್ರತರ್ಕ್ಯಮವಿಜ್ಞೇಯಂ ತಮಸ್ತದುಪಧಾರಯೇತ್ || ೨೯

ಮೋಹ, ಅಸ್ಪಷ್ಟ, ಅನಿರ್ವಚನೀಯ ವಿಷಯರೂಪವಾದದ್ದು ತಮಸ್ಸು.

ತ್ರಯಾಣಾಮಪಿ ಚೈತೇಷಾಂ ಗುಣಾನಾಂ ಯಃ ಫಲೋದಯಃ |
ಅಗ್ರ್ಯೋ ಮಧ್ಯೋ ಜಘನ್ಯಶ್ಚ ತಂ ಪ್ರವಕ್ಷ್ಯಾಮ್ಯಶೇಷತಃ || ೩೦

ಈ ಮೂರು ಗುಣಗಳ ಉತ್ತಮ, ಮಧ್ಯಮ, ಅಧಮ ಫಲಗಳನ್ನು ಹೇಳುತ್ತೇನೆ.

ವೇದಾಭ್ಯಾಸಸ್ತಪೋ ಜ್ಞಾನಂ ಶೌಚಮಿಂದ್ರಿಯನಿಗ್ರಹಃ |
ಧರ್ಮಕ್ರಿಯಾತ್ಮಚಿಂತಾ ಚ ಸಾತ್ತ್ವಿಕಂ ಗುಣಲಕ್ಷಣಂ || ೩೧

ಸತ್ತ್ವಗುಣದಿಂದ ಮನುಷ್ಯನಲ್ಲಿ ವೇದಾಭ್ಯಾಸ, ತಪಸ್, ಜ್ಞಾನ, ಶೌಚ, ಇಂದ್ರಿಯನಿಗ್ರಹ, ಧರ್ಮಕಾರ್ಯ, ಆತ್ಮಚಿಂತನೆ ಇವುಗಳು ಉದಯಿಸುವುವು.

ಆರಂಭರುಚಿತಾಧೈರ್ಯಮಸತ್ಕಾರ್ಯಪರಿಗ್ರಹಃ ।
ವಿಷಯೋಪಸೇವಾ ಚಾಜಸ್ರಂ ರಾಜಸಂ ಗುಣಲಕ್ಷಣಂ ॥ ೩೨

ಆರಂಭಪ್ರೀತಿ, ಅಧೈರ್ಯ, ಅಸತ್ಕಾರ್ಯ, ವಿಷಯಾಭಿಲಾಷೆ ಇವುಗಳು ರಾಜಸಗುಣದವನಲ್ಲಿ ಕಾಣಬರುವುವು.

ಲೋಭಃ ಸ್ವಪ್ನೋಽಧೃತಿಃ ಕ್ರೌರ್ಯಂ ನಾಸ್ತಿಕ್ಯಂ ಭಿನ್ನವೃತ್ತಿತಾ ।
ಯಾಚಿಷ್ಣುತಾ ಪ್ರಮಾದಶ್ಚ ತಾಮಸಂ ಗುಣಲಕ್ಷಣಂ ॥ ೩೩

ಲೋಭ, ನಿದ್ದೆ, ಅಧೀರತೆ, ಕ್ರೂರತೆ, ನಾಸ್ತಿಕ್ಯ, ಚಾಂಚಲ್ಯ, ಬೇಡುವುದು, ಪ್ರಮಾದ ಇವುಗಳು ತಾಮಸರಿಗೆ ಉಂಟಾಗುವುದು.

ತ್ರಯಾಣಾಮಪಿ ಚೈತೇಷಾಂ ಗುಣಾನಾಂ ತ್ರಿಷು ತಿಷ್ಠತಾಂ ।
ಇದಂ ಸಾಮಾಸಿಕಂ ಜ್ಞೇಯಂ ಕ್ರಮಶೋ ಗುಣಲಕ್ಷಣಂ ॥ ೩೪

ಸಂಕ್ಷೇಪವಾಗಿ ಒಂದು ಲಕ್ಷಣವನ್ನು ಸತ್ತ್ವರಜಸ್ತಮೋ ಗುಣಗಳಿಗೆ ಹೇಳಬಹುದು.

ಯತ್ಕರ್ಮ ಕೃತ್ವಾ ಕುರ್ವಂಶ್ಚ ಕರಿಷ್ಯಂಶ್ಚೈವ ಲಜ್ಜತಿ ।
ತಜ್ಜ್ಞೇಯಂ ವಿದುಷಾ ಸರ್ವಂ ತಾಮಸಂ ಗುಣಲಕ್ಷಣಂ ॥ ೩೫

ಏನಾದರೂ ಒಂದು ಕೆಲಸ ಮಾಡಿದ ಮೇಲೆ ಮತ್ತು ಮಾಡುವಾಗ ಮತ್ತು ಮಾಡಲು ಸಂಕಲ್ಪಿಸಿದಾಗ ನಾಚುವನೋ ಅದು ತಮೋಗುಣದಿಂದ.

ಯೇನಾಸ್ಮಿನ್ ಕರ್ಮಣಾ ಲೋಕೇ ಖ್ಯಾತಿಮಿಚ್ಛತಿ ಪುಷ್ಕಲಾಂ ।
ನ ಚ ಶೋಚತ್ಯಸಂಪತ್ತೌ ತದ್ವಿಜ್ಞೇಯಂ ತು ರಾಜಸಂ ॥ ೩೬

ಕರ್ಮದಿಂದ ಖ್ಯಾತಿಯನ್ನು ಇಚ್ಛಿಸುತ್ತಾ ಕರ್ಮನಾಶವಾದರೂ ದುಃಖಿಸದಿರುವುದು ರಜೋಗುಣದಿಂದ.

ಯತ್ಸರ್ವೇಣೇಚ್ಛತಿ ಜ್ಞಾತುಂ ಯನ್ನ ಲಜ್ಜತಿ ಚಾಚರನ್ ।
ಯೇನ ತುಷ್ಯತಿ ಚಾತ್ಮಾಸ್ಯ ತತ್ಸತ್ವಗುಣಲಕ್ಷಣಂ ॥ ೩೭

ಸರ್ವೋಪಾಯಗಳಿಂದ ತಿಳಿಯುವ ಇಚ್ಛೆ ಮಾಡಿದರೂ ನಾಚದೆ ಕರ್ಮಾಚರಣೆಯಿಂದ ಮನಃಸಂತೋಷವಾಗುವುದು ಸತ್ವಗುಣಕಾರ್ಯ.

ತಮಸೋ ಲಕ್ಷಣಂ ಕಾಮೋ ರಜಸಸ್ತ್ವರ್ಥ ಉಚ್ಯತೇ ।
ಸತ್ವಸ್ಯ ಲಕ್ಷಣಂ ಧರ್ಮಃ ಶ್ರೈಷ್ಠ್ಯಮೇಷಾಂ ಯಥೋತ್ತರಂ ॥ ೩೮

ಕಾಮಜನಕ ತಮೋಗುಣಕ್ಕಿಂತ ರಜಸ್ಸು, ಅರ್ಥಕಾರಕ ರಜೋಗುಣಕ್ಕಿಂತ ಸತ್ವ, ಶ್ರೇಷ್ಠವಾಗಿದೆ. ಸತ್ವವು ಧರ್ಮಜನಕವಾಗಿದೆ ಅರ್ಥಕಾಮಗಳು ಧರ್ಮದಿಂದ ನಿರಾಬಾಧವಾಗಿ ಬರುವುವು.

ಯೇನ ಯಸ್ತು ಗುಣೇನೈಷಾಂ ಸಂಸಾರಾನ್ಪ್ರತಿಪದ್ಯತೇ ।
ತಾನ್ ಸಮಾಸೇನ ವಕ್ಷ್ಯಾಮಿ ಸರ್ವಸ್ಯಾಸ್ಯ ಯಥಾಕ್ರಮಂ ॥ ೩೯

ಸಂಸಾರಕಾರಣ ಗುಣವನ್ನು ಹೇಳುತ್ತೇನೆ.

ದೇವತ್ವಂ ಸಾತ್ವಿಕಾ ಯಾಂತಿ ಮನುಷ್ಯತ್ವಂ ಚ ರಾಜಸಾಃ ।
ತಿರ್ಯಕ್ತ್ವಂ ತಾಮಸಾ ನಿತ್ಯಮಿತ್ಯೇಷಾ ತ್ರಿವಿಧಾ ಗತಿಃ ॥ ೪೦

ಸತ್ವಗುಣಯುಕ್ತರು ದೇವತ್ವವನ್ನು ರಜೋಗುಣ ಪ್ರಧಾನರು ಮನುಷ್ಯತ್ವವನ್ನು, ತಾಮಸಿಗಳು ಪ್ರಾಣಿಜನ್ಮವನ್ನು ಹೊಂದುತ್ತಾರೆ.

ತ್ರಿವಿಧಾ ತ್ರಿವಿಧೈಷಾ ತು ವಿಜ್ಞೇಯಾ ಗೌಣಿಕೀ ಗತಿಃ ।
ಅಧಮಾ ಮಧ್ಯಮಾಗ್ರ್ಯಾ ಚ ಕರ್ಮವಿದ್ಯಾ ವಿಶೇಷತಃ ॥ ೪೧

ಈ ಮೂರು ಜನ್ಮದಲ್ಲಿಯೂ ಉತ್ತಮಾಧಮಮಧ್ಯಮ ವಿಭಾಗವಿದೆ.

ಸ್ಥಾವರಾಃ ಕೃಮಿಕೀಟಾಶ್ಚ ಮತ್ಸ್ಯಾಃ ಸರ್ಪಾಃ ಸಕಚ್ಛಪಾಃ ।
ಪಶವಶ್ಚ ಮೃಗಾಶ್ಚೈವ ಜಘನ್ಯಾ ತಾಮಸೀ ಗತಿಃ ॥ ೪೨

ಮರ, ಗಿಡ, ಬಳ್ಳಿ, ಕೃಮಿಕೀಟ, ಮೀನು, ಹಾವು, ಆಮೆ, ಮೃಗ, ಪಶುಜನ್ಮವು ತಾಮಸದಲ್ಲಿ ಅಧಮವು

ಹಸ್ತಿನಶ್ಚ ತುರಂಗಾಶ್ಚ ಶೂದ್ರಾ ಮ್ಲೇಚ್ಛಾಶ್ಚ ಗರ್ಹಿತಾಃ ।
ಸಿಂಹಾ ವ್ಯಾಘ್ರಾ ವರಾಹಾಶ್ಚ ಮಧ್ಯಮಾ ತಾಮಸೀ ಗತಿಃ ॥ ೪೩

ಆನೆ, ಕುದುರೆ, ಶೂದ್ರ, ಮ್ಲೇಚ್ಛ, ಸಿಂಹ, ಹುಲಿ, ಹಂದಿ, ಜನ್ಮಗಳು ಮಧ್ಯಮ ಜನ್ಮವು.

ಚಾರಣಾಶ್ಚ ಸುಪರ್ಣಾಶ್ಚ ಪುರುಷಾಶ್ಚೈವ ದಾಂಭಿಕಾಃ ।
ರಕ್ಷಾಂಸಿ ಚ ಪಿಶಾಚಾಶ್ಚ ತಾಮಸೀಷೂತ್ತಮಾ ಗತಿಃ ॥ ೪೪

ನಟನರ್ತಕ, ಪಕ್ಷಿ, ದಾಂಭಿಕ ಪುರುಷ, ರಾಕ್ಷಸ, ಪಿಶಾಚ ಜನ್ಮವು ತಾಮಸದಲ್ಲಿ ಉತ್ತಮವು.

ಝಲ್ಲಾ ಮಲ್ಲಾ ನಟಾಶ್ಚೈವ ಪುರುಷಾಃ ಶಸ್ತ್ರವೃತ್ತಯಃ ।
ದ್ಯೂತಪಾನಪ್ರಸಕ್ತಾಶ್ಚ ಜಘನ್ಯಾ ರಾಜಸೀ ಗತಿಃ ॥ ೪೫

ಝಲ್ಲ, ಮಲ್ಲ, ಶಸ್ತ್ರಜೀವಿ, ಜೂಜುಕೋರ, ಮದ್ಯಪಾಯಿ ಈ ಜನ್ಮವು ರಾಜಸದಲ್ಲಿ ಅಧರ್ಮ ಜನ್ಮವು.

ರಾಜಾನಃ ಕ್ಷತ್ರಿಯಾಶ್ಚೈವ ರಾಜ್ಞಾಂ ಚೈವ ಪುರೋಹಿತಾಃ ।
ವಾದಯುದ್ಧಪ್ರಧಾನಾಶ್ಚ ಮಧ್ಯಮಾ ರಾಜಸೀ ಗತಿಃ ॥ ೪೬

ರಾಜ, ಕ್ಷತ್ರಿಯ, ರಾಜಪುರೋಹಿತ, ವಾದನಿರತ, ಯುದ್ಧನಿರತ ಈ ಜನ್ಮವು ರಾಜಸದಲ್ಲಿ ಮಧ್ಯಮವು.

ಗಂಧರ್ವಾ ಗುಹ್ಯಕಾ ಯಕ್ಷಾ ವಿಬುಧಾನುಚರಾಶ್ಚ ಯೇ ।
ತಥೈವಾಪ್ಸರಸಃ ಸರ್ವಾ ರಾಜಸೀಷೂತ್ತಮಾ ಗತಿಃ ॥ ೪೭

ಗಂಧರ್ವ, ಗುಹ್ಯ, ಯಕ್ಷ, ದೇವಾನುಚರ, ಅಪ್ಸರ ಇವರ ಜನ್ಮವು ತಾಮಸದಲ್ಲಿ ಉತ್ತಮವು.

ತಾಪಸಾ ಯತಯೋ ವಿಪ್ರಾ ಯೇ ಚ ವೈಮಾನಿಕಾ ಗಣಾಃ ।
ನಕ್ಷತ್ರಾಣಿ ಚ ದೈತ್ಯಾಶ್ಚ ಪ್ರಥಮಾ ಸಾತ್ತ್ವಿಕೀ ಗತಿಃ ॥ ೪೮

ಯತಿ, ವಿಪ್ರ, ವೈಮಾನಿಕ, ನಕ್ಷತ್ರ, ದೈತ್ಯ ಜನ್ಮಗಳು ಸಾತ್ವಿಕದಲ್ಲಿ ಪ್ರಥಮವರ್ಗವು.

ಯಜ್ವಾನ ಋಷಯೋ ದೇವಾ ವೇದಾ ಜ್ಯೋತೀಂಷಿ ವತ್ಸರಾಃ ।
ಪಿತರಶ್ಚೈವ ಸಾಧ್ಯಾಶ್ಚ ದ್ವಿತೀಯಾ ಸಾತ್ವಿಕೀ ಗತಿಃ ॥ ೪೯

ಯಾಗಶೀಲ, ಋಷಿ, ದೇವ, ವೇದ, ಧ್ರುವಾದಿ ಜ್ಯೋತಿಸ್ಸು, ವತ್ಸರ, ಪಿತೃ, ಸಾಧ್ಯ ಇವರು ಮಧ್ಯಮ ಸಾತ್ವಿಕರು.

ಬ್ರಹ್ಮಾ ವಿಶ್ವಸೃಜೋ ಧರ್ಮೋ ಮಹಾನವ್ಯಕ್ತಮೇವ ಚ ।
ಉತ್ತಮಾಂ ಸಾತ್ವಿಕೀಮೇತಾಂ ಗತಿಮಾಹುರ್ಮನೀಷಿಣಃ ॥ ೫೦

ಬ್ರಹ್ಮ ವಿಶ್ವಸೃಟ್, ಮಹತ್, ಅವ್ಯಕ್ತ ಇವು ಉತ್ತಮ ಸಾತ್ವಿಕ ವರ್ಗದವುಗಳು ಎಂದು ಪಂಡಿತರು ತಿಳಿಯುತ್ತಾರೆ.

ಏಷ ಸರ್ವಃ ಸಮುದ್ದಿಷ್ಟಸ್ತ್ರಿಪ್ರಕಾರಸ್ಯ ಕರ್ಮಣಃ ।
ತ್ರಿವಿಧಸ್ತ್ರಿವಿಧಃ ಕೃತ್ಸ್ನಃ ಸಂಸಾರಃ ಸಾರ್ವಭೌತಿಕಃ ॥ ೫೧

ಇದೆಲ್ಲ ಮನೋವಾಕ್ಕಾಯ ಕರ್ಮಗಳು, ಸತ್ವರಜಸ್ತಮೋರೂಪವಾದ ಪ್ರಭೇದಗಳು, ಪ್ರಥಮ ಮಧ್ಯಮ ಉತ್ತಮ ವರ್ಗಸಹಿತವಾಗಿ ನಿರೂಪಿತ ವಾದವು.

ಇಂದ್ರಿಯಾಣಾಂ ಪ್ರಸಂಗೇನ ಧರ್ಮಸ್ಯಾಸೇವನೇನ ಚ ।
ಪಾಪಾನ್ ಸಂಯಾಂತಿ ಸಂಸಾರಾನವಿದ್ವಾಂಸೋ ನರಾಧಮಾಃ ॥ ೫೨

ಇಂದ್ರಿಯಗಳ ವಶವರ್ತಿಯಾಗಿ ಅಧರ್ಮವನ್ನು ಆಚರಿಸಿದರೆ ಪಾಪ ಜನ್ಮವು ಬರುವುದೆಂದು ವಿದ್ವಜ್ಜನರ ವಿಶ್ವಾಸ.

ಯಾಂ ಯಾಂ ಯೋನಿಂ ತು ಜೀವೋಽಯಂ ಯೇನ ಯೇನೇಹ ಕರ್ಮಣಾ ।
ಕ್ರಮಶೋ ಯಾತಿ ಲೋಕೇಽಸ್ಮಿನ್ ತತ್ತತ್ಸರ್ವಂ ನಿಬೋಧತ ॥ ೫೩

ಇನ್ನು ಮೇಲೆ ಪ್ರತಿ ಕರ್ಮಗಳ ಫಲಪರಿಣಾಮವನ್ನು ಹೇಳುತ್ತೇನೆ.

ಬಹೂನ್ ವರ್ಷಗಣಾನ್ ಘೋರಾನ್ನರಕಾನ್ ಪ್ರಾಪ್ಯ ತತ್ಕ್ಷಯಾತ್ ।
ಸಂಸಾರಾನ್ ಪ್ರತಿಪದ್ಯಂತೇ ಮಹಾಪಾತಕಿನಸ್ತ್ವಿಮಾನ್ ॥ ೫೪

ಮಹಾಪಾತಕ ಮಾಡಿದವರು ಘೋರನರಕವನ್ನು ಬಹುವರ್ಷ ಅನುಭವಿಸಿ ಸಂಸಾರಕ್ಕೆ ಹಿಂದಿರುಗುತ್ತಾರೆ.

ಶ್ವಸೂಕರಖರೋಷ್ಟ್ರಾಣಾಂ ಗೋಜಾವಿಮೃಗಪಕ್ಷಿಣಾಂ ।
ಚಂಡಾಲಪುಕ್ಕಸಾನಾಂ ಚ ಬ್ರಹ್ಮಹಾ ಯೋನಿಮೃಚ್ಛತಿ ॥ ೫೫

ಬ್ರಹ್ಮಹತ್ಯೆ ಮಾಡಿದವನು ನಾಯಿ, ಹಂದಿ, ಕತ್ತೆ, ಒಂಟೆ, ಗೋವು, ಆಡು, ಕುರಿ, ಮೃಗಪಕ್ಷಿ, ಚಂಡಾಲ, ಪುಕ್ಕಸ, ಜನ್ಮವನ್ನು ಹೊಂದುತ್ತಾನೆ.

ಕೃಮಿಕೀಟಪತಂಗಾನಾಂ ವಿಡ್ಭುಜಾಂ ಚೈವ ಪಕ್ಷಿಣಾಂ ।
ಹಿಂಸ್ರಾಣಾಂ ಚೈವ ಸತ್ವಾನಾಂ ಸುರಾಪೋ ಬ್ರಾಹ್ಮಣೋ ವ್ರಜೇತ್ ॥ ೫೬

ಮದ್ಯಪಾಯಿಗೆ ಕೃಮಿ, ಕೀಟ, ಪತಂಗ, ಮಲತಿನ್ನುವ ಹಕ್ಕಿ, ಹುಲಿ ಮುಂತಾದ ಕ್ರೂರಿಗಳು ಇವುಗಳ ಜನ್ಮವು.

ಲೂತಾಹಿಸರಟಾನಾಂ ಚ ತಿರಶ್ಚಾಂ ಚಾಂಬುಚಾರಿಣಾಂ ।
ಹಿಂಸ್ರಾಣಾಂ ಚ ಪಿಶಾಚಾನಾಂ ಸ್ತೇನೋ ವಿಪ್ರಃ ಸಹಸ್ರಶಃ ॥ ೫೭

ಬಲೆಗಾರ, ಓತಿ, ಆರಣೆ, ಜಲಚರ, ಪಿಶಾಚ ಜನ್ಮವನ್ನು ಚಿನ್ನಕಳ್ಳ ಬ್ರಾಹ್ಮಣನು ಹೊಂದುವನು.

ತೃಣಗುಲ್ಮಲತಾನಾಂ ಚ ಕ್ರವ್ಯಾದಾಂ ದಂಷ್ಟ್ರಿಣಾಮಪಿ ।
ಕ್ರೂರಕರ್ಮಕೃತಾಂ ಚೈವ ಶತಶೋ ಗುರುತಲ್ಪಗಃ ॥ ೫೮

ಗುರುತಲ್ಪಗಮನ ಮಾಡಿದವನಿಗೆ ಹುಲ್ಲು ಬಲ್ಲೆ, ಬಳ್ಳಿ, ಮಾಂಸಾಹಾರಿ ಪಕ್ಷಿ, ಸಿಂಹ ಮುಂತಾದ ಕೋರೆಹಲ್ಲಿನ ಪ್ರಾಣಿ ಜನ್ಮವು.

ಹಿಂಸ್ರಾ ಭವಂತಿ ಕ್ರವ್ಯಾದಾಃ ಕೃಮಯೋಽಭಕ್ಷ್ಯಭಕ್ಷಿಣಃ ।
ಪರಸ್ಪರಾದಿನಃ ಸ್ತೇನಾಃ ಪ್ರೇತಾಂತ್ಯಸ್ತ್ರೀನಿಷೇವಿಣಃ ॥ ೫೯

ಬೇಡನು ಮಾಂಸಾಹಾರಿ ಪ್ರಾಣಿಯು, ಅಭಕ್ಷ್ಯಭಕ್ಷಕನು ಕೃಮಿಯು, ಚಂಡಾಲಸ್ತ್ರೀ ಪ್ರಿಯನು ಪ್ರೇತದ ಜನ್ಮವನ್ನು ಹೊಂದುವರು.

ಸಂಯೋಗಂ ಪತಿತೈರ್ಗತ್ವಾ ಪರಸ್ಯೈವ ಚ ಯೋಷಿತಂ ।
ಅಪಹೃತ್ಯ ಚ ವಿಪ್ರಸ್ವಂ ಭವತಿ ಬ್ರಹ್ಮರಾಕ್ಷಸಃ ॥ ೬೦

ಪತಿತಸಂಸರ್ಗ, ಪರಸ್ತ್ರೀಸಂಗ, ಬ್ರಹ್ಮಸ್ವಾಪಹಾರ ಈ ಕರ್ಮಗಳಿಂದ ಬ್ರಹ್ಮರಾಕ್ಷಸ ಜನ್ಮವು.

ಮಣಿಮುಕ್ತಾಪ್ರವಾಲಾನಿ ಹೃತ್ವಾ ಲೋಭೇನ ಮಾನವಃ ।
ವಿವಿಧಾನಿ ಚ ರತ್ನಾನಿ ಜಾಯತೇ ಹೇಮಕರ್ತೃಷು ॥ ೬೧

ಮುತ್ತು, ರತ್ನ, ಹವಳ, ಮಣಿ ಇವುಗಳನ್ನು ಕದ್ದರೆ ಸೊನೆಗಾರ ಜನ್ಮ.

ಧಾನ್ಯಂ ಹೃತ್ವಾ ಭವತ್ಯಾಖುಃ ಕಾಂಸ್ಯಂ ಹಂಸೋ ಜಲಂ ಪ್ಲವಃ ।
ಮಧು ದಂಶಃ ಪಯಃ ಕಾಕೋ ರಸಂ ಶ್ವಾ ನಕುಲೋ ಘೃತಂ ॥ ೬೨

ಧಾನ್ಯಕಳ್ಳನು ಇಲಿಯು, ಕಂಚು ಕದ್ದು ಹಂಸದ, ನೀರು ಕದ್ದು ಪ್ಲವ, ಜೇನು ಕದ್ದು ಕಡಿಯುವ ಹುಳ, ಹಾಲು ಕದ್ದು ಕಾಗೆ, ರಸ ಕದ್ದು ನಾಯಿ, ತುಪ್ಪ ಕದ್ದು ಮುಂಗುಸಿ ಜನ್ಮವು.

ಮಾಂಸಂ ಗೃಧ್ರೋ ವಪಾಂ ಮದ್ಗುಸ್ತೈಲಂ ತೈಲಪಕಃ ಖಗಃ ।
ಚೀರೀವಾಕಸ್ತು ಲವಣಂ ಬಲಾಕಾ ಶಕುನಿರ್ದಧಿ ॥ ೬೩

ಮಾಂಸದಿಂದ ಹದ್ದು, ವಪೆಯಿಂದ ಮದ್ಗು, ಎಣ್ಣೆಯಿಂದ ಗಾಣಿಗ ಉಪ್ಪಿನಿಂದ ಚೀರೀವಾಕ, ಮೊಸರಿಂದ ಕೊಕ್ಕರೆ ಆಗುವನು.

ಕೌಶೇಯಂ ತಿತ್ತಿರಿರ್ಹೃತ್ವಾ ಕ್ಷೌಮಂ ಹೃತ್ವಾ ತು ದರ್ದುರಃ ।
ಕಾರ್ಪಾಸತಾಂತವಂ ಕ್ರೌಂಚೋ ಗೋಧಾ ಗಾಂ ವಾಗ್ಗುದೋ ಗುಡಂ ॥ ೬೪

ರೇಶ್ಮೆಯಿಂದ ತಿತ್ತಿರಿ, ನಾರಿನಿಂದ ಕಪ್ಪೆ, ಹತ್ತಿಯಿಂದ ಕ್ರೌಂಚ, ಗೋವಿನಿಂದ ಉಡು, ಬೆಲ್ಲ (ಕದ್ದರೆ) ದಿಂದ ಬಾವಲಿ, ಇವರ ಜನ್ಮ

ಭುಭುಂದರಿಃ ಶುಭಾನ್ ಗಂಧಾನ್ ಪತ್ರ ಶಾಕಂ ತು ಬರ್ಹಿಣಃ ।
ಶ್ವಾವಿತ್ಕೃತಾನ್ನಂ ವಿವಿಧಮಕೃತಾನ್ನಂ ತು ಶಲ್ಯಕಃ ॥ ೬೫

ಸುಗಂಧ ದ್ರವ್ಯ (ಕದ್ದರೆ) ದಿಂದ ಛುಛುಂದರಿ, ತರಕಾರಿಯಿಂದ ನವಿಲು ಸಿದ್ಧಾನ್ನದಿಂದ ಶ್ವಾವಿಧ, ಕಾಳು ಕದ್ದು ಶಲ್ಯಕ ಜನ್ಮ.

ಬಕೋ ಭವತಿ ಹೃತ್ವಾಗ್ನಿಂ ಗೃಹಕಾರೀ ಹ್ಯುಪಸ್ಕರಂ ।
ರಕ್ತಾನಿ ಹೃತ್ವಾ ವಾಸಾಂಸಿ ಜಾಯತೇ ಜೀವಜೀವಕಃ ॥ ೬೬

ಬೆಂಕಿ (ಕದ್ದರೆ) ಯಿಂದ ಬಕ, ಚಜಿಂಜಿಗೆಯಿಂದ ಕೀಟ, ಕೆಂಪು ಬಟ್ಟೆಯಿಂದ ಜೀವಜೀವಕ ಜನ್ಮವು.

ವೃಕೋ ಮೃಗೇಭಂ ವ್ಯಾಘ್ರೋಽಶ್ವಂ ಫಲಮೂಲಂ ತು ಮರ್ಕಟಃ ।
ಸ್ತ್ರೀಮೃಕ್ಷಃ ಸ್ತೋಕಕೋ ವಾರಿ ಯಾನಾನ್ಯುಷ್ಟ್ರಃ ಪಶೂನಜಃ ॥ ೬೭

ಆನೆ (ಕದ್ದರೆ) ಯಿಂದ ತೋಳ, ಕುದುರೆಯಿಂದ ಹುಲಿ, ಹಣ್ಣು-ಗಡ್ಡೆಯಿಂದ ಮಂಗ, ಹೆಂಗಸಿನಿಂದ ಕರಡಿ, ನೀರಿನಿಂದ ಚಾತಕ, ಗಾಡಿಯಿಂದ ಒಂಟೆ, ಇತರ ಪ್ರಾಣಿಗಳಿಂದ ಆಡು ಈ ಜನ್ಮವು.

ಯದ್ವಾ ತದ್ವಾ ಪರದ್ರವ್ಯಮಪಹೃತ್ಯ ಬಲಾನ್ನರಃ ।
ಅವಶ್ಯಂ ಯಾತಿ ತಿರ್ಯಕ್ತ್ವಂ ಜಗ್ಧ್ವಾ ಚೈವಾಹುತಂ ಹವಿಃ ॥ ೬೮

ಚಿಕ್ಕ ವಸ್ತುಗಳನ್ನು ಕದ್ದರೂ ಹವಿಸ್ಸನ್ನು (ಅಹುತ) ಕದ್ದರೂ ತಿರ್ಯಕ್ ಪ್ರಾಣಿ ಜನ್ಮವು.

ಸ್ತ್ರಿಯೋಽಪ್ಯೇತೇನ ಕಲ್ಪೇನ ಹೃತ್ವಾ ದೋಷಮವಾಪ್ನುಯುಃ ।
ಏತೇಷಾಮೇವ ಜಂತೂನಾಂ ಭಾರ್ಯಾತ್ವಮುಪಯಾಂತಿ ತಾಃ ॥ ೬೯

ಹೆಂಗಸರು ಕದ್ದರೆ ಮೇಲೆ ಹೇಳಿದಂತೆ ಅಂತಹವರ ಹೆಂಡತಿಯಾಗುವರು.

ಸ್ವೇಭ್ಯಃ ಸ್ವೇಭ್ಯಸ್ತು ಕರ್ಮಭ್ಯಶ್ಚ್ಯುತಾ ವರ್ಣಾ ಹ್ಯನಾಪದಿ ।
ಪಾಪಾನ್ ಸಂಸೃತ್ಯ ಸಂಸಾರಾನ್ ಪ್ರೇಷ್ಯತಾಂ ಯಾಂತಿ ಶತ್ರುಷು ॥ ೭೦

ಪೆರವರ ವೃತ್ತಿಯ ಆಚರಣೆಯಿಂದ ಪಾಪಜನ್ಮವು, ಶತ್ರುದಾಸ್ಯವು ಲಭಿಸುವುದು.

ವಾಂತಾಶ್ಯುಲ್ಕಾಮುಖಃ ಪ್ರೇತೋ ವಿಪ್ರೋ ಧರ್ಮಾತ್ಸ್ವಕಾಚ್ಚ್ಯುತಃ ।
ಅಮೇಧ್ಯಕುಣಪಾಶೀ ಚ ಕ್ಷತ್ರಿಯಃ ಕಟಪೂತನಃ ॥ ೭೧

ಧರ್ಮಭ್ರಷ್ಟ ಬ್ರಾಹ್ಮಣನಿಗೆ ವಾಂತಿ ತಿನ್ನುವ ಉಲ್ಕಾಮುಖವೆಂಬ ಹೆಸರಿನ ಪ್ರೇತಜನ್ಮವು. ಕ್ಷತ್ರಿಯನು ಧರ್ಮಬಿಟ್ಟರೆ ಮಲಶವ ತಿನ್ನುವ ಕಟಪೂತನ ಜನ್ಮ.

ಮೈತ್ರಾಕ್ಷಜ್ಯೋತಿಕಃ ಪ್ರೇತೋ ವೈಶ್ಯೋ ಭವತಿ ಪೂಯಭುಕ್ ।
ಚೈಲಾಶಕಶ್ಚ ಭವತಿ ಶೂದ್ರೋ ಧರ್ಮಾತ್ಸ್ವಕಾಚ್ಚ್ಯುತಃ ॥ ೭೨

ವೈಶ್ಯನು ಧರ್ಮ ಬಿಟ್ಟರೆ ಕೊಳಕು ತಿನ್ನುವ ಪ್ರೇತ. ಶೂದ್ರನು ಹಾಗಾದರೆ ಚೈಲಾಶಕಪ್ರೇತ.

ಯಥಾ ಯಥಾ ನಿಷೇವಂತೇ ವಿಷಯಾನ್ವಿಷಯಾತ್ಮಕಾಃ ।
ತಥಾ ತಥಾ ಕುಶಲತಾ ತೇಷಾಂ ತೇಷೂಪಜಾಯತೇ ॥ ೭೩

ಶಬ್ದ ಸ್ಪರ್ಶ ರೂಪರಸಗಂಧಗಳ ಅತಿಸೇವನೆಯಿಂದ ಬಹುದುಃಖವಿದೆ.

ತೇಽಭ್ಯಾಸಾತ್ಕರ್ಮಣಾಂ ತೇಷಾಂ ಪಾಪಾನಾಮಲ್ಪಬುದ್ಧಯಃ ।
ಸಂಪ್ರಾಪ್ನುವಂತಿ ದುಃಖಾನಿ ತಾಸು ತಾಸ್ವಿಹ ಯೋನಿಷು ॥ ೭೪

ವಿಷಯಸೇವನೆಯಿಂದ ತನ್ಮಯನಾಗಿ ಅತಿಪ್ರಸಂಗದಿಂದ ದುಃಖ ಜನ್ಮಗಳು ಸಂಭವಿಸುವುವು.

ತಾಮಿಸ್ರಾದಿಷು ಚೋಗ್ರೇಷು ನರಕೇಷು ವಿವರ್ತನಂ ।
ಅಸಿಪತ್ರವನಾದೀನಿ ಬಂಧನಚ್ಛೇದನಾನಿ ಚ ॥ ೭೫

ಉಗ್ರವಾದ ತಾಮಿಸ್ರ, ಅಸಿಪತ್ರವನ, ಕಟ್ಟುವುದು, ಕೆತ್ತುವುದು ಉಂಟಾಗುವುವು.

ವಿವಿಧಾಶ್ಚೈವ ಸಂಪೀಡಾಃ ಕಾಕೋಲೂಕೈಶ್ಚ ಭಕ್ಷಣಂ ।
ಕರಂಭವಾಲುಕಾತಾಪಾನ್ ಕುಂಭೀಪಾಕಾಂಶ್ಚ ದಾರುಣಾನ್ ॥ ೭೬

ಕಾಗೆ, ಗೂಗೆ ತಿನ್ನುವುದು, ಕುದಿದ ಮರಳು ಸುರಿಯುವುದು ಕುಂಭೀಪಾಕ ಮುಂತಾದ ನರಕವು.

ಸಂಭವಾಂಶ್ಚ ವಿಯೋನೀಷು ದುಃಖಪ್ರಾಯಾಸು ನಿತ್ಯಶಃ ।
ಶೀತಾತಪಾಭಿಘಾತಾಂಶ್ಚ ವಿವಿಧಾನಿ ಭಯಾನಿ ಚ ॥ ೭೭

ದುಃಖ ಜನ್ಮದಲ್ಲಿ ಚಳಿ, ಬಿಸಿಲುಗಳಿಗೆ ನರಳುತ್ತ, ಭಯಭೀತನಾಗಿ ಬಾಳಬೇಕಾಗುವುದು.

ಅಸಕೃದ್ಗರ್ಭವಾಸೇಷು ವಾಸಂ ಜನ್ಮ ಚ ದಾರುಣಂ ।
ಬಂಧನಾನಿ ಚ ಕಾಷ್ಠಾನಿ ಪರಪ್ರೇಷ್ಯತ್ವಮೇವ ಚ ॥ ೭೮

ಅನೇಕ ಗರ್ಭವಾಸ, ದುಃಖಿ ಬಂಧನ, ಹೊಡೆತ, ದಾಸ್ಯಗಳು ಸಂಭವಿಸುವುವು.

ಬಂಧುಪ್ರಿಯವಿಯೋಗಾಂಶ್ಚ ಸಂವಾಸಂ ಚೈವ ದುರ್ಜನೈಃ ।
ದ್ರವ್ಯಾರ್ಜನಂ ಚ ನಾಶಂ ಚ ಮಿತ್ರಾಮಿತ್ರಸ್ಯ ಚಾರ್ಜನಂ ॥ ೭೯

ಬಂಧುಗಳ ಪ್ರಿಯಜನರ ವಿರಹ ದುರ್ಜನ ಸಹವಾಸ ಧನನಾಶ ಶತ್ರು, ಮಿತ್ರ ಸಂಕಟ ಜೀವನವು ಆಗುವುದು.

ಜರಾಂ ಚೈವಾಪ್ರತೀಕಾರಾಂ ವ್ಯಾಧಿಭಿಶ್ಚೋಪಪೀಡನಂ ।
ಕ್ಲೇಶಾಂಶ್ಚ ವಿವಿಧಾನ್ ಸಾಂಸ್ತಾನ್ ಮೃತ್ಯುಮೇವ ಚ ದುರ್ಜಯಂ ॥ ೮೦

ದುರ್ಜಯ ಮುಪ್ಪು ರೋಗಪೀಡೆ ಮೃತ್ಯು ಒದಗುವುದು.

ಯಾದೃಶೇನ ತು ಭಾವೇನ ಯದ್ಯತ್ಕರ್ಮ ನಿಷೇವತೇ ।
ತಾದೃಶೇನ ಶರೀರೇಣ ತತ್ತತ್ಫಲಮುಪಾಶ್ನುತೇ ॥ ೮೧

ಯಾವ ಉದ್ದೇಶದಿಂದ ಏನು ಕೆಲಸ ಮಾಡುತ್ತಾನೋ ಅಂತಹ ಶರೀರ ಅಂತಹ ಫಲಗಳು ಪ್ರಾಪ್ತವಾಗುವುವು.

ಏಷ ಸರ್ವಃ ಸಮುದ್ದಿಷ್ಟಃ ಕರ್ಮಣಾಂ ವಃ ಫಲೋದಯಃ ।
ನೈಃಶ್ರೇಯಸಕರಂ ಕರ್ಮ ವಿಪ್ರಸ್ಯೇದಂ ನಿಬೋಧತ ॥ ೮೨

ಈ ವರೆಗೆ ಕರ್ಮವಿಪಾಕವನ್ನು ಹೇಳಿ ಮೋಕ್ಷಸಾಧಕವಾದ ಕರ್ಮವನ್ನು ಬೋಧಿಸುತ್ತೇನೆ.

ವೇದಾಭ್ಯಾಸಸ್ತಪೋ ಜ್ಞಾನಮಿಂದ್ರಿಯಾಣಾಂ ಚ ಸಂಯಮಃ ।
ಅಹಿಂಸಾ ಗುರುಸೇವಾ ಚ ನಿಃಶ್ರೇಯಸಕರಂ ಪರಂ ॥ ೮೩

ವೇದಾಧ್ಯಯನ, ತಪಸ್ಸು, ಜ್ಞಾನ, ಇಂದ್ರಿಯನಿಗ್ರಹ ಅಹಿಂಸೆ, ಗುರುಸೇವೆ ಇವು ನಿರತಿಶಯ ಶ್ರೇಯಃಸಾಧನಗಳು.

ಸರ್ವೇಷಾಮಪಿ ಚೈತೇಷಾಂ ಶುಭಾನಾಮಿಹ ಕರ್ಮಣಾಂ ।
ಕಿಂಚಿಚ್ ಶ್ರೇಯಸ್ಕರತರಂ ಕರ್ಮೋಕ್ತಂ ಪುರುಷಂ ಪ್ರತಿ ॥ ೮೪

ಮನುಷ್ಯನಿಗೆ ಶುಭಕರ್ಮಗಳಲ್ಲಿ ಉತ್ತಮವಾದ ಒಂದು ಕರ್ಮವಿದೆ.

ಸರ್ವೇಷಾಮಪಿ ಚೈತೇಷಾಮಾತ್ಮಜ್ಞಾನಂ ಪರಂಸ್ಮೃತಂ ।
ತದ್ಧ್ಯಗ್ರ್ಯಂ ಸರ್ವವಿದ್ಯಾನಾಂ ಪ್ರಾಪ್ಯತೇ ಹ್ಯಮೃತಂ ತತಃ ॥ ೮೫

ಆತ್ಮಜ್ಞಾನವು ಅತ್ಯುತ್ತಮ ವಿದ್ಯಾಶ್ರೇಷ್ಠವು. ಅದರಿಂದ ಅಮೃತತ್ವ ಲಾಭವಾಗುವುದು.

ಷಣ್ಣಾಮೇಷಾಂ ತು ಸರ್ವೇಷಾಂ ಕರ್ಮಣಾಂ ಪ್ರೇತ್ಯ ಚೇಹ ಚ ।
ಶ್ರೇಯಸ್ಕರತರಂ ಜ್ಞೇಯಂ ಸರ್ವದಾ ಕರ್ಮ ವೈದಿಕಂ ॥ ೮೬

ವೇದಾಭ್ಯಾಸಾದಿ ಆರರಲ್ಲಿ ವೈದಿಕಕರ್ಮದಿಂದ ಈ ಲೋಕದಲ್ಲಿ, ಪರಲೋಕದಲ್ಲಿ ಸತ್ಫಲವಿದೆ; ಮೋಕ್ಷಮಾತ್ರವಲ್ಲ.

ವೈದಿಕೇ ಕರ್ಮಯೋಗೇ ತು ಸರ್ವಾಣ್ಯೇತಾನ್ಯಶೇಷತಃ ।
ಅಂತರ್ಭವಂತಿ ಕ್ರಮಶಸ್ತಸ್ಮಿಂಸ್ತಸ್ಮಿನ್ ಕ್ರಿಯಾವಿಧೌ ॥ ೮೭

ಆತ್ಮಜ್ಞಾನವು ಉಭಯವಿಧಫಲವನ್ನು ಕೊಡುವುದು. ಹೇಗೆಂದರೆ— ಪ್ರವೃತ್ತಿ ಕರ್ಮ, ನಿವೃತ್ತಿ ಕರ್ಮ ಈ ಎರಡೂ ವೇದಗಮ್ಯವು. ವೈದಿಕ ಕರ್ಮಯೋಗವು ಈ ರೀತಿಯದು.

ಸುಖಾಭ್ಯುದಯಿಕಂ ಚೈವ ನೈಃಶ್ರೇಯಸಿಕಮೇವ ಚ ।
ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಂ ॥ ೮೮

(ಐಹಿಕ) ಸಕಲ ಕಾಮನಾಲಾಭವಾಗುವ ಕರ್ಮವು ಪ್ರವೃತ್ತಿ ಕರ್ಮವು. ಸಂಸಾರ ನಿವೃತ್ತಿ-ಮೋಕ್ಷ ಉಂಟಾಗುವ ಕರ್ಮವು ನಿವೃತ್ತಿ ಕರ್ಮವು.

ಇಹ ಚಾಮುತ್ರ ವಾ ಕಾಮ್ಯಂ ಪ್ರವೃತ್ತಂ ಕರ್ಮ ಕೀರ್ತ್ಯತೇ ।
ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮುಪದಿಶ್ಯತೇ ॥ ೮೯

ಈ ಲೋಕ–ಪರಲೋಕಗಳ ಕಾಮನೆಯಲ್ಲಿ ಪ್ರವರ್ತಕವು ಪ್ರವೃತ್ತಿ ಕರ್ಮವು. ಸರ್ವಕಾಮನಾಹೀನ ಜ್ಞಾನವು ನಿವೃತ್ತಿಕರ್ಮವು.

ಪ್ರವೃತ್ತಂ ಕರ್ಮ ಸಂಸೇವ್ಯ ದೇವಾನಾಮೇತಿ ಸಾಮ್ಯತಾಂ ।
ನಿವೃತ್ತಂ ಸೇವಮಾನಸ್ತು ಭೂತಾನ್ಯತ್ಯೇತಿ ಪಂಚ ವೈ ॥ ೯೦

ಕಾಮಲಂಭಕವಾದ ಪ್ರವೃತ್ತಿಕರ್ಮದಿಂದ ದೇವಸಮನಾಗುವನು. ನಿವೃತ್ತಿಕರ್ಮದಿಂದ ಪಂಚಭೂತಾತೀತನಾಗುವನು.

ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ ॥ ೯೧

ಅದ್ವೈತ ಬುದ್ಧಿಯಿಂದ ತಾನು ಸರ್ವಭೂತಾಂತರ್ಯಾಮಿಯೆಂದೂ, ಪರಮಾತ್ಮಪರಿಣಾಮಗಳಾದ ಸಕಲವೂ ಸ್ವಸ್ವರೂಪವೆಂದೂ ಬ್ರಹ್ಮಾರ್ಪಣವಾಗಿ ಕರ್ಮನಿಷ್ಠನಾದವನು ಆತ್ಮಯಾಜಿಯು, ಸ್ವರಾಜ್ಯವೆಂಬ ಬ್ರಹ್ಮತ್ವ ಪರ್ಯವಸಾನವುಳ್ಳವನಾಗುವನು.

ಯಥೋಕ್ತಾನ್ಯಪಿ ಕರ್ಮಾಣಿ ಪರಿಹಾಯ ದ್ವಿಜೋತ್ತಮಃ ।
ಆತ್ಮಜ್ಞಾನೇ ಶಮೇ ಚ ಸ್ಯಾದ್ವೇದಾಭ್ಯಾಸೇ ಚ ಯತ್ನವಾನ್ ॥ ೯೨

ಅಗ್ನಿಹೋತ್ರಾದಿಕರ್ಮಗಳಿಗಿಂತಲೂ ಶಾಂತಿ, ವೇದಾಭ್ಯಾಸಗಳು ಆತ್ಮಜ್ಞಾನಕ್ಕೆ ಅತ್ಯಂತ ಸಹಕಾರಿಗಳು.

ಏತದ್ಧಿ ಜನ್ಮಸಾಫಲ್ಯಂ ಬ್ರಾಹ್ಮಣಸ್ಯ ವಿಶೇಷತಃ ।
ಪ್ರಾಪ್ಯೈತತ್ಕೃತಕೃತ್ಯೋ ಹಿ ದ್ವಿಜೋ ಭವತಿ ನಾನ್ಯಥಾ ॥ ೯೩

ಬ್ರಾಹ್ಮಣನ ಜನ್ಮಸಾಫಲ್ಯಕ್ಕೆ ಬ್ರಹ್ಮಾವಾಪ್ತಿಯೇ ಪರಮಗಮ್ಯವು ಮತ್ತು ಕಾರಣವು.

ಪಿತೃದೇವಮನುಷ್ಯಾಣಾಂ ವೇದಶ್ಚಕ್ಷುಃ ಸನಾತನಂ ।
ಅಶಕ್ಯಂ ಚಾಪ್ರಮೇಯಂ ಚ ವೇದಶಾಸ್ತ್ರಮಿತಿ ಸ್ಥಿತಿಃ ॥ ೯೪

ವೇದಶಾಸ್ತ್ರರೂಪವಾದ ಸನಾತನ ದರ್ಶನವು ಕಲ್ಪನಾರ್ಹವಲ್ಲ. ಪ್ರಮಾಣಸಿದ್ಧವು. ಇದರಿಂದಲೇ ಪಿತೃದೇವ ಮನುಷ್ಯರು ಸಮ್ಯಗ್ ದರ್ಶನವುಳ್ಳವರು.

ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ ।
ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ ॥ ೯೫

ವೇದಬಾಹ್ಯಗಳಾದ ಸ್ಮೃತಿಬೋಧ್ಯ ವಿರುದ್ಧಾರ್ಥಗಳು ನಿಷ್ಫಲಗಳು. ಪರ್ಯಾಯವಾಗಿ ದುಃಖದಾಯಕಗಳು.

ಉತ್ಪದ್ಯಂತೇ ಚ್ಯವಂತೇ ಚ ಯಾನ್ಯತೋಽನ್ಯಾನಿ ಕಾನಿಚಿತ್ ।
ತಾನ್ಯರ್ವಾಕ್ಕಾಲಿಕತಯಾ ನಿಷ್ಫಲಾನ್ಯನೃತಾನಿ ಚ ॥ ೯೬

ವೇದವಿರುದ್ಧ ಸಿದ್ಧಾಂತಗಳು ತಲೆದೋರುತ್ತವೆ. ನಶಿಸುತ್ತವೆ. ಸುಳ್ಳಾಗುತ್ತವೆ. ವಿಪರಿಣಮಿಸುತ್ತವೆ. ಅವು ಆಶ್ರಿತರಿಗೆ ಸದ್ಗತಿಯನ್ನು ಕೊಡಬಲ್ಲವಾಗಿಲ್ಲ. ಪಾಶ್ಚಾತ್ಯ ವಿಜ್ಞಾನಿ ಸಂಘದ ಆಯಾ ಕಾಲದ ಸಿದ್ಧಾಂತ ಪಂಕ್ತಿಯನ್ನು ಮನನ ಮಾಡಿದರೆ ಇಂದು ಸತ್ಯವಾದುದು ನಾಳೆ ಮಿಥ್ಯವಾಗಿದೆ. ದುರಂತವಾಗಿದೆ. ವೈದಿಕ ಕರ್ಮಯೋಗವು ಮೋಕ್ಷವಿರೋಧವಿಲ್ಲದೆ ಧರ್ಮ ಅರ್ಥ ಕಾಮಗಳನ್ನು ಪುಷ್ಕಲವಾಗಿ ಈಡೇರಿಸುವುದು.

ಚಾತುರ್ವರ್ಣ್ಯಂ ತ್ರಯೋ ಲೋಕಾಶ್ಚತ್ವಾರಶ್ಚಾಶ್ರಮಾಃ ಪೃಥಕ್ ।
ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ವೇದಾತ್ಪ್ರಸಿಧ್ಯತಿ ॥ ೯೭

ನಾಲ್ಕು ವರ್ಣ, ಮೂರು ಲೋಕ, ನಾಲ್ಕು ಆಶ್ರಮ, ಕಾಲತ್ರಯ. ಇತರ ವಿದ್ಯಮಾನವೆಲ್ಲ ವೇದಗಮ್ಯಗಳಾಗಿವೆ.

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ ।
ವೇದಾದೇವ ಪ್ರಸೂಯಂತೇ ಪ್ರಸೂತಿಗುಣಕರ್ಮತಃ ॥ ೯೮

ತ್ರಿಗುಣಾತ್ಮಕಗಳಾದ ಶಬ್ದಾದಿವಿಷಯಗಳು ವೇದಪ್ರತಿಪಾದ್ಯಗಳೇ ಆಗಿವೆ.

ಬಿಭರ್ತಿ ಸರ್ವಭೂತಾನಿ ವೇದಶಾಸ್ತ್ರಂ ಸನಾತನಂ ।
ತಸ್ಮಾದೇತತ್ಪರಂ ಮನ್ಯೇ ಯಜ್ಜಂತೋರಸ್ಯ ಸಾಧನಂ ॥ ೯೯

ಸನಾತನವಾದ ವೇದಶಾಸ್ತ್ರವು ಜಗತ್ತನ್ನು ಧರಿಸುತ್ತದೆ. ಆದುದರಿಂದ ವೇದಶಾಸ್ತ್ರವು ಕ್ಷೇಮಕ್ಕೆ ಉತ್ತಮಸಾಧನವು.

ಸೇನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ ।
ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ ॥ ೧೦೦

ಸೇನಾಪತಿ, ರಾಜ್ಯಪ್ರಧಾನ, ದಂಡಪ್ರಧಾನ ಎಲ್ಲರೂ ವೇದಶಾಸ್ತ್ರಜ್ಞರಾಗಿರಬೇಕು. (ಅದು ಅವನಿಗೆ ಒಪ್ಪುವುದು)

ಯಥಾ ಜಾತಬಲೋ ವಹ್ನಿರ್ದಹತ್ಯಾರ್ದ್ರಾನಪಿ ದ್ರುಮಾನ್ ।
ತಥಾ ದಹತಿ ವೇದಜ್ಞಃ ಕರ್ಮಜಂ ದೋಷಮಾತ್ಮನಃ ॥ ೧೦೧

ಪ್ರವೃದ್ಧ ಅಗ್ನಿಯು ಆರ್ದ್ರಕಾಷ್ಠವನ್ನು ದಹಿಸುವಂತೆ ವೇದಜ್ಞನು ಕರ್ಮದೋಷದಿಂದ ವಿಮುಕ್ತನಾಗುವನು.

ವೇದಶಾಸ್ತ್ರಾರ್ಥತತ್ತ್ವಜ್ಞೋ ಯತ್ರ ತತ್ರಾಶ್ರಮೇ ವಸನ್ ।
ಇಹೈವ ಲೋಕೇ ತಿಷ್ಠನ್ಸ ಬ್ರಹ್ಮಭೂಯಾಯ ಕಲ್ಪತೇ ॥ ೧೦೨

ವೇದಶಾಸ್ತ್ರಮರ್ಮಜ್ಞನು ಯಾವ ಆಶ್ರಮದಲ್ಲಿ ಪರಿನಿಷ್ಠಿತನಾದರೂ ಬ್ರಹ್ಮಭಾವವನ್ನು ಹೊಂದುವನು.

ಅಜ್ಞೇಭ್ಯೋ ಗ್ರಂಥಿನಃ ಶ್ರೇಷ್ಠಾ ಗ್ರಂಥಿಭ್ಯೋ ಧಾರಿಣೋ ನರಾಃ ।
ಧಾರಿಭ್ಯೋ ಜ್ಞಾನಿನಃ ಶ್ರೇಷ್ಠಾ ಜ್ಞಾನಿಭ್ಯೋ ವ್ಯವಸಾಯಿನಃ ॥ ೧೦೩

ಸ್ವಲ್ಪ ಓದಿದವನಿಗಿಂತ ಪೂರ್ಣ ಪುಸ್ತಕಓದಿದವನು ಅವನಿಗಿಂತ, ಅರ್ಥಜ್ಞಾನ ಮಾಡಿದವನು, ಅವನಿಗಿಂತ ಮರ್ಮ ತಿಳಿದವನು, ಅವನಿಗಿಂತ ಆಚರಿಸುವವನು ಶ್ರೇಷ್ಠನಾಗುವನು.

ತಪೋ ವಿದ್ಯಾ ಚ ವಿಪ್ರಸ್ಯ ನಿಃಶ್ರೇಯಸಕರಂ ಪರಂ ।
ತಪಸಾ ಕಿಲ್ಬಿಷಂ ಹಂತಿ ವಿದ್ಯಯಾಮೃತಮಶ್ನುತೇ ॥ ೧೦೪

ಬ್ರಾಹ್ಮಣನಿಗೆ ವಿದ್ಯೆ, ತಪಸ್ಸುಗಳು ಮುಖ್ಯ. ತಪಸ್ಸಿನಿಂದ ಪಾಪವು ತೊಲಗುತ್ತದೆ. ವಿದ್ಯೆಯಿಂದ ಅಮರನಾಗುತ್ತಾನೆ.

ಪ್ರತ್ಯಕ್ಷಂ ಚಾನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಂ ।
ತ್ರಯಂ ಸುವಿದಿತಂ ಕಾರ್ಯಂ ಧರ್ಮಶುದ್ಧಿಮಭೀಪ್ಸತಾ ॥ ೧೦೫

ಧರ್ಮಸೂಕ್ಷ್ಮಜ್ಞಾನವು ಪ್ರತ್ಯಕ್ಷ, ಅನುಮಾನ, ವಿವಿಧ ಶಾಸ್ತ್ರರೂಪಗಳಾದ ಮೂರು ಪ್ರಮಾಣಗಳಿಂದ ಪರಿಪುಷ್ಟವಾಗುವುದು. ವೇದಶಾಸ್ತ್ರವಿರುದ್ಧವಲ್ಲದ ಮೀಮಾಂಸಾಗಳಿದಿಂದ ವೇದೋಕ್ತ ಧರ್ಮವನ್ನು ತಿಳಿಯಬಹುದಲ್ಲದೆ ಬೇರೆಯಾವುದರಿಂದಲೂ ಶಕ್ಯವಿಲ್ಲ. ಅದನ್ನೇ ಹೇಳುತ್ತಾರೆ—

ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।
ಯಸ್ತರ್ಕೇಣಾಸಂಧತ್ತೇ ಸ ಧರ್ಮಂ ವೇದ ನೇತರಃ ॥ ೧೦೬

ಇನ್ನು ಈ ಗ್ರಂಥದ ಉಪಸಂಹಾರವು—

ನೈಶ್ರೇಯಸಮಿದಂ ಕರ್ಮ ಯಥೋದಿತಮಶೇಷತಃ ।
ಮಾನವಸ್ಯಾಸ್ಯ ಶಾಸ್ತ್ರಸ್ಯ ರಹಸ್ಯಮುಪದಿಶ್ಯತೇ ॥ ೧೦೭

ಶ್ರೇಯೋಹೇತುವಾದ ಸಕಲಕರ್ಮವೂ ಆದಿಯಿಂದ ಈ ವರೆಗೆ ಈ ಶಾಸ್ತ್ರದಲ್ಲಿ ಹೇಳಲ್ಪಟ್ಟಿತು. ಮನುಷ್ಯಶಾಸ್ತ್ರದ ರಹಸ್ಯವನ್ನು ಮುಂದೆ ಹೇಳುತ್ತೇನೆ.

ಅನಾಮ್ನಾತೇಷು ಧರ್ಮೇಷು ಕಥಂ ಸ್ಯಾದಿತಿ ಚೇದ್ಭವೇತ್ ।
ಯಂ ಶಿಷ್ಟಾ ಬ್ರಾಹ್ಮಣಾ ಬ್ರೂಯುಃ ಸ ಧರ್ಮಃ ಸ್ಯಾದಶಂಕಿತಃ ॥ ೧೦೮

ಇದರಲ್ಲಿ ಹೇಳದಿರುವ ಯಾವುದಾದರೂ ವಿಷಯದಲ್ಲಿ ಸಂಶಯ ಬಂದರೆ ಗುರುಮುಖದಿಂದ ಅಧ್ಯಯನ ಮಾಡಿದ ಶಿಷ್ಟರು ಹೇಳಿದುದನ್ನೇ ಧರ್ಮವೆಂದು ತಿಳಿಯಬೇಕು.

ಧರ್ಮೇಣಾಧಿಗತೋ ಯೈಸ್ತು ವೇದಃ ಸಪರಿಬ್ರಂಹಣಃ ।
ತೇ ಶಿಷ್ಟಾ ಬ್ರಾಹ್ಮಣಾ ಜ್ಞೇಯಾಃ ಶ್ರುತಿಪ್ರತ್ಯಕ್ಷಹೇತವ ॥ ೧೦೯

ಅಂಗೋಪಾಂಗ ಮೀಮಾಂಸಾದಿ ಸಪರಿಕರ ವೇದವನ್ನು ಬ್ರಹ್ಮಚರ್ಯಾಶ್ರಮದಲ್ಲಿ ಗುರುಮುಖದಿಂದ ಅಧ್ಯಯನ ಮಾಡಿದವರಾದ ಉಪದೇಶ ಸಮರ್ಥರು ಶಿಷ್ಟರು. ಅವರು ಧರ್ಮಪ್ರಮಾಣರು.

ದಶಾವರಾ ವಾ ಪರಿಷದ್ಯಂ ಧರ್ಮಂ ಪರಿಕಲ್ಪಯೇತ್ ।
ತ್ರ್ಯವರಾ ವಾಪಿ ವೃತ್ತಸ್ಥಾ ತಂ ಧರ್ಮಂ ನ ವಿಚಾಲಯೇತ್ ॥ ೧೧೦

ಅನುಕೂಲದಂತೆ ಹತ್ತು, ಅಥವಾ ಮೂರು ಮಂದಿಯ ಪರಿಷತ್ತು ಧರ್ಮ ನಿಶ್ಚಯವನ್ನು ಮಾಡಬಹುದು.

ತ್ರೈವಿದ್ಯೋ ಹೇತುಕಸ್ತರ್ಕೀ ನೈರುಕ್ತೋ ಧರ್ಮಪಾಠಕಃ ।
ತ್ರಯಶ್ಚಾಶ್ರಮಿಣಃ ಪೂರ್ವೇ ಪರಿಷತ್ಸ್ಯಾದ್ದಶಾವರಾ ॥ ೧೧೧

ಸಾಮಾನ್ಯರೂಪದಿಂದ ಉಕ್ತವಾಗಿ ವಿಶೇಷರೂಪದಲ್ಲಿ ಹೇಳದ ವಿಷಯದ ಕುರಿತು ಸಂಶಯಕ್ಕೆ ಆಸ್ಪದವಿದೆ. ಅಂತಹ ಸಂದರ್ಭದ ನಿಶ್ಚಯದ ವಿಧಾನವು ಪರಿಷದ್. ಹೇಳದ ಮುಖ್ಯಾಂಶವು ಯಾವುದೂ ಈ ಗ್ರಂಥದಲ್ಲಿ ಉಳಿದಿಲ್ಲ. ಮೂರು ವೇದ ಶಾಖಾಗೌತಮಾದಿ ವೇದಾವಿರುದ್ಧ ನ್ಯಾಯ, ವ್ಯಾಸ ಜೈಮಿನಿಗಳ ಮೀಮಾಂಸಾ ರೂಪತರ್ಕ, ಯಾಸ್ಕನಿರುಕ್ತ, ಮನು ಮುಂತಾದವರ ಧರ್ಮಶಾಸ್ತ್ರ. ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಇವರು ಸದಸ್ಯರಾದರೆ ಒಳ್ಳೆಯದು.

ಋಗ್ವೇದವಿದ್ಯಜುರ್ವಿಚ್ಚ ಸಾಮವೇದವಿದೇವ ಚ ।
ತ್ರ್ಯವರಾ ಪರಿಷಜ್ಞೇಯಾ ಧರ್ಮಸಂಶಯನಿರ್ಣಯೇ ॥ ೧೧೨

ಋಕ್, ಯಜುಸ್, ಸಾಮವೇದಗಳನ್ನು ಅರ್ಥಸಹಿತವಾಗಿ ಅಧ್ಯಯನ ಮಾಡಿದ ಮೂವರ ಪರಿಷತ್ ಧರ್ಮನಿಶ್ಚಯ ಮಾಡಬಹುದು.

ಏಕೋಽಪಿ ವೇದವಿದ್ಧರ್ಮಂ ಯಂ ವ್ಯವಸ್ಯೇದ್ದ್ವಿಜೋತ್ತಮಃ ।
ಸ ವಿಜ್ಞೇಯಃ ಪರೋ ಧರ್ಮೋ ನಾಜ್ಞಾನಾಮುದಿತೋಽಯುತೈಃ ॥ ೧೧೩

ಉತ್ತಮನಾದ ಒಬ್ಬ ವೇದವೇತ್ತನ ಅನುಭವವೂ ಧರ್ಮ ಪ್ರಮಾಣವಾಗಬಲ್ಲುದು. ವಿದ್ಯಾಹೀನರ ಹತ್ತುಲಕ್ಷವೂ ಧರ್ಮಸೂಕ್ಷ್ಮವನ್ನು ಒಡೆಯಲಾರದು.

ಅವ್ರತಾನಾಮಮಂತ್ರಾಣಾಂ ಜಾತಿಮಾತ್ರೋಪಜೀವಿನಾಂ ।
ಸಹಸ್ರಶಃ ಸಮೇತಾನಾಂ ಪರಿಷತ್ತ್ವಂ ನ ವಿದ್ಯತೇ ॥ ೧೧೪

ವ್ರತಮಂತ್ರಗಳಿಲ್ಲದೆ ಜಾತಿ, ಮತ ಇರುವ ಸಾವಿರ ಮಂದಿ ಧರ್ಮ ಪರಿಷತ್ ಎನಿಸುವುದಿಲ್ಲ.

ಯಂ ವದಂತಿ ತಮೋಭೂತಾ ಮೂರ್ಖಾ ಧರ್ಮಮತದ್ವಿದಃ ।
ತತ್ಪಾಪಂ ಶತಧಾ ಭೂತ್ವಾ ತದ್ವಕ್ತ್ರೃನಧಿಗಚ್ಛತಿ ॥ ೧೧೫

ಧರ್ಮ ತಿಳಿಯದೆ ಹೇಳುವ ತಾಮರಸ ಅಭಿಪ್ರಾಯವು ಪ್ರಮಾಣವಲ್ಲ. ಆ ಪಾಪವು ಅಂತಹ ಉಪದೇಶಕರನ್ನು ಬಾಧಿಸುವುದು. ನೂರು ಮಡಿಯಾಗುವುದು. ಯಥಾರ್ಥತೆಯನ್ನು ಮೀರಿದುದು ಸಫಲವಾಗಲಾರದು.

ಏತದ್ವೋಽಭಿಹಿತಂ ಸರ್ವಂ ನಿಃಶ್ರೇಯಸಕರಂ ಪರಂ ।
ಅಸ್ಮಾದಪ್ರಚ್ಯುತೋ ವಿಪ್ರಃ ಪ್ರಾಪ್ನೋತಿ ಪರಮಾಂ ಗತಿಂ ॥ ೧೧೬

ಇಂತಹ ಧರ್ಮಬೋಧೆಯನ್ನು ಹೊಂದಿದವನು ತಪ್ಪದೆ ಸದ್ಗತಿಯನ್ನು ಸೇರುವನು.

ಏವಂ ಸ ಭಗವಾನ್ ದೇವೋ ಲೋಕಾನಾಂ ಹಿತಕಾಮ್ಯಯಾ ।
ಧರ್ಮಸ್ಯ ಪರಮಂ ಗುಹ್ಯಂ ಮಮೇದಂ ಸರ್ವಮುಕ್ತವಾನ್ ॥ ೧೧೭

ಈ ಶಾಸ್ತ್ರವನ್ನು ದೇವಭೂತ ಭಗವಾನ್ ಮನುವು ಲೋಕಹಿತಕ್ಕಾಗಿ ಜನರ ಉಪಯೋಗಕ್ಕಾಗಿ ಧರ್ಮರಹಸ್ಯ ಸಹಿತವಾಗಿ ಉಪದೇಶಿಸಿರುವನು. ಅದನ್ನು ನಾನು ನಿಮಗೆ ಅರುಹಿವೆನು.

ಸರ್ವಮಾತ್ಮನಿ ಸಂಪಶ್ಯೇತ್ಸಚ್ಚಾಸಚ್ಚ ಸಮಾಹಿತಃ ।
ಸರ್ವಂ ಹ್ಯಾತ್ಮನಿ ಸಂಪಶ್ಯನ್ನಾಧರ್ಮೇ ಕುರುತೇ ಮನಃ ॥ ೧೧೮

ಸಂಭವಿಸಿದ ಒಳ್ಳೆಯದು ಕೆಟ್ಟದನ್ನು ತನಗೆ ಸಂಬಂಧಿಸಿದಂತೆ ಪರಾಮರ್ಶಿಸಬೇಕು. ಆಗ ಉಂಟಾಗುವ ಮಾನಸಿಕ ಪ್ರತಿಕ್ರಿಯೆಯು ತನಗೂ ಇತರರಿಗೂ ಮಾನ್ಯವಾಗತಕ್ಕದ್ದು. ಅದು ರಾಗದ್ವೇಷ ಪಕ್ಷಪಾತಗಳಿಗೆ ಗುರಿಯಾಗುವುದಿಲ್ಲ. ಸರ್ವ ರ್ವೂ ಆತ್ಮವೆಂದು ಮನನ ಮಾಡಿದವನಿಗೆ ರಾಗದ್ವೇಷಮಯವಾದ ಅಧರ್ಮದಲ್ಲಿ ಅಭಿರತಿಯು ಸಮುದಿಸಲಾರದು.

ಆತ್ಮೈವ ದೇವತಾಃ ಸರ್ವಾಃ ಸರ್ವಮಾತ್ಮನ್ಯವಸ್ಥಿತಂ ।
ಆತ್ಮಾ ಹಿ ಜನಯತ್ಯೇಷಾಂ ಕರ್ಮಯೋಗಂ ಶರೀರಿಣಾಂ ॥ ೧೧೯

ಸಕಲದೇವತೆಗಳು ಪರಮಾತ್ಮನಲ್ಲಿ ಅವಸ್ಥಾನವುಳ್ಳವರು. ಅವರಿಗೆ

ಉಚಿತ ಕರ್ಮಸಂಬಂಧವೂ ಆ ಪರಮಾತ್ಮನಿಂದಲೇ ಸಾಧ್ವಸಾಧು ಕರ್ಮಗಳು ಜೀವರಿಗೆ ಅವನಿಂದಲೇ ಆದವು.

ಸಂ ಸನ್ನಿವೇಶಯೇತ್ಸ್ಖೇಷು ಚೇಷ್ಟನಸ್ಪರ್ಶನೇಽನಿಲಂ |
ಪಕ್ತಿದೃಷ್ಟ್ಯೋಃ ಪರಂ ತೇಜಃ ಸ್ನೇಹೇಽಪೋ ಗಾಂ ಚ ಮೂರ್ತಿಷು || ೧೨೦
ಮನಸೀಂದುಂ ದಿಶಃ ಶ್ರೋತ್ರೇ ಕ್ರಾಂತೇ ವಿಷ್ಣುಂ ಬಲೇ ಹರಂ |
ವಾಚ್ಯಗ್ನಿಂ ಮಿತ್ರಮುತ್ಸರ್ಗೇ ಪ್ರಜನೇ ಚ ಪ್ರಜಾಪತಿಂ || ೧೨೧

ವ್ಯಷ್ಟಿಯಾದ ಪಂಚಭೂತಾದಿಗಳನ್ನು ಸಮಷ್ಟಿಯಾದ ದೇಹದ ಆಯಾ ಪದಾರ್ಥಗಳಲ್ಲಿ ಲಯ, ಏಕೀಭಾವ, ಅಭೇದೋಪಾಸನೆ ಇವುಗಳನ್ನು ಮಾಡುವ ವಾಸ್ತವಾಂಶವನ್ನು ಅರಿಯಬೇಕು. ವ್ಯಷ್ಟಿದ್ರವ್ಯಗಳು ಮಹಾ ಪದಾರ್ಥಗಳು. ಅವುಗಳ ಅಂಶದಿಂದ ಮನುಷ್ಯದೇಹವನ್ನು ವಿರಚಿಸಲಾಗಿದೆ.

ಪ್ರಶಾಸಿತಾರಂ ಸರ್ವೇಷಾಮಣೀಯಾಂಸಮಣೋರಪಿ |
ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತಂ ಪುರುಷಂ ಪರಂ || ೧೨೨

ಸ್ವಪ್ನದಂತೆ ಪರಮಾತ್ಮನು ಮಾನಸಪ್ರತ್ಯಕ್ಷಗೋಚರನು. ವ್ಯಾಪಕನಾದುದರಿಂದ ಅಣುಸಮನು. ಅಗ್ನಿವಾಯುಗಳಿಗೆ ಉಷ್ಣಗತಿ ಗುಣಗಳಂತೆ ಗುಣನಿಯಾಮಕನು. ಉಪಾಸಕನಿಗೆ ಸ್ವರ್ಣವರ್ಣನು ಅಂತಹ ಬ್ರಹ್ಮನನ್ನು ಧ್ಯಾನಿಸಬೇಕು.

ಏತಮೇಕೇ ವದಂತ್ಯಗ್ನಿಂ ಮನುಮನ್ಯೇ ಪ್ರಜಾಪತಿಂ |
ಇಂದ್ರಮೇಕೇ ಪರೇ ಪ್ರಾಣಮಪರೇ ಬ್ರಹ್ಮ ಶಾಶ್ವತಂ || ೧೨೩

ಅವನನ್ನು ಅಗ್ನಿ, ಮನು, ಪ್ರಜಾಪತಿ, ಇಂದ್ರ, ಪ್ರಾಣ, ಶಾಶ್ವತ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಅವನು ಒಬ್ಬನೇ.

ಏಷ ಸರ್ವಾಣಿ ಭೂತಾನಿ ಪಂಚಭಿರ್ವ್ಯಾಪ್ಯ ಮೂರ್ತಿಭಿಃ |
ಜನ್ಮವೃದ್ಧಿಕ್ಷಯೈರ್ನಿತ್ಯಂ ಸಂಸಾರಯತಿ ಚಕ್ರವತ್ || ೧೨೪

ಅವನು ಪಂಚಭೂತಗಳ ಪರಿಗ್ರಹದಿಂದ ದೇಹಕ್ಕೆ ಜನ್ಮವೃದ್ಧಿ ಕ್ಷಯ ರೂಪವಾದ ಸಂಸಾರವನ್ನು ಮೋಕ್ಷಪರ್ಯಂತವಾಗಿ ಚಕ್ರದಂತೆ ಉರುಳಿಸುತ್ತಾನೆ.

ಏವಂ ಯಃ ಸರ್ವಭೂತೇಷು ಪಶ್ಯತ್ಯಾತ್ಮಾನಮಾತ್ಮನಾ ।
ಸ ಸರ್ವಸಮತಾಮೇತ್ಯ ಬ್ರಹ್ಮಾಭ್ಯೇತಿ ಪರಂ ಪದಂ ॥ ೧೨೫

ತಾನು ಸರ್ವತ್ರ ಇರುವವನು ಎಂದು ತಾನೇ ತನ್ನನ್ನು ತಿಳಿದುಕೊಂಡರೆ ಸರ್ವಸಮಭಾವವುಂಟಾಗುವುದು. ಅದು ಬ್ರಹ್ಮಸ್ವರೂಪವಾಗಿರುವುದು. ಮೋಕ್ಷವು ಅದಕ್ಕೆ ಬೇರೆಯಲ್ಲ.

ಇತ್ಯೇತನ್ಮಾನವಂ ಶಾಸ್ತ್ರಂ ಭೃಗುಪ್ರೋಕ್ತಂ ಪಠನ್ ದ್ವಿಜಃ ।
ಭವತ್ಯಾಚಾರವಾನ್ನಿತ್ಯಂ ಯಥೇಷ್ಟಾಂ ಪ್ರಾಪ್ನುಯಾದ್ಗತಿಂ ॥ ೧೨೬

ಭೃಗುವಿನಿಂದ ಮಹರ್ಷಿಗಳಿಗೆ ಉಪದಿಷ್ಟವಾದ ಮನುಶಾಸ್ತ್ರವನ್ನು ತಿಳಿಯಬೇಕು. ಅದರಿಂದ ಸದಾಚಾರದ ಪರಿಚಯವಾಗುವುದು. ಅದರ ಆಚರಣೆಯಿಂದ ಅಭೀಷ್ಟಸಿದ್ಧಿಯಾಗುವುದು. ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಯಾವುದನ್ನಾದರೂ ಮನುಷ್ಯನು ಆಶಿಸುವನು ಅದರ ಹೊರಗಿನ ಆಶೆಯೇ ಇಲ್ಲ. ಆಶಾಪೂರಣೆಯ ಉತ್ತಮ ಉಪಾಯಗಳು ಇದಕ್ಕಿಂತ ನಾಜೂಕಾಗಿ ಬೇರೆಲ್ಲಿಯೂ ದೊರೆಯುವುದಿಲ್ಲ. ಇದ್ದರೂ ಅದು ಇಂತಹದೇ ಆಗಿದೆ. ಆದುದರಿಂದ ಎಲ್ಲ ಕಾಲದ ಎಲ್ಲ ದೇಶದ ಎಲ್ಲ ಮನುಷ್ಯರ ಕ್ಷೇಮವು ಇದರಿಂದ ಲಭ್ಯವಾಗುವುದೆಂದು ನಿಃಸಂಶಯವಾಗಿ ನಿರೀಕ್ಷಿಸಬೇಕು. ಬೇರೆ ರೀತಿಯಲ್ಲಿ ದೊರೆತ ಸುಖಾಭಾಸವು ನಂದುವ ದೀಪದ ಹೊಳಪಿನಂತೆ ವಂತೆ ಪ್ರಿಯವಾದರೂ ಚಿರಕಾಲಿಕ ಶಾಶ್ವತ ಸುಖವಾಯವಲ್ಲ. ಆದುದರಿಂದ ಅದಕ್ಕೆ ಮರುಳಾಗಿ ಮೋಸಹೋಗುವುದು ಬುದ್ಧಿಮತ್ತೆಯಲ್ಲವೆಂದು ನಾವು ನಿಶ್ಚಯಿಸಬಹುದು. ಇದಕ್ಕೆ ಆಧಾರವಾಗಿ ಪ್ರಪಂಚದ ಎಲ್ಲ ದೇಶದ ಗತ ಇತಿಹಾಸವನ್ನು ಶಾಂತವಾಗಿ ಗಾಢವಾಗಿ ದೀರ್ಘವಾಗಿ ಪರಾಮರ್ಶಿಸಬಹುದು. ಭಯ, ಉದ್ವೇಗ, ಅಶಾಂತಿ, ದುಃಖಗಳು ಮರುಕಳಿಸದ ಅವಸ್ಥೆಯಿಲ್ಲ. ಮನುಸ್ಮೃತಿಯು ಶಾಂತಿಯ ಖನಿಯು. ಜಿನ, ಬುದ್ಧರು ಇದರಿಂದಲೇ ಶಾಂತಿ ದೂತರಾದರು. ಇದು ಈಚಿನ ಕೃತಿ ಸಂಕಲನೆಯೆಂಬುದನ್ನು ನಿರಾಕರಿಸಲು ಆಧಾರವಿದೆ.

---